# ಉತ್ತರ ಕನ್ನಡ ಜಿಲ್ಲೆಯ ಗೌಳಿಗ ಸಮುದಾಯದ ಸಾಮಾಜಿಕ ಸಮಸ್ಯೆಗಳು ಮತ್ತು ಸಾಮಾಜಿಕ ಪರಿವರ್ತನೆ

(ಸಮಾಜಶಾಸ್ತ್ರ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ)


ಸಂಶೋಧಕರು

**ಹಿರೇಮಠ ಪ್ರೇಮಲತಾ ಬಸವರಾಜ**

ಮಾರ್ಗದರ್ಶಕರು

**ಡಾ॥ ಹಿ. ಚಿ. ಬೋರಲಿಂಗಯ್ಯ**








ಸಮಾಜ ವಿಜ್ಞಾನಗಳ ನಿಕಾಯ
ಬುಡಕಟ್ಟು ಅಧ್ಯಯನ ವಿಭಾಗ.
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ–೫೮೩ ೨೭೬.
೨೦೧೨

# ಉತ್ತರ ಕನ್ನಡ ಜಿಲ್ಲೆಯ ಗೌಳಿಗ ಸಮುದಾಯದ ಸಾಮಾಜಿಕ ಸಮಸ್ಯೆಗಳು ಮತ್ತು ಸಾಮಾಜಿಕ ಪರಿವರ್ತನೆ

ಸಮಾಜಶಾಸ್ತ್ರ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸಿದ ಮಹಾಪ್ರಬಂಧ

ಸಂಶೋಧನಾ ವಿದ್ಯಾರ್ಥಿ
**ಹಿರೇಮಠ ಪ್ರೇಮಲತಾ ಬಸವರಾಜ**

ಮಾರ್ಗದರ್ಶಕರು
**ಡಾ॥ ಹಿ. ಚಿ. ಬೋರಲಿಂಗಯ್ಯ**



ಸಮಾಜ ವಿಜ್ಞಾನಗಳ ನಿಕಾಯ
ಬುಡಕಟ್ಟು ಅಧ್ಯಯನ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ - 583 276.

**೨೦೧೨**

# ದೃಢೀಕರಣ ಪತ್ರ

ಶ್ರೀಮತಿ ಹಿರೇಮಠ ಪ್ರೇಮಲತಾ ಬಸವರಾಜ ಇವರು **'ಉತ್ತರ ಕನ್ನಡ ಜಿಲ್ಲೆಯ ಗೌಳಿಗ ಸಮುದಾಯದ ಸಾಮಾಜಿಕ ಸಮಸ್ಯೆಗಳು ಮತ್ತು ಸಾಮಾಜಿಕ ಪರಿವರ್ತನೆ'** ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಇದು ಅವರು ಸ್ವತಃ ಕ್ಷೇತ್ರಕಾರ್ಯ ಕೈಗೊಂಡು ಸಂಗ್ರಹಿಸಿದ ಸಂಶೋಧನೆ ಸಾಮಗ್ರಿಯ ಆಧಾರದ ಮೇಲೆ ರಚಿತವಾಗಿದೆ. ಸಮಾಜಶಾಸ್ತ್ರ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಇದನ್ನು ಭಾಗಶಃ ಅಗಲಿ, ಪೂರ್ಣವಾಗಿಯಾಗಲಿ, ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಸ್ಥಳ : ವಿದ್ಯಾರಣ್ಯ
ದಿನಾಂಕ:೨೭-೦೯-೨೦೧೨

ಡಾ. ಹಿ.ಚಿ. ಬೋರಲಿಂಗಯ್ಯ
ಪ್ರಾಧ್ಯಾಪಕರು ಮತ್ತು ಮಾರ್ಗದರ್ಶಕರು
ಕನ್ನಡ ವಿಶ್ವವಿದ್ಯಾಲಯ, ಹಂಪಿ,
ವಿದ್ಯಾರಣ್ಯ–583276

# ಪ್ರಮಾಣ ಪತ್ರ

**'ಉತ್ತರ ಕನ್ನಡ ಜಿಲ್ಲೆಯ ಗೌಳಿಗ ಸಮುದಾಯದ ಸಾಮಾಜಿಕ ಸಮಸ್ಯೆಗಳು ಮತ್ತು ಸಾಮಾಜಿಕ ಪರಿವರ್ತನೆ'** ಎಂಬ ಶೀರ್ಷಿಕೆಯ ಈ ಮಹಾ ಪ್ರಬಂಧವನ್ನು ಸಮಾಜಶಾಸ್ತ್ರ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು **ಡಾ. ಹಿ.ಚಿ. ಬೋರಲಿಂಗಯ್ಯ** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಈ ಮಹಾಪ್ರಬಂಧವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿ ಇಲ್ಲವೆ ಇತರ ಉದ್ದೇಶಗಳಿಗೆ ಬಳಸಿಕೊಂಡಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

**ಸ್ಥಳ** : ವಿದ್ಯಾರಣ್ಯ
**ದಿನಾಂಕ:**೨೭-೦೯-೨೦೧೨

**ಶ್ರೀಮತಿ ಪ್ರೇಮಲತಾ ಬಸವರಾಜ ಹಿರೇಮಠ**
**ಸಂಶೋಧನಾ ವಿದ್ಯಾರ್ಥಿ**

# ಪರಿವಿಡಿ

# ಕೋಷ್ಟಕಗಳ ಪರಿವಿಡಿ

# ಅಧ್ಯಾಯ ೧

## ಅಧ್ಯಯನದ ಉದ್ದೇಶ, ವ್ಯಾಪ್ತಿ, ವೈಧಾನಿಕತೆ ಮತ್ತು ಇದುವರೆಗೆ ನಡೆದ ಅಧ್ಯಯನದ ಸಮೀಕ್ಷೆ

# ಅಧ್ಯಾಯ ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವೈಧಾನಿಕತೆ ಮತ್ತು ಇದುವರೆಗೆ ನಡೆದ ಅಧ್ಯಯನದ ಸಮೀಕ್ಷೆ

---

## ೧.೧ ಪ್ರಸ್ತಾವನೆ

ಒಂದು ದೇಶದ ಮೂಲ ನಿವಾಸಿಗಳೇ ಆದಿವಾಸಿಗಳು. ಅವರು ಮನುಕುಲದ ಲಿಖಿತ ಇತಿಹಾಸಕಾರರ ಅರುಣೋದಯಕ್ಕೂ ಹಿಂದಿನ ಕಾಲದಿಂದ ಬಾಳುತ್ತಿರುವರು. ಪ್ರಪಂಚದಾದ್ಯಂತ ಆದಿವಾಸಿ/ಬುಡಕಟ್ಟು ಜನರಿದ್ದಾರೆ. ಸಾಮಾನ್ಯವಾಗಿ ಅವರು ಅಲೆಮಾರಿಗಳು. ಅಲೆಮಾರಿಗಳು ಆಹಾರ ಪದಾರ್ಥಗಳಿಗಾಗಿ ಸ್ಥಳದಿಂದ ಸ್ಥಳಕ್ಕೆ ಅಲೆದಾಡುತ್ತಿರುತ್ತಾರೆ. ಬೆಟ್ಟ ಗುಡ್ಡಗಳಲ್ಲಿ, ಕಾಡುಮೇಡುಗಳಲ್ಲಿ ದೊರಕುವ ಗಡ್ಡೆ-ಗೆಣಸು, ಕಾಯಿಪಲ್ಲೆ, ಹಣ್ಣು ಮುಂತಾದ ಆಹಾರ ವಸ್ತುಗಳ ಸಂಗ್ರಹಣೆ, ಸಣ್ಣ-ಪುಟ್ಟ ಪ್ರಾಣಿಗಳನ್ನು ಬೇಟೆಯಾಡುವುದು ಮತ್ತು ಪಶು ಪರಿಪಾಲನೆ ಅವರ ಜೀವನೋಪಾಯಗಳಾಗಿರುತ್ತವೆ. ಇಂತಹ ಮೂಲ ನಿವಾಸಿಗಳನ್ನು ಗಿರಿಜನರು, ಗುಡ್ಡಗಾಡಿನ ಜನರು, ಪ್ರಾಚೀನ ಜನಾಂಗದವರು, ಅರಣ್ಯವಾಸಿಗಳು, ಅನಾಗರಿಕರು, ಪರಿಶಿಷ್ಟ ವರ್ಗದವರು ಎಂದು ಕರೆಯಲಾಯಿತು. ನಂತರ ಅವರನ್ನು ಬುಡಕಟ್ಟು (Tribe) ಎಂದು ಗುರುತಿಸಲಾಯಿತು. 'ಕಿಟ್ಟೆಲ್‌ರು ತಮ್ಮ ಅರ್ಥಕೋಶದಲ್ಲಿ ಬುಡಕಟ್ಟು ಎಂಬ ಶಬ್ದಕ್ಕೆ 'ಕುಟುಂಬ' ಮತ್ತು 'ಕುಲ' ಎಂದು ಅರ್ಥ ನೀಡಿದ್ದಾರೆ'.[೧] ಬುಡಕಟ್ಟು ಎಂಬ ಪದವು ಆಂಗ್ಲ ಭಾಷೆಯ 'ಟ್ರೈಬ್' ಎಂಬ ಪದದ ಸಮಾನಾರ್ಥಕ ಪದವಾಗಿದೆ. ಇದು ಲ್ಯಾಟಿನ್ ಭಾಷೆಯ 'ಟ್ರೈಬಸ್' ಎಂಬ ಪದದಿಂದ ಉಗಮಗೊಂಡಿದೆ. 'ಟ್ರೈಬಸ್' ಎಂದರೆ 'ರಕ್ತ ಸಂಬಂಧ ಹೊಂದಿದ ಕುಲಗಳ ಕೂಟ'. ಇದಕ್ಕೆ ಬುಡಕಟ್ಟು ಎಂಬ ಪದ ಸಮಂಜಸವಾಗಿದೆ. ಲಂಡನ್ನಿನ ರಾಯಲ್ ಆಂಥ್ರೋಪಾಲಾಜಿಕಲ್ ಇನ್‌ಸ್ಟಿಟ್ಯೂಟ್ ಪ್ರಕಾರ 'ನಿರ್ಧಿಷ್ಟ ಪ್ರದೇಶದಲ್ಲಿ ವಾಸಿಸುವ ಅಥವಾ ಅದನ್ನು ತನ್ನದೆಂದು ಹೇಳಿಕೊಳ್ಳುವಂತಹ, ರಾಜಕೀಯವಾಗಿ ಅಥವಾ ಸಾಮಾಜಿಕವಾಗಿ ಹೊಂದಿಕೊಂಡಿರುವ ಮತ್ತು ಸ್ವಯಂ ಆಡಳಿತವುಳ್ಳ ಗುಂಪೇ ಬುಡಕಟ್ಟು'.[೨]

ಬುಡಕಟ್ಟು ಜನರು ಒಂದೇ ಭೌಗೋಳಿಕ ಪ್ರದೇಶದಲ್ಲಿ ವಾಸಿಸುತ್ತಾ ನಾವೆಲ್ಲರು ಒಂದು ಎನ್ನುವ 'ಸಾಮುದಾಯಿಕ ಭಾವನೆ' ಹೊಂದಿರುತ್ತಾರೆ. ಬುಡಕಟ್ಟು ಸಮುದಾಯದವರು ತಮ್ಮದೇ ಆದ ಭಾಷೆಯನ್ನು ಹೊಂದಿರುತ್ತಾರೆ. ಬುಡಕಟ್ಟು ಸಮುದಾಯದಲ್ಲಿ ರಕ್ತ ಸಂಬಂಧಕ್ಕೆ ಹೆಚ್ಚಿನ ಪ್ರಾಮುಖ್ಯತೆ ಇರುತ್ತದೆ. ರಕ್ತ ಬಾಂಧವ್ಯದ ಅಧಾರದ ಮೇಲೆ ಕುಲಗಳು ರಚಿತವಾಗಿರುತ್ತವೆ. ಬುಡಕಟ್ಟಿಗೆ ಸೇರಿರುವ ಜನರಲ್ಲಿ ತಾವೆಲ್ಲ ಒಂದೇ ಸ್ತ್ರೀ ಪೂರ್ವಜಳ ಅಥವಾ ಒಂದೇ ಪುರುಷ ಪೂರ್ವಜನಿಗೆ ಸೇರಿದವರೆಂಬ ಭಾವನೆ ಬಲವಾಗಿರುತ್ತದೆ. ಪ್ರತಿಯೊಂದು ಬುಡಕಟ್ಟಿನಲ್ಲೂ ಪ್ರತ್ಯೇಕವಾದ ಸಾಮಾಜಿಕ, ಆರ್ಥಿಕ, ರಾಜಕೀಯ ಹಾಗೂ ಧಾರ್ಮಿಕ ವ್ಯವಸ್ಥೆಗಳು ಕಂಡುಬರುತ್ತವೆ. ವ್ಯಕ್ತಿಯ ಸ್ಥಾನಮಾನ, ಆಸ್ತಿ ಹಕ್ಕು, ವಿವಾಹ, ಕುಟುಂಬ ಇತ್ಯಾದಿಗಳನ್ನು ನಿರ್ಧರಿಸುತ್ತದೆ. ತನ್ನದೇ ಆದ ಬಿಗಿಯಾದ ಸಾಮಾಜಿಕ ನಿಯಮಗಳನ್ನು ಒಳಗೊಂಡಿರುತ್ತದೆ. ಬಹುಮಟ್ಟಿಗೆ ಬುಡಕಟ್ಟು ಸಮುದಾಯವು ಸರಳವಾದುದು ಹಾಗೂ ಸ್ವಾವಲಂಬಿಯಾಗಿರುತ್ತದೆ. ತಮ್ಮ ಸಮುದಾಯದ ಬೇಡಿಕೆಗಳನ್ನು ತಾವೇ ಪೂರೈಸಿಕೊಂಡು ವಸ್ತು ವಿನಿಮಯ (Barter) ಪದ್ಧತಿಯನ್ನು ಅನುಸರಿಸುತ್ತವೆ. ಆದಿವಾಸಿ ಬುಡಕಟ್ಟುಗಳಲ್ಲಿ ವಿಶಿಷ್ಟ ಮತಧರ್ಮವಿರುತ್ತದೆ. ಒಂದೇ ಕುಲಚಿಹ್ನೆ (Totem) ಒಳಗೊಂಡು ಬಹಳ ಶ್ರದ್ಧೆಯಿಂದ ಕುಲದೇವತೆಯನ್ನು ಪೂಜಿಸುತ್ತಾರೆ. ಅದು ಕಲ್ಲು, ಮರ, ಪ್ರಾಣಿ, ಪಶು, ಪಕ್ಷಿ ಏನಾದರೂ ಆಗಿರಬಹುದು. ಸಂಕ್ಷಿಪ್ತದಲ್ಲಿ ಹೇಳುವುದಾದರೆ ಒಂದೇ ನೆಲೆ, ಒಂದೇ ಭಾಷೆ, ಒಂದೇ ಜೀವನಕ್ರಮ, ಒಂದೇ ಆಚಾರ ಪದ್ಧತಿ, ಒಂದೇ ಧರ್ಮ, ಒಂದೇ ಸಂಸ್ಕೃತಿ, ರಕ್ತ ಬಾಂಧವ್ಯ ಇತ್ಯಾದಿಗಳನ್ನು ಒಳಗೊಂಡಿರುವ ಪ್ರತಿ ಆದಿವಾಸಿ ಬುಡಕಟ್ಟಿನಲ್ಲಿ ಬಹುಮಟ್ಟಿಗೆ ಏಕತಾ ಭಾವನೆ ಬಲವಾಗಿರುತ್ತದೆ. ಒಟ್ಟಿನಲ್ಲಿ ಬುಡಕಟ್ಟು ಎನ್ನುವುದು ಒಂದು ಸ್ವತಂತ್ರ ಘಟಕ ಎನ್ನುವುದರಲ್ಲಿ ಎರಡು ಮಾತಿಲ್ಲ.

ಬೆಟ್ಟ ಗುಡ್ಡ, ಕಾಡು-ಮೇಡುಗಳಲ್ಲಿ ವಾಸಿಸುತ್ತಿದ್ದ ಆದಿವಾಸಿ ಬುಡಕಟ್ಟುಗಳು ಪ್ರತ್ಯೇಕತೆಯನ್ನು ಹೊಂದಿ ನಾಗರಿಕ ಸಂಪರ್ಕದಿಂದ ಬಹುದಿನ ದೂರ ಉಳಿದಿದ್ದರಿಂದ ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ, ಧಾರ್ಮಿಕವಾಗಿ ಹಿಂದುಳಿದ ಜನರಾಗಿದ್ದಾರೆ. ಪ್ರತಿಯೊಂದು ಆದಿವಾಸಿ ಸಮುದಾಯವು ತನ್ನದೇ ಆದ ವಿಶಿಷ್ಟವಾದ ಸಂಸ್ಕೃತಿ, ಭಾಷೆ, ಉಡುಗೆ-ತೊಡುಗೆ, ನಂಬಿಕೆ, ಕಲೆ, ಆಚಾರ-ವಿಚಾರ, ಸಂಪ್ರದಾಯ ವಿಧಿನಿಯಮ ನಿಷೇಧ ಮೌಲ್ಯಗಳನ್ನು ಒಳಗೊಂಡಿರುತ್ತದೆ.

ಪ್ರಪಂಚದ ಪ್ರಥಮ ಮಾನವರೇ ಆದಿವಾಸಿಗಳೆಂದರೆ ತಪ್ಪಿಲ್ಲ. ಪ್ರಪಂಚದಾದ್ಯಂತ ವಿಶ್ವವು ಸುಮಾರು ೬೬೦೦ ಆದಿವಾಸಿ ಜನಾಂಗಗಳನ್ನು ಹೊಂದಿದ್ದು, ವಿಶ್ವದ ಒಟ್ಟು ಜನಸಂಖ್ಯೆಯಲ್ಲಿ ೪.೪% ರಷ್ಟು ಆದಿವಾಸಿ ಜನರಿದ್ದಾರೆ. ಭಾರತವು ವೈವಿಧ್ಯತೆಯಲ್ಲಿ ಏಕತೆಯನ್ನು ಹೊಂದಿದ ರಾಷ್ಟ್ರವಾಗಿದೆ. ಭಾರತವು ಸುಮಾರು ೬೩೬ ಬುಡಕಟ್ಟುಗಳನ್ನು ಹೊಂದಿದ್ದು, ಭಾರತದ ಒಟ್ಟು ಜನಸಂಖ್ಯೆಯಲ್ಲಿ ೮.೮% ರಷ್ಟು ಜನರು ಬುಡಕಟ್ಟು ಜನರಿದ್ದಾರೆ.[೩]

ಕರ್ನಾಟಕದಲ್ಲಿ ಸಹಜವಾಗಿ ಸ್ವಾಭಾವಿಕ ಸಂಪನ್ಮೂಲಗಳನ್ನು ಆಧಿಕವಾಗಿ ಹೊಂದಿರುವ ಬೆಟ್ಟ-ಗುಡ್ಡ ಪ್ರದೇಶಗಳಲ್ಲಿ ಹಾಗೂ ದಟ್ಟವಾಗಿರುವ ಕಾಡುಗಳಲ್ಲಿ ಅನೇಕ ಆದಿವಾಸಿಗಳು ವಾಸಿಸುವುದನ್ನು ಕಾಣಬಹುದು. ಕರ್ನಾಟಕದಲ್ಲಿ ೨೦೦೧ರ ಗಣತಿ ಪ್ರಕಾರ ೧೯ ಲಕ್ಷ ಆದಿವಾಸಿ ಜನರಿದ್ದು, ಅದರಲ್ಲಿ

ಪ್ರಮುಖವಾಗಿ ನಾಯಕ ಬುಡಕಟ್ಟು ಅತೀ ಹೆಚ್ಚಿನ ಜನಸಂಖ್ಯೆ ಹೊಂದಿದೆ. ಕರ್ನಾಟಕ ರಾಜ್ಯವು ಸುಮಾರು ೬೫ ಬುಡಕಟ್ಟು ಸಮುದಾಯಗಳನ್ನು ಹೊಂದಿದ್ದು, ಅವುಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗ ಕಾಯ್ದೆ-೧೯೭೬ರ ಪ್ರಕಾರ ಕರ್ನಾಟಕದಲ್ಲಿ ೫೦ ಬುಡಕಟ್ಟುಗಳು ಅನುಸೂಚಿತ ಪರಿಶಿಷ್ಟ ಪಂಗಡದ ಪಟ್ಟಿಗೆ ಸೇರಿವೆ.

ಉತ್ತರ ಕನ್ನಡ ಜಿಲ್ಲೆಯು ಕರ್ನಾಟಕ ರಾಜ್ಯದ ೩೦ ಜಿಲ್ಲೆಗಳ ಪೈಕಿ ಒಂದಾಗಿದ್ದು, ರಾಜ್ಯದ ಪಶ್ಚಿಮಕ್ಕೆ ಅರಬ್ಬಿ ಸಮುದ್ರದ ಗುಂಟ ದಕ್ಷಿಣೋತ್ತರವಾಗಿ ೧೪೨ ಕಿ.ಮೀ. ಕರಾವಳಿ ಪ್ರದೇಶವನ್ನಲ್ಲದೇ ವಿಶಾಲವಾದ ಬಯಲು ಸೀಮೆ ಹಾಗೂ ವಿಶೇಷವಾಗಿ ಸಹ್ಯಾದ್ರಿ ಘಟ್ಟದ ದಟ್ಟ ಕಾಡಿನ ಮಲೆನಾಡು ಪ್ರದೇಶವನ್ನು ಹೊಂದಿದೆ. ಜಿಲ್ಲೆಯ ಉತ್ತರಕ್ಕೆ ಗೋವಾ ರಾಜ್ಯ ಮತ್ತು ಬೆಳಗಾಂವ್ ಜಿಲ್ಲೆ, ಪೂರ್ವಕ್ಕೆ ಧಾರವಾಡ ಮತ್ತು ಹಾವೇರಿ ಜಿಲ್ಲೆಗಳು, ದಕ್ಷಿಣಕ್ಕೆ ಶಿವಮೊಗ್ಗ ಮತ್ತು ಉಡುಪಿ ಜಿಲ್ಲೆಗಳು ಹಾಗೂ ಪಶ್ಚಿಮಕ್ಕೆ ಅರಬ್ಬಿ ಸಮುದ್ರದಿಂದ ಆವರಿಸಲ್ಪಟ್ಟಿದೆ. ಕಾರವಾರ ನಗರವು ಜಿಲ್ಲಾ ಕೇಂದ್ರವಾಗಿದೆ. ಈ ಜಿಲ್ಲೆಯು ಒಟ್ಟು ೧೧ ತಾಲೂಕಗಳನ್ನು ಹೊಂದಿದ್ದು, ಜಿಲ್ಲೆಯ ವಿಸ್ತೀರ್ಣ ೧೦೨೯೧ ಚ.ಕಿ.ಮೀ. ಇದೆ.[೪] ಸನ್ ೨೦೧೧ರ ಜನಗಣತಿಯ ಅನುಸಾರ ಜಿಲ್ಲೆಯ ಒಟ್ಟು ಜನಸಂಖ್ಯೆ ೧೪೩೬೮೪೭. ಇದರಲ್ಲಿ ಪರಿಶಿಷ್ಟ ಜಾತಿಯವರು ೭.೫೨% ಮತ್ತು ಪರಿಶಿಷ್ಟ ಪಂಗಡದವರು ೧.೭೫% ಜನರು ಇದ್ದಾರೆ. ಜಿಲ್ಲೆಯ ಸಾಕ್ಷರತೆಯ ಪ್ರಮಾಣ ಶೇ. ೮೪.೦೨ ರಷ್ಟು ಇದೆ. ಜನ ಸಾಂದ್ರತೆಯು ಒಂದು ಚ.ಕಿ.ಮೀ.ಗೆ ೧೪೦ ಇದ್ದು, ಲಿಂಗಾನುಪಾತವು ೧೦೦೦ ಪುರುಷರಿಗೆ ೯೭೫ ಮಹಿಳೆಯರು.[೫]

'ಕರ್ನಾಟಕದ ಸುಂದರ ಜಿಲ್ಲೆಗಳಲ್ಲಿ ಒಂದಾದ ಉತ್ತರ ಕನ್ನಡ ಕಡಲು ಮತ್ತು ಕಾಡುಗಳ ಸಂಗಮ ಸ್ಥಾನ. ಅತಿ ಎತ್ತರದ ಬೆಟ್ಟ ಪ್ರದೇಶ, ನಾನಾ ವಿಧವಾದ ಸಸ್ಯ ಸಂಕುಲ, ಪ್ರಾಣಿ ಪಕ್ಷಿಗಳು, ಹತ್ತಾರು ನದಿಗಳು ಮುಂತಾಗಿ ಪ್ರಕೃತಿಯ ಎಲ್ಲ ಸೊಬಗನ್ನು ಮೈಗೂಡಿಸಿಕೊಂಡ ವಿಶಿಷ್ಟ ಸ್ಥಾನ ಇದು. ಇಂಥ ಸೊಬಗಿನ ಈ ರಮ್ಯ ತಾಣದಲ್ಲಿ ವಾಸವಾಗಿರುವ ವಿವಿಧ ಜನ ವರ್ಗಗಳ ಸಂಸ್ಕೃತಿ ಸೊಗಡು ಕೂಡ ಅಷ್ಟೇ ವೈಶಿಷ್ಟ್ಯಪೂರ್ಣವಾದುದು. ಇಂಥ ವೈವಿಧ್ಯದ ಉತ್ತರ ಕನ್ನಡದಲ್ಲಿ ಅದರ ಪ್ರಕೃತಿಯ ವಿಶೇಷದಂತೆಯೇ ಅದರೊಡಲಿನ ವಿವಿಧ ಜನವರ್ಗಗಳ ಸಂಸ್ಕೃತಿಗಳು ಅಷ್ಟೇ ಭಿನ್ನವಾಗಿ ಕಾಣಿಸಿಕೊಳ್ಳುತ್ತವೆ. ಕಾಡನ್ನೇ ಅವಲಂಬಿಸಿದ ಸಿದ್ಧಿಯರು, ಗೌಳಿಗರು, ಕುಡುಬಿಯರು; ಕಾಡು ಮತ್ತು ನಾಡಿನ ಸಂಬಂಧ ಇಟ್ಟುಕೊಂಡು ತೋಟತುಡಿಕೆಗಳಿಗೆ ಒಲಿದ ಹವ್ಯಕರು, ಹಸಲರು; ಕಾಡಿನ ನಡುವೆ ಕೃಷಿಯನ್ನೇ ಆಧಾರ ಮಾಡಿಕೊಂಡ ಗೊಂಡರು; ನದಿದಂಡೆಯ ಫಲವತ್ತು ನೆಲ ಹಿಡಿದು ಮಣ್ಣಿನ ಮಕ್ಕಳಾದ ನಾಡವರು, ನಾಮಧಾರಿಗಳು; ಭೂಮಿಯ ಅಭಾವದಿಂದಾಗಿ ಅತ್ತ ಸಂಪೂರ್ಣ ಕೃಷಿಯೂ ಅಲ್ಲದೆ, ಇತ್ತ ಕಾಡಿನ ಉತ್ಪನ್ನವೂ ಇಲ್ಲದೆ ಕಾಡು ಮತ್ತು ನಾಡಿನ ನಡುವೆ ಇನ್ನೂ ಹೋರಾಟದ ಬದುಕು ನಡೆಸುತ್ತಿರುವ ಬಹುಸಂಖ್ಯಾತರಾದ ಹಾಲಕ್ಕಿ ಒಕ್ಕಲಿಗರು; ಮಣ್ಣು ಮತ್ತು ಹೊನ್ನಿನ ಭಾಗ್ಯವೇ ಇಲ್ಲದ ಮುಕ್ರಿಯರು ಈ ಜಿಲ್ಲೆಯ ಮುಖ್ಯ ಜನವರ್ಗಗಳು. ಇವರಲ್ಲದೆ ಗಾಮೊಕ್ಕಲಿಗರು, ಕೊಟ್ಟೆ ಒಕ್ಕಲಿಗರು, ಕರೆ ಒಕ್ಕಲಿಗರು, ಕೊಮಾರಪಂತರು, ಗುಡಿಗಾರರು, ಗಾಣಿಗರು, ಸಾರಸ್ವತರು, ನವಾಯತರು ಮುಂತಾದ ಅನೇಕ ಜನವರ್ಗಗಳು ಈ ಜಿಲ್ಲೆಯಲ್ಲಿವೆ. ಸಮುದ್ರವನ್ನೇ ನಂಬಿ ಬದುಕುವ ಬೆಸ್ತರ

ವಿವಿಧ ಪಂಗಡಗಳ ಜನರೂ ಬಹುಸಂಖ್ಯೆಯಲ್ಲಿದ್ದಾರೆ'.[೬] ಈ ಜಿಲ್ಲೆಯಲ್ಲಿ ಹಿಂದೂ ಧರ್ಮದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಪಂಚಮರೆಂಬ ಐದು ವರ್ಣಗಳ ಜನರೊಂದಿಗೆ ಕ್ರೈಸ್ತರು ಮುಸ್ಲಿಮರು, ಜೈನರು ಮುಂತಾದ ಧರ್ಮದ ಸಮುದಾಯಗಳು ವಾಸಿಸುತ್ತಿದ್ದಾರೆ.

ಉತ್ತರ ಕನ್ನಡ ಜಿಲ್ಲೆಯಲ್ಲಿ ಬೆಟ್ಟ-ಗುಡ್ಡ, ದಟ್ಟ ಕಾಡು-ಮೇಡು ಇದ್ದ ಕಾರಣ ಹಲವಾರು ಬುಡಕಟ್ಟುಗಳು ಬೇರೆ ಪ್ರದೇಶಗಳಿಂದ ವಲಸಿಗರಾಗಿ ಇಲ್ಲಿಗೆ ಬಂದು ಜಿಲ್ಲೆಯಲ್ಲಿ ಅಲ್ಲಲ್ಲಿ ತಮ್ಮ ನೆಲೆಯನ್ನು ಕಂಡುಕೊಂಡಿದ್ದಾರೆ. ಪಶು ಸಾಕಾಣಿಕೆಗಾರರಾದ ಧನಗರ ಗೌಳಿಗರು ಮೂಲತಃ ಅಲೆಮಾರಿಗಳಾಗಿದ್ದು, ಸುಮಾರು ೧೦೦ ವರ್ಷಗಳ ಹಿಂದೆ ಮಹಾರಾಷ್ಟ್ರದ ತಮ್ಮ ಮೂಲ ನೆಲೆಗಳಾದ ಕೊಲ್ಹಾಪೂರ, ರತ್ನಗಿರಿ ಜಿಲ್ಲೆಗಳಲ್ಲಾದ ಅನಾವೃಷ್ಟಿಯಿಂದ ದನಗಳಿಗೆ ಮೇವು, ನೀರಿನ ಕೊರತೆ ಮತ್ತು ಅಭಾವದ ಕಾರಣ ಸಹ್ಯಾದ್ರಿ ಪರ್ವತ ಶ್ರೇಣಿಗುಂಟ ಮೇವು, ನೀರು ಹುಡುಕುತ್ತ ಕರ್ನಾಟಕದಲ್ಲಿಯ ನೆರೆಯ ಉತ್ತರ ಕನ್ನಡ ಜಿಲ್ಲೆಯ ದಟ್ಟ ಅರಣ್ಯ ಪ್ರದೇಶಕ್ಕೆ ವಲಸೆ ಬಂದು ನೆಲೆಸಿದರೆಂದು ಕಂಡು ಬರುತ್ತದೆ.

ಉತ್ತರ ಕನ್ನಡ ಜಿಲ್ಲೆಯಲ್ಲಿ ನೆಲೆಸಿರುವ ಬುಡಕಟ್ಟು ಸಮುದಾಯಗಳಲ್ಲಿ ಧನಗರ ಗೌಳಿಗರು ಪ್ರಮುಖವಾಗಿ ಗಮನ ಸೆಳೆಯುತ್ತಾರೆ. ಯಾಕೆಂದರೆ, ತಮ್ಮದೇ ಆದ ಭಾಷೆ, ಸಂಸ್ಕೃತಿ, ಸಂಪ್ರದಾಯಗಳನ್ನು ಉಳಿಸಿಕೊಂಡು, ಪರಂಪರೆಯಿಂದ ಬಂದ ವೃತ್ತಿಪರತೆ ಹಾಗೂ ಸಾಂಸ್ಕೃತಿಕ ಅನನ್ಯತೆಯನ್ನು ಕಾಪಾಡಿಕೊಂಡು ಬಂದಿದ್ದಾರೆ. ಸೋಜಿಗವೆಂದರೆ, ಇವರು ವಾಸಿಸುವ ಗೌಳಿವಾಡಾಗಳಲ್ಲಿಯ ಸಹಜ ಮನೆಗಳಿಗೆ ಬಾಗಿಲುಗಳಿಲ್ಲ; ಇವರು ದನಗಳನ್ನು ಕಟ್ಟಲು ಗೂಟಗಳನ್ನು ನೆಡದೆ ಮನೆಯ ಮುಂದಿನ ಕೊಟ್ಟಿಗೆಯಲ್ಲಿ ದನಗಳನ್ನು ಹಾಗೆಯೇ ಬಿಡುತ್ತಾರೆಯೇ ಹೊರತು ದನಗಳನ್ನು ಕಟ್ಟದೇ ಇರುವುದು ಇವರ ಸಹಜ ಬದುಕಿಗೆ ಕೈಗನ್ನಡಿಯಾಗಿದೆ; ಹಾಗೂ ಇವರಲ್ಲಿಯ ಪೆಟ್ಟಿಗೆ ದೈವಗಳು ಇವರು ಅಲೆಮಾರಿಗಳು ಎಂಬುದಕ್ಕೆ ಸಾಕ್ಷಿಯಾಗಿವೆ. ಹೀಗೆ ಅಪ್ಪಟ ಬುಡಕಟ್ಟುತನ ಉಳಿಸಿಕೊಂಡಿರುವ ಗೌಳಿ ಸಮುದಾಯದ ಸಾಹಸಿ ಹಾಗೂ ವಿಶಿಷ್ಟವಾದ ಜೀವನಶೈಲಿ, ಪ್ರಾಣಿ ಹಾಗೂ ಕಾಡಿನ ಜೊತೆಗಿರುವ ಅವಿನಾಭಾವ ಸಂಬಂಧ ಅಲ್ಲದೇ ಈ ಮೇಲಿನ ವಿಶೇಷ ಕಾರಣಗಳಿಂದ, ಮೊದಲಿನಿಂದಲೂ ಬುಡಕಟ್ಟು ಸಮುದಾಯಗಳ ಬಗ್ಗೆ ವಿಶೇಷ ಆಸಕ್ತಿ ಇದ್ದ ನನ್ನನ್ನು ಗೌಳಿ ಸಮುದಾಯವು ಆಕರ್ಷಿಸಿತು. ಕಡಲು ಮತ್ತು ಕಾಡುಗಳ ಸಂಗಮ ಸ್ಥಾನವಾದ ಹಾಗೂ ಪ್ರಕೃತಿಯ ಎಲ್ಲಾ ಸೊಬಗನ್ನು ಮೈಗೂಡಿಸಿಕೊಂಡ ಹಾಗೂ ನಿಸರ್ಗ ಸಂಪತ್ತಿನ ರಮ್ಯ ತಾಣವಾದ ಸುಂದರ ಉತ್ತರ ಕನ್ನಡ ಜಿಲ್ಲೆಯಲ್ಲಿ ಸಂಚರಿಸಿ ಆನಂದಿಸಬೇಕೆಂಬ ನನ್ನ ಉತ್ಕಟೇಚ್ಛೆಯು ಉತ್ತರ ಕನ್ನಡ ಜಿಲ್ಲೆಯಲ್ಲಿ ಸಾಂದ್ರವಾಗಿ ನೆಲೆಸಿರುವ ಗೌಳಿ ಬುಡಕಟ್ಟು ಸಮುದಾಯವನ್ನೇ ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲು ಪ್ರೇರೇಪಿಸಿತು.

ಕರ್ನಾಟಕದಲ್ಲಿ ಗೌಳಿಗರ ಒಟ್ಟು ಜನಸಂಖ್ಯೆ ಅಂದಾಜು ನಲವತ್ತೈದು ಸಾವಿರದಷ್ಟಿದೆ. ಮಹಾರಾಷ್ಟ್ರದಿಂದ ವಲಸೆ ಬಂದ ನಂತರ ಉತ್ತರ ಕನ್ನಡ ಜಿಲ್ಲೆ, ಶಿವಮೊಗ್ಗ, ಚಿಕ್ಕಮಗಳೂರು, ಬೆಳಗಾವ, ಧಾರವಾಡ ಜಿಲ್ಲೆ ಮುಂತಾದ ಪ್ರದೇಶಗಳಲ್ಲಿ ವಾಸಿಸುತ್ತಿದ್ದಾರೆ. ಆದರೆ ಅರ್ಧಕ್ಕಿಂತ ಹೆಚ್ಚು ಜನರು ಉತ್ತರ ಕನ್ನಡ ಜಿಲ್ಲೆಯ ನಾಲ್ಕು ತಾಲೂಕುಗಳಲ್ಲಿ ಅಂದರೆ ಹಳಿಯಾಳ, ಜೊಯಿಡಾ,

ಮುಂಡಗೋಡ ಮತ್ತು ಯಲ್ಲಾಪೂರಗಳಲ್ಲಿ ವಾಸಿಸುತ್ತಿದ್ದಾರೆ. ಗೌಳಿಗರು ಬುಡಕಟ್ಟು ಸಮುದಾಯವೆಂದು ಸರಕಾರ ಪರಿಗಣಿಸದಿದ್ದರೂ ಅವರು ಬುಡಕಟ್ಟಿನ ಲಕ್ಷಣಗಳನ್ನು ಹೊಂದಿದ್ದಾರೆ. 'ಬುಡಕಟ್ಟುಗಳನ್ನು ಗುರುತಿಸಲು ಸನ್ ೧೯೫೩ರ ಪರಿಶಿಷ್ಟ ಜಾತಿ ಮತ್ತು ಬುಡಕಟ್ಟುಗಳ ಆಯೋಗವು ಬುಡಕಟ್ಟುಗಳ ಎಂಟು ಲಕ್ಷಣಗಳನ್ನು ಈ ರೀತಿಯಾಗಿ ಹೇಳಿದೆ'.[೭]

೧) ನಾಗರಿಕ ಸಮುದಾಯದಿಂದ ದೂರವಿದ್ದು ಕಾಡು ಮತ್ತು ಬೆಟ್ಟಗಳಲ್ಲಿ ಬದುಕುವವರು.

೨) ನಿಗ್ರೋಯಿಡ್, ಅಸ್ಟ್ರೋಲಾಯಿಡ್, ಮಂಗೋಲಾಯಿಡ್ ಮತ್ತು ಕೊಕೊಸೈಡ್ ಈ ನಾಲ್ಕು ಜನಾಂಗಗಳಲ್ಲಿ ಯಾವುದಾದರೂ ಒಂದಕ್ಕೆ ಸೇರಿರಬೇಕು.

೩) ಬುಡಕಟ್ಟುಗಳು ಪ್ರತ್ಯೇಕವಾದ ಭಾಷೆಯನ್ನು ಹೊಂದಿರಬೇಕು.

೪) ಪಿತೃ ಪೂಜೆ, ದೆವ್ವ/ಭೂತಗಳ ಆರಾಧನೆಯನ್ನು ಮಾಡುವ ಪ್ರಾಚೀನ ಆಚರಣೆಯನ್ನು ಹೊಂದಿರಬೇಕು.

೫) ಪ್ರಾಚೀನ ವೃತ್ತಿಗಳಾದ ಬೇಟೆ, ಬೇಸಾಯ ಮತ್ತು ಕಾಡುತ್ಪತ್ತಿಯನ್ನು ಸಂಗ್ರಹಿಸುವ ವೃತ್ತಿಗಳನ್ನು ಮಾಡುವವರಾಗಿರಬೇಕು.

೬) ಮಾಂಸ ಸೇವನೆಯನ್ನು ಮಾಡುವವರಿರಬೇಕು.

೭) ಬುಡಕಟ್ಟುಗಳು ಸಾಮಾನ್ಯವಾಗಿ ಅರೆಬೆತ್ತಲೆ, ಬೆತ್ತಲೆಯಾಗಿದ್ದು, ಮರದ ತೊಗಟೆ, ಎಲೆಗಳನ್ನು ಬಳಸುವವರಾಗಿರಬೇಕು.

೮) ವಲಸೆ ಸಂಸ್ಕೃತಿಯನ್ನು ಹೊಂದಿದ್ದು ಕುಣಿತ, ಕುಡಿತಗಳಲ್ಲಿ ವಿಶೇಷ ಆಸಕ್ತಿಯನ್ನು ಹೊಂದಿರಬೇಕು.

ಈ ಮೇಲಿನ ಎಂಟು ಲಕ್ಷಣಗಳನ್ನು ನೋಡಿದಾಗ ಗೌಳಿಗರು ಇದರಲ್ಲಿ ಆರು ಲಕ್ಷಣಗಳನ್ನು (೧,೩,೪,೫,೬,೮) ಹೊಂದಿದ್ದಾರೆ ಎಂಬುದನ್ನು ಗಮನಿಸಬಹುದು. ಅಂದರೆ ಧನಗರ ಗೌಳಿಗರನ್ನು ಮೇಲ್ನೋಟಕ್ಕೇನೆ ಅಧಿಕೃತ ಬುಡಕಟ್ಟು ಎಂದು ಪರಿಗಣಿಸಬಹುದಾದಷ್ಟು ಈ ಸಮುದಾಯ ದಟ್ಟ ಬುಡಕಟ್ಟು ಲಕ್ಷಣಗಳನ್ನು ಹೊಂದಿದೆಯಾದ್ದರಿಂದ ಅನುಸೂಚಿತ ಪರಿಶಿಷ್ಟ ಪಂಗಡಗಳ ಪಟ್ಟಿಗೆ ಸೇರಲು ಅರ್ಹವಿದೆ ಎಂದು ಹೇಳಬಹುದು. ಆದರೆ 'ಗೌಳಿ ಸಮುದಾಯವನ್ನು ಪ್ರವರ್ಗ–೧ಕ್ಕೆ ಸೇರಿಸಲಾಗಿದೆ. ಪರಿಶಿಷ್ಟ ಪಂಗಡಕ್ಕೆ ಸೇರಿಸದ ಕಾರಣ ಈ ಸಮುದಾಯವು ಸಂವಿಧಾನಬದ್ಧ ಸೌಲಭ್ಯಗಳಿಂದ ವಂಚಿತವಾಗಿದೆ. ಅಲ್ಲದೇ ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದವರಾಗಿದ್ದು, ರಾಜಕೀಯವಾಗಿ ಅಸಂಘಟಿತರಾಗಿದ್ದಾರೆ'.[೮]

ಗೌಳಿಗರ ಸಾಮಾಜಿಕ, ಆರ್ಥಿಕ ಸ್ಥಾನಮಾನಗಳು ಕರ್ನಾಟಕದ ಇತರ ಪಂಗಡಗಳಂತೆ ಕೆಳಮಟ್ಟದಲ್ಲಿವೆ. ಗೌಳಿಗರು ತಾವು ಮರಾಠಿಗರಿಗೆ ಸಮಾನ ಎಂದು ಹೇಳಿಕೊಂಡರೂ ಸಹ ಇವರು

ಕುಣಬಿ ಸಮುದಾಯದ ನಂತರದ ಸ್ಥಾನ ಹೊಂದಿದ್ದು, ಘಿಸಾಡಿ, ಬುರಡ, ಪಾರಿತ್, ಜಿನಗಾರ ಸಮುದಾಯಗಳಿಗಿಂತ ಮೇಲ್ಮಟ್ಟ ಸ್ಥಾನದಲ್ಲಿದ್ದಾರೆ.[೯] ಹಾಗೂ ಹವ್ಯಕ ಬ್ರಾಹ್ಮಣರಗಿಂತ ಕೆಳಮಟ್ಟದ ಸ್ಥಾನದಲ್ಲಿದ್ದಾರೆ ಎಂದು ಕೆಲವು ಅಧ್ಯಯನಗಳಿಂದ ಕಂಡು ಬರುತ್ತದೆ. ಧನಗರ ಗೌಳಿಗರು ಕೇವಲ ತಮ್ಮ ಉಡಿಗೆ, ತೊಡುಗೆ, ಭಾಷೆ ಸಂಸ್ಕೃತಿ ಮತ್ತು ಸಾಮಾಜಿಕ ಪದ್ಧತಿಗಳಿಂದ ಭಿನ್ನವಾಗಿಲ್ಲ. ಅವರ ಬದುಕು, ಸಾಂಸ್ಕೃತಿಕ ಚಿನ್ಹೆಗಳಿಂದಲೂ ಇತರರಿಗಿಂತ ಭಿನ್ನವಾಗಿದ್ದಾರೆ. ಗೌಳಿಗರು ದಟ್ಟವಾದ ಕಾಡುಗಳಲ್ಲಿ ವಾಸಿಸುತ್ತಿದ್ದರೂ ಸಹ 'ಮುಖ್ಯ ವಾಹಿನಿ' ಎಂದು ಕರೆಯಲ್ಪಡುವ ನಾಗರಿಕ ಸಮಾಜದಿಂದ ದೂರ ಉಳಿದಿಲ್ಲ.

ದಟ್ಟವಾದ ಅರಣ್ಯಗಳಲ್ಲಿ ವಾಸಿಸುತ್ತ ಹೈನುಗಾರಿಕೆಯನ್ನು ತನ್ನ ಪಾರಂಪರಿಕ ಕಸುಬನ್ನಾಗಿ ಘೋಷಿಸಿಕೊಂಡು ಬಂದಿದ್ದ ಈ ಧನಗರ ಗೌಳಿ ಸಮುದಾಯ ನಿಸರ್ಗದ ಬಗೆಗೆ ಅಪಾರವಾದ ತಿಳುವಳಿಕೆಯನ್ನು ಇಟ್ಟುಕೊಂಡಿರುವಂತದ್ದು. ಆದರೆ ಈ ಸಮುದಾಯ ಪ್ರಸ್ತುತದಲ್ಲಿ ಎದುರಿಸುತ್ತಿರುವ ಸವಾಲುಗಳು ಹಲವಾರು. ಅಂತೆಯೇ ಕ್ಷೇತ್ರಕಾರ್ಯ ಹಾಗೂ ಅಧ್ಯಯನದ ಮೂಲಕ ಗೌಳಿ ಸಮುದಾಯವು ಎದುರಿಸುತ್ತಿರುವ ನಿಜವಾದ ಸಮಸ್ಯೆಗಳು ಮತ್ತು ಪರಿವರ್ತನೆ ಕುರಿತು ಆಳವಾಗಿ/ ವ್ಯಾಪಕವಾಗಿ ಅಭ್ಯಸಿಸಲು ಪ್ರಾಮಾಣಿಕ ಪ್ರಯತ್ನ ಮಾಡಲಾಗಿದೆ. ಇಂದಿನ ನಾಗರೀಕರಣ, ಆಧುನೀಕರಣ ಮತ್ತು ಜಾಗತೀಕರಣಗಳ ಸಂಕ್ರಮಣ ಕಾಲದಲ್ಲಿ ಪರಿವರ್ತನೆಯು ಮಹತ್ವದ ಅಂಶವಾಗಿದೆ.

ಪರಿವರ್ತನೆ ಎಂಬುದು ನಿಸರ್ಗ ನಿಯಮ. ಮಾನವ ಸಮಾಜವು ಆದಿಯಿಂದಲೂ ಅವ್ಯಾಹತವಾಗಿ ಬದಲಾಗುತ್ತಲೇ ಇದೆ. ಎಲ್ಲ ಸಮಾಜಗಳು ಬದಲಾವಣೆಗಳನ್ನು ಆಹ್ವಾನಿಸುತ್ತವೆ. ಸಮಾಜ ವ್ಯಕ್ತಿ ಸಮೂಹಗಳ ಸಂಘಟನೆ. ಅಲ್ಲಿ ವ್ಯಕ್ತಿ-ವ್ಯಕ್ತಿ ನಡುವೆ ಅಂತರಕ್ರಿಯೆ, ವ್ಯಕ್ತಿ-ಸಮೂಹಗಳ ನಡುವೆ ಅಂತರಕ್ರಿಯೆ, ಸಮೂಹ-ಸಮೂಹಗಳ ನಡುವೆ ಅಂತರಕ್ರಿಯೆ ನಡೆಯುತ್ತಿರುತ್ತವೆ. ಸಮಾಜವು ನಿತ್ಯ ಪರಿವರ್ತನಾಶೀಲವಾದುದು. ಪರಿವರ್ತನೆ ಅದರಲ್ಲಿ ಅಂತರ್ಗತವಾಗಿದೆ. ಆದಿವಾಸಿ, ಅಲೆಮಾರಿ, ಗ್ರಾಮೀಣ, ನಗರ ಹಾಗೂ ಆಧುನಿಕ ಹೀಗೆ ಪ್ರತಿಯೊಂದು ಸಮಾಜದಲ್ಲಿಯೂ ಪರಿವರ್ತನೆ ಉಂಟಾಗುತ್ತಿರುತ್ತದೆ. ಆದರೆ ಗತಿಶೀಲತೆ ಮಾತ್ರ ಸಮಾಜದಿಂದ ಸಮಾಜಕ್ಕೆ, ಸಮುದಾಯದಿಂದ ಸಮುದಾಯಕ್ಕೆ ವ್ಯತ್ಯಾಸಗೊಳ್ಳುತ್ತದೆ. ಆದಿವಾಸಿ, ಅಲೆಮಾರಿ ಸಮಾಜಗಳಲ್ಲಿ ಪರಿವರ್ತನೆಯು ನಿಧಾನಗತಿಯಲ್ಲಿದ್ದರೆ, ಗ್ರಾಮೀಣ ಸಮಾಜದಲ್ಲಿ ಸಾಧಾರಣ ಗತಿಯಾಗಿದ್ದು, ನಗರ ಸಮಾಜದಲ್ಲಿ ತೀವ್ರಗತಿಯಾಗಿದ್ದರಬಹುದು. ಪರಿವರ್ತನೆ ಪ್ರಕ್ರಿಯೆಯು ಸಂಕೀರ್ಣವಾದುದು.[೧೦]

### ೧.೨ ಅಧ್ಯಯನದ ಉದ್ದೇಶಗಳು

ಸಾಮಾಜಿಕ ಚಿಂತನೆಯಲ್ಲಿ ಪರಿವರ್ತನೆಗೆ ಬಹಳ ಮಹತ್ವವಿದೆ. ಸಾಮಾಜಿಕ ಸಂಸ್ಥೆಗಳ ಸಮಷ್ಟಿಯಲ್ಲಿ ಉಂಟಾಗುತ್ತಿರುವ ಪರಿವರ್ತನೆಯನ್ನು ಅಧ್ಯಯನ ಮಾಡುವುದು ಅವಶ್ಯವಾಗಿದೆ. ಪರಿವರ್ತನೆಯ ಜೊತೆಗೆ ಸಮಸ್ಯೆಗಳೂ ಕೂಡ ಇವೆ. ಇವು ಆರ್ಥಿಕ ಅಸಮಾನತೆ, ಆಧುನಿಕತೆಯ ಸಮಕಾಲೀನ ಸವಾಲುಗಳು, ಶೈಕ್ಷಣಿಕ, ಸಾಮಾಜಿಕ ಹಾಗೂ ರಾಜಕೀಯ ಹಿನ್ನೆಡೆಗಳಿಗೆ ಸಂಬಂಧಿಸಿದ ಸಮಸ್ಯೆಗಳಾಗಿವೆ. ಈ ನಿಟ್ಟಿನಲ್ಲಿ ಸರಕಾರ ಕೈಗೊಂಡಿರುವ ಅಭಿವೃದ್ಧಿ ನೀತಿ, ಯೋಜನೆಗಳು ಇಡೀ

ರಾಷ್ಟ್ರದ ಜನಸಮುದಾಯಗಳಿಗೆ ಅನ್ವಯಿಸುತ್ತವೆ. ಇವುಗಳೆಲ್ಲ ಒಂದೇ ರೀತಿಯಾಗಿದ್ದು, ದ್ವಂದತೆಯುಳ್ಳದ್ದಾಗಿದೆ. ಹೀಗಾಗಿ ಗೌಳಿ ಸಮುದಾಯ ಕುರಿತು ಸಮಾಜಶಾಸ್ತ್ರೀಯ ಅಡಿಯಲ್ಲಿ ಸಮಸ್ಯೆಗಳು ಹಾಗೂ ಪರಿವರ್ತನೆಯ ಅಧ್ಯಯನ ನಡೆಸುವುದು ಅಗತ್ಯವಾಗಿದೆ.

ಉತ್ತರ ಕನ್ನಡ ಜಿಲ್ಲೆ ಒಂದು ವೈಶಿಷ್ಟ್ಯತೆಯಿಂದ ಕೂಡಿದ್ದು, ನೈಸರ್ಗಿಕವಾಗಿಯೂ ಆಕರ್ಷಣೀಯವಾಗಿದೆ. ಗೌಳಿ ಸಮುದಾಯದ ವೈವಿಧ್ಯಮಯವಾದ ಜೀವನ ಶೈಲಿ, ಅವರ ಸಾಮಾಜಿಕ ಜೀವನ ಕ್ರಮದ ವೈಶಿಷ್ಟ್ಯತೆಗಳು, ಗೌಳಿಗರು ಪ್ರಾಣಿಗಳ ಬಗ್ಗೆ, ಕಾಡಿನ ಬಗ್ಗೆ ಹೊಂದಿದಂತಹ ವಿಶೇಷ ಪ್ರೀತಿ, ಕಾಳಜಿ, ಅವರು ಎದುರಿಸುತ್ತಿರುವ ಹಲವಾರು ಸಮಸ್ಯೆಗಳಾದ ಅರಣ್ಯ ಸಮಸ್ಯೆ, ಭೂಮಿ ಸಮಸ್ಯೆ, ಬಡತನ, ಅನಾರೋಗ್ಯ ಸಮಸ್ಯೆ, ಅಜ್ಞಾನ ಸಮಸ್ಯೆ, ವೈವಾಹಿಕ ಸಂಬಂಧಗಳ ಸಮಸ್ಯೆ, ದನಕರುಗಳಿಗೆ ನೀರಿನ ಮತ್ತು ಮೇವಿನ ಸಮಸ್ಯೆ, ಭೂಮಾಲೀಕರಿಂದ ಶೋಷಣೆಗೆ ಒಳಪಟ್ಟ ಸಮಸ್ಯೆ, ವಲಸೆ ಬರುವಾಗ ಹೊತ್ತು ತಂದ ಅನೇಕ ಸಮಸ್ಯೆ, ಧರ್ಮ ದೌರ್ಜನ್ಯಕ್ಕೆ ಒಳಗಾದ ಸಮಸ್ಯೆ ಇವೆಲ್ಲವುಗಳನ್ನು ಅರ್ಥೈಸಿಕೊಂಡು ಸಮಸ್ಯೆಗಳಿಗೆ ಸಹೃದಯದಿಂದ ಸ್ಪಂದಿಸಿ ಅವುಗಳಿಗೆ ತಕ್ಕಮಟ್ಟಿನ ಪರಿಹಾರ ಸೂಚಿಸುವುದು ಈ ಮಹಾಪ್ರಬಂಧ ಅಧ್ಯಯನದ ಉದ್ದೇಶವಾಗಿದೆ.

ಆಧುನಿಕತೆ ಯಾವ ಅರಣ್ಯವನ್ನು ಪ್ರವೇಶ ಮಾಡದೇ ಬಿಟ್ಟಿಲ್ಲ. ಅವರ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯ, ಸಾಂಸ್ಕೃತಿಕ ಜೀವನದ ಮೇಲೆ ಉಂಟಾದ ಆಧುನಿಕತೆಯ ಪ್ರಭಾವದ ಎರಡು ಅಂಶಗಳಾದ ಸಕಾರಾತ್ಮಕ ಅಂಶ ಮತ್ತು ನಕಾರಾತ್ಮಕ ಅಂಶವನ್ನು ಅಧ್ಯಯನಿಸುವುದು, ಪರಿವರ್ತನೆ ದೃಷ್ಟಿಕೋನದಿಂದ ಅಭ್ಯಸಿಸುವುದು ನನ್ನ ಅಧ್ಯಯನದ ಉದ್ದೇಶವಾಗಿದೆ. ಶಿಕ್ಷಣ ಯೋಜನೆ, ಆರೋಗ್ಯ ಯೋಜನೆಗಳು, ಅಭಿವೃದ್ಧಿ ಯೋಜನೆಗಳು ಸಂಪರ್ಕ ಮಾಧ್ಯಮಗಳು (T.V., Mobile, News Paper), ಎನ್.ಜಿ.ಓ. ಇವುಗಳ ಪ್ರಭಾವ ಎಷ್ಟರಮಟ್ಟಿಗೆ ಆಗಿದೆ ಮತ್ತು ಎಷ್ಟರ ಮಟ್ಟಿಗೆ ಪರಿವರ್ತನೆ ಹೊಂದಿದ್ದಾರೆ ಎನ್ನುವುದು ನನ್ನ ಅಧ್ಯಯನದ ಪ್ರಮುಖ ಉದ್ದೇಶವಾಗಿದೆ.

ಆಧುನಿಕತೆ ಕೆಲವು ಸಮುದಾಯಗಳ ಮೇಲೆ ನಕಾರಾತ್ಮಕ ಪ್ರಭಾವ ಬೀರಿ ಅವರ ಸಾಮಾಜಿಕ ಜೀವನ ಅಧೋಗತಿಗಿಳಿಯಲು ಕಾರಣೀಭೂತವಾಗುತ್ತದೆ. ದುಶ್ಚಟಗಳು, ವೃತ್ತಿ ಬದಲಾವಣೆ, ವೃತ್ತಿ ಸಮಸ್ಯೆಗಳು, ಪಕ್ಷ ರಾಜಕಾರಣದ ಸಮಸ್ಯೆಗಳು, ಮಾಧ್ಯಮಗಳ ಪ್ರಭಾವದಿಂದ ಆಗುತ್ತಿರುವ ಸಾಂಸ್ಕೃತಿಕ ಅವನತಿ ಮುಂತಾದವುಗಳನ್ನು ಅಭ್ಯಸಿಸುವುದು ನನ್ನ ಉದ್ದೇಶವಾಗಿದೆ. ಈ ಸಕಾರಾತ್ಮಕ ಮತ್ತು ನಕಾರಾತ್ಮಕ ಏನೇ ಆಗಿರಲಿ ಇವುಗಳ ಮೂಲಕ ಗೌಳಿಗರ ಪಾರಂಪರಿಕ ಜೀವನದಲ್ಲಿ ಆಗಿರುವ ಮತ್ತು ಆಗುತ್ತಿರುವ ಪ್ರಮುಖವಾದ ಪರಿವರ್ತನೆಗಳನ್ನು ಗುರುತಿಸಿ ಅದರ ಪರಿಣಾಮಗಳೇನು ಎಂಬುದನ್ನು ಕಂಡುಕೊಳ್ಳುವ ಉದ್ದೇಶವು ಈ ಮಹಾಪ್ರಬಂಧಕ್ಕೆ ಇದೆ. ಉದ್ದೇಶಗಳ ಸಂಕ್ಷಿಪ್ತ ವಿವರ ಹೀಗಿದೆ.

೧. ಗೌಳಿ ಸಮುದಾಯದ ಮೂಲ, ಪ್ರಸರಣ ಹಾಗೂ ಐತಿಹಾಸಿಕ ಹಿನ್ನೆಲೆ ಕುರಿತು ಅಧ್ಯಯನ.

೨. ಗೌಳಿ ಸಮುದಾಯದ ಸಾಮಾಜಿಕ ಸ್ಥಿತಿಗತಿಗಳು, ಸಾಮಾಜಿಕ ಸ್ತರ ವ್ಯವಸ್ಥೆ, ಸ್ತ್ರೀಯ ಸ್ಥಾನಮಾನ, ಕುಟುಂಬ ಪದ್ಧತಿ ಮತ್ತು ಜೀವನ ಆವರ್ತಗಳ ಕುರಿತು ಅಧ್ಯಯನ.

೩. ಗೌಳಿ ಸಮುದಾಯ ಎದುರಿಸುತ್ತಿರುವ ಸಾಮಾಜಿಕ, ಕೌಟುಂಬಿಕ, ವೈವಾಹಿಕ, ಆರ್ಥಿಕ, ನೈಸರ್ಗಿಕ, ಶೈಕ್ಷಣಿಕ, ರಾಜಕೀಯ ಸಮಸ್ಯೆಗಳ ಕುರಿತು ಅಧ್ಯಯನ.

೪. ಗೌಳಿ ಸಮುದಾಯದಲ್ಲಿ ಉಂಟಾದ ಇತ್ತೀಚಿನ ಕೌಟುಂಬಿಕ, ವೈವಾಹಿಕ, ವೃತ್ತಿ, ಶೈಕ್ಷಣಿಕ, ರಾಜಕೀಯ, ಸಾಂಸ್ಕೃತಿಕ ಪರಿವರ್ತನೆ ಮತ್ತು ಪರಿಣಾಮ ಕುರಿತು ಅಧ್ಯಯನ.

### ೧.೩ ಅಧ್ಯಯನದ ವ್ಯಾಪ್ತಿ

ಸಾಮಾಜಿಕ ವಿಜ್ಞಾನಗಳಲ್ಲಿ ಸಂಶೋಧನೆ ಕೈಗೊಂಡಾಗ ಅದರ ವ್ಯಾಪ್ತಿಯನ್ನು ಎರಡು ರೀತಿಯಲ್ಲಿ ವಿಂಗಡಿಸಿ ವಿವರಿಸಬೇಕಾಗುತ್ತದೆ. ಅವು ಯಾವವೆಂದರೆ–

ಅ) ಭೌಗೋಳಿಕ ವ್ಯಾಪ್ತಿ [ಅಧ್ಯಯನದ ಪ್ರಾದೇಶಿಕ ವಿವರಣೆ]

ಆ) ಸಾಮಾಜಿಕ ವ್ಯಾಪ್ತಿ [ಅಧ್ಯಯನದ ವಿಷಯ ವಿವರಣೆ]

ಪ್ರಸ್ತುತ ಅಧ್ಯಯನದ ಎರಡೂ ಸ್ವರೂಪದ ವ್ಯಾಪ್ತಿಗಳನ್ನು ಪ್ರತ್ಯೇಕವಾಗಿ ಈ ಕೆಳಗಿನಂತೆ ವಿವರಿಸಲಾಗಿದೆ.

**ಅ) ಭೌಗೋಳಿಕ ವ್ಯಾಪ್ತಿ:** ಮಹಾರಾಷ್ಟ್ರ ಮೂಲದಿಂದ ಕರ್ನಾಟಕಕ್ಕೆ ವಲಸೆ ಬಂದ ಧನಗರ ಗೌಳಿ ಸಮುದಾಯವು ಸಹ್ಯಾದ್ರಿ ಶ್ರೇಣಿಯ ಕರ್ನಾಟಕ ಪಶ್ಚಿಮಘಟ್ಟ ಪ್ರದೇಶ ಅಕ್ಷಾಂಶ ೧೩°.೩೦' – ೧೬°N ಹಾಗೂ ರೇಖಾಂಶ ೭೪° – ೭೬°E ವ್ಯಾಪ್ತಿಯಲ್ಲಿ ನೆಲೆ ನಿಂತಿದ್ದಾರೆ. ಯಾಕೆಂದರೆ, ಗೌಳಿಗರು ವಾಸಿಸುವ ಈ ಪ್ರದೇಶದಲ್ಲಿ ៤೦೦ ಮಿ.ಮಿ. ದಿಂದ ೨೫೦೦ ಮಿ.ಮಿ. ವರೆಗೆ ಮಳೆ ಬೀಳುವದಲ್ಲದೇ ಉತ್ತಮ ಹುಲ್ಲು ಮತ್ತು ಬಿದಿರು ಬೆಳೆಯುತ್ತದೆ. ಜೀವ ಪರಿಸರಶಾಸ್ತ್ರದ ಪ್ರಕಾರ ಯಾವುದೇ ಒಂದು ಪ್ರದೇಶದಲ್ಲಿ ಬೆಳೆಯುವ ಸಸ್ಯ ಸಂಪತ್ತು ಅಲ್ಲಿ ಬದುಕುವ ಪ್ರಾಣಿ ಸಂಕುಲಕ್ಕೆ ಅತೀ ನಿಕಟ ಸಂಬಂಧ ಹೊಂದಿರುತ್ತದೆ. ಇವರು ವಾಸಿಸುವ ಈ ಅರೆ ಶಾಶ್ವತ ಹಸಿರು ಬೈಲು ಪ್ರದೇಶವು ಹವಾಮಾನ ಹಾಗೂ ಆಹಾರ ಪೂರೈಕೆ ಈ ಎರಡೂ ದೃಷ್ಟಿಗಳಿಂದ ಇಲ್ಲಿಯ ಹಸಿರು ಹುಲ್ಲು, ನೀರು ಮತ್ತು ಹವಾಮಾನಗಳು ಅವರ ಎಮ್ಮೆ ಹಾಗೂ ದನಕರುಗಳಿಗೆ ಅತ್ಯಂತ ಅನುಕೂಲಕರ ಹಾಗೂ ಉತ್ತಮ ವಾತಾವರಣವನ್ನು ಒದಗಿಸುವುದು. ಕಾರಣ ಕರ್ನಾಟಕದ ಗೌಳಿಗರಲ್ಲಿ ಹೆಚ್ಚಿನ ಜನಸಂಖ್ಯೆ ಇದೇ ಪ್ರದೇಶದಲ್ಲಿ ವಾಸವಾಗಿದೆ. ಧನಗರ ಗೌಳಿ ಸಮುದಾಯವು ಕರ್ನಾಟಕ ರಾಜ್ಯದ ಸಹ್ಯಾದ್ರಿ ಪರ್ವತ ಶ್ರೇಣಿ ವಲಯದ ವಿವಿಧ ಜಿಲ್ಲೆಗಳಾದ ಉತ್ತರಕನ್ನಡ, ಬೆಳಗಾವ, ಶಿವಮೊಗ್ಗ, ಚಿಕ್ಕಮಗಳೂರು ಜಿಲ್ಲಾ ಪ್ರದೇಶದಲ್ಲಿ ನೆಲೆನಿಂತಿದೆಯಾದರೂ ಸಾಂದ್ರವಾಗಿ ಬದುಕುತ್ತಿರುವುದು ಉತ್ತರ ಕನ್ನಡ ಜಿಲ್ಲೆಯಲ್ಲಿ. ಅಲ್ಲದೇ ಅರಣ್ಯ ಜಿಲ್ಲೆಯೆಂದೇ ಹೆಸರಾದ ಉತ್ತರ ಕನ್ನಡ ಜಿಲ್ಲೆಯು ಕರ್ನಾಟಕ ರಾಜ್ಯದ ಧನಗರ ಗೌಳಿಗರ ಜನಸಂಖ್ಯೆಯ ಅರ್ಧದಷ್ಟು ಅಧಿಕ ನೆಲೆಯನ್ನು ಹೊಂದಿರುವುದರಿಂದ ನಾನು ಉತ್ತರ ಕನ್ನಡ ಜಿಲ್ಲೆಯನ್ನು ಮಾತ್ರ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿದ್ದೇನೆ.

ಉತ್ತರ ಕನ್ನಡ ಜಿಲ್ಲೆಯಲ್ಲಿ ಒಟ್ಟು ೧೧ ತಾಲೂಕುಗಳಿದ್ದು, ಆ ಎಲ್ಲ ತಾಲೂಕುಗಳಲ್ಲಿಯೂ ಧನಗರ ಗೌಳಿ ಜನರು ಹರಿದು ಹಂಚಿ ಹೋಗಿಲ್ಲ. ಪ್ರಮುಖವಾಗಿ ಹಳಿಯಾಳ, ಯಲ್ಲಾಪೂರ,

ಮುಂಡಗೋಡ ಮತ್ತು ಜೋಯಿಡಾ ತಾಲೂಕುಗಳಲ್ಲಿ ಹೆಚ್ಚಿನ ಸಾಂದ್ರತೆಯಿಂದ ನೆಲೆಸಿದ್ದಾರೆ. ಆದ್ದರಿಂದ ಈ ನನ್ನ ಅಧ್ಯಯನ ಕ್ಷೇತ್ರ ಈ ನಾಲ್ಕು ತಾಲೂಕುಗಳಿಗೆ ಮಾತ್ರ ಸೀಮಿತವಾಗಿದೆ.

**ಕೋಷ್ಟಕ ೧.೧**

**ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಕ್ಷೇತ್ರ**

| ಅ.ನಂ. | ತಾಲೂಕು | ಗೌಳಿಗರು ವಾಸವಾಗಿರುವ ಗ್ರಾಮಗಳು (ಗೌಳಿ ವಾಡಾಗಳು) | ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಗ್ರಾಮಗಳು (ಗೌಳಿ ವಾಡಾಗಳು) |
|---|---|---|---|
| ೧ | ಹಳಿಯಾಳ | ೩೮ | ೧೪ |
| ೨ | ಯಲ್ಲಾಪೂರ | ೩೪ | ೧೩ |
| ೩ | ಮುಂಡಗೋಡ | ೨೫ | ೧೦ |
| ೪ | ಜೋಯಿಡಾ | ೨೫ | ೦೮ |
| | **ಒಟ್ಟು** | **೧೨೨** | **೪೫** |

ಅಧ್ಯಯನದ ಉದ್ದೇಶಗಳಿಗೆ ಅನುಗುಣವಾಗಿ ವ್ಯಾಪ್ತಿಗೊಳಪಟ್ಟ ನಾಲ್ಕು ತಾಲೂಕುಗಳಲ್ಲಿ ಗೌಳಿಗರು ವಾಸವಾಗಿರುವ ಒಟ್ಟು ೧೨೨ ಗೌಳಿ ವಾಡಾಗಳ ಪೈಕಿ ಅವುಗಳ ವೈಶಿಷ್ಟ್ಯತೆಗನುಗುಣವಾಗಿ ಮಾದರಿ ವಿಧಾನದ ಮೂಲಕ ಆಯ್ಕೆ ಮಾಡಿಕೊಂಡ ೪೫ ಗೌಳಿ ವಾಡಾಗಳಲ್ಲಿ ವ್ಯಾಪಕ ಕ್ಷೇತ್ರ ಕಾರ್ಯವನ್ನು ಕೈಗೊಳ್ಳಲಾಗಿದೆ. ಒಂದೊಂದು ವಾಡಾವು ಸ್ವತಂತ್ರ ನೆಲೆಗಳಾಗಿದ್ದರೂ ಸಮೀಪದ ಗ್ರಾಮದ ಮಜಿರೆ ಗ್ರಾಮಗಳಾಗಿಯೇ ಪರಿಗಣಿತವಾಗಿವೆ.

ಅಧ್ಯಯನದ ವ್ಯಾಪ್ತಿಗೆ ಒಳಪಟ್ಟಿರುವ ಮೇಲ್ಕಂಡ ವಾಡಾಗಳಲ್ಲದೇ ಬೇರೆ ಬೇರೆ ವಾಡಾಗಳಿಗೂ ಭೇಟಿ ಕೊಟ್ಟಿದ್ದೇನೆ. ಗೌಳಿಗರ ಮೂಲದ ಬಗ್ಗೆ ಅಧ್ಯಯನ ಮಾಡುವ ಉದ್ದೇಶದಿಂದ ಮಹಾರಾಷ್ಟ್ರದ ಕೊಲ್ಲಾಪೂರ ಜಿಲ್ಲೆಯ ಆಜ್ರಾ ತಾಲೂಕಿನಲ್ಲಿ ಒಂದು ಧನಗರ ವಾಡಾ ಹಾಗೂ ಸಿಂಧುದುರ್ಗ ಜಿಲ್ಲೆಯ ಸಾವಂತವಾಡಿ ತಾಲೂಕಿನ ಎರಡು ಧನಗರ ವಾಡಾಗಳಿಗೂ ಸಹ ಭೇಟಿ ಕೊಟ್ಟಿದ್ದೇನೆ.

**ಆ) ಸಾಮಾಜಿಕ ವ್ಯಾಪ್ತಿ (ಅಧ್ಯಯನದ ವಿಷಯ ವಿವರಣೆ):** ಕರ್ನಾಟಕದ ಧನಗರ ಗೌಳಿ ಸಮುದಾಯ ಕುರಿತು ಅಂದರೆ ಅವರ ಸಂಸ್ಕೃತಿ, ಸಾಮಾಜಿಕ ಹಾಗೂ ಆರ್ಥಿಕ ಸ್ಥಿತಿಗತಿ, ವೃತ್ತಿ, ಸಂಪ್ರದಾಯ ಮುಂತಾದವುಗಳ ಬಗ್ಗೆ ಹಲವಾರು ಅಧ್ಯಯನಗಳು ನಡೆದಿವೆ. ಆದರೆ ಇಲ್ಲಿಯವರೆಗೆ ಧನಗರ ಗೌಳಿಗರ ಸಮಸ್ಯೆ ಹಾಗೂ ಪರಿವರ್ತನೆ ಬಗ್ಗೆ ಅಧ್ಯಯನಗಳು ನಡೆದಂತಿಲ್ಲ. ಪ್ರಸ್ತುತವಾಗಿ ಗೌಳಿಗರು ಎದುರಿಸುತ್ತಿರುವ ಸಮಸ್ಯೆಗಳು ಹಲವಾರು. ಭೂಮಿ ಸಮಸ್ಯೆ, ಅರಣ್ಯ ಸಮಸ್ಯೆ, ಶೈಕ್ಷಣಿಕ ಸಮಸ್ಯೆ, ಆರ್ಥಿಕ ಸಮಸ್ಯೆ, ರಾಜಕೀಯ ಸಮಸ್ಯೆಗಳಲ್ಲದೇ ಆಧುನಿಕತೆಯ ಸಮಕಾಲೀನ ಸವಾಲುಗಳನ್ನು ಎದುರಿಸುತ್ತಿದ್ದಾರೆ. ಈ ಸಮಸ್ಯೆಗಳಲ್ಲದೇ ಗೌಳಿಗರು ಪರಿವರ್ತನೆಯ ಹಾದಿಯಲ್ಲಿ ಸಿಲುಕಿರುವ ಇಂತಹ ಸಂದಿಗ್ಧ ಸಂದರ್ಭದಲ್ಲಿ 'ಗೌಳಿಗ ಸಮುದಾಯದ ಸಮಸ್ಯೆಗಳು ಮತ್ತು ಪರಿವರ್ತನೆ' ಎಂಬ ವಿಷಯ

ಕುರಿತು ಅಧ್ಯಯನದ ಅಗತ್ಯವಿದೆ. ಅಂತೆಯೇ ಆ ವಿಷಯವನ್ನೇ ನನ್ನ ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ನನ್ನ ಅಧ್ಯಯನದ ವಿಷಯ "ಉತ್ತರ ಕನ್ನಡ ಜಿಲ್ಲೆಯ ಗೌಳಿಗ ಸಮುದಾಯದ ಸಾಮಾಜಿಕ ಸಮಸ್ಯೆಗಳು ಮತ್ತು ಸಾಮಾಜಿಕ ಪರಿವರ್ತನೆ"ಗೆ ಸೀಮಿತವಾದರೂ, ಗೌಳಿ ಸಮುದಾಯದ ಮೂಲದ ಬಗ್ಗೆಯೂ ಸಾಕಷ್ಟು ಮಾಹಿತಿ ಕಲೆ ಹಾಕಿದ್ದೇನೆ. ಅಲ್ಲದೇ ಅಂದಾಜು ಜನಸಂಖ್ಯೆಯ ಸರ್ವೆಯನ್ನೂ ಸಹ ಮಾಡಿದ್ದೇನೆ.

### ೧.೪ ಅಧ್ಯಯನದ ವೈಧಾನಿಕತೆ

ಪ್ರಸ್ತುತ ಅಧ್ಯಯನಕ್ಕೆ ಉತ್ತರ ಕನ್ನಡ ಜಿಲ್ಲೆಯ ಪರಿಸರದಲ್ಲಿ ಬದುಕುತ್ತಿರುವ 'ಗೌಳಿ' ಸಮುದಾಯವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಉತ್ತರ ಕನ್ನಡ ಜಿಲ್ಲೆಯು ಕರ್ನಾಟಕ ರಾಜ್ಯದಲ್ಲಿಯೇ ಅತ್ಯಂತ ವೈವಿಧ್ಯಮಯ ಜನಸಮುದಾಯಗಳಿಂದ ಕೂಡಿದ ಜಿಲ್ಲೆಯಾಗಿದೆ. ಸಿದ್ದಿ, ಕುಣಬಿ, ಗಾಮೊಕ್ಕಲು, ಮುಕ್ರಿ, ಅಗೇರ, ಕರೆಒಕ್ಕಲು, ಕೊಮಾರಪಂತ, ಹಸಲ, ಗೌಳಿ, ಗೊಂಡ, ಹಾಲಕ್ಕಿ ಒಕ್ಕಲಿಗರು ಮುಂತಾದ ಜನಸಮುದಾಯಗಳು ಉತ್ತರ ಕನ್ನಡ ಜಿಲ್ಲೆಯ ಜನ ವೈವಿಧ್ಯದ ಸಿರಿವಂತಿಕೆಯನ್ನು ಹೆಚ್ಚಿಸಿವೆ. ಅದರಲ್ಲಿ ಗೌಳಿಗರು ವಿಶೇಷವಾಗಿ ಕಂಡುಬರುತ್ತಾರೆ. ಇವರು ಇತರರಿಗಿಂತ ಭಿನ್ನವಾಗಿದ್ದಾರೆ. ಪ್ರಸ್ತುತ ನಾನು ಗೌಳಿ ಸಮುದಾಯದ ಸಾಮಾಜಿಕ ಸಮಸ್ಯೆಗಳು ಮತ್ತು ಪರಿವರ್ತನೆ ಅಧ್ಯಯನ ಮಾಡಲು ಉದ್ದೇಶಿಸಿದ್ದೇನೆ. ಮುಖ್ಯವಾಗಿ ಇದು ಕ್ಷೇತ್ರಕಾರ್ಯ ಅಧ್ಯಯನವಾಗಿದೆ. ಈಗಾಗಲೇ ಈ ಸಮುದಾಯದ ಮೇಲೆ ನಡೆದ ಅಧ್ಯಯನಗಳನ್ನು ಗಮನಿಸಿ, ಅದರ ಹಿನ್ನೆಲೆಯಲ್ಲಿ ಉತ್ತರ ಕನ್ನಡ ಜಿಲ್ಲೆಯಲ್ಲಿರುವ ಈ ಸಮುದಾಯದ ವರ್ತಮಾನದ ಸಾಮಾಜಿಕ ಸಮಸ್ಯೆಗಳನ್ನು ಮತ್ತು ಪರಿವರ್ತನೆ ಅಧ್ಯಯನ ಮಾಡುವ ಸಲುವಾಗಿ ಅಧ್ಯಯನಕ್ಕೆ ಕೆಳಗಿನ ವಿಧಾನಗಳನ್ನು ಅನುಸರಿಸಲಾಗಿದೆ.

೧. ಲಭ್ಯ ಸಾಹಿತ್ಯ ಆಕರಗಳ ಅಧ್ಯಯನ.

೨. ಚಾರಿತ್ರಿಕ ವಿಧಾನ.

೩. ಪ್ರಶ್ನಾವಳಿ ಮಾದರಿ.

೪. ಗುಂಪು ಚರ್ಚೆ ಮತ್ತು ಸಂದರ್ಶನ ವಿಧಾನ.

೫. ಸಹಭಾಗಿತ್ವ ಅವಲೋಕನ ವಿಧಾನ.

೬. ವ್ಯಕ್ತಿ ಅಧ್ಯಯನ ವಿಧಾನ.

೭. ನಮೂನೆ ವಿಧಾನ.

**೧. ಲಭ್ಯ ಸಾಹಿತ್ಯ ಆಕರಗಳ ಅಧ್ಯಯನ:** ವಸಾಹತು ಆಡಳಿತ ಕಾಲದಿಂದ ಇಲ್ಲಿಯವರೆಗೆ ಗೌಳಿಗರ ಕುರಿತು ನಡೆದಿರುವ ಅಧ್ಯಯನಗಳನ್ನು ಪರಾಮರ್ಶಿಸಲಾಗಿದೆ. ಜೊತೆಗೆ ಗೌಳಿಗರ ಮೌಖಿಕ ಸಾಹಿತ್ಯವನ್ನು ಪ್ರಧಾನ ಆಕರವೆಂದು ಪರಿಗಣಿಸಲಾಗಿದೆ.

**೨. ಚಾರಿತ್ರಿಕ ವಿಧಾನ:** ಲಭ್ಯ ಮೌಖಿಕ ಮತ್ತು ಲಿಖಿತ ಸಾಹಿತ್ಯಿಕ ಆಕರಗಳ ಮೂಲಕ ಗೌಳಿ ಸಮಾಜದ ಸಾಮಾಜಿಕ ಸಮಸ್ಯೆಗಳು ಮತ್ತು ಪರಿವರ್ತನೆ ಹಾಗೂ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಸ್ಥಿತಿಗತಿಗಳನ್ನು ಗತಿತಾರ್ಕಿಕ ಅಧ್ಯಯನ ವಿಧಾನದ ಮೂಲಕ ಅಧ್ಯಯನ ಮಾಡಲಾಗಿದೆ. ಇದಕ್ಕಾಗಿ ಗೌಳಿಗರ ಮೌಖಿಕ ಸಾಹಿತ್ಯ, ಆಚರಣೆ, ಆರಾಧನಾ ಪರಂಪರೆ, ಸ್ಮಾರಕಗಳು ಮತ್ತು ವಿಧಿ ನಿಷೇಧಗಳನ್ನು ಪ್ರಧಾನವಾಗಿ ಮತ್ತು ಲಿಖಿತ ಆಕರಗಳನ್ನು ಅಂದರೆ ಉತ್ತರ ಕನ್ನಡ ಜಿಲ್ಲೆಯ ಸಂಖ್ಯಾಧಿಕಾರಿ, ಜಿಲ್ಲಾಧಿಕಾರಿ ಹಾಗೂ ಸರಕಾರಿ ಕಛೇರಿಗಳಲ್ಲಿ ಗೌಳಿ ಸಮುದಾಯದ ಬಗ್ಗೆ ಲಭ್ಯವಿದ್ದ ಮಾಹಿತಿ ದಾಖಲೆಗಳು ಇತ್ಯಾದಿಗಳನ್ನು ಅನುಷಂಗಿಕವಾಗಿ ಬಳಸಿಕೊಳ್ಳಲಾಗಿದೆ.

**೩. ಪ್ರಶ್ನಾವಳಿ ಮಾದರಿ:** ಪಾಲ್ಗೊಳ್ಳುವಿಕೆಯಿಂದ ನಿರೀಕ್ಷಣಾ ವಿಧಾನದ ಮೂಲಕ ಮಾಹಿತಿ ಸಂಗ್ರಹಿಸುವುದರ ಜೊತೆಗೆ ಪೂರ್ವ ನಿರ್ಧಾರಿತ ಪ್ರಶ್ನಾವಳಿಯನ್ನುಳ್ಳ ಸಂದರ್ಶನದ ಶೆಡ್ಯೂಲ್ ತಯಾರಿಸಿ ಗೌಳಿಗರ ವರ್ತಮಾನದ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳು, ಸಮಸ್ಯೆಗಳು ಮತ್ತು ಪರಿವರ್ತನೆ ಅರ್ಥ ಮಾಡಿಕೊಳ್ಳಲು ನಿಶ್ಚಿತ ಪ್ರಶ್ನಾವಳಿಯನ್ನು ರೂಪಿಸಲಾಗಿತ್ತು. ಸದರಿ ಪ್ರಶ್ನಾವಳಿಯನ್ನು ಗೌಳಿ ಸಮುದಾಯದವರ ಮನೆ ಮನೆಯ ಸಮಗ್ರ ವಿವರವನ್ನು (Household Data) ಸಂಗ್ರಹಿಸಲು ಬಳಸಲಾಯಿತು. ಈ ಪ್ರಶ್ನಾವಳಿಯ ಮೂಲಕ ಕುಟುಂಬದ ಯಜಮಾನ, ಹಳ್ಳಿಯ ಸಮುದಾಯದ ಮುಖಂಡ, ಸಮುದಾಯದಲ್ಲಿರುವ ಹಿರಿಯರು ಮತ್ತು ತಿಳುವಳಿಕಸ್ಥರಿಂದ ಆಯ್ದ ಗ್ರಾಮದಲ್ಲಿನ ಗೌಳಿ ಕುಟುಂಬಗಳ ಸಾಮಾನ್ಯ ವಿವರಗಳನ್ನು ಸಂಗ್ರಹಿಸಲಾಯಿತು. ಈ ಮಾಹಿತಿ ಸಂಗ್ರಹಕ್ಕೆ ಗೌಳಿಗರ ಮಾದರಿ, ಗೌಳಿವಾಡಾಗಳನ್ನು ಆಯ್ಕೆ ಮಾಡಿಕೊಂಡು ಕ್ಷೇತ್ರಕಾರ್ಯ ಮಾಡಲಾಗಿದೆ.[೧೧]

**೪. ಗುಂಪು ಚರ್ಚೆ ಮತ್ತು ಸಂದರ್ಶನ:** ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ಗೌಳಿ ಸಮುದಾಯದ ಆಯ್ದ ಗೌಳಿವಾಡಾಗಳಲ್ಲಿನ ವ್ಯಕ್ತಿಗಳ ಸಂದರ್ಶನದ ಜೊತೆಗೆ ಗೌಳಿ ಸಮುದಾಯದ ವಿಭಿನ್ನ ಮುಖಗಳ ಬಗ್ಗೆ ಜ್ಞಾನ ಪಡೆಯುವ ಸಲುವಾಗಿ ಕೆಲವರನ್ನು ಗುಂಪಾಗಿಸಿ ನಿಶ್ಚಿತ ಪ್ರಶ್ನಾವಳಿ ಮೂಲಕ ಗುಂಪು ಚರ್ಚೆಗಳನ್ನು ಏರ್ಪಡಿಸಲಾಗಿತ್ತು. ಅನೇಕ ಗುಂಪು ಚರ್ಚೆಗಳಲ್ಲಿ ಜನರು ಮುಕ್ತ ಹಾಗೂ ನೇರವಾಗಿ ಮಾತನಾಡಿದರಲ್ಲದೆ, ಅವರ ಪ್ರತಿಕ್ರಿಯೆಗಳು ಮಾಹಿತಿ ಪೂರ್ಣವಾಗಿದ್ದವು. ಗುಂಪು ಚರ್ಚೆಗಳಲ್ಲಿ ಭಾಗವಹಿಸಿದವರಲ್ಲಿ ಒಬ್ಬರಲ್ಲಾ ಒಬ್ಬರು ಹೆಚ್ಚುಕಡಿಮೆ ಎಲ್ಲಾ ಪ್ರಶ್ನೆಗಳಿಗೂ ಉತ್ತರಿಸಿದರು. ಹಾಗೆಯೇ ಯಾರಾದರೂ ಅಸ್ಪಷ್ಟವಾದ ಅಥವಾ ತಪ್ಪು ಉತ್ತರ ಕೊಟ್ಟಿದ್ದರೆ, ತಕ್ಷಣವೇ ಉಳಿದವರು ಸರಿಪಡಿಸುತ್ತಿದ್ದರು. ಗುಂಪು ಚರ್ಚೆಗಳನ್ನು ಸಾಧ್ಯವಾಗಿಸಿ ಅವರಿಂದ ಮಾಹಿತಿ ಪಡೆಯಲಾಗಿದೆ. ಇದರಿಂದ ವ್ಯಕ್ತಿಗತ ಮತ್ತು ಸಾಮುದಾಯಿಕ ಜನಾಭಿಪ್ರಾಯಗಳನ್ನು ಪಡೆಯಲು ಸಾಧ್ಯವಾದಂತಾಗಿದೆ.[೧೨]

**೫. ಸಹಭಾಗಿತ್ವ ಅವಲೋಕನ ವಿಧಾನ:** ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ಗೌಳಿಗರ ಜೊತೆಯಲ್ಲಿಯೇ ಕೆಲವು ದಿನ ವಾಡಾಗಳಲ್ಲಿಯೇ ಇದ್ದುದರಿಂದ ಹೆಚ್ಚಿನ ತಿಳುವಳಿಕೆ ಪಡೆಯಲು ಸಾಧ್ಯವಾಗಿದೆ. ಸಹಭಾಗಿತ್ವ ಅವಲೋಕನ ವಿಧಾನವು, ಅಂಕಿ-ಅಂಶಗಳು ಕೊಡುವ ತಿಳುವಳಿಕೆಗಿಂತ ಹೆಚ್ಚು ಆಳವಾದ ತಿಳುವಳಿಕೆಯನ್ನು ನೀಡಬಲ್ಲದು. ಅಧ್ಯಯನಕ್ಕೆ ಒಳಪಡುವ ಗೌಳಿಗರ ಮಾದರಿ ವಾಡೆಗಳಲ್ಲಿ ಕೆಲವು ದಿನ ವಾಸ್ತವ್ಯ ಮಾಡುವ ಮೂಲಕ ಗೌಳಿಗರ ಸಮಸ್ಯೆಗಳು, ಅವರ ಸಾಮಾಜಿಕ ಜೀವನದಲ್ಲಿ ಆದ ಪರಿವರ್ತನೆ

ಪ್ರಭಾವ, ಪರಿಣಾಮ, ಮುಖಾಮುಖಿ ಮಾಡುವ ಸಾಮಾಜಿಕಾರ್ಥಿಕ ಸಂಘರ್ಷಗಳನ್ನು ಅರ್ಥೈಸಿಕೊಳ್ಳಲು ಸಹಾಯವಾಯಿತು.[೧೩]

**೬. ವ್ಯಕ್ತಿ ಅಧ್ಯಯನ ವಿಧಾನ (Case study):** ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ಗೌಳಿ ಸಮುದಾಯದ ಆಯ್ದ ಗೌಳಿವಾಡಾಗಳಲ್ಲಿ ವ್ಯಕ್ತಿಗಳನ್ನು ಸಂದರ್ಶನ ಮಾಡಲಾಗಿದೆ. ಪಕ್ಷಪಾತ ರಹಿತವಾಗಿ ಮತ್ತು ಮೌಲ್ಯಾಂಕನದಲ್ಲಿ ಖಚಿತತೆಯನ್ನು ಖಾತ್ರಿಪಡಿಸುವ ಉದ್ದೇಶದಿಂದ ಸೂಕ್ತವಾದ ಮಾದರಿ ತಂತ್ರದ ಅಳವಡಿಕೆ ಬಹಳ ಮುಖ್ಯವಾದದ್ದು. ವ್ಯಕ್ತಿ ಅಧ್ಯಯನಕ್ಕೆ ೨೨೫ ಗೌಳಿಯರನ್ನು ಆಯ್ದುಕೊಳ್ಳಲಾಗಿದೆ. ಈ ಅಧ್ಯಯನಕ್ಕೆ ಮನೆಯ ಯಜಮಾನ, ಗೃಹಿಣಿಯರು, ದಿನಗೂಲಿಗಳು, ಕೃಷಿಕೂಲಿಗಳು, ಹೈನುಗಾರಿಕೆ, ಸ್ಥಳೀಯ ನಾಯಕರು, ಹಿರಿಯರು, ವಿದ್ಯಾರ್ಥಿಗಳು, ಗ್ರಾಮ ಪಂಚಾಯತಿ ಸದಸ್ಯ, ಅಧ್ಯಕ್ಷರು, ವ್ಯಕ್ತಿ ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ವ್ಯಕ್ತಿ ಅಧ್ಯಯನಕ್ಕೆ ಪ್ರತ್ಯೇಕ ಪ್ರಶ್ನಾವಳಿಯನ್ನು ಸಿದ್ಧ ಪಡಿಸಲಾಗಿತ್ತು. ಇದರಿಂದ ವ್ಯಕ್ತಿಗತ ಮತ್ತು ಸಾಮುದಾಯಿಕ ಜನಾಭಿಪ್ರಾಯಗಳನ್ನು ಪಡೆಯಲು ಸಾಧ್ಯವಾದಂತಾಗಿದೆ.

**೭. ನಮೂನೆ ವಿಧಾನ (Sampling Method):** ಗೌಳಿಗರು ಕರ್ನಾಟಕದ ಪಶ್ಚಿಮ ಘಟ್ಟ ಪ್ರದೇಶದಲ್ಲಿ ಅರಣ್ಯ ದಟ್ಟ ಇರುವ ಕಡೆ ಮಾತ್ರ ನೆಲೆಸಿದ್ದಾರೆ. ಶಿವಮೊಗ್ಗ, ಚಿಕ್ಕಮಗಳೂರು, ಧಾರವಾಡ, ಬೆಳಗಾವ್ ಪ್ರದೇಶಗಳಲ್ಲಿ ಕಡಿಮೆ ಪ್ರಮಾಣದಲ್ಲಿದ್ದು, ಉತ್ತರ ಕನ್ನಡ ಜಿಲ್ಲೆಯ ತಾಲೂಕುಗಳಲ್ಲಿ ಇವರ ಸಾಂದ್ರತೆ ಅಧಿಕವಾಗಿದೆ. ಅಂತೆಯೇ ಉತ್ತರಕನ್ನಡ ಜಿಲ್ಲೆಯ ಈ ೪ ತಾಲೂಕುಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಈ ಸಮೀಕ್ಷೆಯ ಒಟ್ಟು ೪ ತಾಲೂಕುಗಳಲ್ಲಿ ೧೨೨ (ಗೌಳಿವಾಡಾ) ಗ್ರಾಮಗಳಿವೆ. ಈ ೧೨೨ ಗ್ರಾಮಗಳಿಂದ ೪೫ (ಗೌಳಿವಾಡಾ) ಗ್ರಾಮಗಳನ್ನು ಮಾದರಿ ವಿಧಾನದ ಮೂಲಕ ಆಯ್ಕೆ ಮಾಡಿಕೊಳ್ಳಲಾಗಿದೆ.[೧೪]

ಪ್ರಶ್ನಾವಳಿಯನ್ನು ಸಿದ್ದಪಡಿಸುವಾಗ ಮೊದಲು ಪೂರ್ವ ಪರೀಕ್ಷೆಗೆ (Pilot Study) ಒಳಪಡಿಸಲು ಒಂದು ಪ್ರಶ್ನಾವಳಿ ಯನ್ನು ಸಿದ್ದಪಡಿಸಲಾಯಿತು. ಅದನ್ನು ಅಧ್ಯಯನ ಕ್ಷೇತ್ರಕ್ಕೆ ಒಯ್ದು ಪೂರ್ವ ಪರೀಕ್ಷೆಗೆ ಒಳಪಡಿಸಲಾಯಿತು. ಅದರಲ್ಲಿ ಕಂಡುಬಂದಂತ ನ್ಯೂನ್ಯತೆಗಳನ್ನು ಮಾರ್ಗದರ್ಶಕರ ಹೇಳಿಕೆಯ ಪ್ರಕಾರ ಸರಿಪಡಿಸಲಾಯಿತು.

ಹೀಗೆ ಸಿದ್ದಪಡಿಸಿದ ಪ್ರಶ್ನಾವಳಿಯನ್ನು ಕ್ಷೇತ್ರ ಅದ್ಯಯನಕ್ಕೆ ಬಳಸಲಾಗಿದೆ. ನಾಲ್ಕು ತಾಲೂಕಗಳಲ್ಲಿಯ ವಿವಿಧ ಗೌಳಿವಾಡಾಗಳಲ್ಲಿ ಮಾಹಿತಿ ಸಂಗ್ರಹಿಸಿದ ಪ್ರಶ್ನಾವಳಿಗಳ ವಿವರ ಮುಂದಿನ ಪುಟದಲ್ಲಿದೆ.

## ಕೋಷ್ಟಕ ೧.೨

೧] ಹಳಿಯಾಳ ತಾಲೂಕ[೧೫]

| ಕ್ರಸಂ. | ಗ್ರಾಮದ ಹೆಸರು | ಪ್ರಶ್ನಾವಳಿಗಳ ಸಂಖ್ಯೆ |
|---|---|---|
| ೧ | ಆಡಿಟ ನಂ. ೨ (ಅಂಬಿಕಾನಗರ) | ೦೪ |
| ೨ | ಆಡಿಟ ನಂ. ೩ (ಅಂಬಿಕಾನಗರ) | ೦೪ |
| ೩ | ಬಾಳಶೆಟ್ಟಿ ಕೊಪ್ಪ | ೦೬ |
| ೪ | ಭಾಗವತಿ | ೦೮ |
| ೫ | ಭೋಟಾ ಕಾನ್ಸಿರ್ಡಾ | ೦೨ |
| ೬ | ಡಂಕನಾಳ | ೦೬ |
| ೭ | ಜಮಗಾ | ೧೦ |
| ೮ | ಕಲಬಾವಿ | ೦೫ |
| ೯ | ಕರಿಯಂಪಲ್ಲಿ | ೦೩ |
| ೧೦ | ಕೊಲೆರಂಗಾ | ೦೫ |
| ೧೧ | ಕುಳಗಿ | ೦೫ |
| ೧೨ | ನಾರ್ನಳ್ಳಿ | ೦೬ |
| ೧೩ | ತಾಟಗೇರಾ | ೦೫ |
| ೧೪ | ವಿಟ್ನಾಳ | ೦೬ |
| | ಒಟ್ಟು | ೭೫ |

೨] ಜೋಯಿಡಾ ತಾಲೂಕ[೧೫]

| ಕ್ರಸಂ. | ಗ್ರಾಮದ ಹೆಸರು | ಪ್ರಶ್ನಾವಳಿಗಳ ಸಂಖ್ಯೆ |
|---|---|---|
| ೧ | ಬೀರಂಪಲ್ಲಿ | ೦೬ |
| ೨ | ಬೋರಿ | ೦೪ |
| ೩ | ದುರ್ಗಿ | ೦೧ |
| ೪ | ಕುಂಬೆಲೀ ನಾಕಾ | ೦೭ |
| ೫ | ಮನಾಯಿ | ೦೩ |
| ೬ | ಸಿಂಗರಗಾಂವ | ೦೫ |
| ೭ | ಉಯಿಸಗಾಂವ | ೦೬ |
| ೮ | ಉಸೊಡಾ | ೦೫ |
| | ಒಟ್ಟು | ೩೭ |

೩] ಮುಂಡಗೋಡ ತಾಲೂಕ[೧೫]

| ಕ್ರಸಂ. | ಗ್ರಾಮದ ಹೆಸರು | ಪ್ರಶ್ನಾವಳಿಗಳ ಸಂಖ್ಯೆ |
|---|---|---|
| ೧ | ಬಡ್ಡಿಗೇರಿ | ೧೧ |
| ೨ | ಬೆಳ್ಳಿ ಬೆಳಕು | ೦೭ |
| ೩ | ಗೋದ್ನಾಳ | ೦೭ |
| ೪ | ಕಾಳೆಖಾರೆ | ೦೫ |
| ೫ | ಕಳಕಿಕಾರೆ | ೦೫ |
| ೬ | ಕಾರೆಕೊಪ್ಪ | ೦೩ |
| ೭ | ಕುದರೆನಾಳ | ೦೬ |
| ೮ | ಮೈನಳ್ಳಿ | ೧೧ |
| ೯ | ಸಿಡ್ಲಗುಂಡಿ | ೦೫ |
| ೧೦ | ಉಗ್ಗಿನಕೇರಿ | ೦೫ |
| | **ಒಟ್ಟು** | **೬೫** |

೪] ಯಲ್ಲಾಪೂರ ತಾಲೂಕ[೧೬]

| ಕ್ರಸಂ. | ಗ್ರಾಮದ ಹೆಸರು | ಪ್ರಶ್ನಾವಳಿಗಳ ಸಂಖ್ಯೆ |
|---|---|---|
| ೧ | ಅಲಕೇರಿ | ೦೩ |
| ೨ | ಬೊಂಬಡಿಕೊಪ್ಪ | ೦೧ |
| ೩ | ಚಿಮ್ಮಿಮಾಳ | ೦೪ |
| ೪ | ಜೆಗಿಕೊಪ್ಪ | ೦೧ |
| ೫ | ಕಂಚನಳ್ಳಿ | ೧೦ |
| ೬ | ಕಾರಕುಂಡಿ | ೦೪ |
| ೭ | ಕೋಳಿಕೇರಿ | ೦೬ |
| ೮ | ಕೋನಮಡ್ಡಿ | ೦೨ |
| ೯ | ಮದ್ನೂರ | ೦೧ |
| ೧೦ | ಮಾದೆಕೊಪ್ಪ | ೦೭ |
| ೧೧ | ಮಂಗ್ಯಾನತಾರಿ | ೦೩ |
| ೧೨ | ರಾಜಿವಾಡಾ | ೦೧ |
| ೧೩ | ತೆಂಗಿನಗೇರಿ | ೦೫ |
| | **ಒಟ್ಟು** | **೪೮** |

ಈ ರೀತಿಯಲ್ಲಿ ನಾಲ್ಕು ತಾಲೂಕುಗಳಲ್ಲಿ ಒಟ್ಟು ೨೨೫ ಪ್ರಶ್ನಾವಳಿಗಳ ಮೂಲಕ ಮಾಹಿತಿ ಸಂಗ್ರಹಿಸಲಾಗಿದೆ.

**೧.೫ ಪ್ರಬಂಧದ ಅಧ್ಯಾಯಗಳು**

ಈ ಪ್ರಬಂಧವು ಒಟ್ಟು ೬ ಅಧ್ಯಾಯಗಳನ್ನು ಒಳಗೊಂಡಿದೆ.

**ಅಧ್ಯಾಯ ೧ : ಅಧ್ಯಯನದ ಉದ್ದೇಶ, 'ವ್ಯಾಪ್ತಿ, ವೈಧಾನಿಕತೆ, ಇದುವರೆಗೆ ನಡೆದ ಅಧ್ಯಯನದ ಸಮೀಕ್ಷೆ**

ಮೊದಲ ಅಧ್ಯಾಯವು ಒಟ್ಟಾರೆ ಮಹಾಪ್ರಬಂಧದ ತಾತ್ವಿಕ ನಿಲುವನ್ನು ಸ್ಥೂಲವಾಗಿ ವಿವರಿಸುತ್ತದೆ. ಗೌಳಿ ಸಮುದಾಯಗಳ ಕುರಿತು ಹಲವಾರು ಅಧ್ಯಯನಗಳು ನಡೆದಿವೆ. ಆದರೆ ಉತ್ತರ ಕನ್ನಡ ಜಿಲ್ಲೆಗಳಲ್ಲಿ ವಾಸಿಸುತ್ತಿರುವ ಗೌಳಿ ಸಮುದಾಯದ ಕುರಿತು ಇಲ್ಲಿಯವರೆಗೂ ಸಮಗ್ರ ಅಧ್ಯಯನಗಳು ನಡೆದಿಲ್ಲವೆಂದೇ ಹೇಳಬಹುದು. ಗೌಳಿಗರ ಸಾಮಾಜಿಕ ಸಮಸ್ಯೆಗಳು ಮತ್ತು ಪರಿವರ್ತನೆ ಬಗ್ಗೆ ಯಾವುದೇ ಅಧ್ಯಯನ ನಡೆದಿಲ್ಲವೆಂದು ಹೇಳಬಹುದು. ಅಂತಹ ಕೊರತೆಯನ್ನು ಈ ಅಧ್ಯಯನವು ಅಲ್ಪಮಟ್ಟಿಗಾದರೂ ಪೂರೈಸಲಿದೆ ಎಂದು ಹೇಳಬಹುದು.

ಇಲ್ಲಿಯವರೆಗೆ ಗೌಳಿ ಸಮುದಾಯ ಕುರಿತು ನಡೆದಿರುವ ಚರ್ಚೆಗಳನ್ನು ಗಮನದಲ್ಲಿರಿಸಿಕೊಂಡು ಪ್ರಸ್ತುತ ಅಧ್ಯಯನದ ಸೈದ್ಧಾಂತಿಕ ನಿಲುವುಗಳನ್ನು ಮೊದಲ ಅಧ್ಯಾಯದಲ್ಲಿ ಸ್ಪಷ್ಟಪಡಿಸಲಾಗಿದೆ. ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಪ್ರಾದೇಶಿಕ ವಿವರಗಳನ್ನು, ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಈ ಮಹಾಪ್ರಬಂಧ ಬರೆಯಲು ಅನುಸರಿಸಿದ ಅಧ್ಯಯನದ ವಿಧಾನಗಳನ್ನು ಇಲ್ಲಿ ವಿವರಿಸಲಾಗಿದೆ. ಈ ಅಧ್ಯಾಯದ ಕೊನೆಯಲ್ಲಿ ಗೌಳಿ ಸಮುದಾಯದ ಕುರಿತು ಈವರೆಗೆ ನಡೆದ ಅಧ್ಯಯನಗಳನ್ನು ನಿರೂಪಿಸಲಾಗಿದೆ.

**ಅಧ್ಯಾಯ ೨ : 'ಗೌಳಿ ಸಮುದಾಯದ ಐತಿಹಾಸಿಕ ಹಿನ್ನೆಲೆ'**

ಉತ್ತರ ಕನ್ನಡ ಜಿಲ್ಲೆ ಮತ್ತು ಅಲ್ಲಿನ ಬುಡಕಟ್ಟು – ಒಂದು ಸ್ಥೂಲ ಸಮೀಕ್ಷೆ, ಗೌಳಿಗರ ಮೂಲ, ಪ್ರಸರಣ, ಇತಿಹಾಸ ಕಥನ, ಈಗಿನ ವಾಸಸ್ಥಳಗಳ ಬಗ್ಗೆ ಅಧ್ಯಯನಿಸಲಾಗಿದೆ.

ಪ್ರಸ್ತುತ ಅಧ್ಯಾಯವು ಈ ಮಹಾಪ್ರಬಂಧಕ್ಕೆ ಒಂದು ಪ್ರವೇಶಿಕೆಯನ್ನು ಒದಗಿಸುತ್ತದೆ. ಇದರಲ್ಲಿ ಉತ್ತರ ಕನ್ನಡ ಜಿಲ್ಲೆಯ ಪ್ರಾದೇಶಿಕ, ಭೌಗೋಳಿಕ ಸ್ಥಿತಿಗತಿಗಳನ್ನು ಸ್ಥೂಲವಾಗಿ ವಿವರಿಸಲಾಗಿದೆ. ಉತ್ತರ ಕನ್ನಡ ಜಿಲ್ಲೆಯ ಬುಡಕಟ್ಟುಗಳ ಸ್ಥೂಲ ಪರಿಚಯ ಹಾಗೂ ಉತ್ತರ ಕನ್ನಡ ಜಿಲ್ಲೆಯ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಸಮುದಾಯದ ಅಂಕಿ–ಅಂಶಗಳ ವಿವರಗಳನ್ನು ನೀಡಲಾಗಿದೆ.

**ಅಧ್ಯಾಯ ೩ : 'ಗೌಳಿ ಸಮುದಾಯದ ಸಾಮಾಜಿಕ ಸ್ಥಿತಿಗತಿಗಳು'**

ಈ ಅಧ್ಯಾಯದಲ್ಲಿ ಪೀಠಿಕೆ ಮತ್ತು ಸಂಕ್ಷಿಪ್ತ ಹಿನ್ನೆಲೆ, ಸಾಮಾಜಿಕ ಸ್ತರ ವ್ಯವಸ್ಥೆಯಲ್ಲಿ ಗೌಳಿಗರ ಸ್ಥಾನಮಾನ, ಗೌಳಿ ಸಮುದಾಯದಲ್ಲಿನ ಸ್ತ್ರೀ ಸ್ಥಾನಮಾನಗಳು, ಕುಟುಂಬ ಪದ್ಧತಿ ಮತ್ತು ಜೀವನ ಆವರ್ತಗಳು ಕುರಿತು ಅಧ್ಯಯನಿಸಲಾಗಿದೆ. ಜನಸಂಖ್ಯಾ ಸಮೀಕ್ಷೆ ಮತ್ತು ಸಾಂದರ್ಭಿಕ ಅಧ್ಯಯನದ ವಿಶೇಷ ಅಂಕಿ–ಅಂಶಗಳಗಳನ್ನು ಮತ್ತು ವಿವರಗಳನ್ನು ಮುಖ್ಯವಾಗಿಟ್ಟುಕೊಂಡು ಈ ಅಧ್ಯಯನವನ್ನು ಬರೆಯಲಾಗಿದೆ.

ಪ್ರಸ್ತುತ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಗೌಳಿ ಸಮುದಾಯದ 'ಮನೆವಾರು ಸಮೀಕ್ಷೆ' (Household survey) ಮತ್ತು 'ವ್ಯಕ್ತಿಗಳ ಸಂದರ್ಶನ' (Case Study) ಗಳನ್ನು ಆಧರಿಸಿದ ವಾಸ್ತವಿಕ ತಿಳುವಳಿಕೆಯನ್ನು ನೀಡಲಾಗಿದೆ.

**ಅಧ್ಯಾಯ ೪ : 'ಗೌಳಿ ಸಮುದಾಯದ ಸಾಮಾಜಿಕ ಸಮಸ್ಯೆಗಳು'**

ಈ ಅಧ್ಯಾಯದಲ್ಲಿ ಆಧುನಿಕತೆ ಮತ್ತು ಗೌಳಿ ಸಮುದಾಯ, ಅವರ ಸಾಮಾಜಿಕ ಸಮಸ್ಯೆಗಳು, ಕೌಟುಂಬಿಕ ಸಮಸ್ಯೆಗಳು, ವೈವಾಹಿಕ ಸಮಸ್ಯೆಗಳು, ವೃತ್ತಿ ಸಮಸ್ಯೆಗಳು, ಶೈಕ್ಷಣಿಕ ಸಮಸ್ಯೆಗಳು, ಆರ್ಥಿಕ ಸಮಸ್ಯೆಗಳು ಮತ್ತು ರಾಜಕೀಯ ಸಮಸ್ಯೆಗಳನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಇಲ್ಲಿಯೂ ಸಹ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಗೌಳಿಗರ ವಿವಿಧ ವಾಡೆಗಳ 'ಮನೆವಾರು ಸಮೀಕ್ಷೆ' (Household survey) ಮತ್ತು 'ವ್ಯಕ್ತಿಗಳ ಸಂದರ್ಶನ' (Case Study) ಅಂಕಿ-ಅಂಶಗಳನ್ನು ಮತ್ತು ವಿವರಗಳನ್ನು ಮುಖ್ಯವಾಗಿಟ್ಟು ಕೊಂಡು ಈ ಅಧ್ಯಯನ ಮಾಡಲಾಗಿದೆ.

**ಅಧ್ಯಾಯ ೫ : 'ಗೌಳಿ ಸಮುದಾಯದ ಸಾಮಾಜಿಕ ಪರಿವರ್ತನೆ ಮತ್ತು ಪರಿಣಾಮಗಳು'**

ಈ ಅಧ್ಯಾಯದಲ್ಲಿ ಕೌಟುಂಬಿಕ ಪರಿವರ್ತನೆ, ವೈವಾಹಿಕ ಪರಿವರ್ತನೆ, ವೃತ್ತಿ ಪರಿವರ್ತನೆ, ಶೈಕ್ಷಣಿಕ ಪರಿವರ್ತನೆ, ಆರ್ಥಿಕ ಪರಿವರ್ತನೆ, ರಾಜಕೀಯ ಪರಿವರ್ತನೆ ಮತ್ತು ಸಾಂಸ್ಕೃತಿಕ ಪರಿವರ್ತನೆಗಳಿಗೆ ಕಾರಣಗಳು, ಜೀವನದ ಮೇಲೆ ಆದ ಇವೆಲ್ಲದರ ಹಾಗೂ ಆಧುನಿಕತೆಯ ಪ್ರಭಾವ ಮತ್ತು ಪರಿಣಾಮಗಳನ್ನು ಕ್ಷೇತ್ರ ಅಧ್ಯಯನದಲ್ಲಿ ಕೈಕೊಂಡ ಅಂಕಿ-ಅಂಶಗಳ ಮುಖಾಂತರ ವಿವರಿಸಲಾಗಿದೆ.

**ಅಧ್ಯಾಯ ೬ : 'ಸಮಾರೋಪ'**

ಈ ಅಧ್ಯಯನದ ಸಮಗ್ರ ಮಾಹಿತಿಯ ಆಧಾರದ ಮೇಲೆ ಪೀಠಿಕೆ, ಫಲಿತಗಳು ಹಾಗೂ ಸಲಹೆಗಳನ್ನು ಸಮಾರೋಪದಲ್ಲಿ ನೀಡಲಾಗಿದೆ. ಕೊನೆಗೆ ಅನುಬಂಧದಲ್ಲಿ ಅಧ್ಯಯನಕ್ಕೆ ಪೂರಕ ಮಾಹಿತಿಗಳನ್ನು ಒದಗಿಸಿದ ಪರಾಮರ್ಶನ ಗ್ರಂಥಗಳ ವಿವರಗಳನ್ನು ಜೊತೆಗೆ ಮಾಹಿತಿದಾರರ ವಿವರ, ಪ್ರಶ್ನಾವಳಿ, ವ್ಯಕ್ತಿ ಸಂದರ್ಶನದ ಪ್ರಶ್ನಾವಳಿ, ಕೋಷ್ಟಕ/ನಕ್ಷೆಗಳು ಹಾಗೂ ಛಾಯಾ ಚಿತ್ರಗಳನ್ನು ಕೊಡಲಾಗಿದೆ.

**೧.೬ ಗೌಳಿ ಸಮುದಾಯದ ಕುರಿತು ಇದುವರೆಗೆ ನಡೆದಿರುವ ಅಧ್ಯಯನದ ಸಮೀಕ್ಷೆ**

ಉತ್ತರ ಕನ್ನಡ ಜಿಲ್ಲೆಯ ಗೌಳಿ ಸಮುದಾಯದ ಕುರಿತು ಇದುವರೆಗೆ ವ್ಯಾಪಕವಾದ ಅಧ್ಯಯನಗಳು ನಡೆದಿಲ್ಲವೆಂದೇ ಹೇಳಬಹುದು.

- M.A. Sherring, 'Hindu Tribes and Castes', Vol-II CASMO-1879, Pub., New Delhi, (ದ್ವಿಮು) ೧೯೮೭ ಇದರಲ್ಲಿ ಗೌಳಿಗರ ಮೂರು ಉಪಜಾತಿಗಳಾದ ೧. ಅಹಿರಗೌಳಿ ೨. ಕೊಂಕಣಿ ಗೌಳಿ ೩. ಲಿಂಗಾಯತ ಗೌಳಿ ಇವರ ಬಗ್ಗೆ ಉಲ್ಲೇಖ ಇದೆ.
- ಜೇಮ್ಸ್ ಎಮ್. ಕೊಂಬೆಲ್‌ನಿಂದ ೧೮೮೨ರಲ್ಲಿ ರಚಿತವಾದ 'Gazetteer of the Bombay Presidency', Kanada District ಇದರಲ್ಲಿ ಗೌಳಿಗರ ಬಗ್ಗೆ ಮಾಹಿತಿ ಸಿಗುತ್ತದೆ, ಪು. ೪೩೮-೪೪೧.

- ಆರ್.ಇ. ಎಂಥೋವನ್ ಅವರ 'The tribes and Castes of Bombay', ೧೯೨೨ (ದ್ವಿಮು. ೧೯೭೫) ಮುಂಬಯಿ ಪ್ರಾಂತದ ಜಾತಿ ಮತ್ತು ಬುಡಕಟ್ಟುಗಳ ಬಗೆಗೆ ಸಾಕಷ್ಟು ಮಾಹಿತಿ ಒದಗಿಸುತ್ತದೆ, ಪು. ೩೧೧-೩೨೧.
- ಸಂಶೋಧಕರಾದ ಎನ್. ಸಿಲ್ವಾ ಅವರು ೧೯೬೪ರಲ್ಲಿ 'ಕಾರವಾರ ಜಿಲ್ಲಾ ದರ್ಶನ'ದಲ್ಲಿ ಗೌಳಿಗರ ಬಗ್ಗೆ ಮಾಹಿತಿಯನ್ನು ನೀಡಿದ್ದಾರೆ.
- ಎಲ್.ಜಿ. ಹಾವನೂರ, ೧೯೭೫ - ಹಿಂದುಳಿದ ವರ್ಗಗಳ ಆಯೋಗದ ವರದಿಯಲ್ಲಿ ಗೌಳಿಗರ ಬಗ್ಗೆ ವಿವರಣೆ ನೀಡಿದ್ದಾರೆ.
- ಅಂಬಳಿಕೆ ಹಿರಿಯಣ್ಣ ಅವರು ೧೯೮೩ರಲ್ಲಿ I.B.H. ಪ್ರಕಾಶನ ಪ್ರಕಟಿಸಿದ 'ಕಚ್ಚೆಗೌಳಿಗರು' ಇದು ಜಾತಿ ಮತ್ತು ಬುಡಕಟ್ಟುಗಳ ಮಾಹಿತಿಯನ್ನು ನೀಡುತ್ತದೆ, ಪು. ೭-೧೫.
- Thursten, 'Castes and Tribes of Southern India', Vol-II, ೧೯೮೭ರಲ್ಲಿ ಗೌಳಿಗರ ಬಗ್ಗೆ ಮಾಹಿತಿ ಸಿಗುವುದು.
- ಪ್ರೋ. ಹಿ.ಚಿ. ಬೋರಲಿಂಗಯ್ಯ ರವರ 'ಗಿರಿಜನ ನಾಡಿಗೆ ಪಯಣ-೧೯೯೧, ಗಿರಿಜನರು-೧೯೯೪' ಇವುಗಳಲ್ಲಿ ಗೌಳಿಗರ ಬಗ್ಗೆ ಕುರಿತು ಮಾಹಿತಿ ಸಿಗುತ್ತದೆ, ಪು. ೯೫-೧೦೭.
- ಅಂಬಳಿಕೆ ಹಿರಿಯಣ್ಣ ಅವರು ಬರೆದ ಕರ್ನಾಟಕ ಸಾಹಿತ್ಯ ಅಕಾಡೆಮಿಯಿಂದ ೧೯೯೩ ರಲ್ಲಿ ಉಪಸಂಸ್ಕೃತಿಯ ಅಧ್ಯಯನ ಮಾಲೆಯ ಅಡಿ ಪ್ರಕಟವಾದ 'ಕಚ್ಚೆಗೌಳಿಗರ ಸಂಸ್ಕೃತಿ' ಕೃತಿಯಲ್ಲಿ ಗೌಳಿ ಸಮುದಾಯದ ಬಗ್ಗೆ ಸಮಗ್ರವಾದ ಮಾಹಿತಿ ದೊರೆಯುತ್ತದೆ, ಪು. ೧-೨೨೫.
- ಬೋರಲಿಂಗಯ್ಯ, ಹಿ.ಚಿ., ಕರ್ನಾಟಕ ಜನಪದ ಕಲೆಗಳ ಕೋಶ-೧೯೯೬ ಎಂಬ ಬೃಹತ್ ಗ್ರಂಥದಲ್ಲಿ ಕರ್ನಾಟಕದ ಸಮುದಾಯಗಳ ಜನಪದ ಕಲೆಗಳನ್ನು ಪರಿಚಯಿಸಿದ್ದಾರೆ. ಅದರಲ್ಲಿ ಗೌಳಿಗರ ಹೋಳಿ ಕುಣಿತದ ಬಗ್ಗೆ ಹೇಳಲಾಗಿದೆ.
- ಡಾ. ಕೃಷ್ಣನಂದ ಕಾಮತ್ - ಅಕ್ಷತರವರ 'ಗ್ರಾಮೀಣ ಗೌಳಿಗಳು: ಸರಳ ಮನಸ್ಸು, ವಿಶಿಷ್ಟ ಬದುಕು', ಎಂಬ ಕಿರು ಹೊತ್ತಿಗೆಯಲ್ಲಿ ಗೌಳಿಗರ ಬದುಕು, ದುಡಿಮೆ, ಸಂಪ್ರದಾಯ ಮುಂತಾದ ವಿಷಯಗಳನ್ನು ಚರ್ಚಿಸಿದ್ದಾರೆ, ಪು. ೨೪-೩೩.
- ಪ್ರೊ. ಕರಿಗೌಡ ಬೀಚನಹಳ್ಳಿ ಯವರ 'ಕರಕುಶಲ ಕಲೆಗಳು-೨೦೦೦' ಎಂಬ ವಿಶ್ವಕೋಶ-೨ರಲ್ಲಿ ಕರ್ನಾಟಕ ಜನಪದ ಪ್ರದರ್ಶನ ಕಲೆಗಳ ವೇಷಭೂಷಣಗಳು ಎಂಬ ಲೇಖನದಲ್ಲಿ ಗೌಳಿಗರ ವೇಷಭೂಷಣದ ಬಗ್ಗೆ ವಿವರಿಸಲಾಗಿದೆ, ಪು. ೪೩, ೪೪, ೭೪-೭೯, ೧೦೩-೧೧೦, ೧೫೨-೧೫೭.
- The People of India Karnataka Vol-xxvi, Part-2, 2003, Anthropological survey of India ದಲ್ಲಿ ಗೌಳಿಗರ ಬಗ್ಗೆ ಸಮಗ್ರವಾದ ಮಾಹಿತಿಯನ್ನು ನೀಡುತ್ತದೆ, ಪು. ೫೦೪-೫೦೭.
- Encyclopedia of Indian Tribes and Castes vol-VI, CASMO pub New Delhi -2004 ಇದರಲ್ಲಿ ಗೌಳಿಗರ ಪ್ರಕಾರಗಳನ್ನು ಹೇಳಿದೆ. ಗೌಳಿಗರ ಬಗ್ಗೆ ಸಮಗ್ರ ಮಾಹಿತಿ ಇದೆ.

- ಡಾ. ಬಿ.ಎಸ್. ಸ್ವಾಮಿಯವರ 'ಜಾನಪದ ಐಸಿರಿ'–೨೦೦೬ರಲ್ಲಿ ದಾಮಿನಿ ಸಾಹಿತ್ಯ ಬೆಂಗಳೂರು ಗೌಳಿಗರ ಬಗ್ಗೆ ಮಾಹಿತಿ ಲಭಿಸುತ್ತದೆ.
- ಕರ್ನಾಟಕ ರಾಜ್ಯ ಕೋಶ–೪ ಜನಸಮುದಾಯ ಸಂಪುಟ ಪ್ರಸಾರಾಂಗದಲ್ಲಿ ಗೌಳಿಗರ ಸ್ವಲ್ಪ ಮಾಹಿತಿ ಸಿಗುತ್ತದೆ, ಪು. ೪೭, ೪೮.
- ಪ್ರೊ. ಎಚ್.ಜೆ. ಲಕ್ಕಪ್ಪಗೌಡ ಅವರು ಪ್ರಧಾನ ಸಂಪಾದಕರಾದ ಕರ್ನಾಟಕ ಬುಡಕಟ್ಟುಗಳ ಸಂಪುಟ ೧ರಲ್ಲಿ ಡಾ. ಎಚ್. ಎಂ. ಮಹೇಶ್ವರಯ್ಯನವರು ಬರೆದ ಲೇಖನದಲ್ಲಿ ಗೌಳಿಗರ ಬಗ್ಗೆ ಸಂಪೂರ್ಣ ಮಾಹಿತಿ ಸಿಗುತ್ತದೆ, ಪು. ೧೦೦–೧೫೦.
- ಡಾ. ಚಕ್ಕರೆ ಶಿವಶಂಕರ ರವರ 'ಜಾನಪದ ಕಲಾ ಪ್ರವೇಶ' ಎಂಬ ಗ್ರಂಥದಲ್ಲಿ ಗೌಳಿಗರ ಕುಣಿತಗಳ ಬಗ್ಗೆ ಬರೆದಿದ್ದಾರೆ.
- ಕರ್ನಾಟಕ ಸ್ಟೇಟ್ ಗೆಝೇಟಿಯರ್‌ನಲ್ಲಿ ಉತ್ತರ ಕನ್ನಡ ಜಿಲ್ಲೆಯನ್ನು ಪರಿಚಯಿಸುವಾಗ ಗೌಳಿಗರ ಬಗ್ಗೆ ಮಾಹಿತಿಯನ್ನು ನೀಡಿದ್ದಾರೆ.
- ಮೈಸೂರಿನ ಉತ್ತರ ಕನ್ನಡ ಸಾಂಸ್ಕೃತಿಕ ಸಂಘ, ವೈಜಯಂತಿ ಎಂಬ ಸಂಪುಟದಲ್ಲಿ ಉತ್ತರ ಕನ್ನಡದ ೨೩ ಸಮುದಾಯಗಳ ಸಾಂಸ್ಕೃತಿಕ, ಸಾಹಿತ್ಯ, ಆರ್ಥಿಕ ಮಾಹಿತಿಯನ್ನು ನೀಡುತ್ತದೆ. ಅದರಲ್ಲಿ ಗೌಳಿಗರ ಬಗ್ಗೆ ಮಾಹಿತಿ ಸಿಗುತ್ತದೆ.
- ಗಂಗಾಧರ ದೈವಜ್ಞರವರು ಬರೆದ 'ಬುಡಕಟ್ಟು ಸಮಾಜ ಹುಟ್ಟು ಸಾವಿನ ನಡುವೆ' ಈ ಗ್ರಂಥದಲ್ಲಿ ಗೌಳಿಗರ ಜನನ, (ಪು. ೩೦–೩೨) ವಿವಾಹ, (೮೨–೮೬) ದೆವ್ವ–ಭೂತ (ಪು. ೧೨೭–೧೨೮), ಅಂತ್ಯ ಸಂಸ್ಕಾರ (ಪು. ೧೦೨–೧೦೪) ಮುಂತಾದ ವಿಷಯಗಳ ವಿವರ ಕಾಣಬಹುದು.
- ವಿ.ಕೆ. ಅನುಪಮಾ ಪ್ರಿಯದರ್ಶಿನಿ ಕರ್ನಾಟಕ ವಿಶ್ವವಿದ್ಯಾಲಯದಿಂದ 'ಗೌಳಿಗರ ಸಾಂಸ್ಕೃತಿಕ ಅಧ್ಯಯನ' ಎಂಬ ವಿಷಯದ ಮೇಲೆ ಮಹಾ ಪ್ರಬಂಧ ಮಂಡಿಸಿದ್ದಾರೆ.
- Kailash C. Malhotra & Madhav Gadgil - 'The Ecological Basis of the Geographical Distribution of the Dhanagars : A Pastoral Caste-Cluster of Maharashtra', Project work of Indian Stastical Institute, Calcutta and Indian Institute of Science, Bangalore-1969 to 1979, p. 49-59.
- Gadgil Madhav and Malhotra K.C.- 'Ecology of a pastoral Caste : 'Gavali Dhangars of Peninsular India', Indian Institute of Science Bangalore, and Indian Statistical Institute Calcutta project work-1976, Human Ecology Vol. 10, No.1, 1982, p. 107-143.

ಮೇಲ್ಕಂಡ ಬಹುತೇಕ ಎಲ್ಲಾ ಗ್ರಂಥಗಳು ತಮ್ಮ ಅಧ್ಯಯನದ ಮಿತಿಯೊಳಗೆ ಧನಗರ ಗೌಳಿ ಸಮುದಾಯವನ್ನು ಅಭ್ಯಸಿಸಿ ಸಾಕಷ್ಟು ತಿಳುವಳಿಕೆಯನ್ನು ನೀಡಿವೆ ಹಾಗೂ ನನ್ನ ಸಂಶೋಧನೆಗೆ ದಾರಿದೀಪಗಳಾಗಿವೆ. ಪ್ರಸ್ತುತ ಎಲ್ಲಾ ಕೃತಿಗಳನ್ನು ಗಮನಿಸಿದರೆ, ಧನಗರ ಗೌಳಿ ಸಮುದಾಯದ

ಸಮಸ್ಯೆಗಳು ಹಾಗೂ ಪರಿವರ್ತನೆ ಕುರಿತು ಅಧ್ಯಯನ ನಡೆದಿಲ್ಲವೆಂದೇ ಹೇಳಬಹುದು. ಕಾರಣ ನನ್ನ ಈ "ಉತ್ತರ ಕನ್ನಡ ಜಿಲ್ಲೆಯ ಗೌಳಿಗ ಸಮುದಾಯದ ಸಾಮಾಜಿಕ ಸಮಸ್ಯೆಗಳು ಹಾಗೂ ಸಾಮಾಜಿಕ ಪರಿವರ್ತನೆ" ಎಂಬ ಅಧ್ಯಯನದಲ್ಲಿ ಗೌಳಿಗರ ಸಮಸ್ಯೆಗಳನ್ನು ಮತ್ತು ಪರಿವರ್ತನೆಗಳನ್ನು ಅಭ್ಯಸಿಸಿ ಸಮಸ್ಯೆಗಳಿಗೆ ಪರಿಹಾರ ಸೂಚಿಸಲು ಪ್ರಯತ್ನಿಸಲಾಗಿದೆ.

**ಅಡಿಟಿಪ್ಪಣಿಗಳು**

೧) ಕಿಟಲ್-ಅರ್ಥಕೋಶ

೨) Thurston Edger 'Castes and Tribes of South India', Government Press, Madras-Page-34.

೩) Anthropology of Primitive Tribes in India - P.Dash Sharma Page xiii, xiv.

೪) ಉತ್ತರ ಕನ್ನಡ ಜಿಲ್ಲೆಯ ಅಂಕಿ ಅಂಶಗಳ ನೋಟ, ೨೦೦೯-೧೦, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿ, ಕಾರವಾರ

೫) ಸನ್ ೨೦೧೧ ರ ಜನಗಣತಿ

೬) ಹಿ.ಚಿ. ಬೋರಲಿಂಗಯ್ಯ - ಕುಣಬಿಯರು, ಪುಟ ೮, ೯

೭) ಬಾಂಬೆ ಗೆಜೆಟೀಯರ್ - ಕರ್ನಾಟಕ ಭಾಗದ್ದು, ಪು ೪೩೮-೪೪೧, ೧೯೮೫.

೮) ಕ್ಷೇತ್ರ ಕಾರ್ಯ ಸಂದರ್ಶನ: ದೊಂಡು ಪಾಟೀಲ, ಮಾದೆಕೊಪ್ಪ, ಯಲ್ಲಾಪುರ

೯) R.E. Enthoven - The Tribes and castes of Bombay, 1922, Page 311.

೧೦) ಚ.ನ. ಶಂಕರರಾವ್ - ಸಾಮಾಜಿಕ ಸಮೂಹಗಳು ಮತ್ತು ಪರಿವರ್ತನೆ, ಪು. ೨೦೩-೨೦೪.

೧೧) ಬಿ.ಎಸ್. ಚಂದ್ರಶೇಖರ - ಸಮಾಜ ವಿಜ್ಞಾನಗಳಲ್ಲಿ ಸಂಶೋಧನ ವಿಧಾನಗಳು, ಪ್ರಸಾರಂಗ, ಕನ್ನಡ ವಿ.ವಿ. ಹಂಪಿ. ಪು. ೫೮-೭೬ ಮತ್ತು
ಎಂ. ಚಂದ್ರಪೂಜಾರಿ, 'ಸಮಾಜ ಸಂಶೋಧನೆ', ಪ್ರಸಾರಂಗ, ಕನ್ನಡ ವಿ.ವಿ. ಹಂಪಿ. ಪು. ೧೪೪-೧೪೯.

೧೨) ಅದೇ ಪು. ೧೪೯-೧೫೬, ಪು. ೧೬೧-೧೬೫ ಮತ್ತು
ಬಿ.ಎಸ್. ಚಂದ್ರಶೇಖರ - ಸಮಾಜ ವಿಜ್ಞಾನಗಳಲ್ಲಿ ಸಂಶೋಧನ ವಿಧಾನಗಳು, ಪ್ರಸಾರಂಗ, ಕನ್ನಡ ವಿ.ವಿ. ಹಂಪಿ. ಪು. ೯೧-೧೦೨.

೧೩) ಅದೇ ಪು. ೪೭-೫೭ ಮತ್ತು
ಎಂ. ಚಂದ್ರಪೂಜಾರಿ, 'ಸಮಾಜ ಸಂಶೋಧನೆ', ಪ್ರಸಾರಂಗ, ಕನ್ನಡ ವಿ.ವಿ. ಹಂಪಿ. ಪು. ೧೫೬-೧೬೧.

೧೪) ಬಿ.ಎಸ್. ಚಂದ್ರಶೇಖರ - ಸಮಾಜ ವಿಜ್ಞಾನಗಳಲ್ಲಿ ಸಂಶೋಧನ ವಿಧಾನಗಳು, ಪ್ರಸಾರಂಗ, ಕನ್ನಡ ವಿ.ವಿ. ಹಂಪಿ. ಪು. ೧೦೨-೧೨೬.

೧೫) ಕ್ಷೇತ್ರ ಕಾರ್ಯ: ಸಂದರ್ಶನ ಮತ್ತು ಸಹಾಯ: ಬಾಗು ಪಿಂಗಳೆ.

೧೬) ಕ್ಷೇತ್ರ ಕಾರ್ಯ, ಸಂದರ್ಶನ ಮತ್ತು ಸಹಾಯ: ದೊಂಡು ಪಾಟೀಲ.

# ಅಧ್ಯಾಯ ೨

## ಗೌಳಿ ಸಮುದಾಯದ ಐತಿಹಾಸಿಕ ಹಿನ್ನೆಲೆ

೨.೧ ಉತ್ತರ ಕನ್ನಡ ಜಿಲ್ಲೆ ಮತ್ತು ಅಲ್ಲಿನ ಬುಡಕಟ್ಟು – ಒಂದು ಸ್ಥೂಲ ಸಮೀಕ್ಷೆ

೨.೨ ಮೂಲ

೨.೩ ಪ್ರಸರಣ

೨.೪ ಇತಿಹಾಸ ಕಥನ

೨.೫ ಈಗಿನ ವಾಸಸ್ಥಳಗಳು

# ಅಧ್ಯಾಯ ೨

# ಗೌಳಿ ಸಮುದಾಯದ ಐತಿಹಾಸಿಕ ಹಿನ್ನೆಲೆ

---

## ೨.೧ ಉತ್ತರ ಕನ್ನಡ ಜಿಲ್ಲೆ ಮತ್ತು ಅಲ್ಲಿನ ಬುಡಕಟ್ಟು–ಒಂದು ಸ್ಥೂಲ ಸಮೀಕ್ಷೆ

ಪ್ರಸ್ತುತ ಅಧ್ಯಾಯವು ಈ ಮಹಾಪ್ರಬಂಧಕ್ಕೆ ಒಂದು ಪ್ರವೇಶಿಕೆಯನ್ನು ಒದಗಿಸುತ್ತದೆ. ಆರಂಭದಲ್ಲಿ ಉತ್ತರ ಕನ್ನಡ ಜಿಲ್ಲೆಯ ಭೌಗೋಳಿಕತೆ ಮತ್ತು ಅದರ ಚಾರಿತ್ರಿಕತೆಯನ್ನು ಸ್ಥೂಲವಾಗಿ ವಿವರಿಸಲಾಗಿದೆ. ಇದರ ನಂತರ ಉತ್ತರ ಕನ್ನಡ ಜಿಲ್ಲೆಯ ಬುಡಕಟ್ಟುಗಳ ಸ್ಥೂಲ ಪರಿಚಯ ಹಾಗೂ ಉತ್ತರ ಕನ್ನಡ ಜಿಲ್ಲೆಯ ಪರಿಶಿಷ್ಟ ಜಾತಿ, ಸಮುದಾಯಗಳ ಅಂಕಿ–ಅಂಶಗಳ ವಿವರಗಳನ್ನು ನೀಡಲಾಗಿದೆ.

### ೨.೧.೧ ಉತ್ತರ ಕನ್ನಡ ಜಿಲ್ಲೆಯ ಸಾಮಾನ್ಯ ಭೌಗೋಳಿಕ ವಿವರಗಳು

ಉತ್ತರ ಕನ್ನಡ ಜಿಲ್ಲೆಯು ಕರ್ನಾಟಕ ರಾಜ್ಯದ ೩೦ ಜಿಲ್ಲೆಗಳ ಪೈಕಿ ಒಂದು ಜಿಲ್ಲೆ. ಅರಬ್ಬೀ ಸಮುದ್ರದ ಗುಂಟ ತನ್ನ ಕರಾವಳಿ ಪ್ರದೇಶವನ್ನು ಹೊಂದಿದ ಹಾಗೂ ಮೂರು ಕರಾವಳಿ ಜಿಲ್ಲೆಗಳಲ್ಲೊಂದಾಗಿದೆ. ರಾಜ್ಯದ ಪುನರ್ ವಿಂಗಡನೆಯ ಮೊದಲು ಇದು ಮುಂಬೈ ಪ್ರಾಂತದ ಅಂಗವಾಗಿತ್ತು ಮತ್ತು ಕಾರವಾರ ಜಿಲ್ಲೆಯೆಂದು ಪ್ರಚಲಿತವಾಗಿತ್ತು. ಉತ್ತರ ಕನ್ನಡ ಜಿಲ್ಲೆಯು ಕರ್ನಾಟಕದ ಪಶ್ಚಿಮ ಭಾಗದಲ್ಲಿದ್ದು, ಉತ್ತರಾರ್ಧಗೋಳದ ಉಷ್ಣ ವಲಯದಲ್ಲಿ ಉತ್ತರ ಅಕ್ಷಾಂಶ ೧೩°–೫೫' ರಿಂದ ೧೫°–೩೧' ಹಾಗೂ ೭೪°–೦೦' ದಿಂದ ೭೫°–೧೦' ಪೂರ್ವ ರೇಖಾಂಶಗಳ ನಡುವೆ ವಿಸ್ತರಿಸಿದೆ. ಉತ್ತರ ಕನ್ನಡ ಜಿಲ್ಲೆಯ ಉತ್ತರಕ್ಕೆ ಗೋವಾ ರಾಜ್ಯ ಮತ್ತು ಬೆಳಗಾಂವ ಜಿಲ್ಲೆ, ಪೂರ್ವಕ್ಕೆ ಧಾರವಾಡ ಮತ್ತು ಹಾವೇರಿ ಜಿಲ್ಲೆಗಳು, ದಕ್ಷಿಣಕ್ಕೆ ಶಿವಮೊಗ್ಗ ಮತ್ತು ಉಡುಪಿ ಜಿಲ್ಲೆಗಳು ಹಾಗೂ ಪಶ್ಚಿಮಕ್ಕೆ ಅರಬ್ಬೀ ಸಮುದ್ರದಿಂದ ಆವರಿಸಲ್ಪಟ್ಟಿದ್ದು, ೧೪೨ ಕಿ.ಮೀ. ಉದ್ದದ ಕರಾವಳಿ ಇದೆ. ಈ ಜಿಲ್ಲೆಯ ವಿಸ್ತೀರ್ಣ ೧೦೨೯೧ ಚ.ಕಿ.ಮೀ. ಇದೆ. ಇದು

ರಾಜ್ಯದ ೫ನೇ ದೊಡ್ಡ ಜಿಲ್ಲೆಯಾಗಿದ್ದು, ಬೆಳಗಾಂವ ವಿಭಾಗಕ್ಕೆ ಸೇರಿದ ಒಂದು ಜಿಲ್ಲೆಯಾಗಿದೆ. ಕಾರವಾರವು ಉತ್ತರ ಕನ್ನಡ ಜಿಲ್ಲಾ ಕೇಂದ್ರವಾಗಿದೆ. ಉತ್ತರ ಕನ್ನಡ ಜಿಲ್ಲೆಯು ಒಟ್ಟು ೧೧ ತಾಲೂಕುಗಳನ್ನು ಹೊಂದಿದೆ. ಅವುಗಳೆಂದರೆ, ಕಾರವಾರ, ಅಂಕೋಲಾ, ಕುಮಟಾ, ಹೊನ್ನಾವರ, ಭಟ್ಕಳ, ಸಿದ್ದಾಪೂರ, ಶಿರಸಿ, ಮುಂಡಗೋಡ, ಯಲ್ಲಾಪೂರ, ಹಳಿಯಾಳ ಮತ್ತು ಜೊಯಿಡಾ. ೧೯೧೦.೪೪ ಚ.ಕಿ.ಮೀ. ವಿಸ್ತೀರ್ಣ ಹೊಂದಿದ ಜೊಯಿಡಾ ತಾಲೂಕು ಎಲ್ಲಕ್ಕಿಂತ ದೊಡ್ಡದು ಮತ್ತು ೩೫೫.೫೦ ಚ.ಕಿ.ಮೀ. ವಿಸ್ತೀರ್ಣ ಹೊಂದಿದ ಭಟ್ಕಳ ತಾಲೂಕು ಎಲ್ಲಕ್ಕಿಂತ ಚಿಕ್ಕದು ಆಗಿದೆ. ಜಿಲ್ಲೆಯಲ್ಲಿ ಒಟ್ಟು ೧೨೮೯ ಗ್ರಾಮಗಳಿದ್ದು ಅವುಗಳಲ್ಲಿ ೧೨೪೬ ಜನವಸತಿ ಇರುವ ಮತ್ತು ೪೩ ಜನವಸತಿ ಇಲ್ಲದಿರುವ ಗ್ರಾಮಗಳು ಇರುತ್ತವೆ. ಶಿರಸಿ ತಾಲೂಕ ಅತೀ ಹೆಚ್ಚು ಅಂದರೆ ೨೨೨ (೧ ಜನವಸತಿ ಇಲ್ಲದ ಗ್ರಾಮ ಸೇರಿ) ಹಾಗೂ ಕಾರವಾರ ತಾಲೂಕು ಅತೀ ಕಡಿಮೆ ೫೨(೧ ಜನವಸತಿ ಇಲ್ಲದ ಗ್ರಾಮ ಸೇರಿ) ಗ್ರಾಮಗಳನ್ನು ಹೊಂದಿದೆ. ಜಿಲ್ಲೆಯು ೩೫ ಹೋಬಳಿಗಳನ್ನು, ೨೦೭ ಗ್ರಾಮ ಪಂಚಾಯತಿಗಳನ್ನು, ೩ ನಗರಸಭೆಗಳನ್ನು, ೨ ಪುರಸಭೆಗಳನ್ನು ಹಾಗೂ ೬ ಪಟ್ಟಣ ಪಂಚಾಯತಿಗಳನ್ನು ಹೊಂದಿರುತ್ತದೆ. ಆಡಳಿತ ದೃಷ್ಟಿಯಿಂದ ಜಿಲ್ಲೆಯನ್ನು ನಾಲ್ಕು ಉಪವಿಭಾಗಗಳನ್ನಾಗಿ ವಿಂಗಡಿಸಲಾಗಿದೆ. ಕಾರವಾರ ಉಪವಿಭಾಗಕ್ಕೆ ಕಾರವಾರ, ಹಳಿಯಾಳ, ಜೋಯಿಡಾ ತಾಲೂಕುಗಳು, ಕುಮುಟಾ ಉಪವಿಭಾಗಕ್ಕೆ ಕುಮುಟಾ, ಅಂಕೋಲಾ ತಾಲೂಕುಗಳು ಹಾಗೂ ಶಿರಸಿ ಉಪವಿಭಾಗಕ್ಕೆ ಶಿರಸಿ, ಯಲ್ಲಾಪೂರ, ಸಿದ್ದಾಪೂರ ಮತ್ತು ಮುಂಡಗೋಡ ತಾಲೂಕುಗಳು ಸೇರಿರುತ್ತವೆ.[೧] ಸನ್ ೨೦೧೧ರ ಜನಗಣತಿಯ ಅನುಸಾರ ಜಿಲ್ಲೆಯ ಒಟ್ಟು ಜನಸಂಖ್ಯೆ ೧೪೩೬೮೪೭. ಇದರಲ್ಲಿ ಗಂಡಸರು-೭೨೭೪೨೪, ಹೆಂಗಸರು-೭೦೯೪೨೩. ೯೬೫೭೩೧ ಗ್ರಾಮೀಣ ಹಾಗೂ ೩೮೭೯೧೩ ಜನರು ನಗರಪ್ರದೇಶದಲ್ಲಿ ವಾಸಿಸುತ್ತಿದ್ದಾರೆ.
**ಜನಸಾಂದ್ರತೆ:** ೧೪೦/ಚ.ಕಿ.ಮೀ. ಲಿಂಗಾನುಪಾತ: ೧೦೦೦ ಪುರುಷರಿಗೆ ೯೭೫ ಮಹಿಳೆಯರು. ಜಿಲ್ಲೆಯ ಒಟ್ಟು ಜನಸಂಖ್ಯೆಯಲ್ಲಿ ಪರಿಶಿಷ್ಠ ಜಾತಿಯವರು ೧೦೧೮೯೬(೭.೫೨%) ಮತ್ತು ಪರಿಶಿಷ್ಠ ಪಂಗಡದವರು ೨೩೭೮೧(೧.೭೫%) ಜನರು ಇದ್ದಾರೆ. ಜಿಲ್ಲೆಯ ಸಾಕ್ಷರತೆಯ ಪ್ರಮಾಣ ಶೇ. ೮೪.೦೩ ರಷ್ಟು ಇದೆ. ಸಂಪೂರ್ಣ ಮಾಹಿತಿಯನ್ನು ಕೋಷ್ಠಕ ೨.೧, ೨.೨, ಮತ್ತು ೨.೩ರಲ್ಲಿ ನೀಡಲಾಗಿದೆ.

### ೨.೧.೨ ಉತ್ತರ ಕನ್ನಡ ಹೆಸರಿನ ಮೂಲ

ಕರ್ನಾಟಕದಲ್ಲಿ ಉತ್ತರಕನ್ನಡ ಮತ್ತು ದಕ್ಷಿಣಕನ್ನಡ ಎಂಬ ಎರಡು ಕರಾವಳಿ ಜಿಲ್ಲೆಗಳು ಬಂದರುಗಳಿಗೆ ಪ್ರಸಿದ್ಧಿ ಹೊಂದಿವೆ. ಪೋರ್ಚುಗೀಸರು ಕರ್ನಾಟಕ ಎಂಬುದನ್ನು 'ಕೆನರಾ' ಎಂದು ಸಂಕ್ಷಿಪ್ತಗೊಳಿಸಿದರು. ಪೋರ್ಚುಗೀಸ ಇತಿಹಾಸ ತಜ್ಞ ಫಾರಿಯಾ ವಾಯ್. ಸೌಜಾ 'ಕೆನರಾ' ಎಂಬ ಹೆಸರಿನ ಉಪಯೋಗವನ್ನೇ ಮುಂದುವರೆಸಿದರು. ಡಚ್ ಪ್ರವಾಸಿಗ ವೊನ್ ಲಿನ್ಸ್‌ಕೋಟೇನ್ (೧೫೮೩) ಇಲ್ಲಿಯ ಜನರಿಗೆ ಕೆನರಿಯನ್‌ರು ಎಂದು ಕರೆದಿದ್ದಾನೆ. ಕ್ರಿ.ಶ. ೧೭೯೯ರಲ್ಲಿ ಬ್ರಿಟಿಷರು ಟಿಪ್ಪು ಸುಲ್ತಾನನಿಂದ ಈ ಪ್ರದೇಶವನ್ನು ವಶಪಡಿಸಿಕೊಂಡ ನಂತರ ಕೆನರಾ ಜಿಲ್ಲೆ ಎಂದೇ ಕರೆದರು. ಇದೇ ಪ್ರದೇಶವನ್ನು ವಿಭಜಿಸಿ ಉತ್ತರ ಭಾಗವನ್ನು ನಾರ್ಥ್

ಕೆನರಾ (ಉತ್ತರ ಕನ್ನಡ) ಎಂದೂ, ದಕ್ಷಿಣ ಭಾಗವನ್ನು ಸೌತ ಕೆನರಾ (ದಕ್ಷಿಣ ಕನ್ನಡ) ಎಂದೂ ಕರೆದರು. ಸ್ವಾತಂತ್ರ್ಯ ನಂತರ ಕರ್ನಾಟಕ ಈ ಹೆಸರುಗಳನ್ನು ಬದಲಾಯಿಸಿ ಉತ್ತರ ಕನ್ನಡ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳೆಂದು ೩೧-೧-೧೯೭೭ ರಿಂದ ಕರೆಯಲು ಪ್ರಾರಂಭಿಸಲಾಯಿತು.[೨] ಆದರೆ ಉತ್ತರ ಕನ್ನಡಕ್ಕೆ ಬದಲಾಗಿ ಕಾರವಾರ ಜಿಲ್ಲೆ ಎಂದೇ ಹೆಚ್ಚು ಪ್ರಚಲಿತವಿದೆ.

**೨.೧.೩ ಭೌಗೋಳಿಕ ಲಕ್ಷಣಗಳು**

ಪಶ್ಚಿಮ ಘಟ್ಟ ಪ್ರದೇಶವು ಉತ್ತರ ಕನ್ನಡ ಜಿಲ್ಲೆಯನ್ನು ಎರಡು ಭಾಗಗಳನ್ನಾಗಿ ವಿಭಾಗಿಸಿದೆ. ೧) ಕರಾವಳಿ ಪ್ರದೇಶ ೨) ಎತ್ತರ ಘಟ್ಟ ಪ್ರದೇಶ. ಉತ್ತರ ಕನ್ನಡ ಜಿಲ್ಲೆಯು ಕರಾವಳಿ ಗುಂಟ ಐದು ತಾಲೂಕುಗಳನ್ನು ಹೊಂದಿದೆ. ಅವಾವುವೆಂದರೆ ೧) ಕಾರವಾರ, ೨) ಹೊನ್ನಾವರ, ೩) ಕುಮಟಾ, ೪) ಅಂಕೋಲಾ ಮತ್ತು ೫) ಭಟ್ಕಳ. ಅಲ್ಲದೇ ಎತ್ತರ ಘಟ್ಟ ಪ್ರದೇಶಗಳಲ್ಲಿ ಆರು ತಾಲೂಕುಗಳಿವೆ. ಅವು ೧) ಸಿದ್ದಾಪೂರ, ೨) ಶಿರಸಿ, ೩) ಸೂಪಾ, ೪) ಮುಂಡಗೋಡ, ೫) ಯಲ್ಲಾಪೂರ ಮತ್ತು ೬) ಹಳಿಯಾಳ. ಇವು ದಖನ್ ಪ್ರಸ್ಥಭೂಮಿಯವರೆಗೆ ವಿಸ್ತರಿಸಿವೆ.

ಜಿಲ್ಲೆಯನ್ನು ಕರಾವಳಿ ಪ್ರದೇಶ, ಮಲೆನಾಡು ಪ್ರದೇಶ ಮತ್ತು ಗಡಿನಾಡು ಪ್ರದೇಶ ಹೀಗೆ ಮೂರು ಭಾಗಗಳಾಗಿ ವಿಂಗಡಿಸಲಾಗಿದೆ. ಕಾರವಾರ, ಅಂಕೋಲಾ, ಕುಮುಟಾ, ಹೊನ್ನಾವರ, ಭಟ್ಕಳ ತಾಲೂಕುಗಳು ಕರಾವಳಿ ಪ್ರದೇಶದಲ್ಲಿ, ಸಿದ್ದಾಪೂರ, ಶಿರಸಿ, ಯಲ್ಲಾಪೂರ, ಜೊಯಿಡಾ ತಾಲೂಕುಗಳು ಮಲೆನಾಡು ಪ್ರದೇಶದಲ್ಲಿ ಹಾಗೂ ಹಳಿಯಾಳ, ಮುಂಡಗೋಡ ತಾಲೂಕುಗಳು ಗಡಿನಾಡು ಪ್ರದೇಶದಲ್ಲಿ ಇರುತ್ತವೆ.

ಜಿಲ್ಲೆಯಲ್ಲಿ ಸಾಮಾನ್ಯವಾಗಿ ಕಂಡುಬರುವ ಮಣ್ಣಿನ ಸ್ವರೂಪವೆಂದರೆ ಪದರು ಪದರಾಗಿರುವ ಬೆಣಚು ಕಲ್ಲಿನಿಂದ ಕೂಡಿದ ಹಗುರಾದ ಸಸ್ಯಪೋಷಕ ದ್ರವ್ಯಗಳು ಕಡಿಮೆ ಇದ್ದ ಮಣ್ಣು ಹಾಗೂ ಕರಾವಳಿ ಪ್ರದೇಶದಲ್ಲಿ ಉಪ್ಪು ನೀರು ಬೆರೆತ ಉಸುಕಿನ ನೆಲ ಕಂಡು ಬರುತ್ತದೆ. ಜಿಲ್ಲೆಯ ಮಣ್ಣುಗಳಲ್ಲಿ ವಿವಿಧ ರೀತಿಯ ಮಣ್ಣುಗಳನ್ನು ಗುರುತಿಸಲಾಗಿದೆ. ವಿವಿದ ನೈಸರ್ಗಿಕ ಸಂಪನ್ಮೂಲಗಳಲ್ಲಿ ಮಣ್ಣು ಪ್ರಮುಖವಾದದ್ದು. ಏಕೆಂದರೆ ಜಿಲ್ಲೆಯ ಜನಸಂಖ್ಯೆಯುಲ್ಲಿ ಹೆಚ್ಚಿನ ಜನರು ತಮ್ಮ ಜೀವನೋಪಾಯಕ್ಕಾಗಿ ಕೃಷಿಯನ್ನು ಅವಲಂಬಿಸಿರುವರು. ಕೃಷಿ ಅಭಿವೃದ್ಧಿಯಲ್ಲಿ ಮಣ್ಣು ರಚನೆ, ಬಣ್ಣ, ಉತ್ಪಾದನಾ ಸಾಮರ್ಥ್ಯ ಇದ್ದರೆ ಮಾತ್ರ ಉತ್ತಮ ಬೆಳೆ ಬೆಳೆಯಲು ಸಾಧ್ಯ. ಕೆಲವು ಬಗೆಯ ಮಣ್ಣುಗಳು ಉತ್ತಮವಾಗಿರುವುದಿಲ್ಲ. ಅಂತಹವುಗಳಲ್ಲಿನ ಕೊರತೆಗಳನ್ನು ಗಮನಿಸಿ ರಸಗೊಬ್ಬರ ಅಥವಾ ನೈಸರ್ಗಿಕ ಗೊಬ್ಬರಗಳನ್ನು ಸೇರಿಸಿ ಫಲವತ್ತತೆಯನ್ನು ಹೆಚ್ಚಿಸಬಹುದಾಗಿದೆ. ಈ ಮಣ್ಣುಗಳನ್ನು ಪ್ರಮುಖವಾಗಿ ನಾಲ್ಕು ಪ್ರಕಾರಗಳಾಗಿ ವಿಂಗಡಿಸಬಹುದಾಗಿದೆ.

೧. ಕೆಂಪು ಮಣ್ಣು
೨. ಕಪ್ಪು ಮಣ್ಣು
೩. ಮೆಕ್ಕಲು ಮಣ್ಣು
೪. ಜಂಬಿಟ್ಟಿಗೆ ಮಣ್ಣು

ಜಿಲ್ಲೆಯ ನದಿಗಳಲ್ಲಿ ಕಾಳಿ, ಗಂಗಾವಳಿ, ಅಘನಾಶಿನಿ, ಶರಾವತಿ ಇವು ಮುಖ್ಯ ನದಿಗಳಾಗಿದ್ದು, ವೆಂಕಟಾಪೂರ ಮತ್ತು ವರದಾ ನದಿಗಳು ಉಪನದಿಗಳಾಗಿವೆ. ವರದಾ ನದಿಯನ್ನು ಹೊರತುಪಡಿಸಿ ಉಳಿದ ನದಿಗಳು ಪಶ್ಚಿಮಾಭಿಮುಖವಾಗಿ ಹರಿದು ಅರಬೀ ಸಮುದ್ರವನ್ನು ಸೇರುತ್ತವೆ. ವೆಂಕಟಾಪೂರ ಮತ್ತು ವರದಾ ಇವು ಚಿಕ್ಕ ನದಿಗಳಾಗಿದ್ದು, ಕಡಿದಾದ ಇಳಿಜಾರುಳ್ಳ ಬೆಟ್ಟ ಗುಡ್ಡಗಳ ನಡುವೆ ವೇಗವಾಗಿ ಹರಿಯುತ್ತವೆ. ಮಳೆಗಾಲದಲ್ಲಿ ತುಂಬಾ ಪ್ರವಾಹದಿಂದ ಹರಿಯುವವು. ಇವು ಬಹಳಷ್ಟು ವಿದ್ಯುತ್ ಶಕ್ತಿ ತಯಾರಿಕೆಗೆ ನೆರವಾಗುವವು.[೩]

### ೨.೧.೪ ಹವಾಗುಣ

ಉತ್ತರ ಕನ್ನಡವು ಉಷ್ಣ ವಲಯದ ಮಾನ್ಸೂನ್ ವಾಯುಗುಣವನ್ನೊಳಗೊಂಡಿದೆ. ಶಾಖ ಮತ್ತು ತೇವಾಂಶವುಳ್ಳ ಬೇಸಿಗೆ ಮತ್ತು ತಂಪಾದ ಚಳಿಗಾಲವು ಈ ವಾಯುಗುಣದ ಮುಖ್ಯ ಲಕ್ಷಣಗಳು. ಆದರೆ ಈ ವಾಯುಗುಣವು ವೈವಿಧ್ಯಪೂರ್ಣವಾದದು. ಅದಕ್ಕೆ ಅಕ್ಷಾಂಶ, ಸಮುದ್ರ ಮಟ್ಟದಿಂದ ಎತ್ತರ, ಸಮುದ್ರದಿಂದ ಸಮೀಪ, ಸ್ಥಳೀಯ ಮಾರುತಗಳು, ಸಸ್ಯವರ್ಗ, ಭೂ ಸ್ವರೂಪಗಳು ಮುಂತಾದವು ಕಾರಣವಾಗಿವೆ. ಕರಾವಳಿ ಪ್ರದೇಶ, ಮಲೆನಾಡು ಮತ್ತು ಪಶ್ಚಿಮ ಘಟ್ಟಗಳ ಸರಣಿಗಳಲ್ಲಿ ಅಧಿಕ ಮಳೆಯಾಗುತ್ತದೆ. ತೀರ ಪ್ರದೇಶದಲ್ಲಿ ಸಮುದ್ರ ಪ್ರಭಾವದಿಂದ ಬೇಸಿಗೆ ಮತ್ತು ಚಳಿಗಾಲದ ಉಷ್ಣಾಂಶ ಸಮನಾಗಿರುತ್ತದೆ. ಸಮುದ್ರದ ಮಂದ ಮಾರುತಗಳು ಉಷ್ಣತೆಯನ್ನುಂಟು ಮಾಡುತ್ತವೆ. ಅರಬ್ಬೀ ಸಮುದ್ರಕ್ಕೆ ಹೊಂದಿಕೊಂಡಿರುವ ಕರಾವಳಿಯಲ್ಲಿ ಹೆಚ್ಚು ಮಳೆ ಬೀಳುವುದರಿಂದ ಮಳೆಯ ಹಂಚಿಕೆಯಲ್ಲಿ ವ್ಯತ್ಯಾಸವುಂಟಾಗುತ್ತದೆ. ಧನಗರ ಗೌಳಿಗರು ವಾಸಿಸುವಂಥ ಅರಣ್ಯ ಪ್ರದೇಶದಲ್ಲಿ ಚಳಿಯ ವಾತಾವರಣ ಹೆಚ್ಚಾಗಿರುತ್ತದೆ. ಜಿಲ್ಲೆಯ ಹವಾಮಾನವು ಸಮಶೀತೋಷ್ಣವಾಗಿದೆ. ಸಮುದ್ರ ತೀರದಲ್ಲಿ ಆರ್ದ್ರತೆ ಮತ್ತು ಉಷ್ಣತೆ ಇರುತ್ತಿದ್ದು, ಬೇಸಿಗೆಯಲ್ಲಿ ಅತಿ ಹೆಚ್ಚು ೩೩ ಸೆಂ. ಮತ್ತು ಚಳಿಗಾಲದಲ್ಲಿ ಅತೀ ಕಡಿಮೆ ೨೦ ಸೆಂ. ಉಷ್ಣತೆ ಇರುತ್ತದೆ.[೪]

### ೨.೧.೫ ನಿಸರ್ಗ ಸಂಪತ್ತು

ಕಾರವಾರ ಮತ್ತು ಬೇಲಿಕೇರಿಗಳಲ್ಲಿ ಚಿಕ್ಕ ಕೊಲ್ಲಿಗಳಿವೆ. ಉಳಿದಂತೆ ನೇರವಾದ ತೀರ ಪ್ರದೇಶಗಳಿವೆ. ಇಡೀ ಉತ್ತರ ಕನ್ನಡ ಜಿಲ್ಲೆ ಚೆಲುವಿನ ಬೀಡಾಗಿದೆ. ಇದೊಂದು ಪ್ರಕೃತಿಯ ಪವಾಡವೆಂದೇ ಹೇಳಬಹುದು. ನೋಡಿದಷ್ಟು ವಿಸ್ತಾರದ ಕಡಲು, ನದಿಕೊಳ್ಳಗಳ ಝುಳು ಝುಳು ನಾದ, ಪಕ್ಷಿಗಳ ಚಿಲಿಪಿಲಿ ಕಲರವ, ಹೆಸರು ವಾಸಿಯಾದ ಸೃಷ್ಠಿ ಸೌಂದರ್ಯದಿಂದ ಕೂಡಿದ ನೈಸರ್ಗಿಕ ಅರಣ್ಯ ಸಂಪತ್ತು, ಬಂದರುಗಳು, ಜಲಪಾತಗಳು, ಪುಣ್ಯ ಕ್ಷೇತ್ರಗಳು, ಆಣೆಕಟ್ಟುಗಳು, ಇತಿಹಾಸ ಪ್ರಸಿದ್ಧ ಸ್ಥಳಗಳು ಉತ್ತರ ಕನ್ನಡ ಜಿಲ್ಲೆಯ ಪ್ರಸಿದ್ಧಿಯನ್ನು ಹೆಚ್ಚಿಸಿವೆ.

ಉತ್ತರ ಕನ್ನಡ ಜಿಲ್ಲೆಯು ಬಿಳಿ ರಜತ ವರ್ಣದ ಬೀಚ್‌ಗಳು, ಸುಂದರ ಹಸಿರು ವರ್ಣದ ಭತ್ತದ ಬೆಳೆಯ ಕ್ಷೇತ್ರಗಳು, ತಂಪು ತರುವ ಪಾಮ್ ಗಿಡಗಳು, ದಟ್ಟ ಕಾಡು ಹಾಗೂ ನದಿಕೊಳ್ಳಗಳಿಂದ ಕಂಗೊಳಿಸುವ ನಿಸರ್ಗ ರಮಣೀಯ ಸುಂದರ ಪ್ರದೇಶಗಳಲ್ಲೊಂದು. ನಿಸರ್ಗ ನಿರ್ಮಿತ ಜಲಪಾತಗಳು ದೇಶ–ವಿದೇಶಗಳಿಂದ ಪ್ರವಾಸಿಗರನ್ನು ಆಕರ್ಷಿಸುತ್ತವೆ. ಫೌನಾ ಮತ್ತು ಫ್ಲೋರಾಗಳಿಂದ

ಸಂಪದ್ಭರಿತವಾಗಿದೆ. ಅಂತರಾಷ್ಟ್ರೀಯ ಖ್ಯಾತಿಯ ಬಂದರುಗಳಿವೆ. ಮೀನುಗಾರಿಕೆ ಮತ್ತು ಅಂತರಾಷ್ಟ್ರೀಯ ವ್ಯಾಪಾರೋದ್ಯಮಕ್ಕೆ ಹೆಸರುಗಳಿಸಿವೆ.[೫]

ಉತ್ತರ ಕನ್ನಡ ಜಿಲ್ಲೆ ಕರ್ನಾಟಕದ ಅತ್ಯಂತ ಸಂಪದ್ಭರಿತ ಜಿಲ್ಲೆಯಾಗಿದೆ. ಇಲ್ಲಿನ ಭೌಗೋಳಿಕ, ನೈಸರ್ಗಿಕ ಸಂಪತ್ತು ಬಹುಶಃ ನಮ್ಮ ರಾಜ್ಯದ ಬೇರೆ ಜಿಲ್ಲೆಗೆ ಹೋಲಿಸಿದರೆ ಅತ್ಯಧಿಕವಾಗಿದೆ. ಸುಮಾರು ೭೦೦ ಮೀಟರ್ ಎತ್ತರವಾಗಿ ದಕ್ಷಿಣೋತ್ತರವಾಗಿ ಹಬ್ಬಿರುವ ಸಹ್ಯಾದ್ರಿ ಶ್ರೇಣಿಯಲ್ಲಿಯ ದೇವಿಮನೆ ಘಟ್ಟ, ಮಲೆಮನೆ ಘಟ್ಟ, ಅರಬೈಲ್ ಘಟ್ಟಗಳು ಈ ಜಿಲ್ಲೆಯನ್ನು ಪ್ರಾಕೃತಿಕವಾಗಿ ಘಟ್ಟದ ಮೇಲಿನ ಹಾಗೂ ಘಟ್ಟದ ಕೆಳಗಿನ ಪ್ರದೇಶಗಳಾಗಿ ವಿಂಗಡಿಸಿದೆ. 'ಮ್ಯಾಂಗನೀಸ್, ಕಬ್ಬಿಣ, ಸುಣ್ಣದಕಲ್ಲು, ಜೇಡಿಮಣ್ಣು, ಇಲ್ಮನೈಟ್, ಗಾಜು, ಸಾಬೂನು, ಕಲ್ಲು, ಅಭ್ರಕ, ಬಾಕ್ಸೈಡ್ ಈ ಜಿಲ್ಲೆಯ ಖನಿಜಗಳು. ಜಿಲ್ಲೆಯಲ್ಲಿ ಅನೇಕ ಕಡೆ ಮ್ಯಾಂಗನೀಸ್ ದೊರೆಯುತ್ತದೆ. ಜೊಯಿಡಾ ತಾಲೂಕಿನ ಕೋಡ್ಲಿಗವಿಗಳು ಮ್ಯಾಂಗನೀಸ್‌ಗೆ ಪ್ರಸಿದ್ಧವಾಗಿದ್ದರೆ, ಹೊನ್ನಾವರ ತಾಲೂಕಿನ ಅಪ್ಸರ ಕೊಂಡದಲ್ಲು, ಕುಮಟಾ ತಾಲೂಕಿನ ಯಾಣದಲ್ಲೂ ಕಬ್ಬಿಣದ ಅದಿರಿನ ನಿಕ್ಷೇಪವಿದೆ. ಸಹ್ಯಾದ್ರಿ ಪಾದಭಾಗಗಳಲ್ಲಿ ಕಬ್ಬಿಣವಲ್ಲದೆ ಇತರ ಲೋಹನಿಕ್ಷೇಪಗಳುಂಟು. ಯಾಣ ಮತ್ತಿತರ ಕಡೆಗಳಲ್ಲಿ ಸುಣ್ಣದಕಲ್ಲು ದೊರೆಯುತ್ತದೆ. ಹಲವಡೆ ಸ್ವರ್ಣಮಷಿಕೆ, ಬಿಳಿಬೇಡಿ ಇವೆ. ಭತ್ತ, ತೆಂಗು, ಕಬ್ಬು, ಅಡಕೆ, ಮೆಣಸು, ಏಲಕ್ಕಿ, ಬಾಳೆ ಮುಖ್ಯವಾದ ಬೆಳೆಗಳು. ಇವಲ್ಲದೆ ಜಿಲ್ಲೆಯಲ್ಲಿ ಗೋಡಂಬಿ, ಮಾವು, ಹುಣಸೆ, ನಿಂಬೆ, ಅನಾನಸು, ಹಲಸು, ಪಪ್ಪಾಯಿ, ಬಟಾಟೆ, ಬದನೆ, ಕಲ್ಲಂಗಡಿ, ಹೈಬ್ರಿಡ್ ಜೋಳ, ರಾಗಿ, ಶೇಂಗಾ ಇತ್ಯಾದಿಗಳನ್ನು ಬೆಳೆಯಲಾಗುತ್ತದೆ. ಭತ್ತ ೮೫೯೨೪ ಹೆಕ್ಟೇರ್, ಏಲಕ್ಕಿ ೩೯೬ ಹೆಕ್ಟೇರ್, ಮೆಣಸು ೧೩೫ ಹೆಕ್ಟೇರ್, ಮಾವು ೧೧೪೦ ಹೆಕ್ಟೇರ್, ಬಾಳೆ ೧೩೨೦ ಹೆಕ್ಟೇರ್, ಅನಾನಸ್ ೩೧೫ ಹೆಕ್ಟೇರ್, ಹಲಸು ೨೦೬ ಹೆಕ್ಟೇರ್, ಪಪ್ಪಾಯಿ ೧೧೪೯ ಹೆಕ್ಟೇರ್, ಹತ್ತಿ ೧೪೮೨೩ ಹೆಕ್ಟೇರ್‌ನಲ್ಲಿ ಬೆಳೆಯುತ್ತಾರೆ. ಅಡಕೆಯ ತೋಟದಲ್ಲಿ ಏಲಕ್ಕಿ, ಕಾಳುಮೆಣಸು, ಬಾಳೆ ಬೆಳೆಯುತ್ತಾರೆ. ಗದ್ದೆಯಲ್ಲಿ ರಾಗಿ, ಕಡಲೆ, ತೊಗರಿ ಮೊದಲಾದ ಧಾನ್ಯಗಳನ್ನು ಬೆಳೆಯುತ್ತಾರೆ'.

ಮೀನುಗಾರಿಕೆ ಉತ್ತರ ಕನ್ನಡ ಜಿಲ್ಲೆಯ ಒಂದು ಮುಖ್ಯ ಉದ್ಯೋಗವಾಗಿದೆ. ಒಂದು ಕಾಲದಲ್ಲಿ ಹರಿಕಾಂತ, ತಾಂಡೇಲ, ಖಾರ್ವಿ, ಗಾವಿತ, ಅಂಬಿಗ, ಮೊಗೇರ, ಅಗೇರ, ಕ್ರಿಶ್ಚಿಯನ್ ದಾಲಜಿಗಳಷ್ಟೇ ಈ ವೃತ್ತಿಯನ್ನವಲಂಬಿಸಿದ್ದರೆ, ಇತ್ತೀಚೆಗೆ ಸಾಮಾನ್ಯವಾಗಿ ಎಲ್ಲ ಜಾತಿಯವರೂ ಮೀನು ಉದ್ಯಮದಲ್ಲಿ ತೊಡಗಿಕೊಂಡಿದ್ದಾರೆ. ಸುಮಾರು ೫೪,೭೬೩ ಜನ ಈ ವೃತ್ತಿಯಲ್ಲಿದ್ದಾರೆ. ಇವರು ಕರಾವಳಿ ಪ್ರದೇಶದ ೧೧೮ ಹಳ್ಳಿಗಳಲ್ಲಿದ್ದಾರೆ. ಸಮುದ್ರದಿಂದ ಮೀನು ಹಿಡಿಯುವ ಕೇಂದ್ರಗಳೆಂದರೆ ಅಗ್ರಾ, ಭಟ್ಕಳ, ಬಿಣಗಾ, ಚೆಂಡಿಯೆ, ಗಂಗಾವಳಿ, ಕಾರವಾರ, ಹೊನ್ನಾವರ, ಖಾರವಿ, ಕೇಣಿ, ಕೋಡಾರ, ಕುಮಟಾ, ಮಾಜಾಳಿ, ಮಂಕಿ, ಮುರ್ಡೇಶ್ವರ, ಶಿರಾಲಿ, ತದಡಿ. ಸಾಗರ ಮೀನುಗಾರಿಕೆಯಲ್ಲಿ ೩೦೯೪ ಟನ್ ಹಿಡಿದರೆ, ಸಿಹಿನೀರಿನಲ್ಲಿ ೨೪೯ ಟನ್ ಮೀನು ಹಿಡಿಯಲಾಗುತ್ತದೆ.

ಜಿಲ್ಲೆಯಲ್ಲಿ ೫೨ ಮಂಜುಗಡ್ಡೆ ತಯಾರಿಕಾ ಕಾರ್ಖಾನೆಗಳಿವೆ. ದಾಂಡೇಲಿಯಲ್ಲಿಯೂ ಕಾಗದದ ಕಾರ್ಖಾನೆ ದೊಡ್ಡ ಉದ್ದಿಮೆ. ಅಲ್ಲದೆ ಫ್ಲೈವುಡ್, ಫೆರೋಮ್ಯಾಂಗನೀಸ್ ಉದ್ದಿಮೆಗಳೂ ಇವೆ. ಕಾರವಾರ, ಬೆಲೆಕೇರಿ, ತದಡಿ, ಕುಮಟಾ, ಹೊನ್ನಾವರ, ಭಟ್ಕಳ ಇವು ಮುಖ್ಯ ಬಂದರುಗಳು. ಕಾರವಾರದಲ್ಲಿ ಸರ್ವಋತು ಬಂದರನ್ನು ಬೃಹತ್ತಾಗಿ ಕಟ್ಟಿದ್ದಾರೆ. ಬಳ್ಳಾರಿ ಪ್ರದೇಶದ ಕಬ್ಬಿಣದ ಅದಿರನ್ನು ಸಾಗಿಸುವುದು ಕಾರವಾರ ಬಂದರಿನಿಂದಲೆ. ಜಿಲ್ಲೆಯಲ್ಲಿ ೩೨೯ ಕಿ.ಮೀ.ಗಳ ರಾಷ್ಟ್ರೀಯ ಹೆದ್ದಾರಿ, ೬೭೨ ಕಿಮೀ.ಗಳ ರಾಜ್ಯ ಹೆದ್ದಾರಿ ಮಾರ್ಗಗಳಿವೆ. ಜಿಲ್ಲಾ ಮುಖ್ಯ ರಸ್ತೆಗಳು ೭೯೫ ಕಿ.ಮೀ., ೨೪ ಭಾರಿ ಸೇತುವೆಗಳಿವೆ. ಪಶ್ಚಿಮ ಕರಾವಳಿಯ ಹೆದ್ದಾರಿ ದಕ್ಷಿಣಕ್ಕೆ ಕನ್ಯಾಕುಮಾರಿಯವರೆಗೆ, ಉತ್ತರಕ್ಕೆ ಕಾಶ್ಮೀರದವರೆಗೆ ಸಂಪರ್ಕ ಕಲ್ಪಿಸುತ್ತದೆ.

**೨.೧.೬ ಅರಣ್ಯ**

ಕರ್ನಾಟಕದ ಒಟ್ಟು ಭೌಗೋಳಿಕ ವಿಸ್ತೀರ್ಣದಲ್ಲಿ (೧೯೦.೫ ಲಕ್ಷ ಹೆ.) ಶೇ. ೧೬ರಷ್ಟು ಮಾತ್ರ ಅರಣ್ಯಗಳಿಂದಾವೃತವಾಗಿದೆ. ಇದು ಭಾರತದ ಸರಾಸರಿಗಿಂತಲೂ (೨೨.೦೭%) ಕಡಿಮೆ. ರಾಷ್ಟ್ರೀಯ ಅರಣ್ಯ ನೀತಿಯಲ್ಲಿ ಗೊತ್ತುಪಡಿಸಿರುವಂತೆ ಒಟ್ಟು ಭೌಗೋಳಿಕ ವಿಸ್ತೀರ್ಣದಲ್ಲಿ ಶೇ. ೩೩.೩ ರಷ್ಟು ಅರಣ್ಯಗಳಿಂದ ಆವೃತ್ತವಾಗಿರಬೇಕೆಂದು ತಿಳಿಸಲಾಗಿದೆ.

ಕರ್ನಾಟಕದಲ್ಲಿ ೧೯,೦೪೬,೮೩೬ ಹೆಕ್ಟೇರು ಪ್ರದೇಶವು ಅರಣ್ಯಗಳಿಂದ ಕೂಡಿದೆ. ಜಿಲ್ಲಾವಾರು ಅರಣ್ಯದ ಹಂಚಿಕೆಯನ್ನು ಅವಲೋಕಿಸಿದಾಗ ಅದು ಒಂದೇ ರೀತಿಯಲ್ಲಿ ಇಲ್ಲವಾದ್ದರಿಂದ ಜಿಲ್ಲೆಯಿಂದ ಜಿಲ್ಲೆಗೆ ವ್ಯತ್ಯಾಸ ಕಂಡುಬರುವುದು. ಉತ್ತರ ಕನ್ನಡ ಜಿಲ್ಲೆಯ ಭೌಗೋಳಿಕ ವಿಸ್ತೀರ್ಣದಲ್ಲಿ ಶೇ. ೭೯.೪ ರಷ್ಟು ಅರಣ್ಯಗಳಿಂದಾವೃತವಾಗಿದೆ. ರಾಜ್ಯದ ಒಟ್ಟು ಅರಣ್ಯ ಕ್ಷೇತ್ರದಲ್ಲಿ ಶೇ. ೨೮ ರಷ್ಟನ್ನು ಹೊಂದಿದ್ದು ಪ್ರಥಮ ಸ್ಥಾನದಲ್ಲಿದೆ. ಜಿಲ್ಲೆಗಳ ಒಟ್ಟು ವಿಸ್ತೀರ್ಣಕ್ಕೆ ಪ್ರತಿಯಾಗಿ ಹೆಚ್ಚು ಅರಣ್ಯ ಕ್ಷೇತ್ರವನ್ನು ಹೊಂದಿರುವ ಜಿಲ್ಲೆ ಉತ್ತರ ಕನ್ನಡ. ಅರಣ್ಯ ಕ್ಷೇತ್ರವನ್ನು ಹೆಚ್ಚಿಗೆ ಹೊಂದಿರುವುದರಲ್ಲಿಯೂ ಉತ್ತರ ಕನ್ನಡ ಜಿಲ್ಲೆಯೇ (೮೧೩೪೯೫ಹೆ.) ಪ್ರಥಮ ಸ್ಥಾನದಲ್ಲಿದೆ. ಅಧಿಕ ಮಳೆ, ಬೆಟ್ಟ ಗುಡ್ಡಗಳ ಲಕ್ಷಣಗಳಿಂದಾಗಿ ಉತ್ತರ ಕನ್ನಡ ಜಿಲ್ಲೆಯಲ್ಲಿ ಅರಣ್ಯ ಪ್ರದೇಶವು ವ್ಯಾಪಕವಾಗಿ ಕಂಡು ಬರುತ್ತದೆ. ಇಂಥ ಅರಣ್ಯ ಪ್ರದೇಶಗಳು ಬುಡಕಟ್ಟುಗಳ ನಿಜವಾದ ತಾಣಗಳಾಗುತ್ತವೆ. ಅಲ್ಲಿನ ನಿಸರ್ಗ ಸಂಪತ್ತು ಮತ್ತು ನಾಗರಿಕ ಪ್ರಪಂಚದಿಂದ ದೂರವಿರಲು ಅವರು ಹೆಚ್ಚಾಗಿ ಇಲ್ಲಿ ನೆಲೆ ನಿಲ್ಲುತ್ತಾರೆ. ಅರಣ್ಯಗಳನ್ನು ನಾಲ್ಕು ಪ್ರಕಾರದ ವರ್ಗೀಕರಣಗಳನ್ನಾಗಿ ವಿಂಗಡಿಸಲಾಗಿದೆ.

**ಉದಾ:**

೧. ಕಾಯ್ದಿರಿಸಿದ ಅರಣ್ಯಗಳು (Reserved Forests)
೨. ಸಂರಕ್ಷಿತ ಅರಣ್ಯಗಳು (Protected Forests)
೩. ಗ್ರಾಮೀಣ ಅರಣ್ಯಗಳು (Rural Forests)
೪. ಖಾಸಗಿ ಅರಣ್ಯಗಳು (Private Forests)

ರಾಜ್ಯದ ಒಟ್ಟು ಅರಣ್ಯ ಕ್ಷೇತ್ರದಲ್ಲಿ ಶೇ. ೭೩ ಭಾಗ ಕಾಯ್ದಿರಿಸಿದ, ಶೇ. ೧೦.೩ ಭಾಗ ಸಂರಕ್ಷಿತ, ಶೇ. ೧೪.೫ ಭಾಗ ಗ್ರಾಮೀಣ ಹಾಗೂ ೦.೮ ಭಾಗ ಖಾಸಗಿ ಅರಣ್ಯಗಳಾಗಿ ಹಂಚಿಕೆಯಾಗಿದೆ. ಅರಣ್ಯ ವಸ್ತುಗಳು ಅಂದರೆ ಕರ್ನಾಟಕದ ಅರಣ್ಯ ಸಂಪತ್ತು ಭಾರತದಲ್ಲಿಯೇ ವೈವಿಧ್ಯಪೂರ್ಣವೂ ಮತ್ತು ಅಮೂಲ್ಯವಾದುದೂ ಆಗಿರುತ್ತದೆ.[೬]

**೨.೧.೭ ಉದ್ದಿಮೆಗಳು**

ಉತ್ತರ ಕನ್ನಡ ಜಿಲ್ಲೆಯಲ್ಲಿ ಎಂಜಿನೀಯರಿಂಗ್ ಉದ್ಯಮ ೧೪, ರಾಸಾಯನಿಕ ಕಾರ್ಖಾನೆಗಳು ೯, ಬಟ್ಟೆ ಕಾರ್ಖಾನೆ ೨, ಇತರೆ ಸಣ್ಣ ಪ್ರಮಾಣದ ಕಾರ್ಖಾನೆಗಳು ೬೨. ಈ ಕಾರ್ಖಾನೆಗಳಲ್ಲಿ ಉದ್ಯೋಗಿಗಳು ೧೮೪೬. ಜಿಲ್ಲೆಯಲ್ಲಿ ಕೆಲವು ಬೃಹತ್ ಮತ್ತು ಮಧ್ಯಮ ಗಾತ್ರದ ಉದ್ದಿಮೆಗಳಿವೆ. ವೆಸ್ಟಕೋಸ್ಟ್ ಪೇಪರ್ ಮಿಲ್ಸ್, ದಾಂಡೇಲಿಯ ಇಂಡಿಯನ್ ಪ್ಲೈವುಡ್ ಮ್ಯಾನುಫ್ಯಾಕ್ಚರಿಂಗ್ ಕಂಪನಿ, ಜೈಹಿಂದ್ ಸಾಮಿಲ್, ಬಳ್ಳಾಪುರ ಇಂಡಸ್ಟ್ರೀಸ್ ಲಿ., ಬಿಣಗಾದ ಬಿಲ್ಪ್ ಕಾರ್ಖಾನೆ, ದಾಂಡೇಲಿ ಫೆರೋ ಅಲಾಯ್ಸ್ ಪ್ರೈ. ಲಿ., ಇವು ಮುಖ್ಯ ಉದ್ದಿಮೆಗಳು. ಇವಲ್ಲದೆ ಸಣ್ಣ ಕೈಗಾರಿಕಾ ಘಟಕಗಳು ಖಾದಿ ಗ್ರಾಮೋದ್ಯೋಗ ಕರಕುಶಲ ಘಟಕಗಳು ಹಾಗೂ ಮೀನುಗಾರಿಕೆ ಘಟಕಗಳು, ರಾಸಾಯನಿಕ ಘಟಕಗಳು, ಚರ್ಮ ಮತ್ತು ರಬ್ಬರ್ ಘಟಕಗಳು, ನೂಲುವ-ನೇಯುವ ಘಟಕಗಳು, ಮುದ್ರಣ ಘಟಕಗಳು, ಜೇನುಸಾಕಾಣೆ, ಬೆತ್ತ ಬಿದಿರುಗಳಿಂದ ವಸ್ತುಗಳನ್ನು ತಯಾರಿಸುವ ಘಟಕಗಳು, ಎಣ್ಣೆ ತಯಾರಿಕಾ ಘಟಕಗಳು, ಕುಂಬಾರಿಕೆ ಮುಂತಾದ ಅನೇಕ ಉದ್ಯಮಗಳಿವೆ.

**ಉತ್ತರ ಕನ್ನಡ ಜಿಲ್ಲೆಯ ಅಂಕಿ-ಅಂಶಗಳು**

**ಕೋಷ್ಟಕ ೨.೧**

**ಶಿಕ್ಷಣ ೨೦೧೧ರ ಜನಗಣತಿಯಂತೆ**

| | |
|---|---|
| ಜಿಲ್ಲೆಯ ಸಾಕ್ಷರತಾ ಪ್ರಮಾಣ | ೮೪.೦೩ |
| ಪುರುಷರು | ೮೯.೭೨ |
| ಮಹಿಳೆಯರು | ೭೮.೨೧ |

**ಪಡಿತರ ಚೀಟಿದಾರರು (೩೧-೦೩-೨೦೧೦ ರಂತೆ)**

| | |
|---|---|
| ನ್ಯಾಯಬೆಲೆ ಅಂಗಡಿ | ೪೨೬ |
| ಅಂತ್ಯೋದಯ | ೧೬,೮೯೫ |
| ಅಕ್ಷಯ | ೨,೪೯,೨೬೦ |
| ಎ.ಪಿ.ಎಲ್. | ೧,೪೧,೧೮೪ |
| **ಒಟ್ಟು** | **೪,೦೭,೩೦೩** |

## ೨೦೦೯-೧೦ ರಂತೆ ಭೂಮಿಯ ಬಳಕೆ

| | |
|---|---|
| ಭೌಗೋಳಿಕ ವಿಸ್ತೀರ್ಣ | ೧೦,೨೪,೬೭೯ |
| ಅರಣ್ಯ | ೮,೧೩,೫೯೫ |

## ಸಾಗುವಳಿ ಲಭ್ಯವಿಲ್ಲದ ಭೂಮಿ

| | |
|---|---|
| ವ್ಯವಸಾಯೇತರ | ೩೪,೪೬೦ |
| ಬಂಜರು | ೧೬,೨೩೪ |
| **ಒಟ್ಟು** | **೫೦,೬೯೪** |

## ಕೋಷ್ಟಕ ೨.೨

## ಶೈಕ್ಷಣಿಕ ಮಟ್ಟ (೩೧-೦೩-೨೦೧೦ ರಂತೆ)

| ಕ್ರ ಸಂ. | ಶೈಕ್ಷಣಿಕ ಮಟ್ಟ | ಸಂಖ್ಯೆ | ಹುಡುಗರು | ಹುಡುಗಿಯರು | ಒಟ್ಟು ವಿದ್ಯಾರ್ಥಿಗಳು |
|---|---|---|---|---|---|
| ೧ | ಪ್ರಾಥಮಿಕ ಶಾಲೆಗಳು | ೨೩೨೮ | ೯೦೪೧೦ | ೮೬೩೬೭ | ೧೭೬೭೭೭ |
| ೨ | ಪ್ರೌಢಶಾಲೆಗಳು | ೩೧೧ | ೩೩೭೧೩ | ೩೨೫೦೩ | ೬೬೨೧೬ |
| ೩ | ಪದವಿಪೂರ್ವ | ೮೧ | ೧೦೪೫೦ | ೧೨೫೪೦ | ೨೨೯೯೦ |
| ೪ | ಪಾಲಿಟೆಕ್ನಿಕ್ | ೬ | ೨೮೨೬ | ೫೫೫ | ೩೩೮೧ |
| ೫ | ಪದವಿ ಕಾಲೇಜು | ೩೦ | ೪೩೧೨ | ೫೪೯೬ | ೯೮೦೮ |
| ೬ | ಇಂಜನೀಯರಿಂಗ್ | ೨ | ೧೫೭೮ | ೨೯೯ | ೧೮೭೭ |
| ೭ | ವೈದ್ಯಕೀಯ | ೧ | ೯೬ | ೮೩ | ೧೭೯ |
| ೮ | ಭಾರತೀಯ ವೈದ್ಯ ಪದ್ಧತಿ | ೧ | - | - | ೧೧೪ |
| ೯ | ದಂತ ಶಿಕ್ಷಣ | - | - | - | - |
| ೧೦ | ಕಾನೂನು | ೧ | - | - | - |
| ೧೧ | ಅಂಗನವಾಡಿ ಕೇಂದ್ರಗಳು | ೧೮೪೪ | - | - | - |

## ಕೋಷ್ಟಕ ೨.೩

### ಆರೋಗ್ಯ ಮತ್ತು ಕುಟುಂಬ ಕಲ್ಯಾಣ (೩೧-೩-೨೦೧೦ ರಂತೆ)

| | | |
|---|---|---|
| ೧ | ಅಲೋಪತಿ ಆಸ್ಪತ್ರೆಗಳು | ೧೩ |
| ೨ | ಭಾರತೀಯ ವೈದ್ಯ ಪದ್ಧತಿ ಆಸ್ಪತ್ರೆಗಳು | ೩ |
| ೩ | ಖಾಸಗಿ ಆಸ್ಪತ್ರೆಗಳು (ನರ್ಸಿಂಗ್ ಹೋಂಗಳು ಸೇರಿ) | ೧೩೧ |
| ೪ | ಪ್ರಾಥಮಿಕ ಆರೋಗ್ಯ ಕೇಂದ್ರಗಳು | ೮೩ |
| ೫ | ಸಮುದಾಯ ಆರೋಗ್ಯ ಕೇಂದ್ರಗಳು | ೭ |

## ಕೋಷ್ಟಕ ೨.೪

### ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ವಿದ್ಯಾರ್ಥಿ ನಿಲಯಗಳು (೩೧-೩-೨೦೧೦ ರಂತೆ)

| ಕ್ರ. ಸಂ. | | ಪ.ಜಾ. ವಿದ್ಯಾರ್ಥಿ ನಿಲಯಗಳು | ವಿದ್ಯಾರ್ಥಿ |
|---|---|---|---|
| ೧ | ಮೆಟ್ರಿಕ್ ಪೂರ್ವ ಸಂಖ್ಯೆ | ೨೮ | ೧೫೧೩ |
| ೨ | ಮೆಟ್ರಿಕ್ ನಂತರ ಸಂಖ್ಯೆ | ೩ | ೩೦೦ |

| ಕ್ರ. ಸಂ. | | ಪ.ಪಂ. ವಿದ್ಯಾರ್ಥಿ ನಿಲಯಗಳು | ವಿದ್ಯಾರ್ಥಿ |
|---|---|---|---|
| ೧ | ಮೆಟ್ರಿಕ್ ಪೂರ್ವ ಸಂಖ್ಯೆ | ೧ | ೬೫ |
| ೨ | ಮೆಟ್ರಿಕ್ ನಂತರ ಸಂಖ್ಯೆ | ೦ | ೦ |

## ಕೋಷ್ಟಕ ೨.೫

### ಹಿಂದುಳಿದ ವರ್ಗದವರ ವಿದ್ಯಾರ್ಥಿ ನಿಲಯಗಳು (೩೧-೩-೨೦೧೦ ರಂತೆ)

| ಕ್ರ. ಸಂ. | | ಪ.ಜಾ. ವಿದ್ಯಾರ್ಥಿ ನಿಲಯಗಳು | ವಿದ್ಯಾರ್ಥಿ |
|---|---|---|---|
| ೧ | ಮೆಟ್ರಿಕ್ ಪೂರ್ವ ಸಂಖ್ಯೆ | ೬೨ | ೩೦೨೫ |
| ೨ | ಮೆಟ್ರಿಕ್ ನಂತರ ಸಂಖ್ಯೆ | ೧೪ | ೭೦೨ |

ಹಾಗೂ ಪಂಚಮ) ಧನಗರ್ ಜಾತಿ ಸಮೂಹವು ನಾಲ್ಕನೆಯದಾದ ಶೂದ್ರ ವರ್ಗಕ್ಕೆ ಸೇರಿದೆ(ಜಿ.ಎಸ್. ಗುರ್ರೈ). ಧನಗರ್ (ಧನ-ಪಶುಸಂಪತ್ತು) ಎಂದರೆ ಪಶು ಸಾಕಾಣಿಕೆ ಮಾಡುವ ಒಂದು ಸಮೂಹ. ಇವರು ದನ ಸಾಕಾಣಿಕೆ, ಕುರಿ ಸಾಕಾಣಿಕೆ, ಹತ್ತಿ, ಉಣ್ಣೆ, ನೇಕಾರಿಕೆ ಹಾಗೂ ಮಾಂಸ ಮಾರುವ ಉದ್ಯೋಗಗಳಲ್ಲಿದ್ದರು.

ಒಟ್ಟು ೨೩ ಧನಗರ್ ಜಾತಿಗಳಿವೆ. ಅವುಗಳಲ್ಲಿ ಆಹಿರ್, ಗಡ್ಡಾರಿ-ನಿಖಾರ, ಹಾಲುಮತ, ಖಟೀಕರ್, ಕುರುಮರ-ಉಣ್ಣಿಕಂಕಣ, ಮೇಂಢೆ, ಶೇಗಾರ, ತೆಲಂಗಿ, ಉಣ್ಣಿಕಂಕಣ ಹಾಗೂ ಝಡೆ ಈ ೧೦ ಜಾತಿಗಳು ಕುರಿಕಾಯುವ ಹಾಗೂ ಉಣ್ಣೆ ನೇಯುವ ಉದ್ಯೋಗ ಮಾಡುತ್ತಿದ್ದರು. ಲಾಡಸೆ ಹಾಗೂ ವರ್ಹಾಡೆಗಳು ಕುರಿ ಸಾಕಿದರೂ ಕೂಡ ಕೇವಲ ನೂಲಿನ ಜಮಖಾನೆಗಳನ್ನು, ಸಂಗಾರರು ಉಣ್ಣಿ ನೇಯುವದು, ಖಟಿಕ್‌ರು ಕುರಿ, ಆಡಿನ ಮಾಂಸವನ್ನು ಮಾರುತ್ತಾರೆ. ಢೆಲ್ಲಾರಿಗಳು ಕುರಿ ಹಾಗೂ ಆಡುಗಳನ್ನು ದನಗಳನ್ನು ಕಾಯುತ್ತಿದ್ದರು. ಗೌಳಿಗರು (ಇವರನ್ನು ಮ್ಹಾಸ್ಕೆ, ಡಾಂಗೆ ಎಂದೂ ಕರೆಯುತ್ತಾರೆ) ಎಮ್ಮೆ ಸಾಕುತ್ತಿದ್ದರು. ಇತರ ೭ ಜಾತಿಗಳು, ಗಡ್ಡಾರಿ, ಧನಗಾರ, ಹಂಡೆ, ಹಟಕರ್ (ಸಾಂಗಲಿ ಜಿಲ್ಲೆಯಲ್ಲಿ ಹಟಕಾರಿಗಳು ದನಕರುಗಳನ್ನು ಹೊಂದಿರುತ್ತಾರೆ) ಹತ್ತಿಕಂಕಣ್, ಕನ್ನಡೆ, ಕುರ್ಮರ್ ಆಗಿವೆ. ಇವರಲ್ಲಿ ಹತ್ತಿಕಂಕಣ್ ಹಾಗೂ ಝುಂಡೆಗಳು ಕೇವಲ ಕುರಿ ಸಾಕಾಣೆ ಮಾಡುತ್ತಾರೆ. ಧನಗರ್‌ಗಳು ಸಾಕುವ ಐದು ಮುಖ್ಯ ಪ್ರಾಣಿಗಳು ಕೆಳಗಿನಂತಿವೆ.[೨೩]

೧] ನೀರೆಮ್ಮೆ (Bubalus Babalis): ಇದು ಏಶಿಯಾದ ಕಾಡೆಮ್ಮೆ (Bubalus Babalis) ಪ್ರಜಾತಿಗೆ ಸೇರಿದ್ದು. ಇವು ಸಂಯುಕ್ತ ಸಂತಾನೋತ್ಪತ್ತಿ ಮಾಡುವಷ್ಟು ಸಮೀಪ-ವರ್ತಿಗಳಾಗಿವೆ.

೨] ಚಿಕ್ಕ ಎಮ್ಮೆ ಮತ್ತು ಆಕಳು (Bos Indicus Cattle): ಇದು ಕೆಸರು ಪ್ರದೇಶದಲ್ಲಿ ಬದುಕಲಾರದು, ದಕ್ಷಿಣದ ಬಯಲಿನಲ್ಲಿ ಬದುಕುವದು.

೩] ಕುರಿ

೪] ಕುದುರೆ ಹಾಗೂ

೫] ಆಡು

ಕೆ.ಸಿ. ಮಲ್ಹೋತ್ರಾ ಮತ್ತು ಮಾಧವ ಗಾಡ್ಗೀಳರು ತಮ್ಮ ಪ್ರೊಜೆಕ್ಟ್ ವರ್ಕ ವೇಳೆ ಸ್ಥಳೀಯ ಧನಗರ ಸಮಾಜದ ಹಿರಿಯ ಮುಖಂಡರು ಮಾಹಿತಿ ಕೊಟ್ಟ ಆಧಾರದ ಮೇಲೆ ತಯಾರಿಸಿದ ಮಹಾರಾಷ್ಟ್ರದಲ್ಲಿಯ ಧನಗರ ಸಮುದಾಯದ ೨೩ ಜಾತಿಗಳ ಅಂದಾಜು ಜನಸಂಖ್ಯೆ, ಭಾಷೆ, ಅವರ ನೆಲೆಸಿದ ಜಿಲ್ಲೆಗಳು ಮತ್ತು ಅವರ ಸಾಂಪ್ರದಾಯಿಕ ಮೂಲ ವೃತ್ತಿಗಳ ವಿವರಗಳನ್ನು ಮುಂದಿನ ಪುಟದಲ್ಲಿಯ ಕೋಷ್ಟಕ ೨.೮ರಲ್ಲಿ ನೀಡಲಾಗಿದೆ.

## ಕೋಷ್ಟಕ ೨.೮

### ಮಹಾರಾಷ್ಟ್ರದಲ್ಲಿಯ ಧನಗರ ಸಮುದಾಯದ ಜನಸಂಖ್ಯೆ, ಭಾಷೆ, ಸಂಪ್ರದಾಯಿಕ ವೃತ್ತಿ ಹಾಗೂ ಅವರ ೨೩ ಜಾತಿಗಳು ಹರಡಿರುವ ಜಿಲ್ಲೆಗಳು[೨೪]

| ಧನಗರ ಜಾತಿಗಳು | ಅಂದಾಜು ಜನಸಂಖ್ಯೆ | ಮಾತೃ ಭಾಷೆ | ನೆಲೆಸಿರುವ ಜಿಲ್ಲೆಗಳು | ಸಾಂಪ್ರದಾಯಿಕ ವೃತ್ತಿ |
|---|---|---|---|---|
| ಅಹಿರ್ | ೩,೦೦,೦೦೦ | ಮರಾಠಿ | ಅ.ನಗರ, ಅಕೋಲಾ, ಅಮರಾವತಿ, ಔರಂಗಾಬಾದ, ಬುಲ್ಡಾನಾ, ಧುಲಿಯಾ, ಜಳಗಾಂವ, ನಾಸಿಕ | ಕುರಿ ಸಾಕಾಣಿಕೆ, ಉಣ್ಣೆ ನೇಕಾರಿಕೆ |
| ಡಾಂಗೆ | ೧,೦೦,೦೦೦ | ಮರಾಠಿ | ಕೊಲಾಬಾ, ಕೊಲ್ಹಾಪೂರ, ಪುಣೆ, ರತ್ನಗಿರಿ, ಸಾಂಗ್ಲಿ, ಸಾತಾರಾ | ಎಮ್ಮೆ ಸಾಕಾಣಿಕೆ |
| ಗಧಾರಿ-ಧನಗರ | ೨೦,೦೦೦ | ಹಿಂದಿ | ಅಕೋಲಾ, ಅಮರಾವತಿ, ಔರಂಗಾಬಾದ, ಧುಲಿಯಾ, ಜಳಗಾಂವ | ಕುರಿ ಸಾಕಾಣಿಕೆ |
| ಗಧಾರಿ-ನಿಖಾರ | ೫,೦೦೦ | ಹಿಂದಿ | ಅಕೋಲಾ, ಅಮರಾವತಿ, ಔರಂಗಾಬಾದ, ಧುಲಿಯಾ, ಜಳಗಾಂವ | ಕುರಿ ಸಾಕಾಣಿಕೆ, ಉಣ್ಣೆ ನೇಕಾರಿಕೆ |
| ಹಾಲಮತ | ೮,೦೦೦ | ಕನ್ನಡ | ಕೊಲ್ಹಾಪೂರ, ಸಾಂಗ್ಲಿ | ಕುರಿ ಸಾಕಾಣಿಕೆ, ಉಣ್ಣೆ ನೇಕಾರಿಕೆ |
| ಹಂಡೆ | ೪,೦೦೦ | ಕನ್ನಡ | ಸಾಂಗ್ಲಿ, ಸೊಲ್ಲಾಪೂರ | ಕುರಿ ಸಾಕಾಣಿಕೆ |
| ಹಟ್ಕರ | ೫,೭೩,೦೦೦ | ಮರಾಠಿ | ಅ.ನಗರ, ಅಕೋಲಾ, ಅಮರಾವತಿ, ಔರಂಗಾಬಾದ, ಬುಲ್ಡಾನಾ, ಧುಲಿಯಾ, ಜಳಗಾಂವ, ನಾಸಿಕ ಭೀರ, ಕೊಲ್ಹಾಪೂರ, ನಾಂದೇಡ, ಉಸ್ಮಾನಾಬಾದ, ಪರ್ಬಾಣಿ, ಪುಣೆ, ಸಾಂಗ್ಲಿ, ಸಾತಾರಾ, ಸೊಲ್ಲಾಪೂರ, ವರ್ಧಾ, ಯವತ್ಮಾಳ | ಕುರಿ ಸಾಕಾಣಿಕೆ |
| ಹತ್ತಿಕಂಕಣ | ೫,೦೦೦ | ಮರಾಠಿ | ಭೀರ, ನಾಂದೇಡ, ಉಸ್ಮಾನಾಬಾದ, ಸೊಲ್ಲಾಪೂರ | ಕುರಿ ಸಾಕಾಣಿಕೆ |
| ಕನ್ನಡೆ | ೧೫,೦೦೦ | ಮರಾಠಿ | ಭಂಡಾರಾ, ಚಂದ, ನಾಗಪೂರ, ವರ್ಧಾ | ಕುರಿ ಸಾಕಾಣಿಕೆ |
| ಖಟಿಕ | ೧೫,೦೦೦ | ಮರಾಠಿ | ಅ.ನಗರ, ಔರಂಗಬಾದ, ಭೀರ, ಮುಂಬೈ, ಕೊಲಾಬಾ, ನಾಸಿಕ, ಪುಣೆ, ಸಾತಾರಾ, ಸೊಲ್ಲಾಪೂರ, ಠಾಣಾ | ಖಸಾಯಿ ವೃತ್ತಿ (ಮಾಂಸ ಮಾರಾಟ) |
| ಖುಟೇಕರ | ೫,೫೦,೦೦೦ | ಮರಾಠಿ | ಅ.ನಗರ, ಅಕೋಲಾ, ಅಮರಾವತಿ, ಔರಂಗಬಾದ, ಭೀರ, ಬುಲ್ಡಾನಾ, ಜಳಗಾಂವ, ಕೊಲಾಬಾ, ನಾಗಪೂರ, ನಾಂದೇಡ, ನಾಸಿಕ, ಉಸ್ಮಾನಾಬಾದ, ಪರ್ಬಾಣಿ, ಪುಣೆ, ರತ್ನಗಿರಿ, ಸಾತಾರಾ, ಸೊಲ್ಲಾಪೂರ, ವರ್ಧಾ, ಯವತ್ಮಾಳ | ಕುರಿ ಸಾಕಾಣಿಕೆ, ಉಣ್ಣೆ ನೇಕಾರಿಕೆ |
| ಕುರಮರ-ಹತ್ತಿಕಂಕಣ | ೧೫,೦೦೦ | ಕನ್ನಡ | ಭಂಡಾರಾ, ಚಂದ | ಕುರಿ ಸಾಕಾಣಿಕೆ |
| ಕುರುಮರ-ಉಣ್ಣಿಕಂಕಣ | ೫,೦೦೦ | ಕನ್ನಡ | ಭಂಡಾರಾ, ಚಂದ | ಕುರಿ ಸಾಕಾಣಿಕೆ, ಉಣ್ಣೆ ನೇಕಾರಿಕೆ |
| ಲಾಡಸೆ | ೬,೦೦೦ | ಮರಾಠಿ | ಅಮರಾವತಿ, ಭಂಡಾರಾ | ಕುರಿ ಸಾಕಾಣಿಕೆ, ಬಟ್ಟೆ ನೇಕಾರಿಕೆ |
| ಮೆಂಡೆ | ೩೦,೦೦೦ | ಮರಾಠಿ | ಕೊಲ್ಹಾಪೂರ, ಪುಣೆ, ಸಾಂಗ್ಲಿ, ಸಾತಾರಾ, ಸೊಲ್ಲಾಪೂರ | ಕುರಿ ಸಾಕಾಣಿಕೆ, ಉಣ್ಣೆ ನೇಕಾರಿಕೆ |
| ಸಂಗಾರ | ೧೦,೦೦೦ | ಮರಾಠಿ | ಅ.ನಗರ, ಭೀರ, ಕೊಲ್ಹಾಪೂರ, ಪುಣೆ, ರತ್ನಗಿರಿ, ಸಾಂಗ್ಲಿ, ಸಾತಾರಾ, ಸೊಲ್ಲಾಪೂರ | ಉಣ್ಣೆ ನೇಕಾರಿಕೆ |
| ಶೆಗಾರ | ೪೦,೦೦೦ | ಮರಾಠಿ | ಅ.ನಗರ, ಔರಂಗಬಾದ, ಭೀರ, ಉಸ್ಮಾನಾಬಾದ, ಪುಣೆ, ಸೊಲ್ಲಾಪೂರ | ಕುರಿ ಸಾಕಾಣಿಕೆ, ಉಣ್ಣೆ ನೇಕಾರಿಕೆ |
| ತೆಲಂಗಿ | ೫,೦೦೦ | ತೆಲುಗು | ನಾಂದೇಡ | ಕುರಿ ಸಾಕಾಣಿಕೆ, ಉಣ್ಣೆ ನೇಕಾರಿಕೆ |
| ತೆಲ್ಲಾರಿ | ೭,೦೦೦ | ಮರಾಠಿ | ಧುಲಿಯಾ, ಜಳಗಾಂವ, ನಾಸಿಕ | ಕುರಿ ಸಾಕಾಣಿಕೆ, ಪಶು ಸಾಕಾಣಿಕೆ |
| ಉಣ್ಣಿ-ಕಂಕಣ | ೬,೦೦೦ | ಮರಾಠಿ | ಉಸ್ಮಾನಾಬಾದ, ಸೊಲ್ಲಾಪೂರ | ಕುರಿ ಸಾಕಾಣಿಕೆ, ಉಣ್ಣೆ ನೇಕಾರಿಕೆ |
| ವರ್ಹಾಡೆ | ೧,೫೦,೦೦೦ | ಮರಾಠಿ | ಅಕೋಲಾ, ಅಮರಾವತಿ, ಭಂಡಾರಾ, ಚಂದ, ನಾಗಪೂರ, ವರ್ಧಾ, ಯವತ್ಮಾಳ | ಕುರಿ ಸಾಕಾಣಿಕೆ, ಬಟ್ಟೆ ನೇಕಾರಿಕೆ |
| ಝುಡೆ | ೧೫,೦೦೦ | ಮರಾಠಿ | ಚಂದ, ನಾಗಪೂರ, ವರ್ಧಾ, ಯವತ್ಮಾಳ | ಕುರಿ ಸಾಕಾಣಿಕೆ, ಉಣ್ಣೆ ನೇಕಾರಿಕೆ |
| ಝುಂಡೆ | ೮೦,೦೦೦ | ಮರಾಠಿ | ಕೊಲ್ಹಾಪೂರ, ಸೊಲ್ಲಾಪೂರ | ಕುರಿ ಹಾಗೂ ಕುದುರೆ ಸಾಕಾಣಿಕೆ |
| | ೧೯,೬೪,೦೦೦ | | | |

**ಸೂಚನೆ:** ೧) ಸ್ಥಳೀಯ ಸಮಾಜದ ಹಿರಿಯ ಮುಖಂಡರು ಮಾಹಿತಿ ಕೊಟ್ಟ ಆಧಾರದ ಮೇಲೆ ಈ ಅಂದಾಜು ಜನಸಂಖ್ಯೆ ಪಟ್ಟಿ ಮಾಡಲಾಗಿದೆ.

೨) ಸಾಂಗ್ಲಿ ಜಿಲ್ಲೆಯ ಹಟ್ಕರ ಜಾತಿಗೆ ಸೇರಿದ ಕೆಲವರು ಸ್ಥಳೀಯವಾಗಿ ಖೆಲಾರಿ ಎಂದು ಗುರುತಿಸಲ್ಪಡುವರು ಮತ್ತು ಅವರು ಸಾಂಪ್ರದಾಯಕವಾಗಿ ಕುರಿಗಳ ಜೊತೆಗೆ ಪಶುಗಳನ್ನೂ ಸಾಕುವರು.

## ೨.೩. ಪ್ರಸರಣ

### ೨.೩.೧ ವಲಸೆ

ಮೂಲತಃ ಕರ್ನಾಟಕದವರಲ್ಲದ ಗೌಳಿಗರು ಶತಮಾನದಿಂದೀಚೆಗೆ ಪಕ್ಕದ ಮಹಾರಾಷ್ಟ್ರ ಹಾಗೂ ಗೋವಾ ರಾಜ್ಯಗಳಿಂದ ಕರ್ನಾಟಕಕ್ಕೆ ವಲಸೆ ಬಂದಿರುವದು ಖಚಿತವಿದೆ. ಯಾಕೆಂದರೆ ಸಂದರ್ಶನದಲ್ಲಿ ನಾವು ಮೂರು ನಾಲ್ಕು ತಲೆಮಾರುಗಳಿಂದ ಕರ್ನಾಟಕದಲ್ಲಿದ್ದೇವೆ ಎಂದು ಇವರು ಖಚಿತವಾಗಿ ಹೇಳಿದ್ದಾರೆ. ತಮ್ಮ ಮೂಲದ ಕುರಿತು ಈಗಲೂ ಹೇಳುವರಲ್ಲದೇ, ತಮ್ಮ ಮೂಲ ನೆಲೆಯೊಂದಿಗೆ ಇಂದಿಗೂ ಸಂಬಂಧ ಉಳಿಸಿಕೊಂಡಿದ್ದಾರೆ. ಖಂಡೋಬಾ, ವಿಠೋಬಾ, ರುಕ್ಮಾಯಿ ಇತ್ಯಾದಿ ಮಹಾರಾಷ್ಟ್ರದ ಪ್ರಸಿದ್ಧ ದೈವಗಳ ಆರಾಧನೆ ಮಾಡುವ ಇವರು, ವಿವಾಹ ಹಬ್ಬ ಹರಿದಿನ ಇತ್ಯಾದಿ ಕಾರ್ಯಕ್ರಮಗಳಲ್ಲಿ ಒಟ್ಟುಗೂಡಿ ಆಚರಣೆ ಮಾಡುವುದು ಅವರ ಏಕತೆಯ ಸಂಕೇತವಾಗಿದೆ.[೨೫]

ಮೂಲತಃ ಎಮ್ಮೆ ಸಾಕಣೆ ಮಾಡುವ ಜಾತಿಯವರಾಗಿದ್ದು, ಇವರು ಅಕ್ಷಾಂಶ ೧೯$^{0}$N–೧೩$^{0}$ ೩೦'N ಪಶ್ಚಿಮ ಘಟ್ಟ ಪ್ರದೇಶದಲ್ಲಿರುವ ೧೧ ಜಿಲ್ಲೆಗಳ ೪೭ ತಾಲೂಕುಗಳಲ್ಲಿ ಹಂಚಿ ಹೋಗಿದ್ದಾರೆ. ಈ ಪ್ರದೇಶವು ಕರ್ನಾಟಕ, ಮಹಾರಾಷ್ಟ್ರ ಹಾಗೂ ಗೋವಾ ರಾಜ್ಯಗಳಿಗೆ ಸೇರಿದೆ. ಇಂದು ಈ ಪ್ರದೇಶ ಸಂಪೂರ್ಣವಾಗಿ ಮಲೇರಿಯಾದಿಂದ ಮುಕ್ತವಾಗಿದೆ. ೧೯೪೯ ರವರೆಗೆ ಕರ್ನಾಟಕದ ಪಶ್ಚಿಮ ಘಟ್ಟದ ಪ್ರದೇಶಗಳು ತೀವ್ರ ಮಲೇರಿಯಾ ಪೀಡಿತವಾಗಿದ್ದರೂ, ಅದೇ ಅವಧಿಯಲ್ಲಿ ಗೌಳಿಗರು ಮಹಾರಾಷ್ಟ್ರದಿಂದ ಕರ್ನಾಟಕಕ್ಕೆ ವಲಸೆ ಬಂದದ್ದು ಗಮನಾರ್ಹ ಸಂಗತಿ. ೧೯೪೯ ರಲ್ಲಿ ಮಲೇರಿಯಾ ನಿರ್ಮೂಲನ ಕಾರ್ಯಕ್ರಮ ಆರಂಭಗೊಂಡಿತ್ತು. ಗೌಳಿಗರಲ್ಲಿ ಮಲೇರಿಯಾ ರೋಗದ ವಿರುದ್ಧ ವಂಶ ಪಾರಂಗತ ರೋಗ ನಿರೋಧಕ ಶಕ್ತಿ ಇಲ್ಲ. ಈ ರೋಗದ ನಿಯಂತ್ರಣವು ಗೌಳಿಗರ ವಲಸೆಯಲ್ಲಿ ಒಂದು ಮಹತ್ವದ ಪಾತ್ರ ವಹಿಸಿದ್ದು ಸ್ಪಷ್ಟವಾಗಿದೆ. ಮಹಾರಾಷ್ಟ್ರದಲ್ಲಿ ಗೌಳಿಗರು ೨೦೦೦-೬೦೦೦ ಮಿ.ಮೀ. ಮಳೆ ಬೀಳುವ ಪ್ರದೇಶಕ್ಕೆ ಸೀಮಿತವಾಗಿದ್ದಾರೆ. ಆದರೆ ಕರ್ನಾಟಕದಲ್ಲಿ ಅವರು ವಾಸಿಸುವ ಪ್ರದೇಶದಲ್ಲಿ ಕೇವಲ ೮೦೦-೨೫೦೦ ಮಿ.ಮೀ. ಮಳೆ ಬೀಳುವುದು. ಇದು ಎಮ್ಮೆಗಳಿಗೆ ಉತ್ತಮ ವಾತಾವರಣವನ್ನು ಒದಗಿಸುವುದು. ಈ ಅರಣ್ಯ ಪ್ರದೇಶದಲ್ಲಿ ಉತ್ತಮ ಹುಲ್ಲು ಹಾಗೂ ಬಿದಿರು ಬೆಳೆಯುತ್ತಾರೆ. ಕರ್ನಾಟಕದ ಗೌಳಿಗರಲ್ಲಿ ಹೆಚ್ಚಿನ ಜನಸಂಖ್ಯೆ ಇದೇ ಪ್ರದೇಶದಲ್ಲಿ ವಾಸವಾಗಿದೆ. ಯಾವುದೇ ಪ್ರದೇಶವು ಒಂದು ಪ್ರಾಣಿಯ ಬದುಕಿಗೆ ಅನುಕೂಲವಾಗಿರುವುದು, ಅಲ್ಲಿ ಬೆಳೆಯುವ ಸಸ್ಯ ಸಂಪತ್ತಿಗೆ ಸಂಬಂಧಿಸಿದ ಒಂದು ಸಂಕೀರ್ಣ ಪ್ರಕ್ರಿಯೆ ಎಂಬುದು ಒಂದು ನೈಸರ್ಗಿಕ ಸತ್ಯವಾಗಿದೆ. ಎಮ್ಮೆ ದನಕರುಗಳಿಗೆ ಅರೆಶಾಶ್ವತ ಹಸಿರು ಬಯಲು ಅತ್ಯಂತ ಅನುಕೂಲವಾಗಿದೆ. ಕರ್ನಾಟಕದ ಪಶ್ಚಿಮ ಘಟ್ಟದ ಈ ಪ್ರದೇಶವು ವಲಸೆ ಬಂದಿರುವ ಗೌಳಿಗರಿಗೆ ಇಲ್ಲಿಯ ಹಸಿರು ಹುಲ್ಲು, ನೀರು ಹಾಗೂ ಹವಾಮಾನ ಅವರ ದನಕರುಗಳಿಗೆ ಅತ್ಯಂತ ಅನುಕೂಲಕರವಾಗಿದೆ. ಅವರು ವಲಸೆ ಬರಲು ಅವರ ಮೂಲಸ್ಥಾನದಲ್ಲಿ ಹುಲ್ಲಿನ ಅಭಾವವೇ ಪ್ರಮುಖ ಕಾರಣ ಎನ್ನಬಹುದಾಗಿದೆ.[೨೬]

ಅರೆ ಅಲೆಮಾರಿಗಳಾದ ಗೌಳಿಗರು ಉತ್ತರ ಕನ್ನಡ ಪ್ರದೇಶಕ್ಕೆ ಏಕೆ, ಎಲ್ಲಿಂದ ವಲಸೆ ಬಂದರು ಎಂಬ ಪ್ರಶ್ನೆಗಳಿಗೆ ಸ್ಪಷ್ಟ ಲಿಖಿತ ಆಧಾರಗಳಿಲ್ಲದಿದ್ದರೂ ಇವರು ಅವಲಂಬಿಸಿರುವ ವೃತ್ತಿ ಮತ್ತು ಹವ್ಯಾಸಗಳಿಂದ ಇವರು ಇಲ್ಲಿಗೆ ವಲಸೆ ಬಂದ ಕಾರಣವನ್ನು ಊಹಿಸಬಹುದು. ಗೌಳಿಗರ ಈ

ವಲಸೆಗೆ ಕಾರಣವಾದ ಅಂಶಗಳು ಸ್ವಾಭಾವಿಕವಾದವುಗಳು. ಇವರು ಮಹಾರಾಷ್ಟ್ರ ರಾಜ್ಯದ ಕೊಲ್ಲಾಪುರ, ರತ್ನಗಿರಿ ಜಿಲ್ಲೆಯಿಂದ ಎಮ್ಮೆಗಳೊಡನೆ ವಲಸೆ ಬಂದವರೆಂದು ವಕ್ತೃಗಳಿಂದಲೇ ಸ್ಪಷ್ಟಗೊಂಡ ಸಂಗತಿಯಾಗಿದೆ. ಸುಮಾರು ೧೦ ದಶಕಗಳ ಹಿಂದೆ ತಮ್ಮ ಮೂಲ ನೆಲೆಯಲ್ಲಿ ಕಾಡೆಲ್ಲ ಬಟಾಬಯಲಾಗಿ ತಮ್ಮ ಜಾನುವಾರುಗಳಿಗೆ ಮೇವಿಲ್ಲದಾಯಿತು. ಮಳೆಯಾಗದೇ ಬರಗಾಲದಿಂದ ಬೆಳೆಯೂ ಇಲ್ಲವಾಯಿತು. ಇಂತಹ ಒಂದು ಅನಾವೃಷ್ಟಿಯ ಸನ್ನಿವೇಶದಲ್ಲಿ ಬೇರೆ ಸಮಾಜ, ಸಮುದಾಯಗಳ ಕಿರುಕುಳವೂ ತೀವ್ರವಾಯಿತು. ಬೇಡರು ಗೌಳಿಗರ ದನಕರು, ಕುರಿಗಳನ್ನು ಕದಿಯಲಾರಂಭಿಸಿದರು. ಅಲ್ಲದೇ ಮಹಮ್ಮದಿಯರು ಇವರ ಸುಂದರ ಹೆಣ್ಣುಮಕ್ಕಳನ್ನು ಅಪಹರಿಸಲಾರಂಭಿಸಿದರು. ಇಂತಹ ಶೋಚನೀಯ ಪರಿಸ್ಥಿತಿಯಲ್ಲಿ ಜೀವನ ನಡೆಸುವುದು ದುರ್ಭರವಾದಾಗ ಹುಟ್ಟೂರನ್ನು ತ್ಯಜಿಸಲೇಬೇಕಾದ ಅನಿವಾರ್ಯತೆಯುಂಟಾಯಿತು. ಈ ಎಲ್ಲ ಕಾರಣಗಳಿಂದ ತಮ್ಮನ್ನು, ತಮ್ಮ ಜಾನುವಾರುಗಳನ್ನು ಸಂರಕ್ಷಿಸಿಕೊಳ್ಳಲು ಹಲವು ಗೌಳಿಗರು ಮೂಲ ನೆಲೆಗಳನ್ನು ತೊರೆದು ಹರಿದ್ವರ್ಣದ ಕಾಡನ್ನು ಅರಸಿಕೊಂಡು ಉತ್ತರ ಕನ್ನಡ ಜಿಲ್ಲೆಯ ಅರಣ್ಯ ಪ್ರದೇಶಕ್ಕೆ ಬಂದರು ಎಂದು ತಿಳಿಯುತ್ತದೆ. ತಮ್ಮ ಮೂಲ ಕಸುಬನ್ನು ಮುಂದುವರೆಸಿಕೊಂಡು ಹೋಗುವ ತೀವ್ರ ಇಚ್ಛೆಯಿಂದ ಮೇವು, ನೀರು ದೊರಕುವ ನೆಲೆ ಹುಡುಕುತ್ತಾ ಉತ್ತರ ಕನ್ನಡ ಜಿಲ್ಲೆಯ ಅರಣ್ಯ ಪ್ರದೇಶಕ್ಕೆ ತಂಡೋಪತಂಡವಾಗಿ ವಲಸೆ ಬಂದು ನೆಲೆಸಿದರು. ಮಹಾರಾಷ್ಟ್ರದಿಂದ ಇಡೀ ಗೌಳಿ ಸಮುದಾಯ ಕರ್ನಾಟಕಕ್ಕೆ ವಲಸೆ ಬರಲಿಲ್ಲ. ಮಹಾರಾಷ್ಟ್ರದಲ್ಲಿ ಅತೀ ಹೆಚ್ಚು ತೊಂದರೆಗಳೊಳಗಾದ ಗೌಳಿ ಕುಟುಂಬಗಳು ಮಾತ್ರ ಕರ್ನಾಟಕಕ್ಕೆ ವಲಸೆ ಬಂದವು. ಮಹಾರಾಷ್ಟ್ರದ ರತ್ನಗಿರಿ, ಅಜರಾ, ಕೊಲ್ಲಾಪುರದ ಸುತ್ತಮುತ್ತಲಿನ ಪ್ರದೇಶಗಳಿಂದ ಅಂದಾಜು ಒಂದು ಶತಮಾನದ ಹಿಂದೆ ವಲಸೆ ಆರಂಭಿಸಿದ ಗೌಳಿಗರು ಮೊದಲು ಕರ್ನಾಟಕದ ಬೆಳಗಾಂವ್ ಜಿಲ್ಲೆಯ ಖಾನಾಪುರ ಅರಣ್ಯ ಪ್ರದೇಶದಲ್ಲಿ ನಂತರ ಅಳ್ನಾವರ, ಉತ್ತರ ಕನ್ನಡ ಜಿಲ್ಲೆಯ ಹಳಿಯಾಳ, ಜೊಯಿಡಾ, ಮುಂಡಗೋಡ, ಯಲ್ಲಾಪುರ ತದನಂತರ ಶಿವಮೊಗ್ಗ, ಚಿಕ್ಕಮಗಳೂರ ಮುಂತಾದ ಪ್ರದೇಶಗಳಿಗೆ ವಲಸೆ ಹೋಗಿದ್ದಾರೆ. ಮೇಲೆ ತಿಳಿಸಿದಂತೆ ಉತ್ತರ ಕನ್ನಡ ಜಿಲ್ಲೆಯಲ್ಲಿ ಮಲೇರಿಯಾ ನಿರ್ಮೂಲನೆ ಹೊಂದುವ ಸಮಯದಲ್ಲೇ (೧೯೪೯) ಗೌಳಿಗರು ಹೆಚ್ಚಾಗಿ ವಲಸೆ ಬಂದದ್ದು ಗಮನಾರ್ಹ ಸಂಗತಿ. ಗೌಳಿಗರಿಗೆ ಕಾಡಿನಲ್ಲಿ ತಿರಗಾಡುವ ಕಾಡು ಪ್ರಾಣಿಗಳ ಚಲನವಲನಗಳು ಗೊತ್ತು. ಹೀಗಾಗಿ ಧೈರ್ಯದಿಂದ ಕಾಡಿನಲ್ಲಿ ದನಕರುಗಳನ್ನು ಮೇಯಿಸಿಕೊಂಡು ಬರುತ್ತಾರೆ. ಅಲ್ಲದೇ ಕಾಡಿನಲ್ಲಿ ಧೈರ್ಯದಿಂದ ಜೀವಿಸುತ್ತಾರೆ.[೨೭]

ಮೂಲತಃ ಈ ಗೌಳಿಗರು ಮಹಾರಾಷ್ಟ್ರದಿಂದ ಕರ್ನಾಟಕಕ್ಕೆ ವಲಸೆ ಬಂದಿದ್ದಾರೆಂಬುದು ನಿರ್ವಿವಾದ. ಯಾಕೆಂದರೆ ನಾನು ಕ್ಷೇತ್ರ ಕಾರ್ಯ ಕೈಕೊಂಡಲ್ಲೆಲ್ಲಾ ನಾವು ಮಹಾರಾಷ್ಟ್ರದಿಂದಲೇ ಇಲ್ಲಿಗೆ ಬಂದಿದ್ದೇವೆ ಎಂದೇ ಗೌಳಿಗರು ಹೇಳುತ್ತಾರೆ ವಿನಃ ಗೋವಾದಿಂದ ಎಂದು ಹೇಳುವುದಿಲ್ಲ. ಇವರು ಇಂದೂ ಮರಾಠಿ ಭಾಷೆಯಲ್ಲಿಯೇ ಮಾತನಾಡುತ್ತಾರೆ. ಅಲ್ಲದೇ ಮಹಾರಾಷ್ಟ್ರದ ಧನಗರರಲ್ಲಿ ಸರ್ವೇ ಸಾಮಾನ್ಯವಾಗಿ ಕಂಡು ಬರುವ ನಂಬಿಕೆ, ಸಂಪ್ರದಾಯಗಳು, ರೀತಿ-ರಿವಾಜುಗಳು, ಹಬ್ಬ-ಹರಿದಿನಗಳು, ಊಟೋಪಚಾರಗಳು ಕರ್ನಾಟಕಕ್ಕೆ ವಲಸೆ ಬಂದಿರುವ ಗೌಳಿಗರಲ್ಲಿಯೂ ಸಾಮಾನ್ಯವಾಗಿ ಕಂಡು ಬಂದಿರುವುದರಿಂದಲೂ, ಅವು ಸದೃಶವಾಗಿರುವುದರಿಂದಲೂ ಉತ್ತರ ಕನ್ನಡ ಜಿಲ್ಲೆಯ ಗೌಳಿ

ಧನಗರರು ಮಹಾರಾಷ್ಟ್ರ ಮೂಲದವರೆಂಬುದು ಸ್ಪಷ್ಟವಾಗುತ್ತದೆ. ಮಾತನಾಡುವ ಭಾಷೆ ರೂಢಿಸಿ ಕೊಂಡಿರುವ ಸಂಸ್ಕೃತಿಯಿಂದಲೂ ಇವರು ಅದೇ ಮೂಲದವರು ಎಂದು ಹೇಳಬಹುದು. ಬಹು ಕಾಲದಿಂದ ಅರಣ್ಯ ಪ್ರದೇಶದಲ್ಲಿಯೇ ನೆಲೆಸಿರುವುದರಿಂದ ಇವರು ತುಸು ಒರಟಾದ ಅಕೃತವಾದ ಮರಾಠಿಯನ್ನು ಮಾತನಾಡುವುದು ಸ್ವಾಭಾವಿಕ.

**೨.೩.೨ ಧನಗರ ಸಮುದಾಯ – ವಿವಿಧ ರಾಜ್ಯಗಳಲ್ಲಿ**

ಧನಗರ ಸಮುದಾಯದವರು ಭಾರತದ ವಿವಿಧ ರಾಜ್ಯಗಳಲ್ಲಿ ಬೇರೆ ಬೇರೆ ಉಪಜಾತಿಗಳ ಹೆಸರಿನಲ್ಲಿ ಪಸರಿಸಿದ್ದಾರೆ. ರಾಜ್ಯವಾರು ಧನಗರ ಸಮುದಾಯದ ಹಲವು ಮುಖ್ಯ ಹೆಸರುಗಳು ಈ ಕೆಳಗಿನಂತಿವೆ.

| | | |
|---|---|---|
| ೧) ಕುರುಬ ಧನಗರ | – | ಕರ್ನಾಟಕ |
| ೨) ಗದಾರಿ (ಗದ್ದೇರಿಯಾ) ಧನಗರ | – | ಯು.ಪಿ., ಎಂ.ಪಿ., ರಾಜಸ್ತಾನ, ಹರಿಯಾಣ, ಹಿಮಾಚಲ ಪ್ರದೇಶ, ಉತ್ತರಖಂಡ |
| ೩) ಭರವಾಡ ಧನಗರ | – | ರಾಜಸ್ತಾನ, ಗುಜರಾತ, ಮಧ್ಯಪ್ರದೇಶ |
| ೪) ಬಕೇರವಾಲ ಧನಗರ | – | ಜಮ್ಮು–ಕಾಶ್ಮೀರ, ಹಿಮಾಚಲ ಪ್ರದೇಶ, ಪಂಜಾಬ |
| ೫) ಪಾಲ ಧನಗರ | – | ಯುಪಿ.,ಎಂಪಿ., ರಾಜಸ್ತಾನ,ಹರಿಯಾಣ, ಉತ್ತರಖಂಡ |
| ೬) ಬಘೇಲ ಧನಗರ | – | ಯುಪಿ., ಎಂಪಿ., ರಾಜಸ್ತಾನ, ಹರಿಯಾಣ |
| ೭) ನಿಖಾರ ಧನಗರ | – | ಯುಪಿ.,ಎಂಪಿ., ರಾಜಸ್ತಾನ,ಹರಿಯಾಣ, ಉತ್ತರಖಂಡ |
| ೮) ಗದ್ದಿ ಧನಗರ | – | ಜಮ್ಮು–ಕಾಶ್ಮೀರ, ಹಿಮಾಚಲ,ಪಂಜಾಬ, ಉತ್ತರಖಂಡ |
| ೯) ಓರಾವೊನ್ ಧನಗರ | – | ಬಿಹಾರ, ಬೆಂಗಾಲ, ಸಿಕ್ಕಿಂ, ಮಣಿಪುರ, ಝಾರಖಂಡ |
| ೧೦) ಅಹೀರ, ಬುರ್‌ಗುಜಾರ, ಬಗಾಡಿ, ಬಿಜ್‌ಬಾಸಿ, ಬಾರಾಗಾಹಿ, ಬರ್ಗಾಹಿ, ಬಾರ್ಗಿ ಧನಗರರು | – | ಯುಪಿ. |
| ೧೧) ಚಂಗಪಾ ಧನಗರ | – | ಲಡಾಖ್ |
| ೧೨) ಗಂಗಾಜಲಿ, ಭರವದಾಜ,ಭಾಟಿಯಾ ಧನಗರ | – | ಪಂಜಾಬ |
| ೧೩) ಧನಗರ, ಧನಪಾಲ, ಕೋರಮಾ | – | ಯುಪಿ., ಎಂಪಿ., ಬಿಹಾರ |
| ೧೪) ಚರ್ವಾಹ, ಗದ್ರಿ, ಗಾಪಡೆ, ಗುರ್ಜಾರ | | ರಾಜಸ್ತಾನ |

೧೫) ಗಾರಿ, ಭರುಡ ಧನಗರ – ಎಂಪಿ.,
೧೬) ಗಣಚಾ, ಗೊಲ್ಲ, ಗೋಪ ಧನಗರ – ಆಸ್ಸಾಂ
೧೭) ಗೋಪಾಲ, ಗೌಡಾ, ಗ್ವಾಲಾ, ಗವಳಿ – ಗೋವಾ, ಕರ್ನಾಟಕ
೧೮) ಗುರುಂಗ, ರಾಬರಿ, ಜಿಗ್ರಿ, ಹರಿದಾಸ, ಗೋಪಾಲಕ ಧನಗರ – ಗುಜರಾತ
೧೯) ಕುರುಮಾ, ಕುರುಂಬಾ, ಇಡಾಯಿಗಾ ಕೋನಾರ ಧನಗರ – ತಮಿಳುನಾಡು
೨೦) ಕುರುಮ, ಮೆಂಡಸಾಲ, ಮಗಧ ಧನಗರ – ಬಿಹಾರ
೨೧) ಮೆಶ್ವಾಕ ಧನಗರ – ಬೆಂಗಾಲ
೨೨) ಕಮ್ಲಿ, ಖುರುಕ್, ಖತ್ರಿ, ಗವರಾ ಧನಗರ – ಎಪಿ.
೨೩) ಕುರುಬಗೌಡ, ಗೌಳಿಗ, ಕಚ್ಚೆಗೌಳಿಗ ಧನಗರ – ಕರ್ನಾಟಕ
೨೪) ಪಲಾರು, ರಖಾಲ, ಮೆಶಪಾಲಕ, ಭಗತ್ ಹಲ್ದಾರ,ಚಗಲ ಧನಗರ – ಉತ್ತರ ಭಾರತ

**೨.೩.೩ ಕರ್ನಾಟಕದ ಗೌಳಿಗರು**

ಈ ವಿಷಯ ಕುರಿತ ಒಂದು ವಿಸ್ತೃತವಾದ ಅಧ್ಯಯನದಲ್ಲಿ ಸಂಶೋಧಕ ಡಾ॥ ಎಚ್. ಎಂ. ಮಹೇಶ್ವರಯ್ಯ ಹಾಗೂ ಅಂಬಳಿಕೆ ಹಿರಿಯಣ್ಣನವರು ಅನೇಕ ಮಹತ್ವದ ಅಂಶಗಳನ್ನು ವಿವರಿಸಿದ್ದಾರೆ. The Mysore Tribes and Castes ಎಂಬ ಅಧ್ಯಯನದಲ್ಲಿ ಶ್ರೀ. ಎಚ್. ವ್ಹಿ. ನಂಜುಂಡಯ್ಯ ಹಾಗೂ ಶ್ರೀ. ಅನಂತ ಕೃಷ್ಣ ಅಯ್ಯರ್ ಅವರು ಅಧ್ಯಯನ ಮಾಡಿ (೧೯೨೬ ರಿಂದ ೧೯೩೫) ಸಂಪಾದಿಸಿದ ಸಂಪುಟಗಳಲ್ಲಿ ಗೌಳಿ ಬಗ್ಗೆ ಯಾವುದೇ ಉಲ್ಲೇಖವಿಲ್ಲ. ಯಾಕೆಂದರೆ ಗೌಳಿಗರು ಇದ್ದ ಪಶ್ಚಿಮ ಘಟ್ಟ ಪ್ರದೇಶ (ಉ.ಕ) ಆಗ ಮೈಸೂರು ಪ್ರಾಂತದಲ್ಲಿ ಇರಲಿಲ್ಲ. ಆರ್.ಇ. ಎಂಥೋವನ್ ಲಿಖಿತ The Tribes and Castes of Bombay ಗ್ರಂಥದಲ್ಲಿ ಗೌಳಿಗರ ಬಗ್ಗೆ ಉಲ್ಲೇಖವಿದೆ. ೧೯೭೭ ರಲ್ಲಿ ಎಲ್. ಜಿ. ಹಾವನೂರ ಸರಕಾರಕ್ಕೆ ಸಲ್ಲಿಸಿದ ಹಿಂದುಳಿದ ವರ್ಗಗಳ ಕುರಿತ ವರದಿಯಲ್ಲಿ ಅವರು ಗೌಳಿಗರ ಬುಡಕಟ್ಟಿನ ಕುರಿತು ವಿವರಿಸಿದ್ದಾರೆ. ಯಲ್ಲಾಪೂರದ Deeds (Development Education Service) ಸಂಸ್ಥೆ ಗವಳಿ ಧನಗರ್ ಅಭಿವೃದ್ಧಿ ಯೋಜನೆ ಎಂಬ ಸಂಸ್ಥೆಯನ್ನು ಸ್ಥಾಪಿಸಿ ಅವರಿಗಾಗಿ ಅಭಿವೃದ್ಧಿಪರ ಕಾರ್ಯಕ್ರಮಗಳನ್ನು ಕೈಗೊಂಡಿದ್ದಾರೆ.

ಕರ್ನಾಟಕ ರಾಜ್ಯದಲ್ಲಿ ಕಂಡು ಬಂದಿರುವ ಸುಮಾರು ೬೩ ಬುಡಕಟ್ಟುಗಳ ಪೈಕಿ ಧನಗರ ಗೌಳಿ ಬುಡಕಟ್ಟು ಒಂದು. ಕರ್ನಾಟಕದ ವಿಶಿಷ್ಟ ಬುಡಕಟ್ಟುಗಳಲ್ಲಿ ಒಂದಾದ ಗೌಳಿಗರು ದಟ್ಟವಾದ ಸಾಂಸ್ಕೃತಿಕ ಅನನ್ಯತೆಯನ್ನು ರೂಢಿಸಿಕೊಂಡು ಭಾಷೆ, ವೃತ್ತಿ, ಜೀವನಕ್ರಮ ಇತ್ಯಾದಿಗಳಲ್ಲಿ ಇತರ ಬುಡಕಟ್ಟುಗಳಿಗಿಂತ ಪ್ರತ್ಯೇಕವಾದ ಅಸ್ತಿತ್ವವನ್ನು ಉಳಿಸಿಕೊಂಡಿದ್ದಾರೆ. ಧನಗರ ಗೌಳಿಗರು ಅಂದಾಜು ಒಂದು ಶತಮಾನದಿಂದೀಚೆಗೆ ಮಹಾರಾಷ್ಟ್ರದಿಂದ ವಲಸೆ ಬಂದಿದ್ದರೂ ಕೂಡ, ಖಚಿತವಾಗಿ ಇವರು

ವಲಸೆ ಬಂದ ಅವಧಿಯ ಬಗ್ಗೆ ನಿಖರವಾದ ದಾಖಲೆಗಳಿಲ್ಲ. ಮೂರು ನಾಲ್ಕು ತಲೆಮಾರುಗಳಿಂದ ಕರ್ನಾಟಕದಲ್ಲಿ ವಾಸಿಸುತ್ತಿರುವ ಬಗ್ಗೆ ಅವರಿಂದ ಮಾಹಿತಿ ದೊರೆಯುತ್ತದೆ. ಕರ್ನಾಟಕದ ಇತರ ಅನೇಕ ಬುಡಕಟ್ಟುಗಳು ತಮ್ಮ ಮೂಲದ ಆಂಧ್ರಪ್ರದೇಶ ಹಾಗೂ ತಮಿಳನಾಡಿನ ಸಂಬಂಧವನ್ನು ಸಂಪೂರ್ಣವಾಗಿ ಕಡಿದುಕೊಂಡು ಬದುಕುತ್ತಿರುವಾಗ ಗೌಳಿಗರು ಮಾತ್ರ ಮಹಾರಾಷ್ಟ್ರದ ತಮ್ಮ ಮೂಲ ನೆಲೆ ಹಾಗೂ ವಂಶಜರೊಂದಿಗೆ ಸಂಬಂಧ ಹೊಂದಿದ್ದಾರೆಂಬುದು ವಿಶೇಷ. ಮಹಾರಾಷ್ಟ್ರದ ಖಂಡೋಬ ಹಾಗೂ ಇತರ ದೈವರ ಆರಾಧನೆಯಲ್ಲಿ ತೊಡಗಿರುವ ಅವರು ತಮ್ಮನ್ನು ಧನಗರ ಎಂದು ಕರೆದುಕೊಳ್ಳುತ್ತಾರೆ. ಕರ್ನಾಟಕದ ಜನರು ಇವರನ್ನು ಗೌಳಿಗರು ಎಂದು ಕರೆಯುತ್ತಾರೆ. ಗೌಳಿಗರ ಹೆಂಗಸರು ಸೀರೆಯನ್ನು ಕಚ್ಚೆ ಹಾಕಿ ಉಟ್ಟುಕೊಳ್ಳುವುದರಿಂದ ಇವರನ್ನು ಕಚ್ಚೆ ಗೌಳಿಗರು, ಕಚ್ಚೆ ಮರಾಠರು ಹಾಗೂ ದಂಗರು ಎಂಬ ವಿವಿಧ ಹೆಸರುಗಳಿಂದ ಗುರುತಿಸಲಾಗುತ್ತದೆ.

ಕರ್ನಾಟಕದ ಗೌಳಿಗರು ಸಾಮಾನ್ಯವಾಗಿ ದಟ್ಟಡವಿಗಳಲ್ಲಿಯೇ ತಮ್ಮ ವಾಡೆಗಳನ್ನು ನಿರ್ಮಿಸಿಕೊಳ್ಳುತ್ತಾರೆ. ಶಿವಮೊಗ್ಗ, ಧಾರವಾಡ, ಬೆಳಗಾವಿ, ಚಿಕ್ಕಮಗಳೂರು ಹಾಗೂ ಉ.ಕ. ಜಿಲ್ಲೆಗಳ ಕೆಲವು ಭಾಗಗಳಲ್ಲಿ ಗೌಳಿಗರ ವಾಡೆಗಳಿವೆ. ಹಸಿರು ತುಂಬಿದ ಬೆಟ್ಟ ಗುಡ್ಡಗಳಿಂದ ಆವೃತವಾದ ಪ್ರದೇಶವನ್ನು ಆರಿಸಿಕೊಂಡು ವಾಡೆಗಳನ್ನು ನಿರ್ಮಿಸುವ ಗೌಳಿಗರು ತಾವು ಸಾಕುವ ಎಮ್ಮೆಗಳಿಗೆ ಸರಿಯಾದ ಆಹಾರ ನೀರು ದೊರಕುತ್ತದೆ ಎಂಬುದನ್ನು ಖಚಿತ ಪಡಿಸಿಕೊಂಡೆ ಮನೆಗಳನ್ನು ನಿರ್ಮಿಸಲು ತೊಡಗುತ್ತಾರೆ.

ಶಿವಮೊಗ್ಗ ಜಿಲ್ಲೆಯ ಹೊಸನಗರ ತಾಲೂಕು, ಭದ್ರಾವತಿ, ಶಿಕಾರಿಪೂರ ತಾಲೂಕುಗಳ ಅಡವಿಗಳಲ್ಲಿ ಗೌಳಿಗರ ವಾಡೆಗಳಿವೆ. ಶಿಕಾರಿಪೂರ ತಾಲೂಕಿನ ಹಾಲುಕುಣಿ, ಹಾರಿಗೊಪ್ಪ, ಕಟ್ಟಿಗೆ ಹಳ್ಳಿ, ಸಾಗರ ತಾಲೂಕಿನ ಅನಂತಪೂರ ಸಮೀಪದ ಕಾಡುಗಳಲ್ಲಿ ಇವರ ವಾಡೆಗಳಿವೆ. ಚಿಕ್ಕಮಗಳೂರ ಜಿಲ್ಲೆಯ, ಉಂಬಳಿ ಬೈಲು, ಶೆಟ್ಟಿಹಳ್ಳಿ, ಬಂಡಿಗುಂಡ, ಸಿದ್ರಳ್ಳಿ, ಉ.ಕ. ಜಿಲ್ಲೆಗಳ ದಾಂಡೇಲಿ, ಹಳಿಯಾಳದ ಸುತ್ತಮುತ್ತಲಿನ ಬಾಗೋತಿವಾಡೆ, ಬಸೆಟ್ಟಿಕೊಪ್ಪವಾಡೆ, ಸಾಂಬ್ರಾಣಿವಾಡೆ, ಕೊಂಡಳ್ಳಿವಾಡೆ, ಹಾಗೂ ಧಾರವಾಡ ಜಿಲ್ಲೆಯ ಕಲಘಟಗಿ ತಾಲೂಕಿನ ಹಿಂಡಿಜಿವಾಡೆ, ಸಂಟಿಕೊಪ್ಪವಾಡೆ, ಬೈಲಂದೂರವಾಡೆ, ಯಲ್ಲಾಪೂರ ತಾಲೂಕಿನ ಖಾರೆವಾಡೆ, ಹೊಸಳ್ಳಿವಾಡೆ, ಗಾಂವಟಾಣ, ಗುಡದುಂಡುರವಾಡೆ, ಎಡವಳ್ಳಿವಾಡೆ, ಹೊನ್ನಸಗಿರಿವಾಡೆ, ಪಾಣಿಗುಂಡವಾಡೆ, ಕ್ವಾಣಮಟ್ಟಿವಾಡೆ, ತೆಂಗಿನಗೇರಿವಾಡೆ, ಮದ್ನೂರವಾಡೆ, ಮಾದೆಕೊಪ್ಪವಾಡೆ, ಹೊಳೆನಕಟ್ಟಿವಾಡೆ, ಮಂಗ್ಯಾನತಾವರಗೇರಿವಾಡೆ, ಜೋಗಿಕೊಪ್ಪವಾಡೆ, ಕೊಳಿಕೇರಿವಾಡೆ, ಅಲಕೇರಿವಾಡೆ, ಹಳಿಯಾಳ ತಾಲೂಕಿನ ಟಿ. ರಾಮಚಂದ್ರ ನಗರ, ಜಮಗಾ, ಸಾಧುಸಂತ, ಹಿಂಡಸಗಿರಿ, ಅಂಬೇವಾಡಿ, ಮುಂಡಗೋಡ ತಾಲೂಕಿನ ಬೆನ್ನಳ್ಳಿ, ಬಡ್ಡಿಗೇರಿ, ಮೈನಳ್ಳಿ, ಗುಂಜಾವತಿ, ಸಿಲಗುಂಡಿ, ಚಳಗೇರಿ, ಕಾರಿಕೊಪ್ಪ, ಯಲ್ಲಾಪೂರ ತಾಲೂಕಿನ ಹೊಸಳ್ಳಿ, ಮಜ್ಜಿಗೆಹಳ್ಳಿ, ಗರ್ಣೆಶವಾಡಿ, ಹಾಸೋಳ್ಳಿವಾಡೆ, ಚಳ್ಳಗಿರಿವಾಡೆ, ದೊಡ್ಡೇರಿವಾಡೆ, ಮಾವಿನಕೇರಿವಾಡೆ, ಗಂಗೂರವಾಡೆ, ಶಾರ್ತಿಜ್‌ವಾಡೆ, ಹುಲ್ಲಳ್ಳಿವಾಡೆ, ಗನದಾಳವಾಡೆ, ಚೌಡಿಗವಾಡೆ, ಚೌಡಿಕಟ್ಟಿವಾಡೆ ಮತ್ತು ಜೋಯಿಡಾ ತಾಲೂಕಿನ ಕೆಲವು ಹಳ್ಳಿಗಳಲ್ಲಿ ಕೆಲವು ಗೌಳಿಗರು ವಾಸಿಸುತ್ತಾರೆ. ಬೆಳಗಾವಿಯ ಖಾನಾಪೂರ ತಾಲೂಕಿನ ಕುಸುಮಳ್ಳಿ, ಜಾಂಬೋಟಿ ಹಾಗೂ ಸುತ್ತಮುತ್ತಿನ ದಟ್ಟಡವಿಗಳಲ್ಲಿ ಗೌಳಿಗರು ವಾಸಿಸುತ್ತಿದ್ದಾರೆ.

ಮಹಾರಾಷ್ಟ್ರದ ಕೊಲಾಬಾ, ಕೊಲ್ಲಾಪೂರ, ರತ್ನಾಗಿರಿ ಜಿಲ್ಲೆ ಹಾಗೂ ಗೋವಾದ ಕೆಲವು ಭಾಗಗಳಲ್ಲಿ ವಾಸಿಸುತ್ತಿದ್ದಾರೆ.[೨೯] (Note : ಮಹಾರಾಷ್ಟ್ರದ ಕೊಲಾಬಾ ಜಿಲ್ಲೆಯಿಂದ ಕೊಲ್ಲಾಪೂರ ಜಿಲ್ಲೆಯವರೆಗೆ ಹಬ್ಬಿದ ಹೆಚ್ಚು ಮಳೆ ಬೀಳುವ ಪಶ್ಚಿಮ ಘಟ್ಟ ಪ್ರದೇಶದ ಎತ್ತರದ ಗುಡ್ಡಗಾಡಿನಲ್ಲಿ ವಾಸಿಸುವ ಮ್ಹಾಸ್ಕೆ ಧನಗರ, ಗೌಳಿ ಧನಗರ ಮತ್ತು ಡಾಂಗೆ ಧನಗರ ಮೂರು ಒಂದೇ ಒಳವಿವಾಹ ಜಾತಿಯೆಂದು ಪರಿಗಣಿಸಲಾಗಿದೆ.)

## ೨.೪ ಇತಿಹಾಸ ಕಥನ

### ೨.೪.೧ ಧನಗರ ರಾಜ ಮನೆತನಗಳು

ಧನಗರ ಸಮುದಾಯವು ಬಹಳ ಪುರಾತನವಾಗಿದ್ದು, ಅದರ ಇತಿಹಾಸವು ಮಹಾಭಾರತ ವೇಳೆಯಿಂದ ಸುರುವಾಗುತ್ತದೆ. ಈ ಸಮುದಾಯವು ಹಲವಾರು ರಾಜಮನೆತನಗಳನ್ನು ಉದ್ಭವಿಸಿದೆ. ಇತ್ತೀಚಿನ ಇಂದೋರದ ಹೋಳ್ಕರ ರಾಜಮನೆತನದವರೂ ಧನಗರ ಆಗಿದ್ದಾರೆ ಎಂದು ಹೇಳಲಾಗುತ್ತದೆ. ಹೊಯ್ಸಳ, ಕದಂಬ, ರಾಷ್ಟ್ರಕೂಟ, ಮೌರ್ಯ, ಪಲ್ಲವ, ಚೌಹಾಣ, ಮೇವಾರದ ಗೆಹ್ಲಾಟ್ ಇವು ಇನ್ನಿತರ ಧನಗರ ರಾಜಮನೆತನಗಳಾಗಿವೆ. ೬-೬-೧೬೭೪ರಂದು ಪಟ್ಟಾಭಿಷೇಕದ ವೇಳೆಯಲ್ಲಿ ಛತ್ರಪತಿ ಶಿವಾಜಿ ಮಹಾರಾಜ ತಾನು ರಾಜಸ್ತಾನದ ಗೆಹ್ಲಾಟ ವಂಶಾವಳಿಯವನೆಂದು ಹೇಳಿಕೊಂಡಿದ್ದಾನೆ. ಗೆಹ್ಲಾಟ ವಂಶವು ಹಟ್ಟಿಕಾರ ಧನಗರ ಜಾತಿಗೆ ಒಳಪಟ್ಟಿದೆ. ಕಾಳಿದಾಸ ಹಾಗೂ ಕನಕದಾಸ ಕವಿಗಳು, ಇತಿಹಾಸ ಪ್ರಸಿದ್ಧ ಸಂಗೊಳ್ಳಿ ರಾಯಣ್ಣ, ಪಂಢರಾಪುರದ ಪ್ರಸಿದ್ಧ ವಿಠೋಬಾ ಮಂದಿರವನ್ನು ಕಟ್ಟಿಸಿದ ವಿಷ್ಣುವರ್ಧನ (ಹೊಯ್ಸಳ) ಇವರೆಲ್ಲರೂ ಧನಗರ ಜಾತಿಗೆ ಸೇರಿದವರಾಗಿದ್ದಾರೆ. ಅದರಂತೆ ಮಧುರೈಯ ಮೀನಾಕ್ಷಿ ಮಂದಿರವನ್ನು ಕಟ್ಟಿಸಿದ ಪಲ್ಲವರು ಕೂಡಾ ಧನಗರ ಆಗಿದ್ದರು.[೩೦]

### ೨.೪.೨ ಸಾಮಾಜಿಕ ಸ್ಥಾನಮಾನ (Social Status)

ಧನಗರ ಜಾತಿಯು ಕ್ಷತ್ರಿಯ ವರ್ಣಕ್ಕೆ ಸೇರಿದೆಯೆಂದು ಹಲವರು ಊಹಿಸುತ್ತಾರೆ. ಇದನ್ನು ಅಜಮೀರದಲ್ಲಿ ೧೯೩೩ರಲ್ಲಿ ನಡೆದ ಹಿಂದು ಮಹಾಸಭಾದ ಅಧಿವೇಶನದಲ್ಲಿ ದೃಢೀಕರಿಸಲಾಯಿತು. ಕ್ಷತ್ರಿಯ ವರ್ಣದವರಾದ ಧನಗರರು ಮೊದಲಿಗೆ ರಜಪೂತ ಮತ್ತು ಮರಾಠಿಗಳೊಂದಿಗೆ ಒಂದಾಗಿ ಹೊರಜಾತಿ ಮದುವೆಯಾಗುತ್ತಿದ್ದರು ಎಂದು ಹೇಳಲಾಗುತ್ತದೆ.[೩೧] ಎಂಥೋವನ್ ಪ್ರಕಾರ ಧನಗರ ಸಮುದಾಯದ ಸಾಮಾಜಿಕ ಸ್ಥಾನಮಾನ ಕುಣಬಿ ಸಮುದಾಯದ ನಂತರದ್ದು ಮತ್ತು ಘಿಸಾಡಿ, ಬುರುಡ, ಪಾರಿತ್, ಜಿನಗಾರ ಜಾತಿಗಳ ಮೇಲಿನದು. ಧನಗರ ಸಮುದಾಯದವರು ತಮ್ಮನ್ನು ಮರಾಠಿಗರೊಂದಿಗೆ ಹೋಲಿಸಿಕೊಳ್ಳುತ್ತಾರೆ ಮತ್ತು ಹಿಂದೂ ಸಮಾಜದಲ್ಲಿ ಒಳ್ಳೆಯ ಸ್ಥಾನಮಾನ ಹೊಂದಿದ್ದೇವೆ ಎಂದು ಹೇಳಿಕೊಳ್ಳುತ್ತಾರೆ. ಅವರು ಆರ್ಯನ್ ಪೂರ್ವಿ ಕುಲಜಾತಿಯವರೆಂದು ಹೇಳುತ್ತಾರೆ. ಮನುಸ್ಮೃತಿ (೩.೬೧೬)

ಸ್ಥಳದಲ್ಲಿ ಪ್ರವೇಶಿಸಲು ನಿರ್ಬಂಧವಿತ್ತು. ಹೀಗೆ ಮನುವಿನ ಪ್ರಕಾರ ಧನಗರ ಸಮಾಜದವರು ಕಡಿಮೆ ಜಾತಿಯವರಾಗಿದ್ದಾರೆ. ಜಾತಿ ವಿಶ್ಲೇಷಣೆಯಿಂದ ತಿಳಿದುಬಂದಂತೆ ಧನಗರ ಜಾತಿಯು ಶೂದ್ರ ತಂದೆ ಮತ್ತು (ಕ್ಷತ್ರಿಯ ತಂದೆ ಮತ್ತು ವೈಶ್ಯ ತಾಯಿ ಸಮ್ಮಿಲನದಿಂದ ಹುಟ್ಟಿದ) ಮಹಿಸ್ಯಾ ಎಂಬ ಹೆಣ್ಣಿನ ಸಂತತಿಯಿಂದ ಹುಟ್ಟಿದ್ದು.[೨೨] ಈ ಎಲ್ಲ ಭಿನ್ನಾಭಿಪ್ರಾಯದಿಂದ ಧನಗರ ಸಮುದಾಯಕ್ಕೆ ಬೇರೆ ಬೇರೆ ರಾಜ್ಯಗಳಲ್ಲಿ ಬೇರೆ ಬೇರೆ ರೀತಿಯ ರಿಜರ್ವೇಶನ್ ಸಿಕ್ಕಿದೆ. ಉದಾ: ಉಚ್ಚ ಜಾತಿ, ಓಬಿಸಿ, ಅಲೆಮಾರಿ ಜನಾಂಗ, ಪರಿಶಿಷ್ಠ ಪಂಗಡ ಇತ್ಯಾದಿ.

**ಕೋಷ್ಟಕ ೨.೯**

**ಗೌಳಿ ಸಮುದಾಯದ ಸಾಮಾಜಿಕ ಸ್ಥಾನಮಾನ (ಅಂತಸ್ತು) ಕುರಿತು ವಿವರಗಳು**

| ಸಾಮಾಜಿಕ ಸ್ಥಾನಮಾನ | ಸಂದರ್ಶಿತರ ಸಂಖ್ಯೆ | ಶೇಕಡಾವಾರು |
|---|---|---|
| ಸ್ಥಾನಮಾನ ಹೆಚ್ಚೆಂದವರು | ೦೩ | ೧.೩೩% |
| ಸ್ಥಾನಮಾನ ಕಡಿಮೆ ಎಂದವರು | ೬೨ | ೨೭.೫೬% |
| ಸ್ಥಾನಮಾನ ಸಮ ಎಂದವರು | ೧೬೦ | ೭೧.೧೧% |
| ಇತರ ಸಮುದಾಯದಿಂದ ಗೌರವ ಸಿಕ್ಕಿದೆ | ೨೦೬ | ೯೧.೫೫% |
| ಇತರ ಸಮುದಾಯದಿಂದ ಗೌರವ ಸಿಕ್ಕಿಲ್ಲ | ೧೯ | ೮.೪೫% |

ಇತರ ಸಮುದಾಯಗಳೊಂದಿಗೆ ಹೋಲಿಕೆಯಲ್ಲಿ ನಮ್ಮ ಸ್ಥಾನಮಾನವೇನು ಎಂಬ ಪ್ರಶ್ನೆಗೆ ಕೇವಲ ೩ ಕುಟುಂಬದವರು ನಮ್ಮ ಸ್ಥಾನಮಾನ ಹೆಚ್ಚು ಎಂದು ಹೇಳಿದರೆ, ೬೨ ಕುಟುಂಬದವರು ಕಡಿಮೆ ಎಂದು ಹೇಳಿದರು. ಆದರೆ ಇತರ ೧೬೦ ಕುಟುಂಬದವರು ನಾವು ಇತರರಿಗೆ ಸಮಾನರು ಎಂದು ಹೇಳಿದರು. ಅಂದರೆ ಉತ್ತರ ಕರ್ನಾಟಕದ ಗೌಳಿಗರಲ್ಲಿ ಇತರರ ಹೋಲಿಕೆಯಲ್ಲಿ ತಾವು ಕಡಿಮೆ ಎಂಬ ಭಾವನೆ ಇಲ್ಲ. ಕೆಲವೆ ಕುಟುಂಬಗಳಲ್ಲಿ ತಾವು ಹೆಚ್ಚು ಅಥವಾ ಕಡಿಮೆ ಎಂಬ ಭಾವನೆ ಇದೆ.

ಇತರ ಸಮುದಾಯದ ಜನರು ನಿಮ್ಮೊಂದಿಗೆ ಗೌರವದೊಂದಿಗೆ ವರ್ತಿಸುವರೇ ಎಂಬ ಪ್ರಶ್ನೆಗೆ ೨೦೬ ಕುಟುಂಬದವರು ಹೌದು ಎಂದು ಉತ್ತರಿಸಿದರೆ, ೧೯ ಕುಟುಂಬದವರು ಇಲ್ಲವೆಂದು ಉತ್ತರಿಸಿದ್ದಾರೆ. ಅಂದರೆ ಸಾಮಾನ್ಯವಾಗಿ ಇತರ ಸಮುದಾಯದ ಜನರು ಇವರನ್ನು ಸಮಾನವಾಗಿ ಪರಿಗಣಿಸುತ್ತಾರೆ ಎಂದು ನಾವು ಹೇಳಬಹುದು. ಏಕೆಂದರೆ ಇತರ ಸಮುದಾಯದ ಜನರೊಂದಿಗೆ ಇವರ ಸಂಪರ್ಕವೇ ಅತಿ ಕಡಿಮೆ ಇದೆ.

**೨.೪.೩ ಕುಲದೈವ**

ಧನಗರ ಸಮಾಜದವರು ಶಿವ, ವಿಷ್ಣು, ಪಾರ್ವತಿ, ಮಹಾಲಕ್ಷ್ಮಿ ದೇವರುಗಳನ್ನು ಈ ಕೆಳಕಾಣಿಸಿದ ಹೆಸರುಗಳಿಂದ ತಮ್ಮ ಕುಲದೈವ ಎಂದು ಆರಾಧಿಸುತ್ತಾರೆ. ಖಂಡೋಬಾ, ಬೀರೋಬಾ (ಬೀರಲಿಂಗೇಶ್ವರ), ಮ್ಹಾಸೋಬಾ, ಧುಲೋಬಾ (ಧೂಲೇಶ್ವರ), ವಿಠೋಬ, ಜನಾಯಿ–ಮಲಾಯಿ, ತುಲಾಯಿ, ಯಮಾಯಿ,

ಪದುಬಾಯಿ ಮತ್ತು ಅಂಬಾಬಾಯಿ ಮೇಲೆ ತಿಳಿಸಿದ ದೇವರ ಗುಡಿಗಳಲ್ಲಿ ತಮ್ಮ ಊರಿಗೆ ಸಮೀಪವಿದ್ದ ದೇವರ ಗುಡಿಗೆ ತಮ್ಮ ಕುಲದೇವರೆಂದು ಪೂಜಿಸುತ್ತಾರೆ.

ಧನಗರ ಸಮುದಾಯದ ಕುಲದೈವದ ಮೂಲ ಕುರಿತಂತೆ ನಂಬಿಕೆ/ಪರಂಪರೆ ಇರುವ ಪ್ರಕಾರ ಖಂಡೋಬಾ (ಶಿವ ದೇವರು) ಒಮ್ಮೆ ಅರಣ್ಯದಲ್ಲಿ ಸುತ್ತಾಡುತ್ತಿರುವಾಗ ಧನಗರ ಸಮುದಾಯದ ಮೂಲ ಪುರುಷನ ಭೆಟ್ಟಿಯಾಯಿತು. ಆಗ ಶಿವನು ತನ್ನ ಅದ್ಭುತ ಪವಾಡ ಶಕ್ತಿಯಿಂದ ಅವನನ್ನು ಮೂಕವಿಸ್ಮಿತನನ್ನಾಗಿ ಮಾಡುತ್ತಾನೆ. ಅಂದಿನಿಂದ ಧನಗರ ಸಮುದಾಯದ ಮೂಲ ಪುರುಷ ತನ್ನ ರಕ್ತ ಸಂಬಂಧಿಗಳೊಂದಿಗೆ ಸಂಪೂರ್ಣ ಶ್ರದ್ಧೆಯಿಂದ ಖಂಡೋಬಾನನ್ನು ಆರಾಧಿಸತೊಡಗುತ್ತಾನೆ ಮತ್ತು ತನ್ನ ಮಗಳಾದ ಬೆನಾಯಿಯನ್ನು ಕೊಟ್ಟು ಮದುವೆ ಮಾಡುತ್ತಾನೆ. ಇದರಿಂದ ಸಂತುಷ್ಟಗೊಂಡ ಖಂಡೋಬಾ (ಶಿವ ದೇವರು) ಧನಗರ ಸಮುದಾಯದ ಮೂಲ ಪುರುಷನಿಗೆ ಅವನ ವಂಶಸ್ಥರು ಕುರಿ ಸಾಕಾಣಿಕೆ ಮಾಡಿಕೊಂಡು ಸುಖಿ ಜೀವನ ಸಾಗಿಸಲಿ ಎಂದು ಅನುಗ್ರಹ ಮಾಡುತ್ತಾನೆ. ಆದುದರಿಂದ ಮಹಾರಾಷ್ಟ್ರದ ಜೆಜೂರಿಯಲ್ಲಿರುವ ಖಂಡೋಬಾ (ಶಿವ) ದೇವರು ಧನಗರ ಸಮಾಜದಲ್ಲಿ ಕುಲದೈವವೆಂದು ತುಂಬಾ ಪ್ರಸಿದ್ಧಿ ಹೊಂದಿದೆ.[೨೨]

ಈ ಸಂಶೋಧನೆಯಲ್ಲಿ ಸಂದರ್ಶಿಸಿದ ಗೌಳಿಗ ಸಮುದಾಯದ ಹಿರಿಯರಾಗಲಿ ಅಥವಾ ಗೌಳಿಗರ ಬಗ್ಗೆ ಇರುವಂತಹ ಕೆಲವೇ ಕೆಲವು ಅಧ್ಯಯನಗಳು ಇವರ ಮೂಲದ ಬಗ್ಗೆ ಖಚಿತವಾದ ದಾಖಲೆಗಳನ್ನು ನೀಡಲು ಸಾಧ್ಯವಾಗಿಲ್ಲ. ಏಕೆಂದರೆ ಐತಿಹಾಸಿಕ ದಾಖಲೆಗಳು ಲಭ್ಯವಿಲ್ಲ. ಆದರೆ ತಮ್ಮ ಮೂಲದ ಬಗ್ಗೆ ಅವರು ಹೇಳಿಕೊಳ್ಳುವ ಕೆಲವು ಸಂಗತಿಗಳನ್ನು ಇಲ್ಲಿ ಚರ್ಚಿಸಲಾಗಿದೆ.

**೨.೪.೪ ಗೌಳಿ-ಧನಗರಗಳ ಪಾರಂಪರಿಕ ಹಿನ್ನೆಲೆ**

ಈ ವಿಷಯ ಕುರಿತು ಸಾಕಷ್ಟು ಅಧ್ಯಯನಗಳಾಗಿದ್ದರೂ ಕೂಡಾ, ಅವುಗಳಲ್ಲಿ ಸಂಪೂರ್ಣ ಸಹಮತವಿಲ್ಲದಿರುವುದು ಸ್ಪಷ್ಟವಾಗಿದೆ. ನಿಖರವಾದ ಐತಿಹಾಸಿಕ ದಾಖಲೆಗಳು ಇಲ್ಲದೇ ಹೋದಾಗ ಇಂಥಹ ಅಧ್ಯಯನಗಳಲ್ಲಿ ಕೆಲವೊಮ್ಮೆ ಪ್ರಶ್ನೆಗಳು ಸಹಜವಾಗಿಯೇ ಉಳಿದುಕೊಂಡು ಬಿಡುತ್ತವೆ. ಈ ಪ್ರಶ್ನೆಗಳೇ ನಮ್ಮ ಮುಂದುವರಿಸುವ ಅಧ್ಯಯನಕ್ಕೆ ಪ್ರೇರಣೆಯನ್ನು ಒದಗಿಸುತ್ತವೆ ಎಂಬುದು ಎಲ್ಲ ಸಂಶೋಧಕರ ಅನುಭವವಾಗಿದೆ. ಅಧ್ಯಯನಗಳಲ್ಲಿ ಯಾವುದೂ ಅಂತಿಮವಲ್ಲ ಎಂಬುದು ಚಿರಂತನ ಶೈಕ್ಷಣಿಕ-ವೈಜ್ಞಾನಿಕ ಸತ್ಯವಾಗಿದೆ. ಈ ಸಂಗತಿ ಪ್ರಸ್ತುತ ಅಧ್ಯಯನಕ್ಕೂ ಅನ್ವಯಿಸುತ್ತದೆ. ಒಂದೆಡೆ ಗೌಳಿ-ಧನಗರರನ್ನು ಶೂದ್ರರೆಂದರೆ, ಇನ್ನೊಂದೆಡೆ ಅವರನ್ನು ಕ್ಷತ್ರಿಯರೆಂದು ಪರಿಗಣಿಸಲಾಗಿದೆ.

ರಜಪೂತರನ್ನು ಕುರಿತು ಕೈಕೊಂಡ ವಂಶವಾಹಿನಿ (Paleolithic mt DNA Haplogroups) ಹಾಗೂ ಧನಗರಗಳ Y ವಂಶವಾಹಿನಿ (Y-DNA Haplogroups) ಅಧ್ಯಯನದಲ್ಲಿ ಕಂಡು ಬಂದ ಅಂಶವೇನೆಂದರೆ ಇವರು ಮೂಲತಃ ದಕ್ಷಿಣ ಏಶಿಯಾದ ಪುರುಷ ಹಾಗೂ ಪಶ್ಚಿಮ – ಯುರೇಶಿಯನ್ ಮೂಲದ ಮಹಿಳೆಯರಾಗಿದ್ದಾರೆ.

ಧನಗರ್‌ಗಳು ಇಂಡೋ ಆರ್ಯನ್‌ರು ಎಂದು ನಂಬಲಾಗಿದೆ. ಇಂಡೋ ಆರ್ಯನ್‌ರು ಕುರಿಗಾಹಿಗಳಾಗಿದ್ದರು ಎಂದು ಇತಿಹಾಸ ಹೇಳುತ್ತದೆ. ಆರ್ಯನ್‌ರು ತಮ್ಮ ಮಕ್ಕಳ ಕಿವಿ ಚುಚ್ಚುತ್ತಿದ್ದರು. ಧನಗರ್‌ಗಳಲ್ಲಿಯೂ ಈ ರೂಢಿ ಇದೆ. ಕಶ್ಯಪ್ ಮಹಾರಾಜನ ೩೬ ರಾಣಿಯರಲ್ಲಿ **ಸುಂದರಾ** ಧನಗರ ಜಾತಿಗೆ ಸೇರಿದ್ದರೆಂದು ಐತಿಹ್ಯವಿದೆ. ಮೂಲ ೩೬ ಋಷಿಗಳಲ್ಲಿ ತಾಪ ಋಷಿ ಹಾಗೂ ಮಣಿ ಮಹಾಂತ ಈರ್ವರೂ ಧನಗರ್ ಆಗಿದ್ದರೆಂದು ಉಲ್ಲೇಖವಿದೆ.[೩೪]

ಒಂದು ಮೂಲದ ಪ್ರಕಾರ ಗೌಳಿಗರು ಯದು ವಂಶಜರು ಅಥವಾ ಶ್ರೀಕೃಷ್ಣನ ವಂಶ ಸಂಜಾತರು ಎಂದು ಹೇಳಲಾಗುತ್ತದೆ. ಇವರು ಮೂಲ ಗುಜರಾತಿನಂದ ಮಹಾರಾಷ್ಟ್ರಕ್ಕೆ, ಗೋವಾ ರಾಜ್ಯಕ್ಕೆ, ನಂತರ ಈ ಎರಡು ಮಾರ್ಗಗಳಿಂದ ಕರ್ನಾಟಕಕ್ಕೆ ವಲಸೆ ಬಂದಿದ್ದಾರೆ ಎಂದು ಉಲ್ಲೇಖಗಳು ಹೇಳುತ್ತವೆ. ಕರ್ನಾಟಕದಲ್ಲಿರುವ ಗೌಳಿಗರು ಇಂದಿಗೂ ಕೂಡ ಮಹಾರಾಷ್ಟ್ರದಲ್ಲಿರುವ ತಮ್ಮ ಪೂರ್ವಜರೊಂದಿಗೆ ಸಂಪರ್ಕ ಹೊಂದಿದ್ದು, ವಿವಾಹ ಇತರ ಧಾರ್ಮಿಕ ವಿಧಿ-ವಿಧಾನಗಳಲ್ಲಿ ಪರಸ್ಪರ ಪಾಲ್ಗೊಳ್ಳುತ್ತಾರೆ. ಗುಜರಾತಿನೊಂದಿಗೆ ಇವರ ಶಾಶ್ವತ ಸಂಪರ್ಕದ ಬಗ್ಗೆ ನಿಖರವಾದ ಮಾಹಿತಿ ದೊರಕಿಲ್ಲ. ಆದರೆ ಮಹಾರಾಷ್ಟ್ರದಲ್ಲಿರುವ ಗೌಳಿಗರು ಗುಜರಾತದ ಗೌಳಿಗರೊಂದಿಗೆ ಸಂಪರ್ಕ ಇಟ್ಟಿರುವ ಸಾಧ್ಯತೆ ಇದೆ. ಬಿಹಾರ ಹಾಗೂ ಉತ್ತರ ಪ್ರದೇಶಗಳಲ್ಲಿಯೂ ಕೂಡ ಯಾದವ ಎಂಬ ಜಾತಿಯ ಗೌಳಿಗರು ಇದ್ದಾರೆ. ಆದರೆ ಕರ್ನಾಟಕದ ಗೌಳಿಗರು ಅವರೊಂದಿಗೆ ಸಂಪರ್ಕ ಹೊಂದಿರುವ ಬಗ್ಗೆ ಖಚಿತ ದಾಖಲೆಗಳಿಲ್ಲ.

ಗೌಳಿಗರ ಮೂಲದ ಬಗ್ಗೆ ಅಧ್ಯಯನ ಮಾಡುವ ಉದ್ದೇಶದಿಂದ ಮಹಾರಾಷ್ಟ್ರದ ಸಿಂಧುದುರ್ಗ ಜಿಲ್ಲೆಯ ಸಾವಂತವಾಡಿ ತಾಲೂಕಿನ ನಾಂಗರವಾಕ್ ಮತ್ತು ನಾಂಗರತಾಸ್ ಧನಗರ ವಾಡಾಗಳು ಹಾಗೂ ಕೊಲ್ಲಾಪುರ ಜಿಲ್ಲೆಯ ಅಜರಾ ತಾಲೂಕಿನ ಮೇಗುಲಿ ಪೈಕಿ ಧನಗರವಾಡಾಗಳಿಗೆ ಸಂದರ್ಶನ ನೀಡಲಾಯಿತು. ಸಂದರ್ಶನ ಸಮಯದಲ್ಲಿ ಅಲ್ಲಿಯ ಧನಗರ ವಾಡಾಗಳ ಹಿರಿಯರು ತಾವು ಮಹಾರಾಷ್ಟ್ರ ಮೂಲದ ಧನಗರ ಸಮುದಾಯಕ್ಕೆ ಸೇರಿದವರೆಂದು ಹೇಳಿದರು. ಆ ಪ್ರದೇಶದಲ್ಲಿ ಅಂದರೆ ಮಹಾರಾಷ್ಟ್ರದ ಪಶ್ಚಿಮಘಟ್ಟ ಮತ್ತು ಕೊಲ್ಲಾಪೂರ, ರತ್ನಾಗಿರಿ, ಸಾಂಗಲಿ, ಸಾತಾರಾ, ಸೊಲ್ಲಾಪೂರ ಜಿಲ್ಲಾ ಪ್ರದೇಶದಲ್ಲಿ ಧನಗರ ಸಮಾಜದ ಡಾಂಗೆ, ಮೆಂಡೆ ಮತ್ತು ಝುಂಡೆ ಜಾತಿಯ ಜನರು ಹೆಚ್ಚಾಗಿ ನೆಲೆಸಿದ್ದಾರೆ ಎಂದು ತಿಳಿಸಿದರು. ಡಾಂಗೆ ಧನಗರ (ಗೌಳಿ) ಜಾತಿಯವರದು ಎಮ್ಮೆ ಸಾಕಾಣಿಕೆ ಹಾಗೂ ಹೈನುಗಾರಿಕೆ ಮೂಲ ಉದ್ಯೋಗ. ಅವರನ್ನು ಗೌಳಿ ಧನಗರ ಎಂದೂ ಕರೆಯುವರು. ಮೆಂಡೆ ಜಾತಿಯವರದು ಕುರಿ ಸಾಕಾಣಿಕೆ ಉದ್ಯೋಗ. ಝುಂಡೆ ಜಾತಿಯವರು ಕುರಿ ಸಾಕಾಣಿಕೆಯಲ್ಲದೇ ಮುಖ್ಯವಾಗಿ ಒಳ್ಳೆಯ ಜಾತಿಯ ಕುದುರೆ ಸಾಕಾಣಿಕೆಯಲ್ಲಿ ತೊಡಗಿಸಿಕೊಂಡು, ಕುದುರೆಗಳನ್ನು ಆಳುವವರ ಸೈನ್ಯಕ್ಕೆ ಪೂರೈಕೆ ಮಾಡುತ್ತಿದ್ದರು. ಕುದುರೆ ಸಾಕಾಣಿಕೆಗೆ ಆಳುವವರ ಪ್ರೋತ್ಸಾಹವಿತ್ತು. ಉತ್ತರಕನ್ನಡ ಜಿಲ್ಲೆಯ ಗೌಳಿಗರು ಕೊಲ್ಲಾಪೂರ ಹಾಗೂ ರತ್ನಗಿರಿ ಜಿಲ್ಲಾ (ಮಹಾರಾಷ್ಟ್ರ) ಪ್ರದೇಶದಿಂದಲೇ ವಲಸೆ ಬಂದವರೆಂದು ತಿಳಿಯಿತು. ಕರ್ನಾಟಕದ ಉತ್ತರಕನ್ನಡ ಜಿಲ್ಲೆಗೆ ವಲಸೆ ಬಂದ ಗೌಳಿಗರ ರಕ್ತ ಸಂಬಂಧಿಕರು ಕೊಲ್ಲಾಪೂರ ಜಿಲ್ಲೆಯಲ್ಲಿ ಇರುವುದೂ ತಿಳಿಯಿತು.[೩೫] ಅಲ್ಲಿಯ ಎಮ್ಮೆ ಸಾಕಾಣಿಕೆ, ಹೈನುಗಾರಿಕೆ ಉದ್ಯೋಗ ಮಾಡುವ

ಧನಗರ ಸಮಾಜದವರು 'ಡಾಂಗೆ ಧನಗರ' ಜಾತಿಗೆ ಸೇರಿದವರಾದ್ದರಿಂದ ಉತ್ತರಕನ್ನಡ ಜಿಲ್ಲೆಗೆ ವಲಸೆ ಬಂದ ಗೌಳಿಗರು 'ಡಾಂಗೆ ಧನಗರ' ಜಾತಿಗೆ ಸೇರಿದವರೆಂದು ಊಹಿಸಬಹುದು. ಎಮ್ಮೆಗಳನ್ನು ಸಾಕಿ ಹಾಲು ಮಾರಾಟ ಮಾಡುತ್ತಿದ್ದ ಅವರನ್ನು ಕನ್ನಡಿಗರು ಗೌಳಿಗರೆಂದು ಕರೆದರು. ಗೌಳಿ ಎಂಬುದು ವೃತ್ತಿಯಿಂದ ಬಂದ ಅನ್ವರ್ಥಕ ನಾಮ. ಆದರೆ ಅವರು ಮೂಲತಃ ಧನಗರ ಸಮುದಾಯದವರು. 'ಪಶ್ಚಿಮ ಘಟ್ಟ ಪ್ರದೇಶದಲ್ಲಿ ವಾಸಿಸುವ ಮ್ಹಾಸ್ಕೆ ಧನಗರ, ಢಾಂಗೆ ಧನಗರ, ಗೌಳಿ ಧನಗರ ಈ ಮೂರು ಒಂದೇ ಒಳಸಮೂಹ' ಎಂದು ಮಾಧವ ಗಾಡ್ಗೀಳ ಮತ್ತು ಕೆ.ಸಿ. ಮಲ್ಹೋತ್ರಾ ಅಭಿಪ್ರಾಯಪಡುತ್ತಾರೆ.[೩೬] ಹೀಗಾಗಿ ಇವರನ್ನು ಗೌಳಿ ಧನಗರ ಜಾತಿಯವರು ಎಂದು ಕರೆಯುಬಹುದು.

**೨.೪.೫ ಐತಿಹಾಸಿಕ ಕಥನಗಳು**

ವಿವಿಧ ಬುಡಕಟ್ಟುಗಳ ವಿಸ್ತೃತ ಅಧ್ಯಯನದ ಒಂದು ಭಾಗವಾಗಿ ಗೌಳಿಗರ ಇತಿಹಾಸವನ್ನು ಕೂಡ ಅಧ್ಯಯನ ಮಾಡಲಾಗಿದೆ. ಆದರೆ ಸ್ವತಂತ್ರವಾಗಿ ಗೌಳಿಗರ ಕುರಿತು ವಿಸ್ತೃತವಾದ ಅಧ್ಯಯನ ಇಲ್ಲವಾದ ಕಾರಣ ಅವರ ಇತಿಹಾಸದ ಬಗ್ಗೆ ನಿಖರವಾದ ಉಲ್ಲೇಖಗಳು ದೊರಕುವುದಿಲ್ಲ. ಆದರೂ ಕೂಡ ಪ್ರಸ್ತುತ ಅಧ್ಯಯನದಲ್ಲಿ ಅವರ ಇತಿಹಾಸದ ಕುರಿತು ಅಧ್ಯಯನ ಮಾಡುವ ದೆಸೆಯಲ್ಲಿ ಪ್ರಾಮಾಣಿಕ ಪ್ರಯತ್ನ ಮಾಡಲಾಗಿದೆ. ಸಧ್ಯಕ್ಕೆ ಗೌಳಿಗರ ಬಗ್ಗೆ ಸಂಶೋಧನಾ ಕಾರ್ಯವು ನಡೆದಿದ್ದರೂ ಕೂಡ ಅವರ ಇತಿಹಾಸದ ಅಧ್ಯಯನದ ದೃಷ್ಟಿಯಿಂದ ಇವು ಕ್ರಮಬದ್ಧವಾಗಿಲ್ಲ.

ವಿಶೇಷ ಸಂದರ್ಭಗಳಲ್ಲಿ ಗೌಳಿಪುರುಷರು ಖಡ್ಗಧಾರಿಗಳಾಗಿಯೂ ಕಾಣಿಸಿಕೊಳ್ಳುವುದು ಉಂಟು. ಖಡ್ಗ ತಮ್ಮ ಬುಡಕಟ್ಟಿನ ಲಾಂಛನವೆಂದು ತಿಳಿದಿರುವ ಇವರು ಈ ಖಡ್ಗವನ್ನು ಶಿವಾಜಿ ಮಹಾರಾಜ ಪ್ರಧಾನ ಮಾಡಿದುದು ಎಂದು ಹೇಳಿಕೊಳ್ಳುತ್ತಾರೆ. ಅದನ್ನು ದೃಢೀಕರಿಸಲು ಒಂದು ಕತೆ ಹೀಗಿದೆ.

ಒಮ್ಮೆ ಛತ್ರಪತಿ ಶಿವಾಜಿ ಮಹಾರಾಜ ಇವರ ಒಂದು ದೊಡ್ಡಿಯ ಸಮೀಪವೇ ಬೇಟೆಗಾಗಿ ಬಂದ. ಅವನಿಗೆ ನೀರಡಿಕೆಯಾಯಿತು. ತುಸು ವಿಶ್ರಾಂತಿಯೂ ಬೇಕಾಯಿತು. ವಿಶ್ರಮಿಸಲು ತಾಣವನ್ನು ಅರಸುತ್ತಿದ್ದಾಗ ಅಲ್ಲಿಗೆ ಕರಡಿಯೊಂದು ಬಂದುಬಿಟ್ಟಿತು. ಮಹಾರಾಜನ ಬೆಂಗಾವಲಿನ ಭಟರು ಕರಡಿಗೆ ಹೆದರಿಕೊಂಡು ಮರಗಳನ್ನು ಹತ್ತಿಬಿಟ್ಟರು. ಅಲ್ಲೇ ಇದ್ದ ಗೌಳಿಗರು ಕರಡಿಯನ್ನು ಓಡಿಸಿ ಮಹಾರಾಜನನ್ನು ರಕ್ಷಿಸಿ ಅವನ ಕೃಪೆಗೆ ಪಾತ್ರರಾದರು. ಶಿವಾಜಿ ಮಹಾರಾಜನು ಗೌಳಿಗರಿಗೆ ಕೃತಜ್ಞತೆಯ ದ್ಯೋತಕವಾಗಿ ಒಂದು ತಾಮ್ರ ಫಲಕ (ತನ್ನ ರಾಜ್ಯದ ಯಾವ ಭಾಗದಲ್ಲಿ ಬೇಕಾದರೂ ನಿರಾತಂಕವಾಗಿ ಗೌಳಿಗರು ಸಂಚರಿಸಬಹುದು ಎಂದು ಬರೆಸಿಕೊಟ್ಟನು) ಹಾಗೂ ಖಡ್ಗವನ್ನು ನೀಡಿದ. ಅಂದಿನಿಂದ ಗೌಳಿಗರು ಖಡ್ಗವನ್ನು ತಮ್ಮ ಲಾಂಛನವನ್ನಾಗಿ ಹೊಂದಿದ್ದಾರೆ.[೩೭]

## ೨.೫ ಈಗಿನ ವಾಸಸ್ಥಳಗಳು

ಧನಗರ ಗೌಳಿ ಸಮುದಾಯದ ಜನರು ಬೆಟ್ಟ, ಗುಡ್ಡ, ಕರಾವಳಿಯ ದಟ್ಟವಾದ ಕಾಡುಗಳಲ್ಲಿ ವಾಸ ಮಾಡುತ್ತಾ ತಮ್ಮದೇ ಆದ ಭಾಷೆ, ಸಂಸ್ಕೃತಿ, ಆಚರಣೆಗಳನ್ನು ಅಳವಡಿಸಿಕೊಂಡು ಕಾಡಿನ ಮಧ್ಯದಲ್ಲಿ ಇದ್ದುಕೊಂಡು ಗುಂಪು ಗುಂಪಾಗಿ ವಾಸ ಮಾಡುವವರಾಗಿದ್ದಾರೆ.

ನಮ್ಮ ಅಧ್ಯಯನಕ್ಕೆ ಸಂಬಂಧಿಸಿದಂತೆ ಉತ್ತರ ಕನ್ನಡ ಜಿಲ್ಲೆಯ ಹಳಿಯಾಳ, ಜೋಯಿಡಾ, ಮುಂಡಗೋಡ ಹಾಗೂ ಯಲ್ಲಾಪುರ ತಾಲೂಕುಗಳಲ್ಲಿ ಧನಗರ ಗೌಳಿ ಸಮುದಾಯದವರು ವಾಸಿಸುವ ಸ್ಥಳಗಳ ಹೆಸರುಗಳನ್ನು ಪಟ್ಟಿ[೧೦] ಮಾಡಿ ಅನುಬಂಧ ೫ರಲ್ಲಿ ಕೊಡಲಾಗಿದೆ.

### ಅಡಿಟಿಪ್ಪಣಿಗಳು

೧) ಉ.ಕ. ಜಿಲ್ಲೆಯ ಅಂಕಿ-ಅಂಶಗಳ ನೋಟ, ಭಾಗ-೨, ಪು. ೬೯.

೨) Suryanath V. Kamath, Gazetteer of India, Karnataka State Gazetteer-1985, Uttara Kannada Dist. PP. 1, 2.

೩) ಉ.ಕ. ಜಿಲ್ಲೆಯ ಅಂಕಿ-ಅಂಶಗಳ ನೋಟ, ಭಾಗ-೨, ಪು. ೭೦.

೪) ಅದೇ ಪು. ೭೦

೫) Gazetteer of India, Karnataka State Gazetteer, Uttara Kannada Dist. - 1985 - PP. 1,2.

೬) ಪ್ರೊ. ಪಿ. ಮಲ್ಲಪ್ಪ, - ಕರ್ನಾಟಕ ಭೂಗೋಳಶಾಸ್ತ್ರ - ೧೯೯೩, ಪು. ೩೧.

೭) ಉ.ಕ. ಜಿಲ್ಲೆಯ ಅಂಕಿ-ಅಂಶಗಳ ನೋಟ.

೮) ಬೋರಲಿಂಗಯ್ಯ ಹಿ.ಚಿ. - 'ಸಿದ್ದಿಯರ ಸಂಸ್ಕೃತಿ'-೧೯೯೩, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರ, ಪು. ೨೬.

೯) ಲಕ್ಕಪ್ಪಗೌಡ ಎಚ್.ಜೆ. - ಕರ್ನಾಟಕ ಬುಡಕಟ್ಟುದಲ್ಲಿ ಲೇಖನ-ಗೊಂಡರು-ಶಾಂತಿನಾಯಕ

೧೦) ಲಕ್ಕಪ್ಪಗೌಡ ಎಚ್.ಜೆ. - ಕರ್ನಾಟಕ ಬುಡಕಟ್ಟು.

೧೧) ಬೋರಲಿಂಗಯ್ಯ ಹಿ.ಚಿ. - ..ಕುಣಬಿಯರು.. ಪ್ರಸಾರಾಂಗ, ಕ.ವಿ.ವಿ. ಹಂಪಿ. ಪು. ೧೮-೩೭.

೧೨) ಉ.ಕ. ಜಿಲ್ಲೆಯ ಅಂಕಿ-ಅಂಶಗಳ ನೋಟ, ಭಾಗ-೧

೧೩) ಸಿ.ವಿ. ಸೋಮಶೇಖರಪ್ಪ - 'ಗೌಳಿ ಲಿಂಗಾಯತರು' ಪು. ೯೩.

೧೪) Internet : Home-Dhangar. org-innocent people who wander with flocks and ferds. PP. - 1/2.

೧೫) Internet : Dhangar dans-dhangarorg - PP 1/1.

೧೬) Internet : Dhangar - wikipedia, the free encyolopedia, PP 1/5.

೧೭) R.E. Enthoven - The Tribes and castes of Bombay, 1922, PP. 311.

೧೮) Dhangar - http://www.enotes.com/tapic/Dhangar PP2/10.

೧೯) R.E. Enthoven - The Tribes and castes of Bombay, 1922, PP 313.

೨೦) Internet: http://www.dhangar.org/dhangar-gotra-list.php PP.1-7.

೨೧) R.E. Enthoven - The Tribes and castes of Bombay, 1922, PP. 315, 316.

೨೨) Gadgil & Marhotra - The Ecological Basis of the Geographical Distribution of the Dangars : A Pastoral Caste - Cluster of Maharashtra - South Asian Anthropologist - 1981, PP. 49.

೨೩) ಅದೇ ಪು. ೫೦, ೫೨.

೨೪) ಅದೇ ಪು. ೫೦, ೫೧.

೨೫) ಅದೇ ಪು. ೫೪, ೫೬, ೫೭ (ನಕ್ಷೆಗಳು)

೨೬) Gadgil & Malhotra - Eeoogy of a Pastoral Caste: Gavli Dhangars of Peninsular India, - Human Ecology, vol.10, No.1, 1982, PP. 109, 112, 113, 117, 120 (Maps)

೨೭) ಕ್ಷೇತ್ರಕಾರ್ಯ: ಸಂದರ್ಶನ – ಮಾಲು ಗುಂಡು ವರಕ್ (೬೫), ಯರೆಬೈಲ್ ಗ್ರಾಮ (ಮುಂಡಗೋಡ ತಾಲೂಕ) ಮತ್ತು ಧೂಳು ಗಾವಡೆ (೯೦), ಬಡ್ಡಿಗೇರಿ ಗ್ರಾಮ (ಮುಂಡಗೋಡ ತಾಲೂಕು).

೨೮) Gadgil & Malhotra - South Asian Authoropologist - 1981, PP - 55-58.

೨೯) ಕ್ಷೇತ್ರಕಾರ್ಯ: ಸಂದರ್ಶನ – ಲಕ್ಷ್ಮಣ ಜಂಗತಿ (೬೫), ಮಾಜಿ ಸೈನಿಕ, ಭೊತಾಕನ್ಸಿಡಾ, ಹಳಿಯಾಳ ತಾಲೂಕ; ವಿಠ್ಠು ಮಿಸಳ್ (೭೭), ಬಡ್ಡಿಗೇರಿ, ಮುಂಡಗೋಡ ತಾಲೂಕ

೩೦) Internet - http://www.enotes.com/topic/Dhangar, PP. 6/10.

೩೧) ಡಾ॥ ಎಚ್.ಎಮ್. ಮಹೇಶ್ವರಯ್ಯ – ..ಗೌಳಿಗರು.. (ಲೇಖನ), ಕರ್ನಾಟಕ ಬುಡಕಟ್ಟುಗಳು, ಸಂಪುಟ–೧, ಸಂ/ಎಚ್.ಜೆ. ಲಕ್ಕಪ್ಪಗೌಡರು, ಪು. ೧೦೨–೧೦೩.

೩೨) Internet - http://www.enotes.com/topic/Dhangar, PP. 6/10

೩೩) Internet from wikipedia, the free encyclopedia - April / June 2011. PP-3.

೩೪) R.E. Enthoven - The Tribes and castes of Bombay, 1922, PP. 311.

೩೫) ಅದೇ ಪು. ೩೧೧.

೩೬) Internet - http://www.enotes.com/topic/Dhangar PP.5/10.

೩೭) ಕ್ಷೇತ್ರ ಕಾರ್ಯ – ಕೊಲ್ಲಾಪುರ ಜಿಲ್ಲೆ, ಸಿಂಧುದುರ್ಗ ಜಿಲ್ಲೆಗೆ (ಮಹಾರಾಷ್ಟ್ರ) ಭೆಟ್ಟಿ/ಸಂದರ್ಶನ.

೩೮) Gadgil & Malhotra - Ecology of Pastoraleaste : Gavali Dhangars of Peninsular India. 1982 ; PP.109.

೩೯) ಕ್ಷೇತ್ರ ಕಾರ್ಯ. ಸಂದರ್ಶನ: ಲಕ್ಷ್ಮಣ ಜಂಗಲೆ (೬೫), ಮಾಜಿ ಸೈನಿಕ, ಭೋಟಾಕನ್ಸಿಡಾ, ಹಳಿಯಾಳ.

೪೦) ಕ್ಷೇತ್ರ ಕಾರ್ಯ. ಸಂದರ್ಶನ: ಬಾಗು ಪಿಂಗಳೆ ಹಾಗೂ ದೊಂಡು ಪಾಟೀಲ – ಧನಗರ ಗೌಳಿ ಜನರು ವಾಸಿಸುವ ಸ್ಥಳಗಳ ಹೆಸರು ಸಂಗ್ರಹಣೆ.



# ಅಧ್ಯಾಯ ೩

# ಗೌಳಿ ಸಮುದಾಯದ ಸಾಮಾಜಿಕ ಸ್ಥಿತಿಗತಿಗಳು

೩.೧ ಪೀಠಿಕೆ ಮತ್ತು ಸಂಕ್ಷಿಪ್ತ ಹಿನ್ನೆಲೆ

೩.೨ ಸಾಮಾಜಿಕ ಸ್ಥರ ವ್ಯವಸ್ಥೆಯಲ್ಲಿ ಗೌಳಿಗರ ಸ್ಥಾನಮಾನ

೩.೩ ಗೌಳಿ ಸಮುದಾಯದಲ್ಲಿನ ಸ್ತ್ರೀ ಸ್ಥಾನಮಾನಗಳು

೩.೪ ಕುಟುಂಬ ಪದ್ಧತಿ ಮತ್ತು ಜೀವನ ಆವರ್ತಗಳು

ಅಧ್ಯಾಯ ೩

# ಗೌಳಿ ಸಮುದಾಯದ ಸಾಮಾಜಿಕ ಸ್ಥಿತಿಗತಿಗಳು

---

## ೩.೧. ಪೀಠಿಕೆ ಮತ್ತು ಸಂಕ್ಷಿಪ್ತ ಹಿನ್ನೆಲೆ

ಸಮಾಜ ಶಾಸ್ತ್ರೀಯ ಅಧ್ಯಯನಗಳಲ್ಲಿ ಯಾವುದೇ ಸಮುದಾಯದ ಅಧ್ಯಯನ ಮಾಡುವಾಗ ಅದರ ಐತಿಹಾಸಿಕ ಹಿನ್ನೆಲೆ, ವಿಕಾಸದ ಹಂತಗಳು, ಕಾಲಕಾಲಕ್ಕೆ ಅದರಲ್ಲಿ ಆದಂಥ ಬದಲಾವಣೆಗಳ ಕಾರಣಗಳು ಹಾಗೂ ಪರಿಣಾಮಗಳು ಅಲ್ಲದೇ ಆ ಸಮುದಾಯದ ಸಮಕಾಲೀನ ಸಾಮಾಜಿಕ ಸ್ಥಿತಿಗಳ ಕುರಿತು ತಿಳಿದುಕೊಳ್ಳುವುದು ಅವಶ್ಯಕವಿದ್ದಷ್ಟೇ ಅನಿವಾರ್ಯವೂ ಆಗಿದೆ. ಪ್ರಸ್ತುತ ಅಧ್ಯಯನದಲ್ಲಿ ಈ ಅಗತ್ಯವನ್ನು ಪೂರೈಸುವುದಕ್ಕೋಸ್ಕರ ಉತ್ತರ ಕನ್ನಡ ಜಿಲ್ಲೆಯ ಗೌಳಿ (ಧನಗರ ಗೌಳಿ) ಸಮುದಾಯದ ಸ್ಥಿತಿಗಳನ್ನು ತಿಳಿದುಕೊಳ್ಳಲು ಒಂದು ಪ್ರಾಮಾಣಿಕ ಪ್ರಯತ್ನ ಮಾಡಲಾಗಿದೆ. ಈ ಗೌಳಿಗರನ್ನು "ಧನಗರ ಗೌಳಿ", "ಗೌಳಿ ಧನಗರ" ಹಾಗೂ ಕಚ್ಚೆ ಗೌಳಿಗರೆಂದೂ ಕರೆಯುತ್ತಾರೆ.

ಧನಗರ ಜಾತಿ ಸಮೂಹದ ಮೂಲ ನೆಲೆ ಮಹಾರಾಷ್ಟ್ರ. ಮಹಾರಾಷ್ಟ್ರ ರಾಜ್ಯದ ಶೇ. ೭% ರಷ್ಟು ಅಂದರೆ ಸುಮಾರು ೨೦ ಲಕ್ಷದಷ್ಟು ಇವರ ಜನಸಂಖ್ಯೆ ಇದೆ. ಮಹಾರಾಷ್ಟ್ರದ ಅಕ್ಷಾಂಶ ೨೨$^0$–೬೦$^0$N ಹಾಗೂ ರೇಖಾಂಶ ೭೩$^0$–೮೦$^0$N ವ್ಯಾಪ್ತಿಯಲ್ಲಿ ಇವರು ಹಂಚಿ ಹೋಗಿದ್ದಾರೆ. ಮಹಾರಾಷ್ಟ್ರದಿಂದ ಶತಮಾನದಿಂದೀಚೆಗೆ ವಲಸೆ ಬಂದ ಉತ್ತರ ಕನ್ನಡ ಜಿಲ್ಲೆಯ ಗೌಳಿಗರಲ್ಲಿ ಕುಲಸಂಬಂಧಿಯಾದ ಆಚರಣೆಗಳು ಇಂದಿಗೂ ಉಳಿದುಕೊಂಡು ಬಂದಿವೆ. ಇವರ ಸಂಪ್ರದಾಯಗಳು ಮಹಾರಾಷ್ಟ್ರದ ಧನಗರ ಜನಾಂಗದ ಆಚರಣೆಗಳನ್ನು ಹೋಲುತ್ತವೆ. ಇವರು ಅದೇ ಮೂಲದಿಂದ ಬಂದವರೆಂದು ಹೇಳಲು ಸಾಕಷ್ಟು ಪುರಾವೆಗಳಿವೆ.

ಧನಗರ ಸಮುದಾಯವು ವಿಶಾಲ ಹಿಂದೂ ಸಾಮಾಜಿಕ ವ್ಯವಸ್ಥೆಯ ಒಂದು ಭಾಗ. ಪ್ರತಿಯೊಂದು ಜಾತಿಯು ಒಂದು ಒಳ ವಿವಾಹ ಸಮೂಹವಾಗಿದೆ. ಪ್ರತಿಯೊಂದು ಜಾತಿಗೂ ತನ್ನದೇ

ಸಂಪ್ರದಾಯವಿರುತ್ತದೆ ಹಾಗೂ ಪಾರಂಪರಿಕ ಉದ್ಯೋಗವನ್ನು ಹೊಂದಿರುತ್ತದೆ. ಈಗಲೂ ಈ ಲಕ್ಷಣಗಳು ಕೆಲಮಟ್ಟಿಗೆ ಉಳಿದುಕೊಂಡಿವೆ.

ಧನಗರ ಸಮುದಾಯದ ಸಾಮಾಜಿಕ ಸ್ಥಾನಮಾನ ಕುಣಬಿ ಸಮುದಾಯದ ನಂತರದ್ದು ಮತ್ತು ಘಿಸಾಡಿ, ಬುರುಡ, ಪಾರಿತ್, ಜಿನಗಾರ ಜಾತಿಗಳ ಮೇಲಿನದು. ಧನಗರ ಸಮುದಾಯದವರು ತಮ್ಮನ್ನು ಮರಾಠಿಗರೊಂದಿಗೆ ಹೋಲಿಸಿಕೊಳ್ಳುತ್ತಾರೆ ಮತ್ತು ಹಿಂದೂ ಸಮಾಜದಲ್ಲಿ ಒಳ್ಳೆಯ ಸ್ಥಾನಮಾನ ಹೊಂದಿದ್ದೇವೆ ಎಂದು ಹೇಳಿಕೊಳ್ಳುತ್ತಾರೆ. ಅವರ ಮದುವೆಯ ಸಮಯದಲ್ಲಿ ಧಾರ್ಮಿಕ/ಸಾಂಸ್ಕೃತಿಕ ಚಿನ್ಹೆಯ ಸಾಂಕೇತಿಕವಾಗಿ ಪೂಜಿಸುವ ಗಿಡಗಳಿಂದ ಹಾಗೂ ಅವರ ಭೌತಿಕ ಲಕ್ಷಣಗಳು ಅಂದರೆ ಕಪ್ಪು/ಗೋದಿ ಮೈಬಣ್ಣ, ಧೃಢಕಾಯ ಶರೀರ, ವರಟು ಮುಖ ಲಕ್ಷಣ ಇತ್ಯಾದಿಗಳಿಂದ ಅವರು ಆರ್ಯನ್ ಪೂರ್ವಿ ಕುಲಜಾತಿಯವರೆಂದು ಕಂಡು ಬರುತ್ತದೆ.[೧]

ಮನುಸ್ಮೃತಿ (೩.೬೧೬) ಪ್ರಕಾರ ಕುರಿ ಹಾಗೂ ಎಮ್ಮೆ ಸಾಕಾಣಿಕೆ ಮಾಡುವವರನ್ನು ಹೋಮ ನಡೆಯುವ ಸ್ಥಳದಲ್ಲಿ ಪ್ರವೇಶಿಸಲು ನಿರ್ಬಂಧವಿತ್ತು. ಹೀಗೆ ಮನುವಿನ ಪ್ರಕಾರ ಧನಗರ ಸಮಾಜದವರು ಕಡಿಮೆ ಜಾತಿಯವರಾಗಿದ್ದಾರೆ.[೨]

ಧನಗರ ಸಮಾಜವು ಹಿಂದೂ ಪದ್ಧತಿಯ ಉತ್ತರಾಧಿಕತ್ವವನ್ನೇ ಅನುಸರಿಸುತ್ತದೆ. ಧನಗರ ಸಮಾಜವು ಹಿಂದುತ್ವದ ಎರಡೂ ಅಂದರೆ ಶೈವ ಮತ್ತು ಭಾಗವತ್ ಧಾರ್ಮಿಕ ಸಂಪ್ರದಾಯಗಳನ್ನು ಅನುಸರಿಸುತ್ತದೆ. ಅವರ ಅತ್ಯಂತ ಅಚ್ಚುಮೆಚ್ಚಿನ ದೇವರುಗಳೆಂದರೆ ಪಂಢರಾಪುರದ ವಿಠೋಬಾ ಮತ್ತು ಕೊಲ್ಲಾಪೂರ ಜಿಲ್ಲೆಯ ಉದ್‌ಗಿರಿಯ ಮಹಾದೇವ. ಅವರು ವಿಶೇಷವಾಗಿ ಆರಾಧಿಸುವ ಕಿರಿಯ ದೇವರೆಂದರೆ ಖಂಡೋಬಾ ಮತ್ತು ಬಿರೋಬಾ. ಧನಗರ ಸಮಾಜದ ಮೂಲ ಪುರುಷ ಅರಣ್ಯದಲ್ಲಿ ಖಂಡೋಬಾನ ಪವಾಡಶಕ್ತಿಯನ್ನು ನೋಡಿದಾಗಿನಿಂದ ಖಂಡೋಬಾನನ್ನು ಪೂಜಿಸುತ್ತಿದ್ದಾರೆ. ಬಿರೋಬಾ ಅವರ ಮನೆದೇವರಿದ್ದಂತೆ.[೩]

ಅಹ್ಮದನಗರ ಜಿಲ್ಲೆಯಲ್ಲಿರುವ ಧನಗರ ಜನರು ಪೂಜಿಸುವ ಕಿರಿಯ ದೇವರೆಂದರೆ ಮಾರುತಿ, ಖಂಡೋಬಾ, ಶನಿ, ಸತ್ವಾಯಿ, ಜನಾಯಿ, ಜೋಖಾಯಿ, ಮ್ಹಾಸೋಬಾ. ಮಾರುತಿ ದೇವರಿಗೆ ಶನಿವಾರ ದಿವಸ ಕುಂಕುಮ ಹಚ್ಚಿ ತೆಂಗಿನಕಾಯಿ ಒಡೆಯುವರು. ಖಂಡೋಬಾ ದೇವರಿಗೆ ರವಿವಾರ ದಿವಸ ಅರಿಷಿಣ ಹಚ್ಚಿ ಎಲೆ–ಅಡಿಕೆ, ದಕ್ಷಿಣೆ ಸಲ್ಲಿಸಿ ತೆಂಗಿನಕಾಯಿ ಒಡೆಯುವರು. ಶನಿದೇವರಿಗೆ ಎಣ್ಣೆ ಹೊಯ್ದು ಅರಳೆ ಸರ ಹಾಕಿ ತೆಂಗಿನಕಾಯಿ ಒಡೆಯುವರು. ಸತ್ವಾಯಿ, ಜನಾಯಿ, ಜೋಬಾಯಿ, ಮ್ಹಾಸೋಬಾ ದೇವರಿಗೆ ವಾರ ಎಣಿಸದೇ ಯಾವ ದಿನವಾದರೂ ತೆಂಗಿನಕಾಯಿ, ಹಿಟ್ಟು, ಉಪ್ಪು, ಕಾಣಿಕೆ ಸಲ್ಲಿಸಿ ಪೂಜಿಸುತ್ತಾರೆ.[೪]

ಸಾತಾರಾ ಜಿಲ್ಲೆಯ ಮಹಾಬಳೇಶ್ವರದಲ್ಲಿ ಹಾಗೂ ಸುತ್ತಮುತ್ತ ಪೂಜಿಸಲ್ಪಡುವ ಕಿರಿಯ ದೇವರುಗಳೆಂದರೆ– ಮ್ಹಾಸೋಬಾ, ಬೆಹಾರಿ, ಜೋಲ್ಲಾ, ಗೋಥಾನೆರಾದ ಜನಾಯಿ, ಥಾಲದ ಜನಾಯಿ. ಮ್ಹಾಸೋಬಾ ಮತ್ತು ಬೆಹಾರಿ ಇವು ಗಂಡು ದೇವರುಗಳಾದರೆ ಉಳಿದವೆಲ್ಲಾ ಹೆಣ್ಣು ದೇವರು. ಗಂಡುದೇವರುಗಳಾದ ಮ್ಹಾಸೋಬಾ ಮತ್ತು ಬೆಹಾರಿ ದೇವರನ್ನು ರವಿವಾರ ಪೂಜಿಸಿದರೆ, ಉಳಿದ

ಹೆಣ್ಣು ದೇವರುಗಳನ್ನು ಮಂಗಳವಾರ ಪೂಜಿಸುತ್ತಾರೆ. ಸಾಮಾನ್ಯವಾಗಿ ಕಾಣಿಕೆ ಸಲ್ಲಿಸುವ ವಸ್ತುಗಳೆಂದರೆ ತೆಂಗಿನಕಾಯಿ, ಹೂವು ಮತ್ತು ಹಣ್ಣು.[೫]

ಖಾನದೇಶದಲ್ಲಿ ಧನಗರ ಜನರು ಪೂಜಿಸುವ ಕಿರಿಯ ದೇವತೆಗಳೆಂದರೆ–ಖಂಡೋಬಾ, ಮ್ಹಾಸೋಬಾ, ಎಕಿರೆ, ಕಾನಬಾಯಿ, ರೇಣುಬಾಯಿ ಮತ್ತು ಚನ್ಯಾಪಾಚ್ಯಾ. ಕೊನೆಯ ಚನ್ಯಾಪಾಚ್ಯಾ ಅಹಿರ್ ಧನಗರ ಜಾತಿಯ ಸಂರಕ್ಷಕ ದೇವತೆ.[೬]

ಜಾತ್ರೆಯ ದಿನಗಳಲ್ಲಿ ವಿಶೇಷ ಸನ್ಮಾನ ಮಾಡಲಾಗುತ್ತದೆ. ಆದಿನ ೬೦ ಕೋಳಿ, ೬೦ ಉತ್ತತ್ತಿ, ೧೨ ಆಡುಗಳನ್ನು ಈ ದೇವರುಗಳಿಗೆ ಬಲಿಕೊಡಲಾಗುತ್ತದೆ. ೬೦ ಕೋಳಿ ಯಾಕಂದರೆ, ಈ ಐದು ದೇವರುಗಳಲ್ಲಿ ೬೦ ಭೂತಗಳಿವೆ ಎಂಬ ನಂಬಿಕೆಯಿದೆ. ೨೫ ಭೂತಗಳು ಮ್ಹಾಸೋಬಾ ದೇವರಲ್ಲಿ ಮತ್ತು ೩೫ ಭೂತಗಳು ಉಳಿದ ದೇವರುಗಳಲ್ಲಿ. ೧೨ ಆಡುಗಳ ಬಲಿ ಕೊಡುವ ಮಹತ್ವ ಏನೆಂದರೆ– ಅವರ ನಂಬಿಕೆಯ ಪ್ರಕಾರ ಮನುಷ್ಯ ಸತ್ತರೆ ಅವನು ಪಿತರ್ ಆಗುತ್ತಾನೆ. ೧೨ ಪಿತರ್ ಕೂಡಿದರೆ ಒಂದು ಭೂತವಾಗುವುದು. ಅದಕ್ಕಾಗಿ ೧೨ ಆಡುಗಳನ್ನು ಬಲಿ ಕೊಡುತ್ತಾರೆ. ಗಂಡಸರು ಮತ್ತು ಋತುಮತಿಯಾಗದ ಕುಮಾರಿಯರು ಮಾತ್ರ ಈ ದೇವರುಗಳ ಪೂಜೆ ಮಾಡಬಹುದು. ತಿಂಗಳ ರಜಸ್ವಲೆಯಾಗದ ಹೆಂಗಸರು ಬಿಳಿ ಅಥವಾ ಕೆಂಪು ವಸ್ತ್ರ ಧರಿಸಿ ದೂರ ನಿಲ್ಲಬಹುದು. ಅವರು ಪೂಜೆ ಮಾಡಲು ಒತ್ತಾಯದಿಂದ ಪ್ರಯತ್ನಿಸಿದರೆ ಅವರಿಗೆ ಕೆಟ್ಟದ್ದಾಗುವುದು. ಸಾಮಾನ್ಯವಾಗಿ ಧನಗರರು ತಮ್ಮ ದನ/ಕುರಿ ಹಿಂಡುಗಳನ್ನು ಗುಡ್ಡದಲ್ಲಿ ಮೇಯಲು ತರುಬಿದಾಗ ಒಂದು ಕಿರಿಯ ದೇವರ ಹೆಸರಲ್ಲಿ ಒಂದು ಕಲ್ಲನ್ನು ಗುಡ್ಡದ ಮೇಲೆ ಇಟ್ಟು ಅದಕ್ಕೆ ಗಂಧವನ್ನು ಲೇಪಿಸುತ್ತಾರೆ, ಆ ದೇವರಿಗೆ ತನ್ನದೇ ಆದ ವಿಶೇಷವಾದ ಗುಡಿ ಇದ್ದರೂ ಕೂಡ. ಉದಾ: ಪುಣೆಯ ಜೆಜೂರಿಯಲ್ಲಿರುವ ಖಂಡೋಬಾ, ತುಳಜಾಪುರದಲ್ಲಿರುವ ತುಕಾಯಿ, ಸೊಲ್ಲಾಪುರದ ಮರಡಿಯಲ್ಲಿರುವ ಮೆಮಾಯಿ, ಅಹ್ಮದನಗರದ ಸೆನ್‌ರಾಯಿಯಲ್ಲಿ, ಪಂಚಾಳ ಸಮೀಪದ ಕೂಡ್ಲಿಯಲ್ಲಿ ಮತ್ತು ಬಿಜಾಪುರ ಜಿಲ್ಲೆ ಇಂಡಿ ತಾಲೂಕಿನ ರಾಜಿಯಲ್ಲಿ ಇರುವ ಬಿರೋಬಾ.[೭]

ಧನಗರ ಸಮುದಾಯದ ಜನರು ಡೆಕ್ಕನ್ ಮತ್ತು ಕೊಂಕಣ ಪ್ರದೇಶವಲ್ಲದೇ ಮಹಾರಾಷ್ಟ್ರದ ಬೇರೆ ಜಿಲ್ಲೆ ಪ್ರಾಂತಗಳಲ್ಲಿ ಹಾಗೂ ಮಧ್ಯ ಉತ್ತರ ಭಾರತದ ಪ್ರದೇಶಗಳಲ್ಲಿಯೂ ಹರಡಿ ಹೋಗಿದ್ದಾರಲ್ಲದೇ ಬೇರೆ ಬೇರೆ ವೃತ್ತಿಗನುಗುಣವಾಗಿ ಸಾಕಷ್ಟು ಜಾತಿ, ಉಪಜಾತಿಗಳು ಉದ್ಭವಿಸಿವೆ.

**೩.೧.೧. ಧನಗರ ಸಮಾಜದ ಮುಖ್ಯ ಉಪಜಾತಿಗಳು ಈ ಕೆಳಗಿನಂತಿವೆ[೮]**

೧) ಅಹೀರ್
೨) ಗೌಳಿ
೩) ಮ್ಹಾಸ್ಕರ್
೪) ಗುರ್ಜಾರ
೫) ಯದು (ಯಾದವ)
೬) ಹಟ್ಕರ್
೭) ಬಾರ್ಗಿ
೮) ಬಾರಾಹಟ್ಟಿ
೯) ಬ್ಹಾರಟ್ಟಾ
೧೦) ಬಾರ್ಗಾಹಿ
೧೧) ಬಾರಾಗಾಹಿ
೧೨) ಬಾರಾಘರ್

೧೩) ಬಂದೆ (ಕ್ರಾಂತಿಕಾರಿ)
೧೪) ಝುಂಡೆ (ಧೈರ್ಯವಂತರು)
೧೫) ಭಿಲಾರಿ
೧೬) ಖಿಲಾರಿ
೧೭) ಮೆಟ್ಕರಿ
೧೮) ಡಾಂಗೆ
೧೯) ಬಕರ್ವಾಲ್
೨೦) ಭರ್ವಾಡ್
೨೧) ಬಾಘೇಲ್
೨೨) ಪಾಲ್
೨೩) ಗದಾರಿ
೨೪) ಗದಾರಿಯಾ
೨೫) ಗದ್ದಿ
೨೬) ಕುರುಬ (ನಂಬಿಕೆ ಉಳ್ಳವರು)
೨೭) ಕನೋರ್
೨೮) ಕಾನಡೆ
೨೯) ಕುರ್ಮರ್
೩೦) ಕುರುಬರ
೩೧) ಕುರಂಬರ
೩೨) ಇದಾಯಿಯಾನ್
೩೩) ಇಂದಾಯಿಯಾರ್
೩೪) ಇದಾಯಿಗಾ
೩೫) ಕೋನಾರ್
೩೬) ಗೊಲ್ಲ
೩೭) ನೀಖರ್
೩೮) ನಿಖೇರ್
೩೯) ಖುಟೆಕರ್
೪೦) ದೇವಾಂಗ
೪೧) ಕ್ಷಿತ್ರಿ
೪೨) ಖತ್ರಿ
೪೩) ಕುಕ್ಟೆಕರ್
೪೪) ಸೆಂಗಾರ
೪೫) ಸಂಗಾರ
೪೬) ಸಂಗಾರ
೪೭) ಶೆಗಾರ
೪೮) ಲಾಡಮೆಂಢೆ
೪೯) ಲಾಡಸೆ
೫೦) ಝುಡೆ
೫೧) ಝುಡೆ
೫೨) ಹುಲವಾನ್
೫೩) ಕೋಕಣಿ
೫೪) ಮಾಹುರೆ
೫೫) ಮಾಹುರಾಯಿ
೫೬) ತೆಲಂಗೆ
೫೭) ತೆಲ್ಲಾರಿ
೫೮) ವರ್ಹಾಡೆ
೫೯) ವರದಿ
೬೦) ಬರಾಡೆ
೬೧) ಖಟಿಕ್
೬೨) ಒರಾವೋನ್
೬೩) ತಳವಾರ
೬೪) ಬಂಜಾರ/ವಂಜಾರ
೬೫) ಕಂಬಾರ
೬೬) ಶಿರೊತ್ಯ
೬೭) ಶಿರೋತ್ಯಾ
೬೮) ಉಟೆಕರ್
೬೯) ಗಾಡ್ಗೆ

ಮೂಲತಃ ಧನಗರ ಸಮುದಾಯವು ಬುಡಕಟ್ಟು ಆಗಿರುವದರಿಂದ ಉಪಜಾತಿಗಳನ್ನು ಗಣನೆಗೆ ತಾರದೇ ಎಲ್ಲರೂ ಒಂದೇ ಧನಗರ ಜಾತಿಗೆ ಸೇರಿದವರೆಂದು ತಿಳಿಯುತ್ತಾರೆ. ಅದೇ ರೀತಿ ಉತ್ತರ ಹಾಗೂ ದಕ್ಷಿಣ ಭಾರತದಲ್ಲಿಯ ಧನಗರರು ಒಂದೇ ವಂಶದವರೆಂದು ತಿಳಿಯುತ್ತಾರೆ. ಮರಾಠಿ

ಪ್ರದೇಶದಲ್ಲಿದ್ದ ಧನಗರರಿಗೆ ಮರಾಠಾ ಧನಗರ ಎಂದೂ ಕರೆಯುವರು. ಆದರೆ ಎಲ್ಲ ಮರಾಠರು ಧನಗರರಲ್ಲ. ವೀರರಾದ ಧನಗರರು ಛತ್ರಪತಿ ಶಿವಾಜಿ ಮಹಾರಾಜನ ಸೈನ್ಯದಲ್ಲಿ ಬಹಳಷ್ಟು ಜನರು ಸೇರ್ಪಡೆಯಾಗಿದ್ದರು. ಅರಣ್ಯ ಜೀವಿಗಳಾದ ಧನಗರರು ಶಿವಾಜಿ ಮಹಾರಾಜನ ಸೈನ್ಯದ ಗೆರಿಲ್ಲಾ ಪಡೆಯ ಜೀವಾಳ ಆಗಿದ್ದರು.

'ಪುಣೆ ಜಿಲ್ಲೆಯಲ್ಲಿ ಅಸಲ, ಹಟ್ಕರ್, ಶೆಗಾರ ಮತ್ತು ತಿಲಾರಿ ಧನಗರರು ಕಂಡುಬರುತ್ತಾರೆ. ಮೊದಲ ಎರಡು ಜಾತಿಯವರು ಇಂದಾಪೂರ, ಭೀಮತಡಿ, ಪುರಂಧರ ತಾಲೂಕಗಳಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ಬಹುತೇಕ ಅಸಲ್ ಅಥವಾ ಶೆಗಾರ ಜಾತಿಯವರು ಕೃಷಿಕರು, ಪಾಟೀಲರು, ಸೈನಿಕರೂ ಆಗಿದ್ದಾರೆ ಮತ್ತು ಕೆಲವರು ಕುರಿ ಸಾಕಾಣಿಕೆ, ನೇಕಾರಿಕೆ ಮಾಡುತ್ತಾರೆ. ತಿಲಾರಿ ಜಾತಿಯವರು ಪಶು ಸಾಕಾಣಿಕೆ ಮಾಡುವ ಅಲೆಮಾರಿ ಜನರಾಗಿದ್ದಾರೆ. ಆದರೆ ಅವರು ಉಳಿದವರ ಜೊತೆ ಸಮೀಪ ಸಂಬಂಧವಿಟ್ಟುಕೊಂಡಿಲ್ಲ.

ಅಹ್ಮದನಗರ ಪ್ರದೇಶದಲ್ಲಿ ಹತ್ತು ಉಪಜಾತಿಗಳು ನೆಲೆಸಿದ್ದಾರೆ. ೧) ಅಹೀರ್ ೨) ಬಣಜಿ ೩) ಬಾರ್ಗಿ ೪) ಗಾಡ್ಗೆ ೫) ಹಟ್ಕರ ೬) ಕಂಗಾರ್ ೭) ಖುಟೆಕರ್ ೮) ಮರಾಠಾ ೯) ಸಂಗಾರ ೧೦) ಶೆಗಾರ್ ಅವರು ಒಂದೇ ಕಡೆ ನೆಲೆಸಿದ್ದರೂ ವಿವಾಹ ಸಂಬಂಧಗಳು ನಡೆಯುವುದಿಲ್ಲ.

ಸೋಲಾಪುರದಲ್ಲಿ ೧) ಬಾರ್ಗಿ ಅಥವಾ ಬಂಡೆ ೨) ಹಟ್ಕರ್ ೩) ಖುಟೆಕರ್ ಮತ್ತು ೪) ಖುಟೆ ಜಾತಿಯ ಜನರು ನೆಲೆಸಿದ್ದಾರೆ.

ಸಾತಾರಾ ಜಿಲ್ಲೆಯಲ್ಲಿ ೧) ಹಟ್ಕರ್ ೨) ಖುಟೆಕರ್ ಜಾತಿಗೆ ಸೇರಿದ ಜನರು ನೆಲೆಸಿದ್ದಾರೆ. ಅವರು ಒಂದೇ ಕಡೆ ನೆಲೆಸಿದ್ದರೂ ಯಾವುದೇ ವಿವಾಹ ಸಂಬಂಧಗಳು ನಡೆಯುವುದಿಲ್ಲ.

ನಾಸಿಕ ಜಿಲ್ಲೆಯಲ್ಲಿ ೧) ಅಹಿರ್ ೨) ಹಟ್ಕರ ೩) ಖುಟೆಕರ ೪) ಲಾಡ್ ಮತ್ತು ೫) ಶೆಗಾರ ಉಪಜಾತಿಗಳು ನೆಲೆಸಿದ್ದಾರೆ.

ಖಾನದೇಶದಲ್ಲಿ (ಜಳಗಾವ್, ಧಾಲಿಯಾ ಜಿಲ್ಲೆ) ೧) ಅಹಿರ್ ೨) ಘೋಗಾತುನ್ಯ ೩) ಹಟ್ಕರ್ ೪) ಹೋಳ್ಕರ್ ೫) ಖುಟೆಕರ್ ೬) ಮರಾಠಾ ೭) ಶೆಗಾರ್ ೮) ಶಿಲೋತ್ಯಾ ೯) ತಿಲಾರಿ ಅಥವಾ ಖಿಲಾರಿ ಧನಗರ ಜಾತಿಗಳ ಜನರು ನೆಲೆಸಿದ್ದಾರೆ.

ಠಾಣಾ ಜಿಲ್ಲೆಯಲ್ಲಿ ೧) ಖುಟೆಕರ ಜಾತಿಯವರು ಕಂಬಳಿ ನೇಯುತ್ತಾರೆ. ೨) ಗೌಳಿ ಧನಗರ ಜಾತಿಯವರು ಆಕಳು ಮತ್ತು ಎಮ್ಮೆ ಸಾಕಾಣಿಕೆ ೩) ಮೆಂಡೆ ಧನಗರ ಜಾತಿಯವರು ಕುರಿ, ಆಡು ಸಾಕಾಣಿಕೆ ಮಾಡುತ್ತಾರೆ. ಅವರು ಒಂದೇ ಕಡೆ ನೆಲೆಸಿದ್ದರೂ ಇವರಲ್ಲಿ ವಿವಾಹ ಸಂಬಂಧಗಳು ನಡೆಯುವುದಿಲ್ಲ.

ಕೊಲಾಬಾ ಜಿಲ್ಲೆಯಲ್ಲಿ ೧) ಮ್ಹಾಸ್ಕೆ ಧನಗರ ಜಾತಿಯವರು ಎಮ್ಮೆ ಸಾಕಾಣಿಕೆ ೨) ಖಿಲಾರಿ ಧನಗರ ಜಾತಿಯವರು ಕುರಿ, ಆಡು ಸಾಕಾಣಿಕೆ ೩) ಉಟೆಗಾರ ಧನಗರ ಜಾತಿಯವರು ಕಂಬಳಿ ನೇಯುವವರು ನೆಲೆಸಿದ್ದಾರೆ. ಕೊಲಾಬಾ ಜಿಲ್ಲೆಯ ಮೂಲ ಧನಗರ ಎಂದರೆ ಮ್ಹಾಸ್ಕೆ ಜಾತಿಯವರು.'[೯]

ಸಹ್ಯಾದ್ರಿ ಘಟ್ಟದಲ್ಲಿರುವ ಡಾಂಗೆ, ವ್ಹಾಘ್ಸೆ, ಗೌಳಿ ಧನಗರ ಜನರು ಒಂದೇ ಒಳಸಮೂಹದವರಾಗಿದ್ದು, ಎಮ್ಮೆ ಸಾಕಾಣಿಕೆ ಮಾಡುತ್ತಾರೆ. ಖಿಲಾರಿ ಧನಗರ ಜನರು ದನಗಳನ್ನು ಸಾಕಾಣಿಕೆ, ಮೆಂಡೆ ಧನಗರ ಜನರು ಕುರಿ, ಆಡುಗಳ ಸಾಕಾಣಿಕೆ ಮಾಡುತ್ತಾರೆ. ಡಾಂಗೆ/ಗೌಳಿ ಧನಗರರೇ ರತ್ನಾಗಿರಿ, ಕೊಲ್ಲಾಪೂರ ಜಿಲ್ಲೆ (ಮಹಾರಾಷ್ಟ್ರ) ಯಿಂದ ಉತ್ತರ ಕನ್ನಡ ಜಿಲ್ಲೆಗೆ ವಲಸೆ ಬಂದವರು ಎಂದು ಹೇಳಲಾಗುತ್ತದೆ.

**೩.೧.೨. ಉತ್ತರ ಕನ್ನಡ ಜಿಲ್ಲೆಯಲ್ಲಿ ಧನಗರ ಗೌಳಿಗರು**

ಮಹಾರಾಷ್ಟ್ರದಿಂದ ವಲಸೆ ಬಂದ ಧನಗರ ಜನರು ಉತ್ತರ ಕನ್ನಡ ಜಿಲ್ಲೆಯ ಹಳಿಯಾಳ, ಜೊಯಿಡಾ, ಮುಂಡಗೋಡ ಮತ್ತು ಯಲ್ಲಾಪೂರ ತಾಲೂಕಿನ ಅರಣ್ಯ ಪ್ರದೇಶದಲ್ಲಿ ನೆಲೆಸಿದ್ದಾರೆ. ಇವರ ಕುರಿತು ಸನ್ ೧೮೮೨ರಲ್ಲಿ ಮುಂಬೈ ಇಲಾಖೆಗೆ ಸೇರಿದ ಕರ್ನಾಟಕ ಭಾಗದ ಗ್ಯಾಝೆಟಿಯರ್ ಹೀಗೆ ದಾಖಲು ಮಾಡಿದೆ.

‘**ಧನಗರರು:** ಇವರು ಕಾನಡಾ ಜಿಲ್ಲೆಯಲ್ಲಿ ಯಲ್ಲಾಪೂರ ತಾಲೂಕಿನ ಅಡವಿಯಲ್ಲಿ ಇರುತ್ತಾರೆ. ಇವರ ಜನ್ಮ ಭಾಷೆ ಮಹಾರಾಷ್ಟ್ರವಾದಾಗ್ಯೂ, ಇವರು ಕೊಂಕಣಿಗರಲ್ಲ, ಮಹಾರಾಷ್ಟ್ರ ದೇಶದವರು. ಇವರ ಮೈಬಣ್ಣ ಕಪ್ಪು, ಆಳು ಗಿಡ್ಡ; ಲಂಗೋಟ, ರುಮಾಲ, ಕಂಬಳಿ, ಇಷ್ಟೇ ಇವರ ಉಡುಗೆಗಳು. ಹೆಂಗಸರು ಕುಬ್ಬಸ ಹಾಕುವರು, ಕಚ್ಚೆ ಹಾಕುವರು; ಹೊಲಸು ಬಹಳ. ಈ ಧನಗರರು ಯೆಮ್ಮೆ, ಆಕಳುಗಳನ್ನು ಸಾಕಿ ತುಪ್ಪ ಮಾಡಿ ಮಾರುವರು. ತುಪ್ಪವು ಕೂಡಿ ಬಂದಹಾಗೆ ನೆಲದೊಳಗೆ ತಗ್ಗು ತೆಗಿದು ಅದರೊಳಗೆ ಗಿರಾಕಿ ಬರುವವರೆಗೆ ಸಂಗ್ರಹ ಮಾಡಿ ಇಡುವರು. ಇವರ ಯೆಮ್ಮೆ, ಆಕಳು, ಕೋಣ, ಯೆತ್ತುಗಳು ದೊಡ್ಡವು, ಕಸುವುಳ್ಳವು; ಅವುಗಳಿಗೆ ಬೆಲೆ ಬಹಳ ಬೀಳುತ್ತದೆ. ಧನಗರರು ಮಳೆಗಾಲ ಹೋದ ಬಳಿಕ ಅಡವಿಯಲ್ಲಿ ಹುಲ್ಲು ಇರುವವರೆಗೆ ದನಗಳನ್ನು ತಕ್ಕೊಂಡು ಊರೂರು ತಿರುಗುತ್ತ, ಹಾಲು ಮೊಸರು, ತುಪ್ಪ, ಗೊಬ್ಬರಗಳನ್ನು ಮಾರುವರು. ಇವರು ಮದ್ಯ ಮಾಂಸ ತಕ್ಕೊಳ್ಳುವರು, ವಿಧವೆಗಳ ಲಗ್ನ ಮಾಡುವರು. ಯಾವ ಕಾರ್ಯಕ್ಕೂ ಬ್ರಾಹ್ಮಣರನ್ನಾಗಲಿ, ಜಂಗಮರನ್ನಾಗಲಿ ಕರೆಯುವುದಿಲ್ಲ, ಹೆಣ್ಣುಮಕ್ಕಳ ಲಗ್ನವನ್ನು ಹನ್ನೆರಡು ವರ್ಷದೊಳಗೆ ಮಾಡುವರು. ಇವರು ಹೆಣ್ಣು ದೇವತೆಗಳಿಗೆ ನಡೆದುಕೊಳ್ಳುವುದು ಹೆಚ್ಚು. ಲಗ್ನದ ವಿಧಾನಗಳು ಮರಾಠೀ ಜನರಂತೆ ಆಗುತ್ತವೆ; ಹೆಣಗಳನ್ನು ಹುಗಿಯುವರು. ಇವರ ಮಕ್ಕಳು ಶಾಲೆಗೆ ಹೋಗುವುದಿಲ್ಲ.’[೧೦]

ಮುಂಬೈ ಇಲಾಖೆಗೆ ಸೇರಿದ ಕರ್ನಾಟಕ ಭಾಗದ ಗ್ಯಾಝೆಟಿಯರ್‌ನಲ್ಲಿ ಸನ್ ೧೮೮೨ರಲ್ಲಿ ಪ್ರಕಟಗೊಂಡ ಈ ಮೇಲಿನ ಪುಟ್ಟ ಟಿಪ್ಪಣಿಯು ಧನಗರರ ಹೆಸರಿನಲ್ಲಿದೆ. ಇವರನ್ನೇ ಇಂದು ಧನಗರ ಗೌಳಿ ಎಂದು ಕರೆಯಲಾಗುತ್ತಿದೆ.

ಧನಗರ ಗೌಳಿ ಬುಡಕಟ್ಟು ಮೂಲ ಸಂಸ್ಕೃತಿಯನ್ನು ಸಾಕಷ್ಟು ದಟ್ಟವಾಗಿ ಉಳಿಸಿಕೊಂಡು ಬಂದಿರುವ ಒಂದು ವಿಶಿಷ್ಟ ಬುಡಕಟ್ಟು. ‘ಆಚಾರ-ವಿಚಾರ, ವೇಷ-ಭೂಷಣ, ಆಹಾರ ಪದ್ಧತಿ, ಮನೆ ನಿರ್ಮಾಣ ಇವೇ ಮುಂತಾದವುಗಳಲ್ಲಿ ಪ್ರತ್ಯೇಕತೆಯನ್ನು ಕಾಯ್ದುಕೊಂಡು ಬಂದಿರುವ ಇವರು ಅಡವಿಗಳಲ್ಲಿ ತಮ್ಮ ಎಮ್ಮೆ ದನಗಳಿಗೆ ಹುಲ್ಲು, ನೀರು ದೊರಕುವ ಕಡೆಗಳಲ್ಲಿ ಪ್ರತ್ಯೇಕವಾದ ದೊಡ್ಡಿಗಳನ್ನು

ನಿರ್ಮಿಸಿಕೊಂಡು ಜೀವಿಸುತ್ತಿದ್ದಾರೆ. ದಟ್ಟಡವಿಗಳಲ್ಲಿಯೇ ಹೆಚ್ಚಾಗಿ ನೆಲೆಸಿರುವ ಇವರು ಇತರ ಸಮಾಜಗಳ ಜನರ ಗಮನ ಸೆಳೆದದ್ದು ಕಡಿಮೆಯೇ. ರಾಜಕೀಯವಾಗಿ, ಸಾಮಾಜಿಕವಾಗಿ ಸಂಘಟಿತವಲ್ಲದ ಈ ಜನರ ಆರ್ಥಿಕಾಭಿವೃದ್ಧಿ ಕುಂಠಿತಗೊಂಡಿರುವುದು ಸ್ವಾಭಾವಿಕ. ಪ್ರಭುತ್ವದ ತೀವ್ರ ನಿರ್ಲಕ್ಷ್ಯಕ್ಕೆ ಗುರಿಯಾಗಿರುವ ಇವರು ಇತ್ತೀಚಿನ ದಿನಗಳಲ್ಲಿ ರಾಜಕೀಯ, ಸಾಮಾಜಿಕ, ಆರ್ಥಿಕ ಕಾರಣಗಳಿಗಾಗಿ ಬದಲಾವಣೆ ಸಾಧಿಸಿಕೊಳ್ಳುತ್ತಿದ್ದಾರೆ. ಈ ಬದಲಾವಣೆಗೆ ಮುಖ್ಯ ಪ್ರೇರೇಣೆ ಸಾಂಸ್ಕೃತಿಕ ಪರಿವರ್ತನೆ'.[೧೧] ಧನಗರ ಗೌಳಿ ಸಮುದಾಯ ಸಂಸ್ಕೃತೀಕರಣದ ಪ್ರಭಾವಕ್ಕೆ ಒಳಪಟ್ಟಾಗಲೂ ತನ್ನ ಒಡಲಾಳದಲ್ಲಿ ಅಪ್ಪಟ ಬುಡಕಟ್ಟುತನವನ್ನು ಉಳಿಸಿಕೊಂಡಿರುವುದು ಗಮನಾರ್ಹ.

### ೩.೧.೪. ಜನಸಂಖ್ಯೆ

'ಕರ್ನಾಟಕದ ಅಲೆಮಾರಿ ಮತ್ತು ಅರೆ ಅಲೆಮಾರಿ ಬುಡಕಟ್ಟುಗಳ ಜನಸಂಖ್ಯೆಯ ಬಗೆಗೆ ಸಾಕಷ್ಟು ತೃಪ್ತಿಕರವಾದ ಅಂಕಿ-ಅಂಶಗಳು ಲಭ್ಯವಿಲ್ಲದಿರುವುದು ದೊಡ್ಡ ಲೋಪವಾಗಿದೆ. ಪ್ರಸ್ತುತ ಧನಗರ ಗೌಳಿಗರಿಗೆ ಸಂಬಂಧಿಸಿದಂತೆ ಕರಾರುವಕ್ಕಾಗಿ ನಮಗೆ ಅಂಕಿ-ಅಂಶಗಳು ದೊರಕುವುದಿಲ್ಲ. ಏಕೆಂದರೆ ಜನಗಣತಿ ಅಧಿಕಾರಿಗಳು ಸನ್ ೧೮೭೧ ರಿಂದ ೧೯೪೧ರವರೆಗೆ ಜಾತಿವಾರು ಮತ್ತು ಸಮುದಾಯವಾರು ಮಾಹಿತಿ ಕಲೆ ಹಾಕಿದಾಗ ಅವರಿಗೆ ಈ ಬುಡಕಟ್ಟು ಜನರ ಬಗೆಗೆ ಮಾಹಿತಿ ಇರಲಿಲ್ಲ. ಅದಕ್ಕೆ ಕಾರಣ ಈ ಬುಡಕಟ್ಟಿನ ಜನ ಅರಣ್ಯಗಳಲ್ಲಿ ಮತ್ತು ಗುಡ್ಡಗಾಡುಗಳಲ್ಲಿ ವಾಸಿಸುತ್ತಿದ್ದುದು. ಅಲ್ಲದೇ ಇವರ ಮೂಲ ಕಸುಬಾದ ಹೈನುಗಾರಿಕೆಗೆ ಅಗತ್ಯವಾದ ಮೇವು ನೀರುಗಳನ್ನು ದೊರಕಿಸಿಕೊಳ್ಳುವ ಕಾರಣಕ್ಕಾಗಿ ಇವರಿಗೆ ನಿಶ್ಚಿತವಾಗಿ ಒಂದೆಡೆ ನೆಲೆ ನಿಲ್ಲಲಾಗಲಿಲ್ಲ. ಹೀಗಾಗಿ ಇವರ ಸಂಖ್ಯೆ ಎಷ್ಟೆಂಬುದು ಖಚಿತವಾಗುವುದಿಲ್ಲ. ಸನ್ ೧೯೭೧ರ ಜನಗಣತಿ ಪ್ರಕಾರ ಕರ್ನಾಟಕದಲ್ಲಿ ಇವರ ಸಂಖ್ಯೆ ೫,೧೪೬ರಷ್ಟಿತ್ತು'.[೧೨]

ಪ್ರಸ್ತುತ ಅಧ್ಯಯನಕ್ಕೆ ಒಳಪಟ್ಟ ಉತ್ತರ ಕನ್ನಡ ಜಿಲ್ಲೆಯ ಮುಂಡಗೋಡ, ಯಲ್ಲಾಪೂರ, ಹಳಿಯಾಳ ಹಾಗೂ ಜೋಯಿಡಾ ಈ ನಾಲ್ಕು ತಾಲೂಕುಗಳಲ್ಲಿ ಗೌಳಿಗರ ಸಂಖ್ಯೆ ಅಂದಾಜು ೨೨-೨೫ ಸಾವಿರದಷ್ಟಿರಬಹುದು. ಶಿವಮೊಗ್ಗ, ಚಿಕ್ಕಮಗಳೂರು, ಬೆಳಗಾವಿ ಹಾಗೂ ಧಾರವಾಡ ಜಿಲ್ಲೆಯ ಗೌಳಿಗರನ್ನು ಒಳಗೊಂಡು ಕರ್ನಾಟಕದಲ್ಲಿ ಇವರ ಸಂಖ್ಯೆ ೪೫,೦೦೦ದಷ್ಟಿರಬಹುದು ಎಂಬ ಅಂದಾಜಿದೆ. ಅಂದರೆ ಕರ್ನಾಟಕ ರಾಜ್ಯದಲ್ಲಿಯ ಧನಗರ ಗೌಳಿಗರ ಒಟ್ಟು ಜನಸಂಖ್ಯೆಯ ಅರ್ಧದಷ್ಟು ಜನ ಉತ್ತರ ಕನ್ನಡ ಜಿಲ್ಲೆಯಲ್ಲಿಯೇ ಇದ್ದಾರೆ. ಇಲ್ಲಿಯವರೆಗೆ ಕರ್ನಾಟಕದ ಗೌಳಿಗರ ಜನಸಂಖ್ಯೆಯ ಕುರಿತು ಯಾವುದೇ ನಿಖರವಾದ ಮಾಹಿತಿಗಳು ಲಭ್ಯವಿಲ್ಲ. ಆದರೆ ನಮ್ಮ ಕ್ಷೇತ್ರಕಾರ್ಯ ಅವಧಿಯಲ್ಲಿ ಈ ಬುಡಕಟ್ಟಿನ ಹಿರಿಯರು ಮಾಹಿತಿ ನೀಡಿದ ಪ್ರಕಾರ ನಾವು ಮಾಡಿದ ಅಂದಾಜು ಸರ್ವೆಯ ಆಧಾರದಿಂದ ಮೇಲೆ ತಿಳಿಸಿದ ಉತ್ತರ ಕನ್ನಡ ಜಿಲ್ಲೆಯ ಗೌಳಿ ಸಮುದಾಯದ ಜನಸಂಖ್ಯೆಯನ್ನು (ತಾಲೂಕುವಾರು, ಗ್ರಾಮವಾರು) ಈ ಕೆಳಗಿನ ಕೋಷ್ಟಕದಲ್ಲಿ ನಮೂದಿಸಲಾಗಿದೆ.[೧೩]

ಕೋಷ್ಟಕ ೩.೧

ಉತ್ತರ ಕನ್ನಡ ಜಿಲ್ಲೆಯ ತಾಲೂಕವಾರು, ಗ್ರಾಮವಾರು ಕುಟುಂಬಗಳ ಸಂಖ್ಯೆ ಮತ್ತು ಜನಸಂಖ್ಯೆ

ಹಳಿಯಾಳ ತಾಲೂಕ

| ಅ.ನಂ. | ಗ್ರಾಮಗಳ ಹೆಸರು | ಕುಟುಂಬಗಳ ಸಂಖ್ಯೆ | ಜನಸಂಖ್ಯೆ |
|---|---|---|---|
| ೧ | ಮಾಗವಾಡ | ೨೦ | ೧೩೦ |
| ೨ | ಕುಮ್ಮಾಕಾನ ಹಟ್ಟಿ | ೪೫ | ೪೭೯ |
| ೩ | ಜತಗಾ ಗೌಳಿವಾಡಾ | ೧೧೫ | ೫೮೬ |
| ೪ | ರಹೀಮನ್ ಶೇತ್ | ೦೫ | ೩೦ |
| ೫ | ತಟ್ಟಿಗೇರಾ | ೩೫ | ೨೧೦ |
| ೬ | ಅಡಿಕೆ ಹೊಸೂರು ಗೌಳಿವಾಡಾ | ೩೨ | ೨೫೫ |
| ೭ | ಬಸ್ಸೋಳ್ಳಿ ಉತ್ತಾರ | ೧೦ | ೬೬ |
| ೮ | ಭೀಮಾನಳ್ಳಿ | ೪೦ | ೨೬೮ |
| ೯ | ಭಾಗವತಿ | ೬೫ | ೩೬೦ |
| ೧೦ | ತಟ್ಟಿಹಳ್ಳಿ | ೧೫ | ೯೯ |
| ೧೧ | ಅಡ್ಡಿಗೇರಿ | ೩೮ | ೨೧೦ |
| ೧೨ | ಬೊಮ್ಮನಳ್ಳಿ | ೨೨ | ೬೧೫ |
| ೧೩ | ಅಂಬಿಕಾನಗರ ಅಡಿಟ್ ನಂ. ೨ | ೩೫ | ೨೩೦ |
| ೧೪ | ಅಂಬಿಕಾನಗರ ಅಡಿಟ್ ನಂ. ೩ | ೨೦ | ೧೩೨ |
| ೧೫ | ಜಮಗಾ | ೬೫ | ೪೨೦ |
| ೧೬ | ಕುಳಗಿ | ೨೫ | ೧೫೦ |
| ೧೭ | ಕಲ್ಲಬಾವಿ | ೩೫ | ೧೬೫ |
| ೧೮ | ಹರ್ನಾವಾಡಾ | ೨೦ | ೧೩೦ |
| ೧೯ | ಬಡಾ ಕಾನಶಿರ್ಡಾ | ೧೦ | ೬೫ |
| ೨೦ | ಕರಿಯಂಪಲ್ಲಿ | ೩೦ | ೧೮೦ |
| ೨೧ | ಮಾಯನಾಳ | ೪೫ | ೨೭೦ |
| ೨೨ | ರಾಯಪಟ್ಟಣ | ೭೦ | ೩೫೮ |
| ೨೩ | ನಾರನೋಳ್ಳಿ | ೩೦ | ೧೧೪ |
| ೨೪ | ಭೋಟಾ ಕಾನಶಿರ್ಡಾ | ೧೦ | ೬೦ |
| ೨೫ | ಬಾಳಶೆಟ್ಟಿ ಕೊಪ್ಪ | ೩೫ | ೧೯೪ |
| ೨೬ | ಚಂದ್ರ ಸೂರ್ಯವಾಡ | ೨೦ | ೭೧ |
| ೨೭ | ಕೋಲೆರಂಗ | ೨೫ | ೧೫೦ |
| ೨೮ | ಡೊಂಕನಾಳ | ೨೧ | ೧೨೫ |
| ೨೯ | ಹಾಸನಮಾಳ | ೨೫ | ೧೫೫ |
| ೩೦ | ಅಂಬೆವಾಡಿ | ೪೦ | ೨೬೨ |
| ೩೧ | ವಿಟ್ನಾಳ | ೫೫ | ೬೬೨ |
| ೩೨ | ಹರೇಗಾಳಿ | ೨೨ | ೧೬೯ |
| ೩೩ | ಗೊಬ್ಬರಾಳ್ | ೧೦ | ೬೫ |
| ೩೪ | ಕಳಕಿವಾಡಾ | ೦೯ | ೬೦ |
| ೩೫ | ತಾಟಗೇರಾ | ೨೦ | ೧೨೦ |
| ೩೬ | ಅವಳ್ಳಿಮಾಳ | ೧೦ | ೫೫ |
| ೩೭ | ನಾನಾ ಕೇಸೂರಡ | ೧೫ | ೯೦ |
| ೩೮ | ಸಕಲ್‌ಗಾ | ೧೦ | ೫೫ |
| | ಒಟ್ಟು | ೧೧೫೫ | ೭೮೧೫ |

**ಜೋಯಿಡಾ ತಾಲೂಕ**

| ಅ.ನಂ. | ಗ್ರಾಮಗಳ ಹೆಸರು | ಕುಟುಂಬಗಳ ಸಂಖ್ಯೆ | ಜನಸಂಖ್ಯೆ |
|---|---|---|---|
| ೧ | ಅಡ್ಡಾಳಿ | ೧೯ | ೧೩೩ |
| ೨ | ಹರಲಿ | ೨೮ | ೧೮೮ |
| ೩ | ಚಾಫಳ್ಳಿ | ೦೮ | ೩೪ |
| ೪ | ಕುಂಬೇಲಿನಾಕಾ | ೧೮ | ೯೯ |
| ೫ | ತುಂಬೇಲಿ | ೦೭ | ೪೬ |
| ೬ | ಜಳಕೆಹಟ್ಟಿ | ೩೨ | ೧೭೮ |
| ೭ | ಪಾಯಿಸವಾಡಿ | ೧೯ | ೧೨೧ |
| ೮ | ಬೋರಿ | ೧೦ | ೫೨ |
| ೯ | ಕೋಲೆಮಾಳ | ೨೧ | ೧೦೪ |
| ೧೦ | ಅಮಸೇತ | ೨೫ | ೧೭೦ |
| ೧೧ | ಮಳೆವಾಡ | ೦೪ | ೩೧ |
| ೧೨ | ಬೀಳಗ್ಗಿ (ತೆರೆಗಾಳಿ) | ೨೫ | ೧೫೦ |
| ೧೩ | ಚಾಪೇಲಿ ಗೌಳಿವಾಡಾ | ೦೭ | ೪೯ |
| ೧೪ | ಕೇಕೂರ್ಡಾ | ೦೨ | ೧೫ |
| ೧೫ | ಫನಸೋಲಿ | ೭೪ | ೫೩೨ |
| ೧೬ | ಮನಾಯಿ | ೧೩ | ೮೪ |
| ೧೭ | ಬಮ್ಮಣಗಿ | ೧೨ | ೭೭ |
| ೧೮ | ಚಾವುರ್ಲಿ | ೨೧ | ೧೩೭ |
| ೧೯ | ದುರ್ಗಿ | ೨೫ | ೧೦೭ |
| ೨೦ | ಉಟೋಪ | ೨೦ | ೧೨೧ |
| ೨೧ | ಪೋಟೋಲಿ | ೧೦ | ೬೫ |
| ೨೨ | ಸಿಂಗರ್‌ಗಾಂವ್ | ೨೦ | ೧೧೫ |
| ೨೩ | ಉಯಿಸಗಾಂವ್ | ೧೫ | ೯೫ |
| ೨೪ | ಉಸೋಗಾ | ೧೨ | ೭೦ |
| ೨೫ | ಬೀರಂಪಲ್ಲಿ | ೧೮ | ೧೧೦ |
| | ಒಟ್ಟು | ೪೭೨ | ೨೯೨೬ |

## ಮುಂಡಗೋಡ ತಾಲೂಕ

| ಅ.ನಂ. | ಗ್ರಾಮಗಳ ಹೆಸರು | ಕುಟುಂಬಗಳ ಸಂಖ್ಯೆ | ಜನಸಂಖ್ಯೆ |
|---|---|---|---|
| ೧ | ಮೈನಳ್ಳಿ | ೯೦ | ೫೫೦ |
| ೨ | ಕಾಳೇಖಾರಾ | ೪೦ | ೨೫೦ |
| ೩ | ಭೇಂಡಿಕಟ್ಟಾ | ೧೦ | ೬೫ |
| ೪ | ಶಿಡ್ಲಗುಂಡಿ | ೬೦ | ೩೯೦ |
| ೫ | ಕಳಕೀಖಾರೆ | ೩೫ | ೨೦೦ |
| ೬ | ಗುಂಜಾವತಿ | ೫೦ | ೩೫೦ |
| ೭ | ಸಿಗ್ಗನಳ್ಳಿ | ೧೫ | ೯೦ |
| ೮ | ಅಟ್ಟಂಗಿ | ೨೦ | ೧೩೦ |
| ೯ | ಮರಗಡ್ಡಿ | ೧೫ | ೧೦೦ |
| ೧೦ | ಬಸನಾಳ | ೧೫ | ೯೫ |
| ೧೧ | ಕಾರೆಕೊಪ್ಪ | ೨೫ | ೧೫೦ |
| ೧೨ | ಗೋದನಾಳ | ೩೦ | ೨೦೦ |
| ೧೩ | ಬಡ್ಡಿಗೇರಿ | ೧೧೦ | ೭೦೦ |
| ೧೪ | ಯರೆಬೈಲ | ೩೦ | ೧೯೦ |
| ೧೫ | ಚಳಗೇರಿ | ೯೦ | ೬೦೦ |
| ೧೬ | ಜೋಡಿಕಟ್ಟಾ | ೪೦ | ೨೬೦ |
| ೧೭ | ಜೋಗಿಹಳ್ಳಾ | ೩೦ | ೨೦೦ |
| ೧೮ | ಚಿಟಗೇರಿ | ೨೦ | ೧೨೫ |
| ೧೯ | ಜೆನಮೋರಿ | ೩೦ | ೧೮೦ |
| ೨೦ | ಉಗ್ಗಿನಕೇರಿ | ೨೫ | ೧೬೦ |
| ೨೧ | ಕುದುರೆನಾಲ | ೩೦ | ೨೧೦ |
| ೨೨ | ಬೆಳ್ಳಿಬೆಳಕು | ೧೫ | ೮೫ |
| ೨೩ | ಅತ್ತಿಗೇರಿ | ೨೦ | ೧೩೦ |
| ೨೪ | ಬ್ಯಾನಳ್ಳಿ | ೨೫ | ೧೫೦ |
| ೨೫ | ಹುಲ್ಲಿಹೊಂಡಾ | ೨೦ | ೧೩೫ |
| | ಒಟ್ಟು | ೮೭೦ | ೫೬೯೫ |

## ಯಲ್ಲಾಪೂರ ತಾಲೂಕ

| ಅ.ನಂ. | ಗ್ರಾಮಗಳ ಹೆಸರು | ಕುಟುಂಬಗಳ ಸಂಖ್ಯೆ | ಜನಸಂಖ್ಯೆ |
|---|---|---|---|
| ೧ | ಕಾರ್ಕುಂಡಿ | ೩೫ | ೨೧೦ |
| ೨ | ಕ್ವಾನಮಡ್ಡಿ | ೩೦ | ೧೮೦ |
| ೩ | ಬೊಂಬಡಿಕೊಪ್ಪ | ೨೨ | ೧೨೫ |
| ೪ | ತೆಂಗಿನಗೇರಿ | ೪೦ | ೧೭೮ |
| ೫ | ಬಸ್ಸಳ ಬೈಲ | ೨೦ | ೧೨೦ |
| ೬ | ಖಂಡರಕೊಪ್ಪ | ೧೫ | ೯೦ |
| ೭ | ಜೋಗಿಕೊಪ್ಪ | ೨೦ | ೧೦೦ |
| ೮ | ಕೋಳಿಗೇರಿ | ೬೫ | ೪೮೫ |
| ೯ | ಡೋಮಗೇರಿ | ೨೨ | ೧೭೦ |
| ೧೦ | ಖಂಡೋಳಿ | ೨೦ | ೧೩೦ |
| ೧೧ | ಡಾಗಿನಾಲಾ | ೦೭ | ೪೦ |
| ೧೨ | ಚಿಮನಿಮಾಳ | ೨೨ | ೧೩೦ |
| ೧೩ | ಅಲಕೇರಿ | ೩೦ | ೧೭೫ |
| ೧೪ | ಯಳವಳ್ಳಿ | ೨೦ | ೮೫ |
| ೧೫ | ದೊಡ್ಡಯಳವಳ್ಳಿ | ೩೦ | ೩೫೫ |
| ೧೬ | ಹೊಸಳ್ಳಿ | ೧೨೫ | ೧೬೨೮ |
| ೧೭ | ಖಾರೆವಾಡಾ | ೮೫ | ೫೧೦ |
| ೧೮ | ಹಿಂಡಸಗೇರಿ | ೨೨ | ೧೩೫ |
| ೧೯ | ರಾಜುವಾಡಾ | ೩೫ | ೨೧೦ |
| ೨೦ | ಮಜ್ಜಿಗೆಹಳ್ಳ | ೨೦ | ೧೨೦ |
| ೨೧ | ಮಾದೆಕೊಪ್ಪ | ೩೫ | ೧೭೧ |
| ೨೨ | ಗಾವತಾನ | ೨೦ | ೧೨೫ |
| ೨೩ | ಮದ್ನೂರ | ೩೫ | ೨೦೦ |
| ೨೪ | ಮಂಗ್ಯಾನತಾವರಗೇರಿ | ೩೦ | ೧೫೦ |
| ೨೫ | ಹೊಳನಕಟ್ಟಿ (ಹೊಳೆನಂದಿಕಟ್ಟಾ) | ೨೦ | ೧೨೦ |
| ೨೬ | ದಾಂಡೇಲಿವಾಡಾ | ೨೦ | ೮೬ |
| ೨೭ | ಬೈಲಂದೂರ | ೧೬ | ೮೩ |
| ೨೮ | ಗುಡುಂದೂರ | ೪೦ | ೨೨೦ |
| ೨೯ | ಮಾದನಸರ | ೨೫ | ೧೫೦ |
| ೩೦ | ಕಂಡ್ರನಕೊಪ್ಪ | ೨೦ | ೧೫೦ |
| ೩೧ | ಪಾನಗುಂಡಿ | ೧೦ | ೫೯ |
| ೩೨ | ಸಾತಿಕಟ್ಟಾ | ೧೪ | ೮೬ |
| ೩೩ | ಹುಣಸಗೇರಿ | ೧೧ | ೬೪ |
| ೩೪ | ಮೈನಳ್ಳಿವಾಡಾ | ೧೨ | ೭೨ |
| | ಒಟ್ಟು | ೯೬೧ | ೬೯೪೨ |

**ಕೋಷ್ಟಕ ೩.೨**

**ಉತ್ತರ ಕನ್ನಡ ಜಿಲ್ಲೆಯ ಗೌಳಿಗರ ಒಟ್ಟು ಅಂದಾಜು ಜನಸಂಖ್ಯೆ**

| ತಾಲೂಕಗಳ ಹೆಸರು | ಕುಟುಂಬಗಳ ಸಂಖ್ಯೆ | ಜನಸಂಖ್ಯೆ |
|---|---|---|
| ಹಳಿಯಾಳ | ೧೧೫೫ | ೭೮೧೫ |
| ಜೊಯಿಡಾ | ೪೭೨ | ೨೯೨೬ |
| ಮುಂಡಗೋಡ | ೮೭೦ | ೫೬೯೫ |
| ಯಲ್ಲಾಪೂರ | ೯೬೧ | ೬೯೪೨ |
| **ಜಿಲ್ಲೆಯ ಒಟ್ಟು** | **೩೪೫೮** | **೨೩೩೭೮** |

ಧನಗರ ಗೌಳಿಗರು ಆರ್ಥಿಕವಾಗಿ ಅತಿಯಾಗಿ ಹಿಂದುಳಿದವರಲ್ಲವಾದರೂ ಎಚ್ಚೆತ್ತುಕೊಂಡ ಜನರಲ್ಲ, ವಾಚಾಳಿಗಳಲ್ಲ. ರಾಜಕೀಯ ಸಂಘಟನೆ ಇವರಲ್ಲಿ ಇಲ್ಲವೇ ಇಲ್ಲ. ಶೈಕ್ಷಣಿಕ ಹಾಗೂ ಇತರೆ ಸರಕಾರಿ ಸೌಲಭ್ಯಗಳು ದೊರಕುವಲ್ಲಿ ಪಟ್ಟಭದ್ರ ಹಿತಾಸಕ್ತಿಗಳಿಂದ ಶೋಷಣೆಗೆ ಒಳಗಾಗಿದ್ದಾರೆ. ಇವರು ಇತರ ಹಿಂದುಳಿದ ಬುಡಕಟ್ಟುಗಳಂತೆ ಪರಿಶಿಷ್ಟ ಬುಡಕಟ್ಟುಗಳಿಗೆ ಸದೃಶವಾಗಿಯೇ ಇದ್ದಾರೆ. ಅಡವಿಗಳಲ್ಲಿ ನೆಲೆಸಿರುವ ಇವರು ನಿಜವಾಗಿಯೂ ಇತರ ಬುಡಕಟ್ಟುಗಳಿಗಿಂತಲೂ ಹಿಂದುಳಿದವರಾಗಿದ್ದಾರೆ. ಕಳೆದ ಒಂದರೆಡು ದಶಕದಿಂದೀಚೆಗೆ ಈ ಬುಡಕಟ್ಟಿನ ಜನರು ಮತದಾರರಾಗಿ ಪರಿಗಣಿತರಾಗಿವುದೇ ದೊಡ್ಡ ಸಂಗತಿ.

ಉತ್ತರ ಕನ್ನಡ ಜಿಲ್ಲೆಯಲ್ಲಿ ಇವರ ವಾಡೆಗಳು ಹೆಚ್ಚಾಗಿ ದಟ್ಟಡವಿಯಲ್ಲಿ ಇರುತ್ತವೆ. ಗೌಳಿವಾಡಾಗಳೆಂದು ಈ ನೆಲೆಗಳನ್ನು ಕರೆಯುತ್ತಾರೆ. ಉತ್ತರ ಕನ್ನಡ ಜಿಲ್ಲೆಗಳಲ್ಲಿ ಹಸಿರು ತುಂಬಿದ ಅರಣ್ಯ ಪ್ರದೇಶಗಳಲ್ಲಿ ಸಮತಟ್ಟಾದ ಜಾಗದಲ್ಲಿ ಇವರು ವಾಡಾಗಳನ್ನು ನಿರ್ಮಿಸಿರುವರು. ಎಮ್ಮೆಗಳಿಗೆ ಬೇಕಾದ ಹುಲ್ಲು, ಮೇವು ಸಿಗುವುದನ್ನು ಖಚಿತಪಡಿಸಿಕೊಂಡು ವಸತಿಗಳನ್ನು ನಿರ್ಮಿಸಿಕೊಂಡಿದ್ದಾರೆ. ಈ ವಾಡೆಗಳಲ್ಲಿ ಕೇವಲ ಗೌಳಿಗರು ಮಾತ್ರ ಕಂಡು ಬರುತ್ತಾರೆ. ಮೂಲತಃ ಅಲೆಮಾರಿಗಳಾಗಿದ್ದು, ಕ್ರಮೇಣ ಅರೆ ಅಲೆಮಾರಿಗಳಾಗಿದ್ದ ಇವರೀಗ ಒಂದೆಡೆ ಶಾಶ್ವತ ನೆಲೆ ಮಾಡಿಕೊಂಡು ಬದುಕಲಾರಂಭಿಸಿದ್ದಾರೆ. ಇವರು ತಾವು ವಾಸಿಸುವ ವಾಡೆಯನ್ನು ಹೊರತುಪಡಿಸಿ ಸಾಮಾನ್ಯವಾಗಿ ತಮ್ಮದೇ ಆದ ಕೃಷಿ ಭೂಮಿಯನ್ನು ಹೊಂದಿರುವುದಿಲ್ಲ. ವಾಡೆಗಳಿಗೂ ಕಂದಾಯ ಇಲಾಖೆಯ ದಾಖಲೆಗಳಿರುವುದಿಲ್ಲ. ಅನೇಕ ವಾಡೆಗಳಿಗೆ ಈಗಾಗಲೇ ಸರಕಾರದಿಂದ ಎತ್ತಂಗಡಿ ನೋಟಿಸುಗಳು ಜಾರಿ ಆಗಿವೆ. ಕಾಡು ನಾಶವಾಗಿ ದನಕರುಗಳಿಗೆ ಹುಲ್ಲು, ನೀರು ಸಿಗದಂತಹ ಸ್ಥಿತಿಯಲ್ಲಿ ಇವರ ಮೂಲ ಉದ್ಯೋಗ ಹೈನುಗಾರಿಕೆ ಇವರಿಂದ ಕೈತಪ್ಪಿ ಹೋಗುತ್ತಲಿದೆ. ಎಮ್ಮೆಗಳಿಗೆ ಹುಲ್ಲು ನೀರು ಸಿಗದೆ ಬದಲಾದ ಪರಿಸರದಲ್ಲಿ ಕಾಡು ನಾಶವಾಗಿ ಬೆಂಗಾಡಾಗುತ್ತಿರುವ ಅಡವಿಗಳ ಮಧ್ಯೆ ಕಂಗಾಲಾಗಿರುವ ಗೌಳಿಗರು ಇತ್ತೀಚೆಗೆ ಅಲ್ಪಸ್ವಲ್ಪ ಭೂಮಿಯನ್ನು ಸಾಗುಮಾಡಿ ಕುಮ್ರಿ ಬೆಳೆ ಹಾಗೂ ಮೇಲುಪಾಲಿನ ಭತ್ತವನ್ನು ಬೆಳೆಯುತ್ತಿದ್ದಾರೆ. ಆದರೆ ಇವರು ಬೆಳೆದ ಬೆಳೆ ಇವರ ಹೊಟ್ಟೆಗೆ ಸಾಕಾಗದಷ್ಟು ಕಡಿಮೆ ಪ್ರಮಾಣದಲ್ಲಿರುವುದರಿಂದ ಬದುಕುವುದೇ ದುಸ್ತರವಾದ ಕಾಲ ಬಂದಿದೆ. ಇಂತಹ ಆರ್ಥಿಕ ಮುಗ್ಗಟ್ಟಿನ

ಪರಿಸ್ಥಿತಿಯಲ್ಲಿ ಜೀವನ ನಿರ್ವಹಣೆಗೆ ಕೃಷಿ ಕೂಲಿಯನ್ನೇ ಅನಿವಾರ್ಯವಾಗಿ ಆರ್ಥಿಕ ಮೂಲವನ್ನಾಗಿ ಕಂಡುಕೊಂಡಿದ್ದಾರೆ. ಈ ಬೆಳೆಯನ್ನು ಆನೆಗಳು ತುಳಿದು ನಾಶ ಮಾಡಿದರೆ ಅದಕ್ಕೆ ಪರಿಹಾರ ದೊರಕುವುದಿಲ್ಲ. ಇದರ ಜೊತೆಗೆ ಅರಣ್ಯಾಧಿಕಾರಿಗಳಿಂದ ನರಂತರ ಕಿರುಕುಳವೂ ತಪ್ಪಿದ್ದಲ್ಲ.

ಇತ್ತೀಚಿನವರೆಗೆ ಸಂಚಾರ ಯೋಗ್ಯ ರಸ್ತೆ, ಮನೆ ಹಾಗೂ ಬೀದಿ ದೀಪ, ಶಾಲೆ, ಆಸ್ಪತ್ರೆ ನ್ಯಾಯಬೆಲೆ ಅಂಗಡಿ ಇತ್ಯಾದಿ ಸೌಲಭ್ಯಗಳಿಂದ ವಂಚಿತರಾಗಿದ್ದ ಇವರಿಗೆ ಈಗ ಸರಕಾರವು ಈ ಸೌಲಭ್ಯಗಳನ್ನು ಒದಗಿಸಲು ಪ್ರಯತ್ನಿಸುತ್ತಿದೆ. ಶಾಲಾ ಸೌಲಭ್ಯಗಳು ಹೆಚ್ಚು ಕಡೆಗೆ ಕಂಡು ಬಂದವಲ್ಲದೇ ವಾರಕ್ಕೆರಡು ಸಲ ಸರಕಾರಿ ವೈದ್ಯಕೀಯ 'ಸಂಚಾರಿ ಆರೋಗ್ಯ ಘಟಕ' (Clinic on wheels) ವಾಹನ ಬಂದು ಹೋಗುವದನ್ನು ಕೂಡ ನಾನು ಕ್ಷೇತ್ರ ಕಾರ್ಯದಲ್ಲಿ ಕಂಡಿದ್ದೇನೆ.

ಸಾಮಾನ್ಯವಾಗಿ ಮುಖ್ಯ ರಸ್ತೆಯಿಂದ ೮–೧೫ ಮೈಲುಗಳ ಅಂತರದಲ್ಲಿ ಅಡವಿಗಳಲ್ಲಿ ಸಮತಟ್ಟಾದ ಕಡೆ ವಾಡೆಗಳನ್ನು ನಿರ್ಮಿಸಿಕೊಳ್ಳುವ ಗೌಳಿಗರು ಇತ್ತೀಚೆಗೆ ಕೆಲವು ಕಡೆ ಮುಖ್ಯ ರಸ್ತೆಗೆ ಹೊಂದಿಕೊಂಡೇ ವಾಡೆಗಳನ್ನು ನಿರ್ಮಿಸಿಕೊಂಡಿದ್ದಾರೆ. ಹಳಿಯಾಳ ಹಾಗೂ ಯಲ್ಲಾಪೂರ ತಾಲೂಕಿನ ಸಮೀಪದ ಟಾರು ರಸ್ತೆಯ ಅಜುಬಾಜಿನ ಮರಗಳ ನಡುವೆ ವಾಡೆಗಳನ್ನು ನಿರ್ಮಿಸಿಕೊಂಡಿದ್ದಾರೆ. ರಸ್ತೆ ಬದಿಯ ವಾಡೆಗಳಿಗೆ ಬೀದಿ ದೀಪಗಳ ಸೌಲಭ್ಯ ದೊರೆತಿದ್ದು, ಇತರ ಸೌಲಭ್ಯಗಳಿಂದ ವಂಚಿತರಾಗಿಲ್ಲ. ಇವರು ನಗರಗಳಿಗೆ ಸತತ ಸಂಪರ್ಕ ಹೊಂದಿದ್ದು, ನಾಗರೀಕ ಜೀವನದ ಮುಖ್ಯವಾಹಿನಿಗೆ ಸಮೀಪವಾಗುತ್ತಿದ್ದಾರೆ.

**೩.೧.೪. ಸ್ಥಳಾವರಣ**

ಗೌಳಿಗರು ಅಡವಿಯಲ್ಲಿ ದೊರೆಯುವ ಸಾಗವಾನಿ ಮರದ ಎಳೆಗಳನ್ನು ತಡಿಕೆ ಹಾಗೂ ಮನೆಯ ಮಾಡುಗಳಿಗೆ ಉಪಯೋಗಿಸುವರು ಹಾಗೂ ಬಿದಿರು, ಹುಲ್ಲು–ಕಡ್ಡಿಗಳಿಂದ ಕೂಡಾ ಮನೆಯ ಆವರಣವನ್ನು ಹಾಗೂ ಹೊದಿಕೆಯನ್ನು ರೂಪಿಸಿರುತ್ತಾರೆ. ಸರಳ ವಾಸ್ತು ವಿನ್ಯಾಸವನ್ನು ಹೊಂದಿರುವ ಗೌಳಿಗರ ಮನೆಗಳು ಕೆಲವಡೆ ದೂರ–ದೂರ, ಇನ್ನು ಕೆಲವು ಕಡೆ ಗುಂಪುಗಳಲ್ಲಿ ಕಂಡು ಬರುತ್ತವೆ.

ಎಮ್ಮೆಗಳನ್ನು ಕಟ್ಟುವ ಕೊಟ್ಟಿಗೆಯ ಭಾಗವು ಸಾಮಾನ್ಯವಾಗಿ ಮನೆಯ ಒಳಭಾಗದಲ್ಲಿಯೇ ಇರುತ್ತದೆ. ಆದರೆ ಕೆಲವು ಕಡೆಗೆ ಎಮ್ಮೆಗಳಿಗಾಗಿ ಪ್ರತ್ಯೇಕ ಕೊಟ್ಟಿಗೆ ಇರುವುದು ಕಂಡು ಬರುತ್ತದೆ. ರಾತ್ರಿ ಹೊತ್ತಿನಲ್ಲಿ ಎಮ್ಮೆಗಳನ್ನು ಮನೆಯ ಒಳಗಿನ ಕೊಟ್ಟಿಗೆಯಲ್ಲಿ ಕಟ್ಟಿದರೆ ಹಗಲು ಹೊತ್ತಿನಲ್ಲಿ ಹಾಗೂ ಮಳೆಗಾಲದ ಸಂದರ್ಭದಲ್ಲಿ ಪ್ರತ್ಯೇಕ ದೊಡ್ಡಿಗಳಲ್ಲಿ ಎಮ್ಮೆ ಹಾಗು ಕರುಗಳನ್ನು ಕೂಡಿ ಹಾಕುತ್ತಾರೆ. ಗುಡಿಸಲುಗಳನ್ನು ನಿರ್ಮಿಸಿಕೊಳ್ಳುವುದರ ಮೊದಲು ವಾಡೆಯ ಪಂಚರಿಗೆ ತಿಳಿಸಿ ಅನುಮತಿ ಪಡೆದು ಗುಡಿಸಲು ಕಟ್ಟಲು ಪ್ರಾರಂಭಿಸುತ್ತಾರೆ. ಸಾಮಾನ್ಯವಾಗಿ ಸ್ಥಳಾವರಣ ೧೦ ಅಡಿ ಅಗಲು ೨೦ ಅಡಿ ಉದ್ದವಿರುತ್ತದೆ. ಕೆಲವಡೆ ಇದಕ್ಕಿಂತ ಸ್ವಲ್ಪ ದೊಡ್ಡ ನಿವೇಶನಗಳಿರುತ್ತವೆ. ಮರದ ಗಟ್ಟಿ ಎಳೆಗಳನ್ನು ತೆಗೆದುಕೊಂಡು ಆಳವಾಗಿ ನೆಡುತ್ತಾರೆ. ಬಿದಿರು ಹಾಗೂ ಮರದ ಎಳೆಗಳಿಂದ ಮಾಡುಗಳನ್ನು ನಿರ್ಮಿಸಿ ಅದಕ್ಕೆ ಜೊಂಡು ಹುಲ್ಲಿನ ಹೊದಿಕೆಯನ್ನು ಹೊಚ್ಚಿರುತ್ತಾರೆ. ಗೋಡೆಗಳು ಸಾಮಾನ್ಯವಾಗಿ ಮಣ್ಣಿನವು ಇರುವುದಿಲ್ಲ. ಬಿದರಿನ ತಡಿಕೆ ಮಾಡಿ ಅದಕ್ಕೆ ಗೋಡೆ ರೂಪ ಕೊಡುತ್ತಾರೆ.

ಹುಲ್ಲಿನ ಕಡ್ಡಕ್ಕೆ ನೆಲ್ಲಿಮರದ ಸೊಪ್ಪು ಅಥವಾ ಬೇವಿನ ಸೊಪ್ಪು ಹಾಕುತ್ತಾರೆ. ಇದರಿಂದ ಯಾವುದೇ ಹುಳ ಹುಪ್ಪಡಿ ಮನೆಯಲ್ಲಿ ಬರುವುದಿಲ್ಲ ಎಂಬ ನಂಬಿಕೆಯಿದೆ.[೧೪]

### ೩.೧.೫. ಗುಡಿಸಲಿನ ಒಳಗಿನ ರಚನೆ[೧೫]

ಕೋನ್ (ಅಡುಗೆ ಮನೆ) ಯಲ್ಲಿ ದೇವರ ಪೂಜೆ ಮಾಡುವ 'ದೇವರಾ' ಇರುತ್ತದೆ. ನೆಲಮಟ್ಟದಿಂದ ತುಸು ಎತ್ತರದಲ್ಲಿ ಗದ್ದುಗೆಯೊಂದನ್ನು ನಿರ್ಮಿಸಿ ದೇವರನ್ನು ಕೂಡಿಸಿರುತ್ತಾರೆ. ದೇವರನ್ನು ಕೂಡಿಸಿದ ಜಾಗಾದ ಸುತ್ತಲು ಸುಣ್ಣ ಬಣ್ಣಗಳ ಚಿತ್ತಾರ ಬರೆದು ಬಣ್ಣದ ಕಾಗದಗಳನ್ನು ಅಂಟಿಸಿ ಆಕರ್ಷಕವಾಗಿ ಕಾಣುವಂತೆ ಮಾಡಿರುತ್ತಾರೆ. ಮ್ಯಾಸಗೋರ್ (ಒಳಗಿನ ಜಗುಲಿ) ಈ ಎರಡು ಕೋಣೆಗಳ ಮಧ್ಯೆ ಬೊಂಬು (ಬಿದಿರು) ಪಟ್ಟಿಯ ತಟ್ಟೆ ಹಾಕಿದ್ದು, ಅದನ್ನು ಮಣ್ಣಿನಿಂದ ಮುಚ್ಚಿ ಸಗಣೆಯಿಂದ ಸಾರಿಸಲಾಗಿರುತ್ತದೆ. ಕೋಣೆಯ ಒಂದು ಮೂಲೆಯಲ್ಲಿ ನ್ಯಾನ್ (ಸ್ನಾನ ಮಾಡುವ ಸ್ಥಳ) ಇರುತ್ತದೆ. ಇನ್ನೊಂದು ಮೂಲೆಯಲ್ಲಿ ಗುಣ್ಯೆಕರಗಳ ಕೊಟ್ಟಿಗೆ ಇದ್ದು, ಅದನ್ನು ಬಿದಿರು ತಟ್ಟೆಗಳಿಂದ ಮಾಡಿರುತ್ತಾರೆ. ದಸರಾ ದೀಪಾವಳಿ ಹಬ್ಬಗಳಲ್ಲಿ ಬಿದರಿನ ತಟ್ಟೆಯ ಗೋಡೆಯ ಮೇಲೆ (ಮನೆಯ ಒಳಬಾಜು) ಸುಣ್ಣದ ತಿಳಿನೀರಿನಿಂದ ಕಂದರಾಚೆ (ಹುಲ್ಲುಕಡ್ಡಿ) ಯಿಂದ ಗಜಾನೃತ್ಯ, ತುಳಸಿ, ಮರಗಿಡಗಳ ಚಿತ್ರವನ್ನು ಅಲ್ಲಿ ಬಿಡಿಸುತ್ತಾರೆ. ಈ ಕೆಲಸವನ್ನು ಹೆಚ್ಚಾಗಿ ಮಹಿಳೆಯರೇ ಮಾಡುತ್ತಾರೆ. ಪೋಟಾ (ದನದ ಕೊಟ್ಟಿಗೆ) ಇದು ದನಕರುಗಳ ಕೊಟ್ಟಿಗೆ ಆಗಿದೆ. ಕೊಟ್ಟಿಗೆ ಮತ್ತು ಮ್ಯಾಸಗೋರ ಮಧ್ಯದಲ್ಲಿ ಒಂದು ಮರದ ತುಂಡನ್ನು ಎರಡೂವರೆ ಅಡಿ ಎತ್ತರದಲ್ಲಿ ಕಟ್ಟಿರುತ್ತಾರೆ. ಇದಕ್ಕೆ 'ಗಾತಾಡಿ' ಎಂದು ಕರೆಯಲಾಗುವುದು. ಗುಡಿಸಲಿನ ಪೂರ್ತಿ ನೆಲ ಮಣ್ಣಿನಿಂದ ಆಗಿರುತ್ತದೆ. ಮನೆಯ ಮುಂದೆ ವಾಡಾ (ದಡ್ಡಿ) ಇರುತ್ತದೆ. ದಡ್ಡಿಯ ಸುತ್ತಲೂ ಕಟ್ಟಿಗೆಯ ದಡ (ಕಂಪೌಂಡ) ಇದ್ದು ಅದರಲ್ಲಿ Y ಆಕಾರದ ದಾರಿ ಇದ್ದು, ಅದಕ್ಕೆ 'ಪೇಡ್' ಎಂದು ಕರೆಯುತ್ತಾರೆ. ಇದಕ್ಕೆ 'ಸಾಟ್' ಎಂಬ ಅಡ್ಡ ಬಿದಿರಿನ ತಟ್ಟಿಯನ್ನು (ನೆಲದ ಮೇಲೆ) ಮಲಗಿಸಿರುತ್ತಾರೆ ಹಾಗೂ ಇನ್ನೊಂದು ಮೂಲೆಯಲ್ಲಿ ಖಿಂಡ್ (ಚಿಕ್ಕ ಬಾಗಿಲು) ಇರುತ್ತದೆ. ಈ ಕಿಂಡಿಯಿಂದ ಮನೆಯೊಳಗೆ ಬಗ್ಗಿ ಬರಬಹುದು ಅಥವಾ ಹೊರ ಹೋಗಬಹುದು. ಗುಡಿಸಲನ್ನು ಪ್ರವೇಶಿಸುವಲ್ಲಿ ಕೊಟ್ಟಿಗೆ ಮತ್ತು ಮ್ಯಾಸಗೋರ ಮಧ್ಯದಲ್ಲಿ ಅಡ್ಡವಾಗಿರುವ 'ಗಾತಾಡಿ'ಯನ್ನು ಮನೆಯಲ್ಲಿ ಯಾರಾದರೂ ಮರಣ ಹೊಂದಿದಾಗ ಮಾತ್ರ ತೆಗೆಯುತ್ತಾರೆ. ಹೆಣ್ಣು ಮಕ್ಕಳು ಇದನ್ನು ಮೇಲಿನಿಂದ ದಾಟುವಂತಿಲ್ಲ, ಪುರುಷರು ದಾಟಬಹುದು.[೧೫]

ಮನೆ ಕಟ್ಟುವಾಗ ಪ್ರವೇಶದ ಬಾಗಿಲು ಪೂರ್ವ ದಿಕ್ಕಿಗೆ ಇರುತ್ತದೆ. ಇತ್ತೀಚೆಗೆ ದಟ್ಟ ವಸತಿಗಳಲ್ಲಿ ಮನೆ ಕಟ್ಟುವಾಗ ಗುಡಿಸಲುಗಳು ಒಂದಕ್ಕೊಂದು ಎದುರು ಬದುರಾಗಿರುವುದು ಕಂಡು ಬರುತ್ತದೆ. ಮನೆ ಕಟ್ಟುವಾಗ ಮುಖ್ಯ ಆಧಾರಸ್ಥಂಭವಾದ 'ಧಾರಸೊಂದ್'ನ್ನು ಕುಂಕುಮ ಹಾಗೂ ಹೂವುಗಳಿಂದ ಪೂಜಿಸಿ ಹಾಲನ್ನು ನೈವೇದ್ಯ ಮಾಡಿ ನೀಡುತ್ತಾರೆ. ನಂತರ ಇತರ ಕಂಬಗಳನ್ನು ನೆಡುತ್ತಾರೆ. ಆಕಾರದಲ್ಲಿ ಧಾರಸೊಂದ್ ಕಂಬವು ದೊಡ್ಡದು ಹಾಗೂ ಭದ್ರವಾಗಿರುತ್ತದೆ. ಇದನ್ನು ಸಾಗವಾನಿ ಅಥವಾ ಬೆಂಗಡೆ ಮರದಿಂದ ಪಡೆದಿರುತ್ತಾರೆ. ಅಡುಗೆ ಮನೆಯಲ್ಲಿ ಎರಡು ಟಿಸಿಲುಗಳು ಇರುವ ಕವೆ ಗೂಟವನ್ನು

ನೆಡುತ್ತಾರೆ. ಇದಕ್ಕೆ ಗೌಳಿಗರು ಮೇಡ ಎಂದು ಕರೆಯುತ್ತಾರೆ. ಇದನ್ನು ನೆಡುವಾಗ ಬಟ್ಟೆಯ ತುಣುಕುವೊಂದರಲ್ಲಿ ಅಕ್ಕಿ ಹಾಗೂ ನಾಣ್ಯವನ್ನು ಕಟ್ಟಿ ಆ ಗೂಟಕ್ಕೆ ಕಟ್ಟುತ್ತಾರೆ. ಗೌಳಿಗರ ಮನೆಗಳಿಗೆ ಬಾಗಿಲುಗಳು ಹಾಗೂ ಕಿಟಕಿಗಳು ಇರುವುದಿಲ್ಲ. ಬೆಕ್ಕು ಹಾಗೂ ನಾಯಿ ಮನೆ ಒಳಗೆ ಹೋಗದಿರಲು ಬಿದಿರಿನ ತಡಿಕೆ ಇಡುತ್ತಾರೆ.[೧೬]

ಮೇಲ್ಕಾಣಿಸಿದ ಮನೆ ಮಾದರಿ ಸಾಂಪ್ರದಾಯಿಕ ಮಾದರಿಯಾಗಿದ್ದು, ಮೊದಲಿನಿಂದಲೂ ಇಂತಹ ಮನೆಗಳೇ ಇರುತ್ತಿದ್ದವು. ಇತ್ತೀಚೆಗೆ ಮನೆಗಳ ರಚನೆಯಲ್ಲಿಯೂ ಕ್ರಮೇಣ ಬದಲಾವಣೆಗಳು ಕಂಡುಬರುತ್ತಲಿವೆ. ಕೆಲವು ಮನೆಗಳಿಗೆ ಇಟ್ಟಂಗಿ ಗೋಡೆ, ಕಟ್ಟಿಗೆಯ ಬಾಗಿಲು ಹಾಗೂ ಕಿಟಕಿಗಳು ಅಲ್ಲದೇ ಹಂಚಿನ ಛಾವಣಿ ಇವೆ. ಹೊರಗೆ ಕುಳಿತುಕೊಳ್ಳಲು ಕಟ್ಟೆಗಳು ಕಂಡುಬರುತ್ತವೆ. ಮುಖ್ಯ ರಸ್ತೆಯಿಂದ ೮-೧೦ ಕಿಮೀ. ದೂರ ಕಾಡಿನಲ್ಲಿ ಇರುವ ಮನೆಗಳು ಸಾಂಪ್ರದಾಯಿಕ ಹುಲ್ಲಿನ ಛಾವಣಿಯ ಬಿದಿರಿನಿಂದ ನಿರ್ಮಿತ ಬಾಗಿಲು ಇಲ್ಲದ ಮನೆಗಳು ಮಾತ್ರ ಕಂಡುಬರುತ್ತವೆ. ಸಾಂಪ್ರದಾಯಿಕ ಮನೆಗಳಿಗೂ ಕೆಲವು ಕಡೆಗೆ ಹಂಚಿನ ಛಾವಣಿ ಇರುವುದು ಕಂಡುಬರುತ್ತದೆ. ಮುಖ್ಯ ರಸ್ತೆಗೆ ಹೊಂದಿಕೊಂಡು ಇರುವ ವಾಡೆಗಳಲ್ಲಿ ಬಾಗಿಲು-ಕಿಟಕಿ ಇರುವ ವ್ಯವಸ್ಥಿತವಾದ ಮನೆಗಳು ಕಂಡುಬರುತ್ತವೆ. ಬಾಗಿಲು ಇರುವ ಮನೆಗಳಲ್ಲಿ ಹೆಚ್ಚಿನವು ಸರಕಾರ ನೀಡಿದ 'ಆಶ್ರಯ' ಮನೆಗಳಾಗಿವೆ. ಏಕೆಂದರೆ ಬಾಗಿಲು ಇಲ್ಲದೇ 'ಆಶ್ರಯ ಮನೆ' ಹಣ ಮಂಜೂರು ಆಗುವುದಿಲ್ಲ. ಹೆಚ್ಚಿನ ಮನೆಗಳಿಗೆ ಶೌಚಾಲಯಗಳು ಅಥವಾ ಸ್ನಾನ ಗೃಹಗಳು ಇರುವುದು ಕಂಡುಬರಲಿಲ್ಲ. 'ನಿರ್ಮಲ ಗ್ರಾಮ' ಯೋಜನೆಯಡಿ ಧನಸಹಾಯ ದೊರಕಿಸಿಕೊಂಡು ಶೌಚಾಲಯಗಳನ್ನು ನಿರ್ಮಿಸಿಕೊಂಡಿದ್ದರೂ ಹೆಚ್ಚಿನವರು ಅವುಗಳನ್ನು ಬಳಸುವುದಿಲ್ಲವಾದ್ದರಿಂದ ಅವು ನಿರುಪಯುಕ್ತವಾಗಿ ಬಿದ್ದು ಹೋಗಿವೆ. ಶುದ್ಧವಾದ ಕುಡಿಯುವ ನೀರನ್ನು ಒದಗಿಸಲು ಸರಕಾರ ಕ್ರಮ ಕೈಗೊಂಡಿದೆ.

**ಮನೆಯ ಸ್ವರೂಪ ವಿವರ**

ಸಂದರ್ಶಿಸಿದ ಒಟ್ಟು ೨೨೪ ಮನೆಗಳಲ್ಲಿ ಬೇರೆ ಬೇರೆ ಪ್ರಕಾರದ ಮನೆಗಳ ವಿವರ ಈ ಕೆಳಗಿನಂತಿದೆ.

**ಕೋಷ್ಟಕ ३.३**

**ಗೌಳಿಗರ ಮನೆಗಳ ಸ್ವರೂಪ**

| ಮನೆಯ ಸ್ವರೂಪ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|
| ಗುಡಿಸಲು | ೩೩ | ೧೪ |
| ಹಂಚಿನ ಮನೆ | ೧೯೨ | ೮೪ |
| ಇತರೆ | - | - |
| **ಒಟ್ಟು** | **೨೨೪** | ೧೦೦ |

ಒಟ್ಟು ಮನೆಗಳಲ್ಲಿ ೩೩ ಮನೆಗಳು ಗುಡಿಸಲುಗಳಾಗಿದ್ದು, ೧೯೨ ಮನೆಗಳು ಹಂಚಿನ ಮನೆಗಳಾಗಿವೆ. ಇವುಗಳಲ್ಲಿ ಹೆಚ್ಚಿನ ಮನೆಗಳು ಸರಕಾರಿ ಆಶ್ರಯ ಮನೆಗಳಾಗಿದ್ದು, ಆಶ್ರಯ ಮನೆಗಳನ್ನು ಪಡೆಯದವರ ಸ್ವಂತ ಮನೆಗಳಿಗೆ ಹಂಚುಗಳನ್ನು ಸರ್ಕಾರವೇ ಒದಗಿಸಿ ಕೊಟ್ಟಿದೆ. ಆರ್.ಸಿ.ಸಿ. ಪ್ರಕಾರದ ಕಟ್ಟಡಗಳು ಕೇವಲ ಕೆಲವು ಗ್ರಾಮಗಳಲ್ಲಿ ಮಾತ್ರ ಕಂಡು ಬಂದಿವೆ. ಇಂತಹ ಕಟ್ಟಡಗಳನ್ನು ಹೊಂದಿದವರು ಸಾಮಾನ್ಯವಾಗಿ ಸರಕಾರಿ ನೌಕರಿಯಲ್ಲಿ ಇರುವವರು ಅಥವಾ ನಿವೃತ್ತರು ಅಥವಾ ಸೈನ್ಯನಿಂದ ನಿವೃತ್ತಿ ಪಡೆದವರು ಆಗಿರುತ್ತಾರೆ. ಏನೆ ಆದರೂ ಇಂತಹ ಜನರ ಸಂಖ್ಯೆ ಅತೀ ಕಡಿಮೆಯಾಗಿದೆ ಎಂಬುದು ಖಚಿತ.

**ಕೋಷ್ಟಕ ೩.೪**

**ಗೌಳಿ ಮನೆಗಳ ಒಡೆತನ**

| ಒಡೆತನದ ಸ್ವರೂಪ | ಮನೆಗಳ ಸಂಖ್ಯೆ | ಶೇಕಡಾವಾರು |
|---|---|---|
| ಸ್ವಂತ | ೧೬೮ | ೭೫ |
| ಆಶ್ರಯ ಮನೆ | ೫೭ | ೨೫ |
| ಬಾಡಿಗೆ ಮನೆ | – | – |
| **ಒಟ್ಟು** | **೨೨೫** | ೧೦೦ |

ಒಟ್ಟು ೨೨೫ ಮನೆಗಳಲ್ಲಿ ೧೬೮ ಮನೆಗಳು ಸ್ವಂತ ಒಡೆತನದವಾಗಿದ್ದು, ಉಳಿದ ೫೭ ಮನೆಗಳು ಸರ್ಕಾರ ಒದಗಿಸಿದ ಆಶ್ರಯ ಮನೆಗಳಾಗಿವೆ. ಅನೇಕ ಮನೆಗಳಿಗೆ ಕಂದಾಯ ಇಲಾಖೆಯಿಂದ ಮಾನ್ಯತೆ ಇಲ್ಲ. ಇದರಿಂದಾಗಿ ಅರಣ್ಯ ಇಲಾಖೆಯವರು ಯಾವಾಗಲಾದರೂ ಈ ಮನೆಗಳನ್ನು ತಮ್ಮ ವಶಕ್ಕೆ ತೆಗೆದುಕೊಳ್ಳಬಹುದು. ಅವುಗಳನ್ನು ಎತ್ತಂಗಡಿ ಮಾಡಬಹುದು. ಗಾಂವಠಾಣ ಎಂದು ಗುರುತಿಸಲ್ಪಟ್ಟ ಜಾಗದಲ್ಲಿ ಇರುವ ಮನೆಗಳಿಗೆ ಕಂದಾಯ ಇಲಾಖೆಯ ಮಾನ್ಯತೆ ಇದೆ.

ಸಂದರ್ಶಿಸಿದ ಒಟ್ಟು ಮನೆಗಳಲ್ಲಿ ೧೨೫ ಮನೆಗಳು ಮಾತ್ರ ವಿದ್ಯುತ್ ಸಂಪರ್ಕ ಹೊಂದಿವೆ.

**ಕೋಷ್ಟಕ ೩.೫**

**ಗೌಳಿ ಮನೆಗಳ ವಿದ್ಯುತ್ ಸಂಪರ್ಕ**

| ವಿದ್ಯುತ್ ಸಂಪರ್ಕಸ್ವರೂಪ | ಮನೆಗಳ ಸಂಖ್ಯೆ | ಶೇಕಡಾವಾರು |
|---|---|---|
| ಸ್ವಂತ | ೭ | ೩.೧೧% |
| ಭಾಗ್ಯ ಜ್ಯೋತಿ | ೧೧೮ | ೫೨.೪೪% |
| ವಿದ್ಯುತ್ ಸಂಪರ್ಕವಿಲ್ಲದ ಮನೆ | ೧೦೦ | ೪೪.೪೫% |
| **ಒಟ್ಟು** | ೨೨೫ | ೧೦೦ |




ಅವುಗಳಲ್ಲಿ ಕೇವಲ ೭ ಮನೆಗಳು ಮಾತ್ರ ಸ್ವಂತ ವಿದ್ಯುತ್ ಸಂಪರ್ಕ ಹೊಂದಿದ್ದು ಬಾಕಿ ೧೧೮ ಮನೆಗಳು ಭಾಗ್ಯ ಜ್ಯೋತಿ ವಿದ್ಯುತ್ ಸಂಪರ್ಕವನ್ನು ಸರ್ಕಾರದಿಂದ ಪಡೆದಿವೆ. ಇನ್ನುಳಿದ ೧೦೦ ಮನೆಗಳಿಗೆ ವಿದ್ಯುತ್ ಸಂಪರ್ಕವೇ ಇಲ್ಲ. ಅಂದರೆ ಅಡವಿಗಳಲ್ಲಿ ವಾಸಿಸುವ ಇವರು ಯಾವ ರೀತಿಯಲ್ಲಿ ಬದುಕು ಸಾಗಿಸುತ್ತಿರುವರು ಎಂಬುದಕ್ಕೆ ಇದು ಕೂಡ ಒಂದು ನಿದರ್ಶನವಾಗಿದೆ.

ಒಟ್ಟು ಸಂದರ್ಶಿಸಿದ ಮನೆಗಳಲ್ಲಿ ಇದ್ದಂತ ಸೌಲಭ್ಯಗಳು ಈ ಕೆಳಗಿನಂತಿವೆ.

**ಕೋಷ್ಟಕ ೩.೬**

**ಗೌಳಿ ಜನರು ಮನೆಯಲ್ಲಿ ಹೊಂದಿರುವ ಸೌಲಭ್ಯಗಳು**

| ಸೌಲಭ್ಯಗಳು | ಮನೆಗಳ ಸಂಖ್ಯೆ | ಶೇಕಡಾವಾರು |
|---|---|---|
| ಸ್ನಾನ ಗೃಹ | ೮೨ | ೩೬.೪೪% |
| ಶೌಚಾಲಯ | ೫೦ | ೨೨.೨೨% |
| ನೀರಿನ ನಳ | ೧೭ | ೭.೫೫% |
| ಅಡಿಗೆ ಅನಿಲ | ೨ | ೦.೮೮% |
| ಇತರೆ | – | – |
| ಒಟ್ಟು | ೨೨೫ | |



ಕೇವಲ ೨ ಮನೆಗಳಿಗೆ ಮಾತ್ರ ಅಡಿಗೆ ಅನಿಲ ಸಂಪರ್ಕ ಇರುವುದು ಕಂಡುಬರುತ್ತದೆ. ಅರಣ್ಯದ ಕಟ್ಟಿಗೆಯನ್ನೆ ಉರುವಲುವಾಗಿ ಬಳಸುವ ಇವರಿಗೆ ಅಡಿಗೆ ಅನಿಲದ ಸಂಪರ್ಕದ ಅವಶ್ಯಕತೆ ಹೆಚ್ಚಾಗಿ ಕಂಡು ಬರುವುದಿಲ್ಲ. ಕೇವಲ ೧೭ ಮನೆಗಳಿಗೆ ಮಾತ್ರ ನೀರಿನ ನೇರ ಸಂಪರ್ಕವಿದ್ದು, ಉಳಿದೆಲ್ಲ ೨೦೮ ಮನೆಗಳು ವಾಡೆಗಳಲ್ಲಿ ಒದಗಿಸಿರುವ ಸರ್ಕಾರಿ ನೀರಿನ ಸೌಲಭ್ಯದಿಂದಲೇ ನೀರನ್ನು ಪಡೆಯುವುದು ಕಂಡುಬರುತ್ತದೆ.

ಕೇವಲ ೫೦ ಮನೆಗಳಿಗೆ ಶೌಚಾಲಯ ಸೌಲಭ್ಯ ಇರುವುದು ಕಂಡುಬರುತ್ತದೆ. ಸಾರ್ವಜನಿಕ ಶೌಚಾಲಯದ ಸೌಲಭ್ಯ ಇಲ್ಲದಿರುವುದರಿಂದ ಇವರು ಬಹಿರ್ದೆಸೆಗೆ ವಾಡೆಯ ಸುತ್ತಲಿರುವ ಅಡವಿಯಲ್ಲಿಯೇ ಹೋಗುವುದು ಕಂಡುಬರುತ್ತದೆ. ಹೆಚ್ಚಿನ ಶೌಚಾಲಯಗಳು ಸರಕಾರದಿಂದ ಒದಗಿಸಲ್ಪಟ್ಟ ಸುಲಭ ಶೌಚಾಲಯಗಳಾಗಿದ್ದು, ಅದಕ್ಕಾಗಿ ಹಣಕಾಸಿನ ಸೌಲಭ್ಯವನ್ನು ಪಡೆದಿದ್ದರೂ ಕೂಡ ಇವರಲ್ಲಿ ಅದನ್ನು ಬಳಸುವ ಪ್ರವೃತ್ತಿ ಇಲ್ಲ. ಶೌಚಾಲಯ ಇರುವವರು ಕೂಡ ಹೊರಗೇನೆ ಬಹಿರ್ದೆಸೆಗೆ ಹೋಗುವುದು ಕಂಡು ಬರುತ್ತದೆ. ಪ್ರತ್ಯೇಕ ಸ್ನಾನ ಗೃಹದ ವ್ಯವಸ್ಥೆ ಕೇವಲ ೮೨ ಮನೆಗಳಲ್ಲಿ ಕಂಡು ಬರುತ್ತದೆ. ಇತರ ಮನೆಗಳಲ್ಲಿ ಮಹಿಳೆಯರು ಕಟ್ಟಿಗೆ ಅಥವಾ ಇತರ ವಸ್ತುಗಳಿಂದ ರಚಿಸಿ ಮರೆಯಾಗಲು ಅನುಕೂಲವಾಗುವ ಸ್ನಾನ ಗೃಹಗಳಲ್ಲಿ ಸ್ನಾನ ಮಾಡುತ್ತಾರೆ. ನಿತ್ಯ ಸ್ನಾನ ಮಾಡುವ ರೂಢಿ ಇವರಲ್ಲಿ ಇಲ್ಲ.

ಇವರ ಮನೆಗಳಲ್ಲಿ ಕಂಡುಬಂದ ಇತರೆ ಅನಕೂಲತೆಗಳು ಈ ಕೆಳಗಿನಂತಿವೆ.

**ಕೋಷ್ಟಕ ೩.೭**

**ಗೌಳಿ ಜನರು ಹೊಂದಿರುವ ಇತರ ಸೌಲಭ್ಯಗಳು**

| ಇತರೆ ಸೌಲಭ್ಯಗಳು | ಮನೆಗಳ ಸಂಖ್ಯೆ | ಶೇಕಡಾವಾರು |
|---|---|---|
| ರೇಷನ್ ಕಾರ್ಡ | ೨೧೯ | ೯೭.೩ |
| ಸೈಕಲ್ | ೧೦೧ | ೪೪.೮ |
| ರೇಡಿಯೋ | ೨೭ | ೧೨.೦ |
| ಟೇಪ ರೆಕಾರ್ಡರ್ | ೧೭ | ೭.೫ |
| ಟಿ.ವ್ಹಿ. | ೪೭ | ೨೦.೮ |
| ಟೆಲಿಫೋನ್ | ೧೫ | ೬.೬ |
| ಮೊಬೈಲ್ | ೭೧ | ೩೧.೫ |
| **ಒಟ್ಟು** | **೨೨೫** | ೧೦೦.೦೦ |




೨೧೯ ಮನೆಗಳಿಗೆ ಪಡಿತರ ಚೀಟಿ ಲಭ್ಯವಿದೆ. ಕೇವಲ ೬ ಮನೆಗಳವರು ಪಡಿತರ ಚೀಟಿಯನ್ನು ಹೊಂದಿಲ್ಲ. ಅಂದರೆ ಮಾಸಿಕ ಪ್ರಮುಖ ಆಹಾರ ಪೂರೈಕೆಗಾಗಿ ಸರಕಾರಿ ಸೌಲಭ್ಯವನ್ನು ಇವರು ಅವಲಂಬಿಸಿದ್ದಾರೆ. ಇವುಗಳಲ್ಲಿ ಹೆಚ್ಚಿನ ಚೀಟಿಗಳು ಬಡತನ ರೇಖೆಯ ಕೆಳಗಿನ ಹಳದಿ ವರ್ಣದ ಚೀಟಿಗಳಾಗಿವೆ. ೧೦೧ ಮನೆಗಳಲ್ಲಿ ಸೈಕಲ್‌ಗಳಿರುವುದು ಕಂಡು ಬರುತ್ತದೆ. ಅಡವಿಯಿಂದ ನಗರಕ್ಕೆ ಹಾಲು ಮಾರುವುದಕ್ಕಾಗಿ ಹೋಗಲು ಅಥವಾ ಇತರ ವಸ್ತುಗಳನ್ನು ತರಲು ಇವರಿಗೆ ಸೈಕಲ್ ಉಪಯೋಗವಾಗುತ್ತದೆ. ಆದರೆ ಮಳೆಗಾಲದಲ್ಲಿ ಸಂಪರ್ಕ ಮಾರ್ಗವು ಸಂಪೂರ್ಣ ಕೆಸರಿನಿಂದ ತುಂಬಿರುವುದರಿಂದ ಆಗ ಈ ಸೈಕಲ್‌ಗಳು ಪ್ರಯೋಜನಕಾರಿಯಾಗುವುದಿಲ್ಲ.

ಕೇವಲ ೨೭ ಮನೆಗಳಲ್ಲಿ ರೆಡಿಯೋ ಸೌಲಭ್ಯವಿದ್ದು, ೧೭ ಮನೆಗಳಲ್ಲಿ ಮಾತ್ರ ಟೇಪ ರೆಕಾರ್ಡರ ಹಾಗು ೪೭ ಮನೆಗಳಲ್ಲಿ ದೂರದರ್ಶನ ಸೌಲಭ್ಯವಿದೆ. ೧೫ ಮನೆಗಳಿಗೆ ಟೆಲಿಫೋನ್ ಸೌಲಭ್ಯವಿದ್ದು, ೭೧ ಮನೆಗಳಲ್ಲಿ ಮೊಬೈಲಗಳಿರುವುದು ಕಂಡುಬಂದಿರುತ್ತದೆ. ಅಂದರೆ ಇವರಿಗೆ ಬಾಹ್ಯ ಸಂಪರ್ಕದ ಸೌಲಭ್ಯದ ಕೊರತೆ ಇರುವುದು ಕಂಡುಬರುತ್ತದೆ.

### ೩.೨. ಸಾಮಾಜಿಕ ಸ್ತರ ವ್ಯವಸ್ಥೆಯಲ್ಲಿ ಗೌಳಿಗರ ಸ್ಥಾನಮಾನ

### ೩.೨.೧. ಸಾಮಾಜಿಕ ಸ್ತರ ವ್ಯವಸ್ಥೆ[೧೭]

ವೈವಿಧ್ಯತೆಯು ನಿಸರ್ಗ ನಿಯಮ. ಮಾನವ ಸಮಾಜದ ಬಗೆಗೂ ಈ ಮಾತು ನಿಜ. ಮಾನವ ಸಮಾಜವು ಏಕರೂಪತೆಯನ್ನು ಹೊಂದಿರುವುದಕ್ಕಿಂತಲೂ ವೈವಿಧ್ಯಮಯವಾಗಿರುವುದೇ ಹೆಚ್ಚು. ಜನರ ಶಾರೀರಿಕ ರೂಪ, ಮಾನಸಿಕ ಪ್ರವೃತ್ತಿ ಮತ್ತು ಬೌದ್ಧಿಕ ಶಕ್ತಿ ಒಂದೇ ತೆರನಾಗಿಲ್ಲ. ಜನರ ದೈಹಿಕ ಶಕ್ತಿಯಲ್ಲಿ ವ್ಯತ್ಯಾಸ ಇರುವಂತಹ ಅವರ ಆರ್ಥಿಕ, ಬೌದ್ಧಿಕ, ನೈತಿಕ, ತಾತ್ವಿಕ, ಮಾನಸಿಕ, ಶಕ್ತಿ–ಪ್ರವೃತ್ತಿಗಳಲ್ಲಿ ಮಹದಂತರವಿದೆ. ವೈವಿಧ್ಯತೆ ಮತ್ತು ಅಸಮಾನತೆ ಮಾನವ ಸಮಾಜದ ಆಂತರಿಕ ಗುಣಗಳಾಗಿವೆ.

'ಮಾನವರೆಲ್ಲರನ್ನು ಸಮಾನವಾಗಿಯೇ ಸೃಷ್ಟಿಸಲಾಗಿದೆ' ಎಂಬ ಚಿಂತಕರ, ಆದರ್ಶವಾದಿಗಳ, ಸಮಾಜ ಸುಧಾರಕರ ಮತ್ತು ದಾರ್ಶನಿಕರ ಮಾತು ಇಂದು ನಿನ್ನೆಯದಲ್ಲ ಬಹಳ ಹಳೆಯದು. ಸಮಾಜದ ಎಲ್ಲಾ ಜನರಿಗೂ ಸಮಾನತೆಯನ್ನು ಮತ್ತು ಸಮಾನ ಜೀವನ ಪರಿಸ್ಥಿತಿಗಳನ್ನು ಕಲ್ಪಿಸಿ ಕೊಟ್ಟಿರುವಂತಹ 'ಸರ್ವಸಮತಾ ಸಮಾಜ' (Equalitarian Society) ಇದುವರೆಗೂ ಅಸ್ತಿತ್ವಕ್ಕೆ ಬಂದಿಲ್ಲ. ಈ ಮುಂದೆಯೂ ಬರಲಾರದು. ಜನರಲ್ಲಿ ಕಾಣಬಹುದಾದ ಕೆಲವು ಸಾಮ್ಯತೆಗಳ ಹೊರತಾಗಿಯೂ ಅವರಲ್ಲಿ ಭಿನ್ನತೆಯಿದೆ. ಅವರ ವಯಸ್ಸು, ಲಿಂಗ, ವೃತ್ತಿ, ವೈಯಕ್ತಿಕ ಗುಣಗಳು, ಅವರ ಅಂತಸ್ತು–ಪಾತ್ರ ಎಲ್ಲವೂ ಬೇರೆ ಬೇರೆ. ವ್ಯಕ್ತಿಗಳನ್ನು ಅವರು ಪಡೆದಿರುವ ಸಾಮಾಜಿಕ ಅಂತಸ್ತಿನ ಮತ್ತು ನಿರ್ವಹಿಸುವ ಪಾತ್ರಗಳ ಆಧಾರದ ಮೇಲೆ 'ಶ್ರೇಷ್ಠ–ಕನಿಷ್ಠ', 'ಮೇಲು–ಕೀಳು', 'ಉಚ್ಚ–ನೀಚ' ಎಂದು ವರ್ಗೀಕರಿಸುವ ಕ್ರಮ ಎಲ್ಲಾ ಸಮಾಜಗಳಲ್ಲೂ ಇದೆ. ಹೀಗೆ ಜನರನ್ನು ವಿಭಿನ್ನ ಗುಂಪುಗಳಾಗಿ ಅಥವಾ ಸ್ತರವಾಗಿ ವರ್ಗೀಕರಿಸುವ ವ್ಯವಸ್ಥೆಗೆ 'ಸಾಮಾಜಿಕ ಸ್ತರ ವ್ಯವಸ್ಥೆ' ಎನ್ನಲಾಗಿದೆ. ಈ ಬಗೆಯ ಸ್ತರ ವ್ಯವಸ್ಥೆ ಇಲ್ಲದ ಸಮಾಜ ಮಾನವ ಇತಿಹಾಸದಲ್ಲಿ ಈ ಹಿಂದೆ ಎಲ್ಲಿಯೂ ಅಸ್ತಿತ್ವದಲ್ಲಿರಲಿಲ್ಲ.

ಸಮಾಜವು ಗತಿಶೀಲವಾಗಿರುವಂತೆ ಅದರ ಸದಸ್ಯರುಗಳೂ ಕೂಡ ಕ್ರಿಯಾಶೀಲರಾಗಿದ್ದಾರೆ. ಅವರ ಚಟುವಟಿಕೆಗಳ ಆರ್ಥಿಕ, ಶೈಕ್ಷಣಿಕ, ಸಾಮಾಜಿಕ, ರಾಜಕೀಯ ಇತ್ಯಾದಿ ಸ್ವರೂಪಗಳನ್ನು ಅವರು ಸದಸ್ಯರಾಗಿರುವ ಸ್ತರ ವ್ಯವಸ್ಥೆಯೇ ನಿರ್ಧರಿಸುತ್ತದೆ ಎಂಬುದು ನಿಜ. ಆದಾಗ್ಯೂ ವ್ಯಕ್ತಿಗತ ಪ್ರತಿಭೆ, ಸಾಮರ್ಥ್ಯ ಮತ್ತು ಲಭ್ಯವಿರುವ ಸಾಮಾಜಿಕ ಅವಕಾಶಗಳನ್ನು ಬಳಸಿಕೊಂಡು ಸಾಮಾಜಿಕ ಸ್ತರ ವ್ಯವಸ್ಥೆಯ ಏಣಿ–ಶ್ರೇಣಿಯಲ್ಲಿ ಆದಷ್ಟು ಎತ್ತರಕ್ಕೆ ಏರಲು ಅವರು ಪ್ರಯತ್ನಿಸುವುದುಂಟು. ಅಂತಹ ಪ್ರಯತ್ನಗಳು ಯಾವಾಗಲೂ ಯಶಸ್ವಿಯಾಗುತ್ತವೆ ಎನ್ನುವಂತಿಲ್ಲ. ಅವರ ಪ್ರಯತ್ನಗಳು ಫಲಿಸದೇ ಅವರು ಇನ್ನೂ ಕೆಳಗೆ ಕುಸಿಯುವ ಸಾಧ್ಯತೆಗಳೂ ಇವೆ. ಮತ್ತೆ ಕೆಲವರು ತಮ್ಮ ಈಗಿನ ಅಂತಸ್ತನ್ನು ಕಾಯ್ದುಕೊಳ್ಳುವುದಕ್ಕೆ ಮಾತ್ರ ತಮ್ಮ ಶ್ರಮವನ್ನು ಸೀಮಿತಗೊಳಿಸಬಹುದು.

ಸಾಮಾಜಿಕ ಚಲನೆಯು ಸಮಾಜದ ಜೀವಂತಿಕೆ ಹಾಗೂ ಗತಿಶೀಲತೆಗೆ ಹಿಡಿದಿರುವ ಕೈ ಗನ್ನಡಿಯಂತಿದೆ. ಸಾಮಾಜಿಕ ಅಸಮಾನತೆಯನ್ನು ಸ್ತರಗಳು ನಿರ್ಧರಿಸುತ್ತವೆಯಾದರೆ, ಸಾಮಾಜಿಕ ಚಲನೆಯು ಈ ಅಸಮಾನತೆಯನ್ನು ಆದಷ್ಟು ತಗ್ಗಿಸಲು ಅಥವಾ ಹಿಗ್ಗಿಸಲು ಸಹಾಯಕವಾಗಿರುತ್ತದೆ.

**ಸಾಮಾಜಿಕ ಸ್ತರ ವ್ಯವಸ್ಥೆಯ ವ್ಯಾಖ್ಯೆ**

ಆಗ್ ಬರ್ನ್ ಮತ್ತು ನಿಮ್‌ಕಾಫರವರ ಪ್ರಕಾರ, 'ವ್ಯಕ್ತಿಗಳು ಹಾಗೂ ಸಮೂಹಗಳನ್ನು ಹೆಚ್ಚು ಕಡಿಮೆ ಶಾಶ್ವತವಾದ ಏಣಿ–ಶ್ರೇಣಿಗಳನ್ನೊಳಗೊಂಡ ಅಂತಸ್ತಿನ ಆಧಾರದ ಮೇಲೆ ವರ್ಗೀಕರಿಸುವ ಪ್ರಕ್ರಿಯೆಗೆ ಸಾಮಾಜಿಕ ಸ್ತರ ವ್ಯವಸ್ಥೆ ಎನ್ನಬಹುದು'.[೧೮]

**ಸಾಮಾಜಿಕ ಸ್ತರ ವ್ಯವಸ್ಥೆಯ ಮುಖ್ಯ ರೂಪಗಳು**

ಸ್ತರ ವ್ಯವಸ್ಥೆಯು ಜಗತ್ತಿನ ಎಲ್ಲಾ ಸಮಾಜಗಳಲ್ಲಿ ಕಂಡು ಬರುವುದಿದ್ದರೂ ಅದು ಎಲ್ಲೆಡೆಯೂ ಒಂದೇ ರೂಪದಲ್ಲಿಲ್ಲ ಮಾತ್ರವಲ್ಲ ಸ್ತರ ವ್ಯವಸ್ಥೆಯ ವಿಕಾಸದ ಇತಿಹಾಸವನ್ನು ಗಮನಿಸುವುದಿದ್ದರೂ ಅದು ಒಂದು ಸಮಾಜದ ಬೇರೆ ಬೇರೆ ಕಾಲಘಟ್ಟಗಳಲ್ಲಿ ಬೇರೆ ಬೇರೆ ರೂಪಗಳಲ್ಲಿದ್ದದ್ದು ಕಂಡು

ಬರುವುದು. ವಾಲ್ಲೇಸ ಮತ್ತು ವಾಲ್ಲೇಸ್‌ರವರು ಸೂಚಿಸಿರುವ ಆದಿವಾಸಿ ಸಾಮುದಾಯಿಕತೆ ಉಲ್ಲೇಖಾರ್ಹವಾಗಿವೆ.[೧೯]

**ಆದಿವಾಸಿ ಸಾಮುದಾಯಿಕತೆ[೨೦]**

ಅತ್ಯಂತ ಕನಿಷ್ಟತಮ ಅಸಮಾನತೆಯೊಂದಿಗೆ ಬಹುತೇಕ ಎಲ್ಲವನ್ನು ಹಂಚಿಕೊಂಡು ಬಾಳುವ ಲಕ್ಷಣವನ್ನು ಹೊಂದಿರುವ ಸ್ತರ ವ್ಯವಸ್ಥೆಯನ್ನು 'ಆದಿವಾಸಿ ಸಾಮುದಾಯಿಕತೆ' ಅಥವಾ 'ಆದಿವಾಸಿ ಸಾಮ್ಯವಾದ' ಎನ್ನಬಹುದು. ಉದಾ: ಫಿಲಿಪೈನ್ಸ್ ದ್ವೀಪದ 'ತಸಡೆ' ಸಮುದಾಯವು ಇಂತಹ ಸ್ತರ ವ್ಯವಸ್ಥೆಗೆ ಒಂದು ಉತ್ತಮ ಉದಾಹರಣೆಯಾಗಿದೆ.

ತಸಡೆ ಸಮುದಾಯದಲ್ಲಿ ಅಸಮಾನತೆಯು ತೀರಾ ನಗಣ್ಯವಾಗಿದೆ. ಇಲ್ಲಿ ಆಹಾರ ಮತ್ತು ಕಲ್ಲಿನ ಆಯುಧಗಳನ್ನು ಎಲ್ಲರೂ ಹಂಚಿಕೊಳ್ಳಬಹುದಾಗಿದೆ ಇಲ್ಲಿ ಅಧಿಕೃತವಾದ ನಾಯಕನಾಗಲೀ, ಮುಖ್ಯಸ್ಥನಾಗಲೀ ಇಲ್ಲ. ಆದರೆ ಅನೌಪಚಾರಿಕವಾಗಿ ಎಂಬಂತೆ ಒಂದಿಬ್ಬರು ವ್ಯಕ್ತಿಗಳು ಹೆಚ್ಚು ಪ್ರಭಾವಶಾಲಿಗಳಾಗಿದ್ದಂತೆ ಕಂಡು ಬರುವುದು. ಉತ್ತಮ ಅಂತಸ್ತನ್ನು ಗಳಿಸುವುದು ಹೇಗೆಂಬ ಪ್ರಶ್ನೆಯೇ ಅವರಿಗೆ ಅಪ್ರಸ್ತುತ. ಇಲ್ಲಿ ಅಸಮಾನತೆಯಿಲ್ಲದೆ ಇರುವುದರಿಂದ 'ಉಳ್ಳವರು' ಮತ್ತು 'ಇಲ್ಲದವರು' ಎಂಬ ಸಮೂಹಗಳಾಗಲೀ ಅವುಗಳ ನಡುವೆ ಸಂಘರ್ಷವೇಪಡುವುದಾಗಲೀ ಕಾಣಬರುವುದಿಲ್ಲ. ಈ ಸಮುದಾಯುಗಳೊಳಗಿನ ಜನರ ನಡುವೆ ಅಥವಾ ಬೇರೆ ಸಮುದಾಯುಗಳೊಂದಿಗೆ ಹಿಂಸಾಚಾರವಾಗುವುದೂ ಕಂಡು ಬಂದಿಲ್ಲ.

ಈ ಬಗೆಯ 'ಆದಿವಾಸಿ ಸಾಮುದಾಯಿಕತೆ' ಕಾಣಬರುವ ಕೆಲವು ಸಮಾಜಗಳಲ್ಲಿ ಕೆಲವು ವ್ಯಕ್ತಿಗಳು ತಮ್ಮ ಅಂತಸ್ತನ್ನು ಹೆಚ್ಚಿಸಿಕೊಂಡು ನಾಯಕರಾಗುವುದು, ವೈದ್ಯರಾಗುವುದು ಇಲ್ಲದಿಲ್ಲ. ಅದಾಗ್ಯೂ ಇಲ್ಲಿ ಸಾಮಾಜಿಕ ಅಸಮಾನತೆಯ ಮಟ್ಟ ಬಹಳ ಕೆಳಗಿರುತ್ತದೆ ಹಾಗೂ ಉನ್ನತ ಅಂತಸ್ತಿಗೆ ಲಭ್ಯವಾಗುವ ಪ್ರತಿಫಲ ಕೂಡ ಭೌತಿಕ ಸ್ವರೂಪದ್ದಲ್ಲದೆ ಕೇವಲ ಗೌರವ ಸ್ವರೂಪದ್ದಾಗಿರುತ್ತದೆ. ಬೇಟೆಯಾಡುವ ಹಾಗೂ ಆಹಾರವನ್ನರಸುವ ಸಮುದಾಯಗಳಲ್ಲಿ ಇಂತಹ ಬಗೆಯ ಸ್ತರ ವ್ಯವಸ್ಥೆಯನ್ನು ಸಾಮಾನ್ಯವಾಗಿ ಕಾಣಬಹುದು. ಈ ಸಮುದಾಯಗಳು ಅಲೇಮಾರಿ ಸ್ವರೂಪದವುಗಳಾಗಿದ್ದು ಉತ್ಪಾದನೆಯ ಮಿಗುತಾಯದ (Surplus Production) ಬಗ್ಗೆ ಯೋಚಿಸುವುದೇ ಇಲ್ಲ. ಮಿಗುತಾಯದ ಮೇಲಿನ ಏಕ ಸ್ವಾಮ್ಯದಿಂದಾಗಿ ಹೆಚ್ಚಿನ ಅಧಿಕಾರ ಚಲಾಯಿಸುವ ಪ್ರಶ್ನೆಯೂ ಇಲ್ಲಿ ಉದ್ಭವಿಸುವುದಿಲ್ಲ. ಆದ್ದರಿಂದ ಸಾಮಾಜಿಕ ಅಸಮಾನತೆ ಬಹಳ ಇತಿಮಿತಿಗಳಲ್ಲಿರುವುದು. ಸಮಾನತೆ ಮತ್ತು ಸಾಮರಸ್ಯವುಳ್ಳ ಇಂತಹ ಸಮುದಾಯಗಳು 'ದೇವಲೋಕದ ನಂದನವನ'ದಂತೆ ನಮಗೆ ಕಾಣಬರುತ್ತವಾದರೂ ನಮ್ಮ ನಾಲ್ಕು ದಶಲಕ್ಷ ವರ್ಷಗಳ ಮಾನವ ವಂಶದ ಜೀವನದಲ್ಲಿ ೯೯% ಅಧಿಕವಾಗಿ ಎಂಬಂತೆ ಇವು ತೀರಾ ಸಾಮಾನ್ಯವಾಗಿ ಕಾಣಬರುತ್ತಿದ್ದವು.

**೩.೨.೨. ವರ್ಣಾಶ್ರಮ ಧರ್ಮ[೨೧]**

ಹಿಂದೂ ಸಮಾಜ ತನ್ನ ಸುಧೀರ್ಘ ಕಾಲ್ನಡಿಗೆಯಲ್ಲಿ ಹುಟ್ಟು ಹಾಕಿದ ಎರಡು ಪೂರಕವಾದ ಸಾಮಾಜಿಕ ಸಂಘಟನೆಗಳೆಂದರೆ, ಒಂದು ವರ್ಣಧರ್ಮ ಮತ್ತೊಂದು ಆಶ್ರಮ ಧರ್ಮ. ಈ ಎರಡು

ವ್ಯವಸ್ಥೆಗಳನ್ನು ಒಟ್ಟಾರೆಯಗಿ ವರ್ಣಾಶ್ರಮ ಧರ್ಮವೆಂದು ಕರೆಯುತ್ತಾರೆ. ಇವೆರೆಡು ಒಂದಕ್ಕೊಂದು ಪೂರಕವಾದವುಗಳು. ವರ್ಣ ಧರ್ಮವು ಪ್ರಾಚೀನ ಕಾಲದಲ್ಲಿ ವ್ಯಕ್ತಿಯ ಸಾಮಾಜಿಕ ಬದುಕನ್ನು ವ್ಯವಸ್ಥಿತವಾಗಿ ರೂಪಿಸಿತ್ತು. ಯಾವ ವ್ಯಕ್ತಿಗೆ ಯಾವ ಪಾತ್ರಗಳು ಎಂಬುದನ್ನು ಸ್ಪಷ್ಟಪಡಿಸುವ ಮೂಲಕ ಅಂದರೆ ಶ್ರಮ ವಿಭಜನೆಯನ್ನು ಸಾಧಿಸಿ ಅದು ಸಮಾಜಕ್ಕೆ ಸ್ಥಿರತೆ ಮತ್ತು ನಿರಂತರತೆಯನ್ನು ಕೊಡಮಾಡಿತ್ತು. ವ್ಯಕ್ತಿಯ ವ್ಯಕ್ತಿಗತ ಜೀವನವನ್ನು ಸುವ್ಯವಸ್ಥೆಗೆ ಒಳಪಡಿಸದೇ ಸಮಾಜದಲ್ಲಿ ಸುಸ್ಥಿರತೆ ಮತ್ತು ಸುವ್ಯವಸ್ಥೆಯನ್ನು ಸ್ಥಾಪಿಸಲಾಗದು.

ಪ್ರತಿಯೊಂದು ವರ್ಣದವರು ಅನುಸರಿಸಬೇಕಾದ ಕರ್ತವ್ಯಗಳನ್ನು ನಿರ್ವಹಿಸಬೇಕಾದ ಹೊಣೆಗಾರಿಕೆಯನ್ನು ವರ್ಣಧರ್ಮವೆನ್ನುತ್ತಾರೆ. ವಿವಿಧ ವರ್ಣದವರ ಕರ್ತವ್ಯಗಳು ಅವರ ಉಗಮದೊಂದಿಗೆ ಸಂಬಂಧಿಸಿವೆ. ಚತುರ್‌ವೇದಗಳಲ್ಲಿಯೇ ಪುರಾತನ ಮತ್ತು ಭವ್ಯವಾದ ಋಗ್ವೇದದಲ್ಲಿ ವರ್ಣಗಳ ಉಗಮದ ಬಗ್ಗೆ ಕೊಡಲಾದ ಧಾರ್ಮಿಕ ವಿವರಣೆಯನ್ನು ಮನು ಪುನರುಚ್ಚರಿಸುತ್ತಾನೆ. ಮನುಸ್ಮೃತಿ (ಅಧ್ಯಾಯ–೧:ಪು.–೭) ಈ ರೀತಿ ಬರೆಯುತ್ತದೆ. 'ಬ್ರಹ್ಮನು ಬ್ರಾಹ್ಮಣನನ್ನು ತನ್ನ ಮುಖದಿಂದ, ಕ್ಷತ್ರಿಯರನ್ನು ತನ್ನ ಭುಜದಿಂದ, ವೈಶ್ಯರನ್ನು ತನ್ನ ತೊಡೆಗಳಿಂದ ಮತ್ತು ಶೂದ್ರರನ್ನು ತನ್ನ ಕಾಲುಗಳಿಂದ ವಿಶ್ವದ ಸಮೃದ್ಧಿಗಾಗಿ ಸೃಷ್ಟಿಸಿದ'.

ವರ್ಣ ವ್ಯವಸ್ಥೆಯಲ್ಲಿ ನಾಲ್ಕು ವರ್ಣದವರು ಸೈದ್ಧಾಂತಿಕವಾಗಿ ತಮ್ಮ ಜನ್ಮಕ್ಕೆ ಅನುಗುಣವಾಗಿ ತಮ್ಮ ಪಾಲಿಗೆ ಬಂದ ಕರ್ತವ್ಯವನ್ನು ನಿರ್ವಹಿಸಬೇಕಾಗುತ್ತದೆ. ಸಮಾಜಶಾಸ್ತ್ರೀಯ ಪರಿಭಾಷೆಯಲ್ಲಿ ಹೇಳುವದಾದರೆ ವರ್ಣ ವ್ಯವಸ್ಥೆಯು ಸಮಾಜದಲ್ಲಿ ಶ್ರಮ ವಿಭಜನೆ ಅಥವಾ ಕಾರ್ಯ ವಿಭಜನೆಯನ್ನು ಪ್ರತಿನಿಧಿಸುತ್ತಿತ್ತು.

**ವಿವಿಧ ವರ್ಣದವರ ಕಾರ್ಯಗಳು**[೨]

ಮನುಸ್ಮೃತಿಯ (೮೮ ಶ್ಲೋಕ, ೨೦ನೇ ಪುಟ) ಪ್ರಕಾರ ಬ್ರಾಹ್ಮಣರ ಕರ್ತವ್ಯಗಳೆಂದರೆ ಅಧ್ಯಯನ ಮಾಡುವುದು, ಕಲಿಸುವುದು, ಯಜ್ಞ–ಯಾಗಾದಿಗಳನ್ನು ಮಾಡುವುದು ಮತ್ತು ದಾನವನ್ನು ಕೊಡುವುದು ಮತ್ತು ಸ್ವೀಕರಿಸುವುದು. ಅವುಗಳನ್ನು ಮನು ಅಧ್ಯಯನ, ಅಧ್ಯಾಪನ, ಯಾಗ ಮತ್ತು ದಾನವೆಂದು ಹೆಸರಿಸುತ್ತಾನೆ.

ಅದರಂತೆ ಸೃಷ್ಟಿಕರ್ತನಾದ ಬ್ರಹ್ಮನ ಬುಜಗಳಿಂದ ಉದ್ಭವಿಸಿದ ವರ್ಗವೆಂದರೆ ಕ್ಷತ್ರಿಯರದು. ಭುಜ ಶಕ್ತಿ–ಸಾಮರ್ಥ್ಯದ ಸಂಕೇತ. ಮನುಸ್ಮೃತಿಯ (೧ನೇ ಅಧ್ಯಾಯ, ೮೯ನೇ ಶ್ಲೋಕ ೨೦ ನೇ ಪುಟ) ಪ್ರಕಾರ ಕ್ಷತ್ರಿಯರ ಕಾರ್ಯವೆಂದರೆ ಎಲ್ಲಾ ನಾಗರಿಕರನ್ನು ರಕ್ಷಿಸುವುದು, ದಾನ ಮಾಡುವುದು, ಮತ್ತು ಯಾಗ ಮಾಡುವುದು.

ಬ್ರಹ್ಮನ ತೊಡೆಗಳಿಂದ ಉದ್ಭವಿಸಿದ ಮೂರನೆಯ ವರ್ಗವಾದ ವೈಶ್ಯರು ಪಶುಪಾಲನೆ, ಹೋಮ, ಅಧ್ಯಯನ, ವ್ಯಾಪಾರ, ಬಡ್ಡಿ ವ್ಯವಹಾರ ಮತ್ತು ಕೃಷಿ ಚಟುವಟಿಕೆಗಳಲ್ಲಿ ನಿರತರಾಗಬೇಕೆಂದು ಮನುಸ್ಮೃತಿ (೯೦ ನೇ ಶ್ಲೋಕ ೨೦ನೇ ಪುಟ) ಉಲ್ಲೇಖಿಸುತ್ತದೆ.

ಮನುಸ್ಮೃತಿಯ (ಅಧ್ಯಾಯ ೧, ೯೧ನೇ ಶ್ಲೋಕ, ೨೦ನೇ ಪುಟ)ದ ಪ್ರಕಾರ ಮೊದಲನೆ ಮೂರು ವರ್ಣದವರಾದ ದ್ವಿಜರಿಗೆ ಯಾವುದೇ ಸ್ವಾರ್ಥವಿಲ್ಲದೇ ಸೇವೆ ಸಲ್ಲಿಸುವುದೇ ಶೂದ್ರರ ವರ್ಣ ಧರ್ಮವಾಗಿರುತ್ತದೆ.

**ಚತುರ್‌ವರ್ಣಗಳ ನಡುವಿನ ಸಂಬಂಧ**[೨೩]

ಒಂದು ಸಾಮಾನ್ಯವಾದ ಕಾರ್ಯ ಅಥವಾ ಕಾರ್ಯಗಳನ್ನು ಜನ ತಮ್ಮ ಅಭಿರುಚಿ, ಲಿಂಗ, ವಯಸ್ಸು ಹಾಗೂ ಹಿಂದಿನಿಂದ ಬಂದ ಸಂಪ್ರದಾಯಗಳಿಗೆ ಅನುಗುಣವಾಗಿ ಹಂಚಿಕೊಂಡು ನೆರವೇರಿಸುವುದನ್ನು ಕಾರ್ಯ/ಶ್ರಮ ವಿಭಜನೆಯೆಂದು ಕರೆಯುತ್ತಾರೆ. ಸಮಾಜದಲ್ಲಿನ ಸಮಸ್ತ ಜನ ಸಮೂಹವನ್ನು ನಾಲ್ಕು ವಿಶಾಲ ವರ್ಗಗಳಲ್ಲಿ ವಿಭಜನೆ ಮಾಡಿ ಪ್ರತಿಯೊಂದು ವರ್ಗಕ್ಕೂ 'ಈ ಕೆಲಸಗಳು ನಿಮ್ಮ ಪಾಲಿನವುಗಳು' ಎಂದು ಗೊತ್ತು ಪಡಿಸುವುದು ಶ್ರಮವಿಭಜನೆಯ ಒಂದು ವ್ಯವಸ್ಥೆಯಾಗಿದೆ.

ವಿವಿಧ ವರ್ಣಗಳ ನಡುವಿನ ಸಹಕಾರವು ಸಮಾಜದ ಸ್ಥಿರತೆ ಮತ್ತು ಸುವ್ಯವಸ್ಥೆಯನ್ನು ನಿರ್ಧರಿಸುವ ಅಂಶವಾಗಿತ್ತು ಎಂದು ಜೆ.ಪಿ. ಸುಧಾ (ಪುಟ ೩೭) ಬರೆಯುತ್ತಾರೆ. ಸಮಾಜವು ಒಂದು ಸಮಷ್ಟಿ ಅಥವಾ ಬೃಹತ್ ವ್ಯವಸ್ಥೆ. ವರ್ಣಗಳು ಈ ವ್ಯವಸ್ಥೆಯ ಭಾಗಗಳು ಅಥವಾ ಅಂಶಗಳು. ಪ್ರತಿಯೊಂದು ವರ್ಣ ಇಡೀ ಸಮಾಜದ ಅವಶ್ಯಕತೆಗಳನ್ನು ಈಡೇರಿಸುವ ರೀತಿಯಲ್ಲಿ ಕಾರ್ಯ ನಿರ್ವಹಿಸುತ್ತದೆ. ಈ ರೀತಿ ಸಮಾಜದಲ್ಲಿರುವ ವಿವಿಧ ವರ್ಣಗಳು, ಸಮಾಜ ತನ್ನ ಅಸ್ತಿತ್ವವನ್ನು ನಿರಂತರವಾಗಿ ಉಳಿಸಿಕೊಂಡು ಹೋಗುವುದಕ್ಕೆ ಪೂರಕವಾಗಿ ಕಾರ್ಯ ನಿರ್ವಹಿಸುತ್ತಿದ್ದವು.

**ಏಣಿ-ಶ್ರೇಣಿಕೃತವಾದ ವರ್ಣ ವ್ಯವಸ್ಥೆ**[೨೪]

ಮನುವಿನ (ಅಧ್ಯಾಯ ೧, ೯೩ನೇ ಶ್ಲೋಕ, ೨೧ನೇ ಪುಟ) ಪ್ರಕಾರ ಬ್ರಾಹ್ಮಣರು ಬ್ರಹ್ಮನ ಮುಖದಿಂದ ಕ್ಷತ್ರಿಯ, ವೈಶ್ಯ ಮತ್ತು ಶೂದ್ರರಿಗಿಂತ ಮೊದಲು ಅಸ್ತಿತ್ವಕ್ಕೆ ಬಂದವರು. ಆದ್ದರಿಂದ ಅವರು ಲೋಕ ಧರ್ಮಕ್ಕೆ ಅನುಗುಣವಾಗಿ ಈ ವಿಶ್ವಕ್ಕೆ ಯಜಮಾನರು ಎಂದು ಅವನು ಅಭಿಪ್ರಾಯಪಟ್ಟಿದ್ದಾನೆ.

ಮನುವಿನ ಪ್ರಕಾರ ಮಾನವನ ನಾಭಿಯ ಮೇಲ್ಭಾಗದಲ್ಲಿರುವುದೆಲ್ಲ ಪವಿತ್ರವಾದದ್ದು ಮತ್ತು ಶುದ್ಧವಾದದ್ದು. ನಾಭಿಯ ಮೇಲ್ಭಾಗದಲ್ಲಿರುವ ಅಂಗಾಂಗಳಲ್ಲಿಯೇ ಮುಖ ಅತೀ ಪರಿಶುದ್ಧವಾದದ್ದು. ಆದ್ದರಿಂದ ಬ್ರಹ್ಮನ ಮುಖ ಕಮಲದಿಂದ ಉದಯಿಸಲ್ಪಟ್ಟ ಬ್ರಾಹ್ಮಣ ವರ್ಣ ಅತಿ ಪವಿತ್ರವಾದದ್ದು ಎಂದು ಮನು (ಅಧ್ಯಾಯ ೧, ೯೨ ಶ್ಲೋಕ, ೨ನೇ ಪುಟ) ಬರೆಯುತ್ತಾನೆ.

ಬ್ರಾಹ್ಮಣರು ಹುಟ್ಟಿನಿಂದಲೇ ಉತ್ತಮರಾಗಿರುತ್ತಾರೆ ಮತ್ತು ಈ ಭೂಮಿಯ ಮೇಲಿರುವುದೆಲ್ಲ ಅವರಿಗೆ ಸೇರಿರುತ್ತದೆ ಎಂದು ಮನು ಬರೆಯುತ್ತಾನೆ. ಮೊದಲನೆಯ ಅಧ್ಯಾಯದ ೧೦೫ನೇ ಶ್ಲೋಕದಲ್ಲಿ ಮನು ಪ್ರಕಾರ ಬ್ರಾಹ್ಮಣರು ಮಾತ್ರ ಈ ವಿಶ್ವಕ್ಕೆ ನಾಯಕರಾಗಿ ಅದನ್ನು ಮುನ್ನಡೆಸಬಲ್ಲವರಾಗಿದ್ದಾರೆ. ಈ ರೀತಿ ವರ್ಣ ವ್ಯವಸ್ಥೆಯು ಮೂಲತಃ ಏಣಿ-ಶ್ರೇಣಿಕೃತ ವ್ಯವಸ್ಥೆಯಾಗಿದ್ದು, ಈ ಏಣಿ-ಶ್ರೇಣಿಯ ತುದಿಯಲ್ಲಿ ಬ್ರಾಹ್ಮಣರು ನಂತರ ಕ್ಷತ್ರಿಯರು, ವೈಶ್ಯರು ಮತ್ತು ಏಣಿ-ಶ್ರೇಣಿಯ ಅತೀ ಕೆಳಗೆ ಶೂದ್ರರು

ಬರುತ್ತಾರೆ. ಮನುಸ್ಮೃತಿಯಲ್ಲಿ ಬ್ರಹ್ಮನು ಶೂದ್ರರನ್ನು ಬ್ರಾಹ್ಮಣರ ಸೇವೆ ಮಾಡಲೆಂದೇ ಸೃಷ್ಟಿಸಿದ್ದಾನೆ ಎಂದು ಬರೆಯುತ್ತಾನೆ. ವರ್ಣವ್ಯವಸ್ಥೆಯು ವ್ಯಕ್ತಿಯ ಜೀವನವನ್ನು ಈ ಹಿಂದೆ ಹುಟ್ಟಿನಿಂದ ಸಾವಿನವರೆಗೂ ನಿರ್ದೇಶಿಸುತ್ತಿತ್ತು.

**೩.೨.೩ ಸಮಾಜದಲ್ಲಿ ಗೌಳಿಗರ ಸ್ಥಾನಮಾನ**

ಗೌಳಿಗರು ಸಂಪೂರ್ಣವಾಗಿ ದಟ್ಟಾರಣ್ಯದಲ್ಲಿ ವಾಸ ಮಾಡುತ್ತಿದ್ದವರಾದ ಕಾರಣ ಆದಿಯಲ್ಲಿ ಅವರಿಗೆ ನಿಸರ್ಗವೇ ಜೊತೆಗಾರ. ಪ್ರಾಣಿ, ಪಕ್ಷಿ, ಮರಗಿಡಗಳೇ ಅವರ ಸಹ ಜೀವಿಗಳಾಗಿದ್ದವು. ಒಂದು ಕಾಲಕ್ಕೆ ಅಲೆಮಾರಿಗಳಾಗಿ ಇವರಂತೆಯೇ ಇದ್ದ ಹಾಲಕ್ಕಿ ಒಕ್ಕಲಿಗರು, ಕುಣಬಿಗಳು, ಗೊಂಡರು, ಮುಕ್ರಿಯರು, ಹಸಲರು ಮುಂತಾದ ಬುಡಕಟ್ಟುಗಳು ಆಕಸ್ಮಿಕವಾಗಿ ಮುಖಾಮುಖಿಯಾಗುತ್ತಿದ್ದಿರಬಹುದು. ನಾಗರಿಕತೆ ಬೆಳೆದಂತೆ ಕಾಡಿನ ಒಳಗೂ ಇತರೆ ಜನ ಬರತೊಡಗಿದರು.[೨೫]

ಒಂದು ಕಾಲಕ್ಕೆ ಸ್ವಚ್ಛಂದವಾಗಿ 'ನಮ್ಮದು ಈ ಕಾಡು' ಎಂಬ ಸ್ವಾಭಿಮಾನದಲ್ಲಿ ಆತ್ಮಸ್ಥೈರ್ಯದಿಂದ ಬದುಕುತ್ತಿದ್ದ ಗೌಳಿಗರು ವಸಾಹತುಶಾಹಿ ಕಾಲದಲ್ಲಿ ಬ್ರಿಟೀಷರ ತಂತ್ರಕ್ಕೆ ಮತ್ತು ಇದೀಗ ನವ ವಸಾಹತುಶಾಹಿ ಎಂದೇ ಕರೆಯಬಹುದಾದ ಅರಣ್ಯ ಇಲಾಖೆಯ ಕಿರುಕುಳಕ್ಕೆ ನಿರಂತರವಾಗಿ ಒಳಗಾದ ನಂತರ ಇವರ ಸಾಮಾಜಿಕ ಸ್ಥಾನಮಾನ ಏನು ಎಂಬುದು ಚರ್ಚೆಗೆ ಗ್ರಾಸವಾಗಿದೆ. ನೀರಿನ ಕೊರತೆ, ಹುಲ್ಲಿನ ಕೊರತೆಯಿಂದಾಗಿ ಹೈನುಗಾರಿಕೆ ವೃತ್ತಿಯು ಅಳಿಯುವ ಹಂತದಲ್ಲಿದೆ. ಒಂದೆರೆಡು ಎಕರೆ ಭೂಮಿಯನ್ನು ಕೃಷಿಗಾಗಿ ಬಳಸುತ್ತಿದ್ದುದನ್ನು ಕಿತ್ತುಕೊಂಡು ಅವರನ್ನು ಕುಮ್ರಿ ಬೇಸಾಯ ವೃತ್ತಿಯಿಂದ ವಂಚಿಸಲಾಯಿತು. ಕಾಡಿನಲ್ಲಿ ಸ್ವಚ್ಛಂದವಾಗಿ ನಿರ್ವಹಿಸುತ್ತಿದ್ದ ಆಹಾರ ಸಂಗ್ರಹಣೆ, ಬೇಟೆಯಂತಹ ಉಪವೃತ್ತಿಗಳನ್ನು ಅರಣ್ಯ ಇಲಾಖೆಯ ಕಾನೂನುಗಳ ಮೂಲಕ ನಾಶಪಡಿಸಲಾಯಿತು. ಇವರು ಮೇಲ್ಜಾತಿಯವರ, ಭೂ ಮಾಲೀಕರ, ಅಧಿಕಾರಿಗಳ ಮರ್ಜಿಯಲ್ಲಿ ಬದುಕಬೇಕಾದ ಅನಿವಾರ್ಯತೆ ಉಂಟು ಮಾಡಲಾಯಿತು. ಮೊದಲು ಇದ್ದ ಇವರ ಸಾಮಾಜಿಕ ಸ್ಥಾನಮಾನಗಳು ಕುಂದಿಹೋದವು. ಈಗ ಕೇವಲ ಕೂಲಿಯವರಾಗಿ ದುಡಿಯುವ ಸ್ಥಾನಮಾನ ಲಭ್ಯವಾಗಿದೆ.

ವಾಸ್ತವವಾಗಿ ಈ ಸಮುದಾಯಕ್ಕೆ ಮೇಲ್‌ಸ್ತರವು ಇರದೇ, ಕೆಳಸ್ತರವೂ ಇರದೇ ಮಧ್ಯಮ ಸ್ಥಾನಮಾನವನ್ನು ಹೊಂದಿದ್ದಾರೆ. ಆದರೆ ನಿರ್ಗತಿಕರಾದ ಈ ಕಾಡಿನ ಮಕ್ಕಳಿಗೆ ಸಮಾಜದಲ್ಲಿ ಸ್ಥಾನಮಾನ ಇಲ್ಲ. ಭೂಮಾಲೀಕರ, ಶ್ರೀಮಂತರ, ಹವ್ಯಕ ಬ್ರಾಹ್ಮಣರ ಮಾತನ್ನು ಕೇಳಿ, ಅವರು ನೀಡಿದ ಕೂಲಿ (ಭಿಕ್ಷೆ)ಗಾಗಿ ಕೈ ಒಡ್ಡಿ ನಿಲ್ಲುವ ಈ ಪರಿಸ್ಥಿತಿ ಕೂಡಾ ಅಸ್ಪೃಶ್ಯತೆಗಿಂತ ಕಡಿಮೆಯಾದುದಲ್ಲ. ತಮ್ಮ ಸುತ್ತಲೂ ಇರುವ ಬ್ರಾಹ್ಮಣ, ಮರಾಠಿ ದೇಸಾಯಿ, ಶೆಟ್ಟರು ಮುಂತಾದ ಬಲಿಷ್ಠ ವರ್ಗಗಳಲ್ಲಿ ಸಾಲವನ್ನು ಪಡೆದು, ಆ ಸಾಲವನ್ನು ತೀರಿಸಲಾರದೆ ಅವರ ಬಳಿ ಕೂಲಿಗಾಗಿ ದುಡಿಯುವ ಹೀನ ಪರಿಸ್ಥಿತಿ ಉಂಟಾಗಿದೆ. ಮೇಲ್ವರ್ಗಗಳಿಂದ ಸಾಮಾಜಿಕ ಅಭದ್ರತೆಯನ್ನು ಎದುರಿಸುವುದು ಅನಿವಾರ್ಯವಾಗಿದೆ.[೨೬] ಹೀಗಾಗಿ ಬದಲಾದ ಪರಿಸ್ಥಿತಿಯಲ್ಲಿ ಇವರ ಸ್ಥಾನಮಾನಗಳು ದಿನದಿಂದ ದಿನಕ್ಕೆ ಕೆಳಸ್ತರಕ್ಕೆ ಇಳಿಯುತ್ತಿದೆ. ಸಾಮಾಜಿಕ ಸ್ಥಾನಮಾನ ಹೇಳಿಕೊಳ್ಳುವಷ್ಟು ಉತ್ತಮವಾಗಿಲ್ಲ.

## ೩.೩ ಗೌಳಿ ಸಮುದಾಯದ ಸ್ತ್ರೀ ಸ್ಥಾನಮಾನಗಳು

### ೩.೩.೧ ಒಟ್ಟಾರೆ ಭಾರತೀಯ ಸಂಸ್ಕೃತಿಯಲ್ಲಿ ಸ್ತ್ರೀಯರ ಸ್ಥಾನಮಾನ

ಸ್ತ್ರೀಯರು ಹೊಂದಿರುವ ಸ್ಥಾನಮಾನವೆಂಬುದು ಯಾವುದೇ ಸಮಾಜದ ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಮತ್ತು ನಾಗರೀಕತೆಯ ಮುನ್ನಡೆಯನ್ನು ಅಳೆಯುವ ಮಾನದಂಡವಿದ್ದಂತೆ ಎನ್ನಬಹುದು. ಸ್ತ್ರೀಯರನ್ನು ಗೌರವಿಸದ ಮತ್ತು ಅವರಿಗೆ ಅರ್ಹವಾದ ಅಂತಸ್ತು ಹಾಗೂ ಅವಕಾಶಗಳನ್ನು ಕಲ್ಪಿಸಿಕೊಡದೇ ಇರುವ ಸಮಾಜವು ಮುಂದೆ ಬರುವುದು ಸಾಧ್ಯವಿಲ್ಲ ಎಂದು ಸ್ವಾಮಿ ವಿವೇಕಾನಂದರು ಖಚಿತವಾಗಿ ತಿಳಿಸಿರುತ್ತಾರೆ. 'ಶಕ್ತಿ ಸ್ವರೂಪಿಣಿ' ಯಾದ ಸ್ತ್ರೀಯನ್ನು ಗೌರವಿಸದೇ ಇದ್ದುದೇ ಭಾರತದ ಅವನತಿಗೆ ಕಾರಣವಾಯಿತೆಂದು ಸ್ವಾಮಿ ವಿವೇಕಾನಂದರು ಹೇಳಿದ್ದುಂಟು.

ಸಮಾಜಶಾಸ್ತ್ರೀಯವಾಗಿ ಚಿಂತನೆ ಮಾಡುವುದಿದ್ದರೂ, 'ಸ್ತ್ರೀಯರ ಬಗೆಗಿನ ಸಮುದಾಯದ ಮನೋಭಾವನೆಯು ಯಾವುದೇ ಸಮಾಜದಲ್ಲಿಯಾದರೂ ಬಹಳ ಸಾಮಾಜಿಕ ಮಹತ್ವವನ್ನು ಹೊಂದಿದೆ' ಎಂದು ಪಂಡರಿನಾಥ ಪ್ರಭುರವರ ಅಭಿಪ್ರಾಯವಾಗಿದೆ.

ಆದಾಗ್ಯೂ ಪ್ರತಿಯೊಂದು ದೇಶದಲ್ಲಿಯೂ ಸ್ತ್ರೀಯರನ್ನು ನೋಡುವ ದೃಷ್ಟಿ ಮತ್ತು ಅವರಿಗೆ ನೀಡಲಾಗಿರುವ ಅಂತಸ್ತು ಮತ್ತು ಸ್ಥಾನಮಾನಗಳು ಕಾಲಕಾಲಕ್ಕೂ ಬದಲಾವಣೆ ಹೊಂದುತ್ತಲೇ ಇರುತ್ತವೆ. 'ಒಂದು ಕಾಲದಲ್ಲಿ ಅಮೇರಿಕನ್ನರು ತಮ್ಮ ಸ್ತ್ರೀಯರನ್ನು ದೇವತೆಗಳೆಂದು, ಫ್ರೆಂಚರು ಪ್ರೇಯಿಸಿಯರೆಂದು, ಜರ್ಮನ್ನರು ಮನೆಯೊಡತಿಯರೆಂದು, ಚೀನಿಯರು ಹಾಗೂ ಭಾರತೀಯರು ತಾಯಿಯರೆಂದು, ಮುಸ್ಲಿಂರು ತಮ್ಮ ಕೈಗೊಂಬೆಗಳೆಂದು ಪರಿಗಣಿಸುತ್ತಿದ್ದರು'. ಆದರೆ ಇಂದಿನ ಆಧುನಿಕ ಪ್ರಪಂಚದಲ್ಲಿ ಅವರ ಸ್ಥಿತಿ-ಗತಿಗಳು ಸಂಪೂರ್ಣ ಬೇರೆಯಾಗಿವೆ.

ಕ್ರಿಪೂ.೨೦೦೦-೫೦೦ರ ವೇದಗಳ ಕಾಲದಲ್ಲಿ ಸ್ತ್ರೀಯರು ಪುರುಷರಿಗೆ ಸಮಾನವಾದ ಸಾಮಾಜಿಕ ಸ್ಥಾನಮಾನಗಳನ್ನು ಹೊಂದಿದ್ದರು. ಅಂದಿನ ವಿಶ್ವದಲ್ಲಿ ಸ್ತ್ರೀಯರಿಗೆ ಬೇರೆಲ್ಲೂ ಇಷ್ಟು ಉತ್ಕೃಷ್ಟ ಸ್ಥಾನಮಾನವಿರಲಿಲ್ಲ. ವೇದಗಳ ಕಾಲದಲ್ಲಿ ಬಾಲಕಿಯರಿಗೂ 'ಉಪನಯನ' ಮಾಡುವ ಕ್ರಮವಿತ್ತಲ್ಲದೇ ವೇದಾಧ್ಯಯನಕ್ಕೆ ಸನ್ನದ್ಧಗೊಳಿಸಲಾಗುತ್ತಿತ್ತು. ಅಥರ್ವ ವೇದದ ಪ್ರಕಾರ, 'ಸ್ತ್ರೀಯೊಬ್ಬಳ ವೈವಾಹಿಕ ಜೀವನದ ಯಶಸ್ಸು ಆಕೆಯ ಬ್ರಹ್ಮಚರ್ಯೆಯಲ್ಲಿ ನೀಡಲಾದ ಸುಯೋಗ್ಯವಾದ ಶಿಕ್ಷಣವನ್ನು ಅವಲಂಬಿಸಿರುತ್ತದೆ'.

ಅಸಾಧಾರಣ ಪಾಂಡಿತ್ಯವುಳ್ಳ ಹಾಗೂ ತತ್ವಜ್ಞಾನದಲ್ಲಿ ಬಹು ಆಳವಾದ ಜ್ಞಾನವನ್ನು ಹೊಂದಿದ್ದ ಸ್ತ್ರೀಯರ ಹೆಸರುಗಳ ಉಲ್ಲೇಖಗಳನ್ನು ವೇದ ಸಾಹಿತ್ಯದಲ್ಲಿ ಗುರುತಿಸಬಹುದು. ಉದಾ: ಅಲೋಪಮುದ್ರಾ, ವಿಶ್ವಾವರಾ, ಘೋಷಾ, ಸಿಕತಾ, ನಿವಾವರಿ, ಇಂದ್ರನ ಪತ್ನಿಯಾದ ಇಂದ್ರಾಣಿ, ಸಾಸ್ವತಿ, ಸುಲಭಾ, ಮೈತ್ರೇಯಿ, ಗಾರ್ಗಿ, ಅಪಲಾ, ಇತ್ಯಾದಿ. ಶತಪಥ ಬ್ರಾಹ್ಮಣರ ಪ್ರಕಾರ ಆಕೆ ಪತಿಯಾದವನ 'ಅರ್ಧಾಂಗಿ' ಎನಿಸಿಕೊಂಡಿದ್ದಳು.

ಮಹಾಕಾವ್ಯಗಳ ಕಾಲದ ನಂತರ ಕ್ರಮೇಣವಾಗಿ ಸ್ತ್ರೀಯರ ಸ್ಥಾನಮಾನಗಳಲ್ಲಿ ಬದಲಾವಣೆಗಳು ಉಂಟಾಗಿ ಅವರಿಗಿದ್ದ ಗೌರವ ಭಾವನೆಯು ಮಾಯವಾಗಿ ಸ್ತ್ರೀ ಪುರುಷನಿಗೆ ಸಮಾನಳಲ್ಲ ಎನ್ನುವ ಭಾವನೆ ಪ್ರಬಲವಾಗಿ ಬೆಳೆಯಲು ಪ್ರಾರಂಭಿಸಿತು. ಮನು ಸ್ಮೃತಿ ಪ್ರಕಾರ 'ಪಿತಾ ರಕ್ಷತಿ–ಕುಮಾರೇ, ಭರ್ತಾ ರಕ್ಷತೀ ಯೌವನೇ, ರಕ್ಷತೀ ಸ್ಥವಿರೇ ಪುತ್ರಾ, ನಸ್ತ್ರೀ ಸ್ವಾತಂತ್ರ್ಯಮರ್ಹಂತಿ'. ಸ್ತ್ರೀಯಾದವಳು ಬಾಲ್ಯದಲ್ಲಿ ತಂದೆಯ ಆಶ್ರಯದಲ್ಲಿ, ಯೌವನದಲ್ಲಿ ಗಂಡನ ಆಶ್ರಯದಲ್ಲಿ, ಮುಪ್ಪಿನಲ್ಲಿ ತನ್ನ ಮಕ್ಕಳ ಆಶ್ರಯದಲ್ಲಿ ಇರತಕ್ಕದ್ದು ಎಂದು ಮನು ಸ್ಮೃತಿ ಅಭಿಪ್ರಾಯವಾಗಿದೆ. ಬೌದ್ಧ ಧರ್ಮದಲ್ಲಿಯೂ ಸ್ತ್ರೀಗೆ ಸಂಪೂರ್ಣ ಸ್ವತಂತ್ರ ದೊರಕದಿದ್ದರೂ, ಆಕೆಯ ವ್ಯಕ್ತಿತ್ವ ವಿಕಸನಕ್ಕೆ ಅಡ್ಡಿಯಾಗಬಹುದಾದ ಯಾವುದೇ ನಿರ್ಬಂಧಗಳು ಇರಲಿಲ್ಲ. ಸ್ತ್ರೀಯರ ಸ್ಥಾನಮಾನಕ್ಕೆ ಸಂಬಂಧಿಸಿದಂತೆ ಮಧ್ಯಯುಗವನ್ನು 'ಕರಾಳ ಯುಗ'ವೆಂದು ಕರೆಯಲಾಗುವುದು.

ಸತಿಪದ್ಧತಿ, ಬಾಲ್ಯ ವಿವಾಹ ಪದ್ಧತಿ, ವಿಧವಾ ವಿವಾಹ ನಿರ್ಬಂಧನೆ, ದೇವದಾಸಿ ಪದ್ಧತಿ, ಪರದಾ ಪದ್ಧತಿ ಮುಂತಾದವುಗಳು ಸ್ತ್ರೀಯರ ಸ್ಥಾನಮಾನಗಳು ಅಧೋಗತಿಗೆ ಬರಲು ಕಾರಣೀಭೂತವಾದವು. ಇಂತಹ ಪ್ರತಿಕೂಲ ಪರಿಸ್ಥಿತಿಯಲ್ಲಿಯೂ ಸಾಧನೆಗೈದ ಮಹಿಳೆಯರೆಂದರೆ ರಾಣಿ ಪದ್ಮಿನಿ, ಕಿತ್ತೂರ ಚೆನ್ನಮ್ಮ, ಝಾನ್ಸಿ ಲಕ್ಷ್ಮೀಬಾಯಿ, ಮೀರಾಬಾಯಿ, ಅಕ್ಕಮಹಾದೇವಿ, ಸಂಚಿ ಹೊನ್ನಮ್ಮ ಇವರು ತಮ್ಮ ಸ್ವಂತಿಕೆಯಿಂದ ಮೆರೆದಿದ್ದಾರೆ. ಬ್ರಿಟಿಷರ ಆಳ್ವಿಕೆಯು ಆರಂಭವಾಗುವ ಸಂದರ್ಭದಲ್ಲಿನ ಭಾರತದ ಸ್ತ್ರೀಯರ ಸ್ಥಾನಮಾನಗಳು ಶೋಚನಿಯವಾಗಿಯೇ ಇದ್ದವು. ಪರದಾ ಪದ್ಧತಿಯ ಹೇರಿಕೆ, ಬಾಲ್ಯ ವಿವಾಹ, ವಿಧವಾ ಪುನರ್ವಿವಾಹ ನಿಷೇಧ, ಸತಿ ಆಚರಣೆ, ಸ್ತ್ರೀ ಶಿಕ್ಷಣದ ನಿಷೇಧ, ಪುರುಷರ ಸ್ವಾರ್ಥದ ಬಹು ಪತ್ನಿತ್ವದ ಆಚರಣೆ, ದೇವದಾಸಿ ಪದ್ಧತಿ, ಅಂತರ್‌ಜಾತಿ ವಿವಾಹ ನಿಷೇಧ, ಸ್ತ್ರೀಯರ ಆಸ್ತಿಯ ಹಕ್ಕಿನ ನಿರಾಕರಣೆ, ದತ್ತು ಸ್ವೀಕಾರದ ನಿರಾಕರಣೆ, ಸ್ತ್ರೀಯರು ರಾಜಕೀಯ ಹಾಗೂ ಸಾರ್ವಜನಿಕ ಜೀವನ ನಡೆಸಲು ಪ್ರತಿಕೂಲವಾಗಿದ್ದಂತಹ ಪರಿಸ್ಥಿತಿ ಈ ಮುಂತಾದ ಸಮಸ್ಯೆ ಮತ್ತು ಸವಾಲುಗಳ ಸುಳಿಯಲ್ಲಿ ಸ್ತ್ರೀಯರ ಸ್ಥಾನಮಾನವೆಂಬುದು ಸಿಲುಕಿಕೊಂಡತಹ ಸಮಯದಲ್ಲಿ ಬ್ರಿಟಿಷರು ಭಾರತದಲ್ಲಿ ಆಡಳಿತದ ಚುಕ್ಕಾಣಿ ಹಿಡಿದಿದ್ದರು.

ಜೀವನದ ಬಗೆಗಿನ ದೃಷ್ಟಿಕೋನದಲ್ಲಾದ ಬದಲಾವಣೆ, ಸ್ತ್ರೀಯರ 'ವಿಮೋಚನೆ'ಯ ಬಗ್ಗೆ ಸಮಾಜ ಸುಧಾರಕರು ಪಟ್ಟ ಪರಿಶ್ರಮ, ಸಾಮಾಜಿಕ ಶಾಸನಗಳ ಪಾತ್ರ, '೧೮೨೯–ಸತಿ ಪದ್ಧತಿ ನಿಷೇಧ ಕಾಯ್ದೆ', '೧೮೫೬–ವಿಧವಾ ಪುನರ್ವಿವಾಹ ಕಾಯ್ದೆ', '೧೮೭೨–ನಾಗರಿಕ ವಿವಾಹ ಕಾಯ್ದೆ', '೧೮೭೪–ವಿವಾಹಿತ ಸ್ತ್ರೀಯರ ಕಾಯ್ದೆ', '೧೯೨೯–ಬಾಲ್ಯ ವಿವಾಹ ಕಾಯ್ದೆ' (ಶಾರದಾ ಕಾಯ್ದೆ), ಮಹಿಳಾ ಶಿಕ್ಷಣದ ಪ್ರಭಾವ ಅಲ್ಲದೇ ಮಹಿಳಾ ಸಂಘಗಳು ಹಾಗೂ ಮಹಿಳಾ ನೇತಾರರಾದ ಪಂಡಿತ ರಮಾಬಾಯಿ, ರಮಾಬಾಯಿ ರಾನಡೆ, ಆ್ಯನಿ ಬೆಸೆಂಟ್, ಸ್ವರ್ಣ ಕುಮಾರಿದೇವಿ, ಅಮೃತ ಕೌರ ಇವರೆಲ್ಲರ ಪ್ರಯತ್ನದಿಂದ ಸ್ತ್ರೀಯರ ಸ್ಥಾನಮಾನಗಳು ನಿಧಾನವಾಗಿ ಉನ್ನತೀಕರಣಕ್ಕೆ ಒಳಗಾಗಲು ಸಾಧ್ಯವಾಯಿತು.

**ಸ್ವತಂತ್ರ ಭಾರತದಲ್ಲಿ ಸ್ತ್ರೀಯರ ಸ್ಥಾನಮಾನ**

ಭಾರತವು ಸ್ವಾತಂತ್ರ್ಯವನ್ನು ಪಡೆದ ಮೇಲೆ ಸ್ತ್ರೀಯರ ಸ್ಥಾನಮಾನವನ್ನು ಹೆಚ್ಚಿಸುವ ಹಾಗೂ ಕಲ್ಯಾಣವನ್ನು ಸಾಧಿಸುವ ದೃಷ್ಟಿಯಿಂದ ಹಲವಾರು ಶಾಸನಾತ್ಮಕ, ಶೈಕ್ಷಣಿಕ, ಆರ್ಥಿಕ ಮತ್ತಿತರ ಕ್ರಮಗಳನ್ನು ಕೈಕೊಳ್ಳಲಾಯಿತು. ಸ್ವತಂತ್ರ ಭಾರತದ ಸಂವಿಧಾನವು ೧೯೫೦ರ ಜನೇವರಿ ೨೬ ರಂದಿನಿಂದ ಜಾರಿಗೊಂಡ ಮೇಲೆ ಕಾನೂನಾತ್ಮಕವಾಗಿ ಸ್ತ್ರೀಯರು ಎಲ್ಲಾ ವಿಷಯಗಳಲ್ಲೂ ಪುರುಷರಿಗೆ ಸಮಾನರೇ ಆಗಿದ್ದಾರೆ. ಸಂವಿಧಾನದ ೧೪ ಹಾಗೂ ೧೫ ನೇ ವಿಧಿಗಳು ಸಮಾನತೆಯ ಹಕ್ಕನ್ನು ದೇಶದ ಎಲ್ಲಾ ಪೌರರಿಗೆ ಯಾವುದೇ ಬಗೆಯ ವರ್ಗ ಭೇದ, ಜಾತಿ ಭೇದ, ಮತ ಭೇದ, ಪಕ್ಷ ಭೇದ, ಲಿಂಗ ಭೇದವಿಲ್ಲದಂತೆ ಸಮಾನವಾಗಿಯೇ ನೀಡುತ್ತದೆ.

ಸ್ವತಂತ್ರ ಭಾರತದಲ್ಲಿ ಸ್ತ್ರೀಯರ ಸ್ಥಾನಮಾನಗಳು ಎತ್ತರಿಸಲು ಕಾರಣವಾದ ಶಾಸನಗಳು ಇಲ್ಲಿವೆ.

೧. ಹಿಂದೂ ವಿವಾಹ ಕಾಯ್ದೆ – ೧೯೫೫.

೨. ಹಿಂದೂ ಉತ್ತರಾಧಿಕಾರ ಕಾಯ್ದೆ – ೧೯೫೬.

೩. ಹಿಂದೂ ದತ್ತು ಮತ್ತು ಜೀವನಾಂಶ ಕಾಯ್ದೆ – ೧೯೫೬.

೪. ವಿಶೇಷ ವಿವಾಹ ಕಾಯ್ದೆ –೧೯೫೪.

೫. ಕನ್ಯೆಯರು ಮತ್ತು ಮಹಿಳೆಯರ ಅನೈತಿಕ ವ್ಯಾಪಾರ ಪ್ರತಿಬಂಧಕ ಕಾಯ್ದೆ –೧೯೫೬.

೬. ವರದಕ್ಷಿಣೆ ನಿಷೇಧ ಕಾಯ್ದೆ – ೧೯೬೧.

೭. ವೈದ್ಯಕೀಯ ಗರ್ಭ ನಿವಾರಣಾ ಕಾಯ್ದೆ – ೧೯೭೧.

ಆಧುನಿಕ ಭಾರತದ ಮಹಿಳೆಯು ಒಂದು ನಿಗೂಢ ರಹಸ್ಯದಂತಿದ್ದಾಳೆ. ಭಾರತೀಯ ಮಹಿಳೆಯ ಸ್ಥಾನಮಾನ ಕುರಿತು ಆ್ಯಂಡ್ರಿ ಬೇಟಲಿ ಅವರ ಅವಲೋಕನಗಳು:

ಭಾರತೀಯ ಮಹಿಳೆಯರ ಸ್ಥಿತಿಗತಿಯನ್ನು ಸಮಾಜಶಾಸ್ತ್ರೀಯ ದೃಷ್ಟಿಕೋನದಿಂದ ಅರ್ಥೈಸಿಕೊಳ್ಳಬೇಕಾದದ್ದು ಅಗತ್ಯ ಎನ್ನುವುದಾದರೂ ಇಲ್ಲಿಯೂ ಕೆಲವು ಸಮಸ್ಯೆಗಳು ನಮಗೆ ಎದುರಾಗುತ್ತವೆ ಎನ್ನುತ್ತಾರೆ ಆ್ಯಂಡ್ರಿ ಬೇಟಲಿ.

೧. ವಿಭಿನ್ನ ಸ್ತರಗಳ, ವಿಭಿನ್ನ ಪ್ರದೇಶಗಳ, ವಿಭಿನ್ನ ಜಾತಿಗಳ ಮತ್ತು ವಿಭಿನ್ನ ಮತೀಯ ಸಮೂಹಗಳ ಸ್ತ್ರೀಯರುಗಳು ವಿಭಿನ್ನ ಬಗೆಯ ಸ್ಥಾನಮಾನಗಳನ್ನು ಹೊಂದಿರುವುದು.

೨. ಸಂಪ್ರಾದಾಯವಾದಿಗಳು ಮತ್ತು ಆಧುನಿಕತಾವಾದಿಗಳು ಸ್ತ್ರೀಯರ ಅಂತಸ್ತಿನ ಬಗ್ಗೆ ವಿಭಿನ್ನ ದೃಷ್ಟಿಕೋನ ಹೊಂದಿರುವುದು. ಸಂಪ್ರದಾಯವಾದಿಗಳು, ವೇದಕಾಲೀನ ಸ್ಥಿತಿಗತಿಗಳ ಆಧಾರದ ಮೇಲೆ ಸ್ತ್ರೀಯರ ಬಗ್ಗೆ ಒಂದು 'ಆದರ್ಶಾತ್ಮಕ ನಿಲುವು' ಹೊಂದಿದ್ದು ಈಗಿನ ಕಾಲಕ್ಕಿಂತಲೂ ಈ ಹಿಂದೆಯೇ ಒಳ್ಳೆಯದಿತ್ತು ಎಂದು ವಾದಿಸುವರು. ಆಧುನಿಕರು ಸ್ವಾತಂತ್ರ್ಯ ಹೋರಾಟದ

ಸಮಯದಲ್ಲಿ ಮಹಿಳೆಯರು ವಹಿಸಿದ ಪಾತ್ರವನ್ನು ಆಧಾರವಾಗಿಟ್ಟುಕೊಂಡು ಸಂಪ್ರದಾಯದ ಸಂಕೋಲೆಗಳನ್ನು ಹರಿದೊಗೆದು ಹೊರಬಂದ ಮೇಲೆಯೇ ಅವರ ಸ್ಥಾನಮಾನ ಉತ್ತಮವಾಗುತ್ತಿದೆ ಎಂದು ವಾದಿಸುತ್ತಿರುವುದಲ್ಲದೆ ಈ ಹಿಂದೆ ಮಹಿಳೆಯರ ಮೇಲೆ ವಿಧಿಸಲಾಗಿದ್ದ ಹಲವಾರು ನಿಷೇಧಗಳ–ನಿಯಂತ್ರಣಗಳ ಮೇಲೆ ದಾಳಿ ನಡೆಸುತ್ತಿರುವುದು.

೩. ಮಹಿಳೆಯರ ಹಿಂದಿನ ಅಥವಾ ಈಗಿನ ಸ್ಥಾನಮಾನಗಳಿಗೆ ಸಂಬಂಧಿಸಿದಂತೆ ಯಾವುದೇ ಅವಸರದ ನಿರ್ಣಯಕ್ಕೆ ಬಾರದೇ ಇರುವ ಬಗ್ಗೆ ನಮ್ಮನ್ನು ನಾವು ನಿಯಂತ್ರಿಸಿಕೊಳ್ಳಬೇಕಾದ ಅಗತ್ಯತೆ. ಯಾವುದೇ ಬಗೆಯ ಹೋಲಿಕೆ ಮಾಡುವ ಮುನ್ನ ಸತ್ಯಾಂಶವನ್ನು ಸತ್ಯಾಂಶದೊಂದಿಗೆ ಮತ್ತು ಆದರ್ಶವನ್ನು ಆದರ್ಶದೊಂದಿಗೆ, ಮೌಲ್ಯಗಳನ್ನು ಮೌಲ್ಯಗಳೊಂದಿಗೆ ಹೋಲಿಕೆ ಮಾಡುವುದು ಸೂಕ್ತವೆಂಬುದನ್ನು ಮನಗಾಣಬೇಕಾದ ಔಚಿತ್ಯತೆ.

೪. ಸ್ತ್ರೀಯರ ಅಂತಸ್ತಿನ ಪ್ರಶ್ನೆ ಎಂಬುದು ಮೂಲಭೂತವಾಗಿ ಒಂದು ನೈತಿಕ ವಿಚಾರವೂ ಆಗಿರುವುದರಿಂದ ಸಮಾಜದ ಒಂದು ವರ್ಗದ ಮಹಿಳೆಯರ ಅಂತಸ್ತು ಎಂಬುದು ಆ ವರ್ಗಕ್ಕೆ ಸಂಬಂಧಿಸಿದ ನೈತಿಕ ಸಂಹಿತೆಯನ್ನು ಅವಲಂಬಿಸಿದೆ ಎಂಬುದನ್ನು ಅರ್ಥೈಸಿಕೊಳ್ಳಬೇಕಾದ್ದರ ಅನಿವಾರ್ಯತೆ.

೫. ಸಾರ್ವಜನಿಕ ಜೀವನದ ಕೆಲವೊಂದು ಕ್ಷೇತ್ರಗಳಲ್ಲಿ ಬೆರಳೆಣಿಕೆಯ ಕೆಲವು ಮಹಿಳೆಯರು ಮಹತ್ವಪೂರ್ಣವೆನ್ನಬಹುದಾದ ಸಾಧನೆಗೈದಿದ್ದರೂ ಅದನ್ನು ಉತ್ಪ್ರೇಕ್ಷಿಸದೇ ಬಹುತೇಕ ಮಂದಿ ಮಹಿಳೆಯರು ಇಂದಿಗೂ ಗ್ರಾಮೀಣ ಪರಿಸರದಲ್ಲಿ ಹೆಚ್ಚು ಕಡಿಮೆ ಈ ಹಿಂದಿನಂತೆಯೇ ಸಾಂಪ್ರದಾಯಿಕ ಪರಿಸರದ ಬಂಧಿಗಳಾಗಿಯೇ ಜೀವನ ನಡೆಸುತ್ತಿರುವರು ಎಂಬ ಅಂಶವನ್ನು ಸದಾ ಗಮನದಲ್ಲಿರಿಸಿಕೊಳ್ಳುವುದು.

ಆ್ಯಂಡ್ರಿ ಬೇಟಲಿ ಅವರ ಈ ಅವಲೋಕನಗಳು ಇಲ್ಲಿ ಔಚಿತ್ಯಪೂರ್ಣವೆನ್ನಿಸುತ್ತವೆ. ಉಲ್ಲೇಖ: 'Indian Women' 61-68.

**ಮಹಿಳೆ ಮತ್ತು ಆಧುನಿಕತೆಯ ಸವಾಲುಗಳು**

ಇಂದಿನ ಭಾರತದ ಮಹಿಳೆ ಸ್ಥಿತ್ಯಂತರದ ಕಾಲಘಟ್ಟದಲ್ಲಿ ನಿಂತಿದ್ದಾಳೆ. ಅವಳ ಮುಂದೆ ಸಾಧಿಸಲು ಅಪಾರ ಅವಕಾಶಗಳ ಬಾಗಿಲುಗಳು ತೆರೆದಿವೆ. ಆದರೆ ಅವಳು ಎರಡು ಹೆಜ್ಜೆ ಮುಂದೆ ಇಟ್ಟರೆ ನಾಲ್ಕು ಹೆಜ್ಜೆ ಕೆಳಕ್ಕೆಳೆಯಲು ಅನೇಕ ದುಷ್ಟ ಶಕ್ತಿಗಳು ಕಾದು ನಿಂತಿವೆ. ಸಮಾಜದಲ್ಲಿ ಅವಳಿನ್ನೂ 'ಎರಡನೇ ದರ್ಜೆ' ಪ್ರಜೆಯೇ ಆಗಿದ್ದಾಳೆ (Second Sex).

ಧೈರ್ಯ, ಸಾಹಸ, ಆಕ್ರಮಣಶೀಲತೆ, ಬುದ್ಧಿವಂತಿಕೆ, ಮುಂದಾಳತ್ವ, ಒರಟುತನ, ಕ್ರೀಯಾಶೀಲತೆ ಇವು ಗಂಡು ಗುಣಗಳು ಎಂದು, ನಾಚಿಕೆ, ಸಂಕೋಚ, ಸಹನೆ, ತಾಳ್ಮೆ, ಪುಕ್ಕಲುತನ, ಹಿಂಬಾಲಕತ್ವಗಳು ಹೆಣ್ಣು ಗುಣಗಳೆಂದು ವಿಭಾಗಿಸಲಾಗಿದೆ. ತೋಳ್ಬಲದ ದೃಷ್ಟಿಯಿಂದ ಗಂಡಸರು ಬಲಿಷ್ಠರು. ಹೆಂಗಸರು

ದುರ್ಬಲರು, ಆಳಿಸಿಕೊಳ್ಳಬೇಕಾದವರು ಎಂದು ಶತಮಾನಗಳಿಂದ ನಂಬಿಸುತ್ತಾ ಬರಲಾಗಿದ್ದು, ಇದರ ಆಧಾರದಿಂದಲೇ ಸ್ತ್ರೀ ಪುರುಷರ ನೆಲೆ-ಬೆಲೆಗಳನ್ನು ಗುರುತಿಸುತ್ತಾ ಬರಲಾಗಿದೆ. ಆದರೆ ವಾಸ್ತವವಾಗಿ 'ಬಲ' ಎನ್ನುವ ಕಲ್ಪನೆಯೇ ಪೂರ್ವಗ್ರಹ ಪೀಡಿತವಾದದ್ದು. ಮನಃಶಾಸ್ತ್ರಜ್ಞರ ಪ್ರಕಾರ ನೂರಕ್ಕೆ ನೂರು ಗಂಡು ಅಥವಾ ಹೆಣ್ಣು ಗುಣಗಳನ್ನು ಹೊಂದಿರುವವರು ಯಾರೂ ಇಲ್ಲ.

ಸಬಲೀಕರಣವನ್ನು ಹೆಚ್ಚಿನ ಬಾರಿ ನಾವು ನಗರ ಕೇಂದ್ರಿತವಾಗಿ ಮಾತ್ರ ಚರ್ಚಿಸುತ್ತಿರುತ್ತೇವೆ. ವಿದ್ಯೆ ಕಲಿತ, ಬಿಳಿ ಕಾಲರಿನ ಕೆಲಸದಲ್ಲಿ ತೊಡಗಿಕೊಂಡಿರುವ, ನಯಗಾರಿಕೆ ತಿಳುವಳಿಕೆ ಇರುವ ಮಹಿಳೆಯರು ಮಾತ್ರ ಸಬಲೆಯರು, ಮನೆ ವಾರ್ತೆ ನೋಡಿಕೊಳ್ಳುವ ಗೃಹಣಿಯರು, ಗ್ರಾಮೀಣ, ಕೃಷಿ ಹಾಗೂ ಅದನ್ನಾಧಾರಿತ ಕೆಲಸಗಳಲ್ಲಿ ತೊಡಗಿಕೊಂಡಿರುವ ಕಚ್ಚಾ ತಿಳುವಳಿಕೆಯನ್ನು ಹೊಂದಿರುವ ಅಸಂಘಟಿತ ವಲಯದ ಮಹಿಳೆಯರು ಸಬಲೆಯರಲ್ಲ ಎನ್ನುವ ಒಂದು ತಪ್ಪು ತಿಳುವಳಿಕೆ ನಮ್ಮನ್ನಾವರಿಸುತ್ತದೆ. ಆದರೆ ಎಷ್ಟೋ ಬಾರಿ ವಿದ್ಯೆ ಕಲಿತು, ಉದ್ಯೋಗಸ್ಥೆಯರಾಗಿದ್ದರೂ ಸಮಯಾಭಾವದಿಂದ ಕುಟುಂಬದ ಹೆಚ್ಚಿನ ಜವಾಬ್ದಾರಿಯಿಂದ ತಮ್ಮ ಅರಿವಿನ ಪರಿಧಿಯನ್ನು ವಿಸ್ತರಿಸಿಕೊಳ್ಳುವ ಅವಕಾಶವಿರದ ವಿದ್ಯಾವಂತ ಹೆಣ್ಣು ಮಕ್ಕಳು ನಮ್ಮ ಮಧ್ಯೆ ಇದ್ದಾರೆ. ಅವರು ಒಳಹೊರಗಿನ ಕೆಲಸದ ಒತ್ತಡದಿಂದಾಗಿ ಮಾನಸಿಕವಾಗಿ-ದೈಹಿಕವಾಗಿ ಜರ್ಜರಿತರಾಗುತ್ತಿದ್ದಾರೆ. ಹಾಗೆಂದ ಮಾತ್ರಕ್ಕೆ ಮಹಿಳೆಯರು ಹೊರಗೆ ದುಡಿಯಬಾರದು ಎಂದಲ್ಲ. ತನ್ನ ಕೆಲಸದ ಹೊರೆಯನ್ನು ಕುಟುಂಬದ ಇತರ ಸದಸ್ಯರೊಂದಿಗೆ ಹಂಚಿಕೊಂಡು ಮಾಡುವ ಜಾಣ್ಮೆ ಇದ್ದಾಗ ಆರ್ಥಿಕ ಸ್ವಾವಲಂಬನೆ, ನೆಮ್ಮದಿಯನ್ನು ತಂದುಕೊಡುತ್ತದೆ. ಮಹಿಳೆಗೆ ಸಮಾಜದಲ್ಲಿ ಗೌರವ, ಸಮಾನ ಸ್ಥಾನಮಾನ ಕೂಡ ಸಿಕ್ಕುತ್ತದೆ. ಎರಡೂ ದೋಣಿಯ ಮೇಲೆ ಕಾಲಿಟ್ಟು ಅದನ್ನು ಹೇಗೆ ಯಶಸ್ವಿಯಾಗಿ ನಿಭಾಯಿಸುವದು ಮತ್ತು ಸಮಾಜಕ್ಕೆ ಲಿಂಗ ಸೂಕ್ಷ್ಮತೆಯ ಅರಿವು ಮೂಡಿಸುವುದು ಹೇಗೆ ಎನ್ನುವುದೂ ಕೂಡಾ ಇಂದಿನ ಆಧುನಿಕ ಮಹಿಳೆಯ ಮುಂದಿರುವ ಬಹು ದೊಡ್ಡ ಸವಾಲು.

ಗ್ರಾಮೀಣ ಪ್ರದೇಶಗಳಲ್ಲಿ ಸಮರ್ಪಕವಾಗಿ ಇಂದಿಗೂ ಸಮಾನ ಸ್ಥಾನಮಾನ ನೀಡದಿರುವ ಸರಕಾರಗಳ ವೈಫಲ್ಯ ಮಹಿಳೆ ಮುಖ್ಯವಾಹಿನಿಗೆ ಬರಲು ಪ್ರಮುಖ ತೊಡಕಾಗಿದೆ. ಪುರುಷನಿಗೆ ಸಮಾನ ಬೇಡ, ನಗರ ಪ್ರದೇಶದ ಬಿಳಿಕಾಲರಿನ ಕೆಲಸದಲ್ಲಿ ತೊಡಗಿಕೊಂಡ ಮಹಿಳೆಗೆ ಸಿಕ್ಕುವ ಅರ್ಧದಷ್ಟೂ ಹಣ, ಗೌರವ, ಅನುಕೂಲತೆಗಳು ದೊರೆಯದ ಗ್ರಾಮೀಣ ಮಹಿಳೆ ತನ್ನ ಅಸ್ತಿತ್ವ ಮತ್ತು ವ್ಯಕ್ತಿತ್ವ ಕಂಡುಕೊಳ್ಳುವುದು ಎಲ್ಲಿ ಮತ್ತು ಹೇಗೆ ? ಇವು ನಮ್ಮ ಮುಂದಿರುವ ಪ್ರಮುಖ ಸವಾಲುಗಳು.

ತನ್ನ ಸ್ವಂತ ಬದುಕಿನ ನಿರ್ಧಾರಗಳನ್ನು ಸ್ವತಃ ತಾನೇ ತೆಗೆದುಕೊಳ್ಳುವಷ್ಟು ವೈಚಾರಿಕ ಪ್ರಜ್ಞೆಯನ್ನು, ಎಲ್ಲ ರೀತಿಯ ಶೋಷಣೆಯ ವಿರುದ್ಧದ ಜಾಗೃತಿಯನ್ನು ಮಹಿಳೆ ಪಡೆಯದಿದ್ದರೆ ಮತ್ತೊಂದು ಘೋರ ದುರಂತದ ಹಾದಿಯನ್ನು ಅವಳು ತುಳಿಯಬೇಕಾಗುತ್ತದೆ. ಇದೇ ಇಂದು ನಮ್ಮನ್ನು ಕಾಡುತ್ತಿರುವ ಮುಖ್ಯ ಸವಾಲುಗಳಲ್ಲಿ ಒಂದು.

ಮಹಿಳೆಯ ಬಗೆಗಿನ ಸಮಾಜದ ಒಟ್ಟಾರೆ ಗ್ರಹಿಕೆ, ಮನೋಭಾವ ಬದಲಾಗಬೇಕಿದೆ. ಮಹಿಳೆ ತನ್ನ ಸಹಜೀವಿ ಅವಳಿಗೂ ತನ್ನಂತೆಯೇ ಸಮಾನ ಹಕ್ಕುಗಳಿವೆ ಎಂದು ಪುರುಷರು ಭಾವಿಸುವ

ಸಾಮಾಜಿಕ ವ್ಯವಸ್ಥೆ ಇನ್ನೂ ಬರಬೇಕಿದೆ. ಇಂತಹ ಮನೋಭಾವವನ್ನು ತಮ್ಮ ಪುರುಷ ಪ್ರಧಾನ ಸಮಾಜದಲ್ಲಿ ರೂಪಿಸುವ ಮುಖ್ಯ ಸವಾಲು ಆಧುನಿಕ ಮಹಿಳೆಯ ಮೇಲಿದೆ.

ಆಧುನಿಕತೆ ಮಹಿಳೆಗೆ ಒಡ್ಡುತ್ತಿರುವ ಸವಾಲುಗಳಲ್ಲಿ ಮುಖ್ಯವಾದದ್ದು ಅವಳ ಬಸಿರು ಸಂಬಂಧಿ ಸಮಸ್ಯೆಗಳು. ಅನಿರೀಕ್ಷಿತ, ಅನಪೇಕ್ಷಿತ ಲೈಂಗಿಕ ಸಂಪರ್ಕ ಉಂಟಾದಾಗ ಗರ್ಭಧಾರಣೆಯನ್ನು ತಡೆಯುವ ಹಿನ್ನೆಲೆಯಲ್ಲಿ ಈ 'ಐ.ಪಿಲ್' ಎಂಬ ಮಾತ್ರೆಯನ್ನು ಮಾರುಕಟ್ಟೆಗೆ ತರಲಾಗಿದೆ. ಇದನ್ನು ಹೆಚ್ಚಾಗಿ ಬಳಸುತ್ತಿರುವವರು ಶಾಲಾ ಕಾಲೇಜುಗಳ ಹದಿಹರೆಯದ ಯುವತಿಯರು ಎಂಬುದು! ಈ ಕುರಿತು ಸಮೀಕ್ಷೆ ನಡೆಸಿರುವ ಪತ್ರಿಕೆಯೊಂದರ ಪ್ರಕಾರ ದೇಶಾದ್ಯಂತ ಸುಮಾರು ಎರಡು ಲಕ್ಷ 'ಐ ಪಿಲ್' ಮಾತ್ರೆಗಳು ಪ್ರತಿ ತಿಂಗಳು ಮಾರಾಟವಾಗುತ್ತಿವೆ. ಜೀವಮಾನದಲ್ಲಿ ೧-೨ ಬಾರಿ ಅನಿವಾರ್ಯ ಸಂದರ್ಭದಲ್ಲಿ ಬಳಸಬಹುದಾದ ಈ ಮಾತ್ರೆಯನ್ನು ಗರ್ಭಧಾರಣೆಯ ಸಾಧ್ಯತೆಯನ್ನು ತಡೆಯುತ್ತದೆಂದು ಭ್ರಮಿಸಿ ನಿರಂತರವಾಗಿ ಸೇವಿಸಲಾರಂಭಿಸಿದರೆ ಹೆಣ್ಣು ಮಕ್ಕಳ ಗತಿ ಏನಾಗಬೇಕು? ಸಂಕೋಚ, ಹೆದರಿಕೆಗಳಿಂದ ವೈದ್ಯರ ಬಳಿಗೆ ತಪಾಸಣೆಗೆ ಹೋಗಲು ಹಿಂಜರಿವ ಹೆಣ್ಣು ಮಕ್ಕಳು ಮುಂದಿನ ದಿನಗಳಲ್ಲಿ ಆರೋಗ್ಯ ಹಾಗೂ ಬಸಿರು ಸಂಬಂಧಿ ಮುಖ್ಯ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆಂಬ ಆತಂಕ ವೈದ್ಯರದು.

ಮನುಷ್ಯನ ಮಿತಿಮೀರಿದ ಆಸೆ, ಅಸಹಜ ನಡುವಳಿಕೆ, ಹೆಚ್ಚಿದ ಜನಸಂಖ್ಯೆ ಪರಿಣಾಮದಿಂದ ಕುಸಿಯುತ್ತಿರುವ ಮನುಷ್ಯನ ಆರೋಗ್ಯದ ಮಟ್ಟ, ಕಲುಷಿತಗೊಳ್ಳುತ್ತಿರುವ ಪರಿಸರ ಹೀಗೆ ಹಲವಾರು ಕಾರಣಗಳಿಂದ ಗಂಡು-ಹೆಣ್ಣಿನ ಸಂತಾನೋತ್ಪತ್ತಿಯ ಕಾರ್ಯ ಕುಂಠಿತಗೊಳ್ಳುತ್ತಿದೆ. ಗಂಡಿನಲ್ಲಿ ವೀರ್ಯಾಣುಗಳ ಸಂಖ್ಯೆ ಮತ್ತು ಚಲನೆಯ ಸಾಮರ್ಥ್ಯ ಕಡಿಮೆಯಾಗುತ್ತಿದೆ. ಆದರೆ ಇತ್ತೀಚಿಗೆ ಆತಂಕಕ್ಕೀಡು ಮಾಡಿರುವ ಮುಖ್ಯ ಸಮಸ್ಯೆ ಎಂದರೆ, ಸ್ತ್ರೀ ಹಾರ್ಮೋನುಗಳ ಹೆಚ್ಚಳದಿಂದಾಗಿ, ಗರ್ಭದಾರಣೆಗೆ ಸಂಬಂಧಿಸಿದ ಹಲವು ತೊಂದರೆಗಳನ್ನು ಆಕೆ ಎದುರಿಸುತ್ತಿದ್ದಾಳೆ. ಆಕೆಯಲ್ಲಿ ಅಂಡಾಣು ಉತ್ಪಾದನೆ ಕಡಿಮೆಯಾಗುತ್ತಿದೆ. ಗರ್ಭಪಾತಗಳು ಹೆಚ್ಚಾಗುತ್ತಿವೆ. ಅವಳಲ್ಲಿ ನಿರ್ದಿಷ್ಟ ಕಾರಣವಿಲ್ಲದೇ ಸ್ತ್ರೀತ್ವದ ಹಾರ್ಮೋನಿಗೆ ಬದಲಾಗಿ ಪುರುಷ ಹಾರ್ಮೋನುಗಳು ಉತ್ಪತ್ತಿಯಾಗುತ್ತಿರುವ ಸಮಸ್ಯೆಗೆ 'ಪಾಲಿಸಿಸ್ಟಿಕ್ ಒವೇರಿಯನ್ ಸಿಂಡ್ರೋಮ್' (ಪಿ.ಸಿ.ಒ.ಎಸ್.) ಎಂದು ಹೆಸರಿಸಲಾಗಿದೆ. ಇದೊಂದು ನಿರ್ನಾಳ ಗ್ರಂಥಿಗಳ ಸಮಸ್ಯೆ. ಇದು ಪ್ರಕೃತಿ ಹೆಣ್ತನಕ್ಕೆ ಒಡ್ಡಿರುವ ಸವಾಲು. ಇಂದು ಜಗತ್ತಿನಾದ್ಯಂತ ಶೇಕಡಾ ೧೦ ರಷ್ಟು ಮಹಿಳೆಯರಲ್ಲಿ ಈ ಸಮಸ್ಯೆ ಕಂಡು ಬರುತ್ತಿರುವುದು ಅತಂಕವನ್ನು ಹೆಚ್ಚಿಸಿದೆ.

ನಮ್ಮ ಸಂವಿಧಾನವು ಪ್ರಜಾಪ್ರಭುತ್ವ ಮಾದರಿಯ ರಾಜಕಾರಣವನ್ನು ಒಪ್ಪಿಕೊಂಡಿದ್ದು ಸ್ತ್ರೀ-ಪುರುಷ ಸಮಾನತೆಯನ್ನು ಘೋಷಿಸಿದ್ದರೂ ವಾಸ್ತವ ಅದಕ್ಕಿಂತ ಬಹಳ ಭಿನ್ನವಾಗಿದೆ. ಕೌಟುಂಬಿಕ, ಸಾಮಾಜಿಕ, ಆರ್ಥಿಕ, ರಾಜಕೀಯ ಕ್ಷೇತ್ರಗಳಲ್ಲಿ ಸಮಾನ ಅವಕಾಶ ಮತ್ತು ಸಮಾನ ಹಕ್ಕುಗಳಿಗಾಗಿ ಮಹಿಳೆಯರ ಮೇಲೆ ಹೊರಿಸಲಾಗುವ ಅನರ್ಹತೆಯ ಆರೋಪಕ್ಕೆ ವಿರುದ್ಧವಾಗಿ ಪದೇ ಪದೇ ತಮ್ಮನ್ನು ಸಾಬೀತು ಪಡಿಸಬೇಕಾಗಿದೆ. ಇದೇ ದೊಡ್ಡ ಸವಾಲು. ಇಂದಿಗೂ ಹೆಣ್ಣಿಗೆ ತನ್ನ ಮನಸ್ಸಿನ ಎಲ್ಲ ಮುಖಗಳನ್ನು ಪ್ರಪಂಚದೆದುರು ತೆರೆದಿಡಲು ಸಾಧ್ಯವಾಗಿಲ್ಲ ಎಂಬುದು ಅಷ್ಟೇ ಸತ್ಯ. ಅವಳು

ಬೌದ್ಧಿಕವಾಗಿ ಮಾನಸಿಕವಾಗಿ ಪ್ರಬುದ್ಧಳಾದಷ್ಟು ವೇಗದಲ್ಲಿ ನಮ್ಮ ಪುರುಷ ಪ್ರಧಾನ ಸಮಾಜ ಬದಲಾಗುವುದಿಲ್ಲ. ಇವೆರಡರ ನಡುವಿನ ಅಂತರವನ್ನು ಗಮನದಲ್ಲಿಟ್ಟುಕೊಂಡೇ ಇಂದಿನ ಮಹಿಳೆ ತನ್ನ ನಿಲುವುಗಳನ್ನು ಅತ್ಯಂತ ಎಚ್ಚರಿಕೆಯಿಂದ, ಸೂಕ್ಷ್ಮವಾಗಿ ಮಂಡಿಸಬೇಕಿರುವುದು ಇಂದಿನ ಅನಿವಾರ್ಯತೆ.

ಇಂದು ಹೆಣ್ಣು ಎಲ್ಲ ಕ್ಷೇತ್ರಗಳಲ್ಲೂ ದಾಪುಗಾಲಿಡುತ್ತಿದ್ದಾಳೆ. ಸ್ತ್ರೀ ವಿದ್ಯಾಭ್ಯಾಸ ಹಾಗೂ ಉದ್ಯೋಗ ಪ್ರಮಾಣ ಗಣನೀಯವಾಗಿ ಹೆಚ್ಚಾಗಿರುವುದು ದಾಖಲಾಗಿದ್ದರೂ ಉನ್ನತ ಅಧಿಕಾರ ಸ್ಥಾನಗಳಲ್ಲಿ, ಮಹತ್ವದ ನಿರ್ಧಾರ, ನಿರ್ಣಯಗಳನ್ನು ತೆಗೆದುಕೊಳ್ಳಬೇಕಾದ ಸ್ಥಾನಗಳಲ್ಲಿ, ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಕ್ಷೇತ್ರದ ಪ್ರಮುಖ ಹುದ್ದೆಗಳಲ್ಲಿ ಅವಳಿಗಿನ್ನೂ ಗಮನಾರ್ಹವಾದ ಸ್ಥಾನ ದೊರಕಬೇಕಿದೆ. ಅವಳ ಬುದ್ಧಿವಂತಿಕೆ, ಸಾಮರ್ಥ್ಯ, ಪ್ರತಿಭೆ, ಜಾಣ್ಮೆಗಳೆಲ್ಲವೂ ಹಿಂಬದಿಯಿಂದ ಉಪಯೋಗಿಸಲ್ಪಟ್ಟ ಎರಡನೆಯ ದರ್ಜೆಯ ಪ್ರಜೆಯಾಗಿಯೇ ಉಳಿಯುವುದಕ್ಕಿಂತ ನೇರವಾಗಿ ಮುಖ್ಯವಾಹಿನಿಯಲ್ಲಿ ತನ್ನ ಹಕ್ಕು ಪ್ರತಿ ಪಾದಿಸುವಂತಹ ಗುರುತರವಾದ ಸವಾಲನ್ನು ಇಂದಿನ ಆಧುನಿಕ ಮಹಿಳೆ ತನ್ನ ಹೆಗಲ ಮೇಲೆ ಹೊರಬೇಕಿದೆ. ಹಾದಿ ದುರ್ಗಮವಾದರೂ ನಡೆಯಲಾಗದಷ್ಟು, ಗುರಿ ತಲುಪಲಾಗದಷ್ಟು ಕಠಿಣವಾದುದಲ್ಲ. ಹೆಜ್ಜೆಗಳು ದೃಢವಾಗಿವೆ ಮತ್ತು ಸಶಕ್ತವಾಗಿವೆ.

**೩.೩.೨ ಒಟ್ಟಾರೆ ಬುಡಕಟ್ಟು ವ್ಯವಸ್ಥೆಯಲ್ಲಿ ಸ್ತ್ರೀ ಸ್ಥಾನಮಾನ**

ಬುಡಕಟ್ಟು ಸಮುದಾಯಗಳು ತಮ್ಮದೇ ಆದ ಆಚರಣೆ, ವಿಧಿ, ನಿಷೇಧ, ಸಂಪ್ರದಾಯ, ವೇಷಭೂಷಣ, ಆಹಾರ ಪದ್ಧತಿ, ಭಾಷೆಗಳಿಂದ, ವಿಶಿಷ್ಟ ಸಾಂಸ್ಕೃತಿಕ ಚಹರೆ ಹೊಂದಿದ್ದಾರೆ. ಕರ್ನಾಟಕದಲ್ಲಿ ಸುಮಾರು ೬೫ಕ್ಕೂ ಹೆಚ್ಚು ಬುಡಕಟ್ಟುಗಳನ್ನು ಗುರುತಿಸಲಾಗಿದೆ. ಅವುಗಳಲ್ಲಿ ೫೦ ಬುಡಕಟ್ಟುಗಳು ಅನುಸೂಚಿತ ಪರಿಶಿಷ್ಟ ಪಂಗಡಗಳ ಪಟ್ಟಿಗೆ ಸೇರುವ ಮೂಲಕ ಸಂವಿಧಾನಿಕ ಚೌಕಟ್ಟಿನೊಳಗೆ ಸ್ಥಾನ ಪಡೆದು ಸಂವಿಧಾನಿಕ ಹಕ್ಕು ಸೌಲಭ್ಯಗಳನ್ನು ಪಡೆದಿವೆ.

ಹಾಲೊಕ್ಕಲಿಗ, ಇರುಳಿಗ, ಯರವ, ಹಕ್ಕಿಪಿಕ್ಕಿ, ಸೋಲಿಗ, ಕುಡುಬಿ, ಕುರುಮರು, ಬೇಡರು, ಕೊರಚ, ಕಾಡು ಗೊಲ್ಲರು, ಹಸಲರು, ಡೊಂಬರು, ಗೋಸಂಗಿ, ಕುರುಬ, ಜೇನುಕುರುಬ, ಡುಂಗ್ರಿ, ಗರಾಸಿಯ, ಸಿಕ್ಕಲಿಗ, ಫಿಸಾಡಿ, ಟೊಕ್ರೆಕೋಳಿ ಹೀಗೆ ಅನೇಕ ಬುಡಕಟ್ಟುಗಳು ಕರ್ನಾಟಕದಲ್ಲಿವೆ.

ಇವುಗಳಲ್ಲಿ ಬಹಳಷ್ಟು ಬುಡಕಟ್ಟುಗಳು ಪಿತೃಪ್ರಧಾನ ಕುಟುಂಬ ಪದ್ಧತಿಯನ್ನು ಹೊಂದಿರುವದರಿಂದ ಪುರುಷನೇ ಕುಟುಂಬದ ಮುಖ್ಯಸ್ಥ. ಬುಡಕಟ್ಟು ಮಹಿಳೆಯರಿಗೆ ಪುರುಷರಿಗಿಂತ ಕೆಳಮಟ್ಟದ ಸ್ಥಾನಮಾನ ನೀಡಲಾಗಿದೆ. ಹೆಣ್ಣಿಗೆ ಸಾಮಾನ್ಯವಾಗಿ ಕುಟುಂಬದ ಮುಖ್ಯ ವಿಷಯಗಳಲ್ಲಿ ನಿರ್ಧಾರ ತೆಗೆದುಕೊಳ್ಳುವ ಅಧಿಕಾರವಿಲ್ಲ, ಹೆಣ್ಣು ಮನೆಯ ಕೆಲಸಗಳಲ್ಲದೆ, ಹೊರಗೂ ಪುರುಷನಿಗೆ ಸರಿಸಮಾನವಾಗಿ ಕುಟುಂಬ ನಿರ್ವಹಣೆಗಾಗಿ, ಕೃಷಿ, ಕೂಲಿ ಕೆಲಸ ಮಾಡಿ ಕುಟುಂಬದ ಆರ್ಥಿಕತೆಯನ್ನು ಹೆಚ್ಚಿಸುವಲ್ಲಿ ಅವಳ ಪಾತ್ರವಿದೆ. ದೈಹಿಕವಾಗಿ ಮತ್ತು ಮಾನಸಿಕವಾಗಿ ಮಹಿಳೆ ಪುರುಷರಗಿಂತ ಹೆಚ್ಚಾಗಿ ದಿನ ನಿತ್ಯ ತನ್ನನ್ನು ತೊಡಗಿಸಿಕೊಳ್ಳುತ್ತಾಳೆ. ದುಡಿದ ಇವಳ ಎಲ್ಲಾ ಪ್ರತಿಫಲವು ಕುಟುಂಬ ನಿರ್ವಹಣೆಗೆ ಮತ್ತು ಮನೆಯ

ಯಜಮಾನನ ಹೆಚ್ಚುವರಿ ಖರ್ಚುಗಳಿಗೆ ವ್ಯಯವಾಗುತ್ತದೆ. ಇಷ್ಟಾದರೂ ಸಹ ಬುಡಕಟ್ಟು ಕುಟುಂಬಗಳಲ್ಲಿ ಹೆಣ್ಣಿಗೆ ಯಾವ ಬಗೆಯ ಅಧಿಕಾರಗಳಿಲ್ಲ. ಆರ್ಥಿಕ ಸಬಲೀಕರಣವು ಬುಡಕಟ್ಟು ಮಹಿಳೆಗೆ ಸಾಮಾಜಿಕ ಸ್ವಾತಂತ್ರ್ಯ, ಪ್ರಾಮುಖ್ಯತೆ ಹಾಗೂ ಅಧಿಕಾರ ನೀಡುತ್ತದೆಂಬುದು ಮಿಥ್ಯ. ನಸುಕಿನ ಜಾವದಿಂದಲೇ ಪ್ರಾರಂಭವಾಗುವ ಹೆಣ್ಣಿನ ದುಡಿಮೆ ರಾತ್ರಿ ಮಲಗುವ ತನಕ ನಿರಂತರವಾಗಿರುತ್ತದೆ. ಸಂಜೆಯ ವೇಳೆ ಪುರುಷರಿಗೆ ಗೆಳೆಯರ ಜೊತೆ ದಣಿವಾರಿಸಿಕೊಳ್ಳಲು ಅನೇಕ ಮಾರ್ಗಗಳನ್ನು ಕಂಡುಕೊಳ್ಳುವ ಅವಕಾಶವಿದೆ. ಆದರೆ ಮಹಿಳೆಯು ಹೊರಗಿನ ಕೆಲಸದಿಂದ ಸಂಜೆ ಮನೆಗೆ ಬಂದ ತಕ್ಷಣ ಅಡುಗೆ, ಮಕ್ಕಳ ಪಾಲನೆ, ಹಿರಿಯರ ಪೋಷಣೆ, ದನಕರುಗಳ ಕಾಳಜಿ ಇತ್ಯಾದಿ ಕೆಲಸಗಳು ಮಹಿಳೆಯ ಹೆಗಲೇರುತ್ತವೆ. ಇದು ಪುರುಷ ಮತ್ತು ಮಹಿಳೆಯರ ನಡುವೆ ಅಸಮಾನವಾಗಿ ಹಂಚಿಕೆಯಾದ ಶ್ರಮ ವಿಭಜನೆ. ಹೀಗೆ ಶೈಕ್ಷಣಿಕವಾಗಿ, ಸಾಮಾಜಿಕವಾಗಿ, ಹಾಗೂ ಆಸ್ತಿಯಲ್ಲಿನ ಪಾಲಿನ ಅಧಿಕಾರಕ್ಕೆ ಸಂಬಂಧಿಸಿದಂತೆ ಮಹಿಳೆ ಲಿಂಗ ಸಂಬಂಧಿ ಅಸಮಾನತೆಯನ್ನು ಅನುಭವಿಸುತ್ತ ಬಂದಿದ್ದಾಳೆ. ಇದಲ್ಲದೇ ಮಕ್ಕಳೇ ಹುಟ್ಟದಿದ್ದರೆ, ಗಂಡು ಸಂತಾನವಾಗದಿದ್ದರೆ, ಪುರುಷ ಎರಡನೇ ಮದುವೆಯಾಗುವದರಿಂದ ಹಾಗೂ ಬಹುಪತ್ನಿತ್ವ ವಿವಾಹ ಪದ್ಧತಿ ಅನೇಕ ಬುಡಕಟ್ಟುಗಳಲ್ಲಿ ಇರುವುದರಿಂದ ಮಹಿಳೆಯರು ನೆಮ್ಮದಿಯಿಲ್ಲದೇ ಅನೇಕ ಸಮಸ್ಯೆಗಳನ್ನು ಎದುರಿಸಬೇಕಾಗಬಹುದು. ಒಂದೊಂದು ಬುಡಕಟ್ಟುಗಳಲ್ಲಿ ಹೆಣ್ಣಿಗೆ ಹೆಚ್ಚಿನ ಸ್ಥಾನಮಾನವಿರಲೂಬಹುದು. ಒಟ್ಟಿನಲ್ಲಿ ಹೇಳಬೇಕೆಂದರೆ ಹೆಣ್ಣಿನ ದುಡಿಮೆ ಕೊಡುಗೆ ಹೆಚ್ಚಿದ್ದರೂ ಕೂಡ ಬಹುತೇಕ ಬುಡಕಟ್ಟುಗಳಲ್ಲಿ ಹೆಣ್ಣಿಗೆ ಸಾಮಾಜಿಕವಾಗಿ ಪುರುಷನ ನಂತರದ ಸ್ಥಾನ. ಇದೊಂದು ವಿಪರ್ಯಾಸ. ಲಿಂಗಾಧಾರಿತ ಅಸಮಾನತೆಯ ಪ್ರತೀಕ. ಸ್ತ್ರೀಯ ಹೆಚ್ಚಿನ ಕೊಡುಗೆಯನ್ನು ಸಮತೂಗಲು 'ಮಾತೃತ್ವ', 'ಸ್ತ್ರೀತ್ವ', 'ಗೃಹಿಣಿತ್ವ' ಎಂಬ ಪದಾಲಂಕಾರದಿಂದ ವೈಭವೀಕರಿಸ ಲಾಗಿದೆಯೇನೋ!

ಬುಡಕಟ್ಟು ಮಹಿಳೆಯರು ಪುರುಷರಿಗಿಂತಲೂ ಹೆಚ್ಚು ಜನ ಅನಕ್ಷರಸ್ಥರಾಗಿದ್ದಾರೆ. ಹೆಚ್ಚು ಮಹಿಳೆಯರು ಸಾಂಪ್ರದಾಯಿಕ ವೃತ್ತಿಗೆ (ಕುಲ ಕಸುಬು) ಎರವಾಗಿ ಕೃಷಿಕೂಲಿ, ದಿನಗೂಲಿ ಮಾಡಿ ಜೀವನ ಸಾಗಿಸುತ್ತಿದ್ದಾರೆ. ಗುಡಿಸಲಲ್ಲಿ ವಾಸವಾಗಿದ್ದಾರೆ. ಬಡತನ ರೇಖೆಗಿಂತ ಕೆಳಗೆ ಜೀವಿಸುತ್ತಿದ್ದಾರೆ. ಪೌಷ್ಟಿಕ ಆಹಾರದ ಕೊರತೆಯಿಂದ ಬಳಲುತ್ತಿದ್ದಾರೆ. ಇವರ ಬಹುಪಾಲು ಸಮಯ ಅಗತ್ಯಗಳನ್ನು ಪೂರೈಸಿಕೊಳ್ಳಲೇ ವ್ಯಯವಾಗುತ್ತದೆ.

ಸಂವಿಧಾನವು ಎಷ್ಟೇ ಸ್ಥಾನಮಾನ ನೀಡಿದರೂ, ಹಕ್ಕು ಸೌಲಭ್ಯಗಳನ್ನು ಕಲ್ಪಿಸಿದರೂ ಇವುಗಳ ಉಪಯೋಗ ಪಡೆಯುವ ಧಾರಣ–ಶಕ್ತಿಯು ಬುಡಕಟ್ಟು ಸಮುದಾಯದ ಮಹಿಳೆಯರಿಗಿಲ್ಲ. ಧಾರಣ–ಶಕ್ತಿಯು ಶಿಕ್ಷಣದಿಂದ ಪ್ರಾಪ್ತವಾಗುತ್ತದೆ. ಧಾರಣ ಶಕ್ತಿಯನ್ನು ನಿರ್ಧರಿಸುವ ಅನೇಕ ಸಂಗತಿಗಳಲ್ಲಿ ಶಿಕ್ಷಣವೂ ಒಂದು. ಮುಖ್ಯವಾಗಿ ಬುಡಕಟ್ಟು ಸಮುದಾಯಗಳ ಮಹಿಳೆಯರಿಗೆ ಆರ್ಥಿಕ ಸ್ಥಿರತೆ ಬೇಕಾಗಿದೆ. ಶಿಕ್ಷಣಕ್ಕೂ ಆರ್ಥಿಕ ಸ್ಥಿತಿಗೂ ಆ ಮೂಲಕ ಅಭಿವೃದ್ಧಿಗೂ, ರಾಜಕೀಯ ಅರಿವಿಗೂ ನೇರವಾದ ಸಂಬಂಧವಿದೆ. ಅರ್ಥಶಾಸ್ತ್ರಜ್ಞ 'ಅಮರ್ತ್ಯಸೇನರು ಧಾರಣ ಶಕ್ತಿಯ ದುಃಸ್ಥಿತಿಯೇ ಬಡತನ' ಎಂದು ಹೇಳಿದ್ದಾರೆ. ಪ್ರವಾಹೋಪಾದಿಯಲ್ಲಿ ಹರಿಯುತ್ತಿರುವ ಪ್ರಯೋಜನ ಹಾಗೂ ಅನುಕೂಲತೆಗಳನ್ನು ಮೈಗೂಡಿಸಿಕೊಳ್ಳಬಲ್ಲ ಸಾಮರ್ಥ್ಯವನ್ನೇ ಧಾರಣ ಶಕ್ತಿಯೆಂದು ಕರೆಯಬಹುದಾಗಿದೆ. ಸರ್ಕಾರ ಒದಗಿಸುವ

ಸವಲತ್ತುಗಳನ್ನು ಸಂವಿಧಾನಿಕ ಸೌಲಭ್ಯಗಳನ್ನು ಬುಡಕಟ್ಟು ಮಹಿಳೆಯರು ಮೈಗೂಡಿಸಿಕೊಳ್ಳುವ ಸಾಮರ್ಥ್ಯ ಹೊಂದಬೇಕಾದರೆ ಶಿಕ್ಷಣದ ಅವಶ್ಯಕತೆಯಿದೆ. ಆದ್ದರಿಂದ ಬುಡಕಟ್ಟು ಸಮುದಾಯಗಳು ಮಹಿಳೆಯರ ಶಿಕ್ಷಣದ ಕುರಿತು ಗಮನ ಹರಿಸಬೇಕಾಗಿದೆ.

ಅಸ್ತಿತ್ವ ಮತ್ತು ತನ್ನನ್ನು ತಾನು ಗುರುತಿಸಿಕೊಳ್ಳುವಿಕೆಯ ಸಮಸ್ಯೆಯಲ್ಲಿ ಸಮಾಜದ ವಿವಿಧ ಸ್ತರಗಳಲ್ಲಿ ಬುಡಕಟ್ಟು ಮಹಿಳೆಯರು ಸಹ ಸೇರಿದ್ದಾರೆ. ಶಿಕ್ಷಣದ ಹಿಂದುಳಿಯುವಿಕೆಯಿಂದ (ನಿರಕ್ಷರಿ ಕುಕ್ಷಿಗಳಾದ) ಇವರು ಸಾಮಾಜಿಕ, ರಾಜಕೀಯ, ಆರ್ಥಿಕ ಮುಖ್ಯ ವಾಹಿನಿಯಿಂದ ಇನ್ನೂ ದೂರವೇ ಉಳಿದಿದ್ದಾರೆ. ಹೀಗಿರುವಾಗ ಕರ್ನಾಟಕದ ಬುಡಕಟ್ಟುಗಳ ಮಹಿಳೆಯರು ಒಂದು ಶಕ್ತಿಶಾಲಿ ಗುಂಪಾಗಿ ಬೆಳೆದು ರಾಜಕೀಯಾರ್ಥಿಕವಾದ ಮುಖ್ಯವಾಹಿನಿಯ ಒಳಗೆ ಸೇರಲು ಸಧ್ಯಕ್ಕಂತೂ ಸಾಧ್ಯವಿಲ್ಲ ಎಂದೇ ಹೇಳಬಹುದು. ಇನ್ನೂ ಸಾಕಷ್ಟು ಕಾಲಾವಧಿ ಬೇಕು. ಮಹಿಳಾವಾದ, ಮಹಿಳಾ-ಸಮಾನತೆ ಪದಗಳು ಬುಡಕಟ್ಟು ಮಹಿಳೆಯರನ್ನು ಸೆಳೆದಿಲ್ಲವೆಂದೇ ಹೇಳಬಹುದು.

ಬುಡಕಟ್ಟು ಮಹಿಳೆಯರು ರಾಜಕೀಯ, ಆರ್ಥಿಕ, ಸಮಾಜಿಕ, ಶೈಕ್ಷಣಿಕವಾಗಿ ಸಾಮಾನ್ಯ ಮಹಿಳೆಯರಿಗಿಂತಲೂ ಹಿಂದುಳಿದಿದ್ದಾರೆನ್ನುವುದು ಸರ್ವವಿದಿತ. ಅಲ್ಲದೇ ಸರ್ವತೋಮುಖ ಅಭಿವೃದ್ಧಿಯಿಂದ ದೂರವೇ ಉಳಿದಿದ್ದಾರೆ. ಸರ್ಕಾರವು ಸಾಮಾನ್ಯ ಮಹಿಳೆಯರು ಮತ್ತು ಗ್ರಾಮೀಣ ಮಹಿಳೆಯರಿಗಾಗಿಯೇ ವಿಶೇಷ ಯೋಜನೆಗಳನ್ನು ರೂಪಿಸುವ ಅಗತ್ಯವಿದೆ.

ರಾಜಕೀಯವಾಗಿ ಸಾಮಾನ್ಯ ಮಹಿಳೆಯರಿಗಿಂತ ಬುಡಕಟ್ಟು ಮಹಿಳೆಯರು ತೀರಾ ಹಿಂದುಳಿದಿದ್ದಾರೆ. ಇತ್ತಿಚೀಗೆ ಅಲ್ಪ ಶಿಕ್ಷಣ ಪಡೆದ ಬುಡಕಟ್ಟು ಮಹಿಳೆಯರು ತಳಮಟ್ಟದ ರಾಜಕೀಯದಲ್ಲಿ ಪಾಲ್ಗೊಳ್ಳುತ್ತಿದ್ದಾರೆ. ರಾಜ್ಯ ಸರ್ಕಾರವು ತಳಮಟ್ಟದ ರಾಜಕೀಯ ಸ್ಥಾನಮಾನಗಳಿಗೆ (ಗ್ರಾಮ ಪಂಚಾಯತ, ತಾಲೂಕ ಪಂಚಾಯತ, ಜಿಲ್ಲಾ ಪಂಚಾಯತ ಸದಸ್ಯ ಸ್ಥಾನ) ತಂದಿರುವ ೫೦% ಮೀಸಲಾತಿಯು ಬುಡಕಟ್ಟು ಮಹಿಳೆಯರಿಗೆ ಅನುಕೂಲವಾಗಿದೆ. ಈ ರೀತಿ ಮೀಸಲಾತಿಯನ್ನು ಮೊಟ್ಟಮೊದಲು ಅನುಷ್ಠಾನಗೊಳಿಸಿದ ಹೆಮ್ಮೆ ಕರ್ನಾಟಕ ರಾಜ್ಯಕ್ಕಿದೆ.

**೩.೩.೩. ಉತ್ತರ ಕನ್ನಡ ಜಿಲ್ಲೆಯ ಗೌಳಿ ಸಮುದಾದಲ್ಲಿ ಸ್ತ್ರೀಯರ ಸ್ಥಾನಮಾನಗಳು**

ಗೌಳಿ ಸಮುದಾಯವು ಒಂದು ಪುರುಷ ಪ್ರಧಾನ ಸಮಾಜವಾದುದ್ದರಿಂದ ಇತರ ಸಮಾಜದ ಹಾಗೇ ಪುರುಷನ ಸ್ಥಾನ ಮೇಲ್ಮಟ್ಟದ್ದಾಗಿದ್ದು  ಸ್ತ್ರೀಯರ ಸ್ಥಾನ ಕೆಳಮಟ್ಟದಲ್ಲಿಯೇ ಕಂಡುಬರುತ್ತದೆ. ಗೌಳಿ ಸ್ತ್ರೀ ಶ್ರಮಜೀವಿ. ಕುಲ ಕಸುಬಾದ ಪಶುಸಂಗೋಪನೆ, ಹೈನುಗಾರಿಕೆ ಅಲ್ಲದೇ ಕೃಷಿ, ಕೃಷಿ ಕೂಲಿ, ಗಾರೆ ಕೂಲಿ, ಕಟ್ಟಡ ಕಟ್ಟುವಲ್ಲಿ ಕೂಲಿ ಕೆಲಸ ಮುಂತಾದ ವೃತ್ತಿಯಲ್ಲಿ ತನ್ನನ್ನು ತಾನು ತೊಡಗಿಸಿಕೊಂಡಿದ್ದಾಳೆ. ಗೌಳಿ ಸ್ತ್ರೀಯರಲ್ಲಿ ಸ್ತ್ರೀ ಶಿಕ್ಷಣ ಬಹಳ ಕಡಿಮೆ ಮಟ್ಟದ್ದಾಗಿದೆ. ಮೂಲ ವೃತ್ತಿಗಳಾದ ಪಶುಪಾಲನೆ ಮತ್ತು ಕೃಷಿಯನ್ನು ಬಿಟ್ಟು ಕೂಲಿ ಮಾಡುವವರ ಸಂಖ್ಯೆ ಹೆಚ್ಚಾಗಿ ಕಂಡು ಬರುತ್ತದೆ. ತಾವು ವಾಸಿಸುವ ವಾಡೆಗಳಲ್ಲಿ ದುಡಿಮೆಯ ಅಭಾವ ಇರುವುದರಿಂದ ತಾತ್ಕಾಲಿಕ ವಲಸೆ ಕಂಡು ಬರುತ್ತಿದೆ. ಮೂಲ ಕಸಬು ಪಶುಪಾಲನೆ ಇಲ್ಲದೆ ಹಾಗೂ ಮಳೆಯಾಗದೇ ಬೆಳೆಗಳು ಚೆನ್ನಾಗಿ

ಬರದೆ ಗೌಳಿ ಪುರುಷರು ಕಂಗಾಲಾಗಿ ಕೂಲಿಯನ್ನು ಮಾಡಲು ದೂರದ ಊರುಗಳಿಗೆ ವಲಸೆ ಹೋಗುತ್ತಿದ್ದಾರೆ. ಆದರೆ ಮಹಿಳೆಯರು ಅಲ್ಲೇ ಹತ್ತಿರದ ಊರುಗಳಿಗೆ ಹೋಗಿ ಕೂಲಿಗಾಗಿ ಕೆಲಸ ಮಾಡುತ್ತಿದ್ದಾರೆ.

**ಕೋಷ್ಟಕ ೩.೮**

**ಕೂಲಿಯಲ್ಲಿ ತೊಡಗಿಸಿಕೊಂಡಿರುವ ಗೌಳಿ ಪುರುಷ ಮತ್ತು ಮಹಿಳೆಯರ ಪ್ರಮಾಣ**

| ಕ್ರಸಂ. | ನೆಲೆ | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೧. | ದೇಶಪಾಂಡೆ ನಗರ | ೫೫ | ೨೬ | ೮೨ |
| ೨. | ಹೊಸಳ್ಳಿ | ೨೦ | ೧೨ | ೩೨ |
| ೩. | ಅಂಬೆವಾಡಿ | ೧೫ | ೧೦ | ೨೫ |
| ೪. | ವಿಟ್ನಾಳ | ೨೦ | ೮ | ೨೮ |
| ೫. | ಮೈನಳ್ಳಿ | ೨೫ | ೧೬ | ೪೧ |
| ೬. | ಬಡ್ಡಿಗೇರಿ | ೧೮ | ೧೪ | ೩೨ |
| | **ಒಟ್ಟು** | **೧೫೩** | **೮೬** | **೨೪೦** |

ಬಹಳಷ್ಟು ಮಹಿಳೆಯರು ಕುಟುಂಬದ ನಿರ್ವಹಣೆಗೆ ಕಂಡುಕೊಂಡ ಪರ್ಯಾಯ ಮಾರ್ಗಗಳಲ್ಲಿ ಕೂಲಿಯು ಮುಖ್ಯವಾಗಿದೆ. ಕೂಲಿಯಲ್ಲಿ ತೊಡಗಿಕೊಂಡಿರುವವರ ಕುಟುಂಬವು ಸುತ್ತಲು ಇರುವ ಇತರ ಸಮುದಾಯಗಳ ಜೊತೆಗೆ ಬೆರೆಯುವಂತೆ ಮಾಡಿದೆ. ಹೀಗಾಗಿ ಇತರ ಸಮುದಾಯಗಳ ಜೊತೆ ಸ್ನೇಹ ಮತ್ತು ಸೌಹಾರ್ದತೆ ಬೆಳೆಯುವಂತೆ ಮಾಡಿದ್ದುದರಿಂದ. ಬೇರೆ ಸಮುದಾಯದವರ ಜೊತೆ ಉತ್ತಮ ಬಾಂಧವ್ಯ ಹೊಂದಿರಲು ಸಾಧ್ಯವಾಗಿದೆ. ಇದರಿಂದ ಗೌಳಿಗರ ರೀತಿ-ನೀತಿ, ಜೀವನ ಶೈಲಿಗಳಲ್ಲಿ ಸಾಕಷ್ಟು ಬದಲಾವಣೆಗಳು ಕಂಡು ಬರುತ್ತಿವೆ.

ಬದಲಾಗುತ್ತಿರುವ ಸಮಾಜದಲ್ಲಿ ಗೌಳಿಗರು ಅನೇಕ ವಿಧವಾದ ವೃತ್ತಿಗಳಲ್ಲಿ ತೊಡಗಿಕೊಂಡು ಜೀವಿಸುತ್ತಿದ್ದಾರೆ. ಬೇರೆ ವೃತ್ತಿಯನ್ನು ಅವಲಂಬಿಸಿ ಸಾಕಷ್ಟು ಜನ ಕೂಲಿಗಾಗಿ ವಲಸೆ ಹೋಗುತ್ತಿದ್ದಾರೆ. ಗೌಳಿ ಮಹಿಳೆಯರಲ್ಲಿ ಗಾರೆ ಕೆಲಸಕ್ಕೆ ಹೋಗುವವರ ಸಂಖ್ಯೆ ಹೆಚ್ಚಿನದಾಗಿದೆ. ಯಾಕೆಂದರೆ ಗಾರೆ ಕೆಲಸದಲ್ಲಿ ಹೆಚ್ಚಿನ ಕೂಲಿಯು ಸಿಗುತ್ತದೆ. ಮನೆ ಕಟ್ಟುವ, ರಸ್ತೆ ನಿರ್ಮಾಣ, ಆಣೆಕಟ್ಟು ನಿರ್ಮಾಣ ಮುಂತಾದ ಕೂಲಿಯನ್ನು ಅವಲಂಬಿಸಿದ್ದಾರೆ. ಗೌಳಿ ಮಹಿಳೆಯರು ಶ್ರಮಜೀವಿಗಳು. ದುಡಿಯುವುದರಲ್ಲೇ ಜೀವನ ಪೂರ್ತಿ ಕಳೆಯುತ್ತಾರೆ. ಎಂದಿಗೂ ಕುಳಿತು ಉಣ್ಣುವುದು ಅವರಿಂದ ಸಾಧ್ಯವಿಲ್ಲ. ಅರಣ್ಯಗಳಿಂದ ಚಾರೆ, ನೆಲ್ಲಿ, ಕವಳೆಹಣ್ಣು ಮುಂತಾದ ಕಾಡು ಹಣ್ಣುಗಳನ್ನು ಸಂಗ್ರಹಿಸಿ ಸ್ಥಳೀಯವಾಗಿ ಮಾರುತ್ತಾರೆ. ಸಣ್ಣ ಪುಟ್ಟ ದಿನಸಿ ಅಂಗಡಿಗಳನ್ನು ಇಟ್ಟುಕೊಂಡು ಮಹಿಳೆಯರು ವ್ಯಾಪಾರ ಪ್ರಾರಂಭಿಸಿದ್ದಾರೆ. ರಸ್ತೆ ಬದಿಯ ವಾಡೆಗಳಲ್ಲಿ ಗೌಳಿ ಮಹಿಳೆಯರು ಸಣ್ಣ ಪ್ರಮಾಣದ ಚಹಾ ಅಂಗಡಿಯನ್ನು ಪ್ರಾರಂಭಿಸಿದ್ದಾರೆ. ಮಹಿಳೆಯರು ಶಿಕ್ಷಣ ಹೊಂದಿಲ್ಲದಿರುವುದರಿಂದ ವ್ಯಾಪಾರದಲ್ಲಿ ನಾಗರಿಕ ಸಮುದಾಯದವರಿಂದ ಕೆಲವೊಂದು ಸಲ ಮೋಸ ಹೋಗುತ್ತಾರೆ. ಹೀಗೆ ಗೌಳಿ ಹೆಣ್ಣಿನ ದುಡಿಮೆ ನಸುಕಿನಿಂದಲೇ ಪ್ರಾರಂಭವಾಗಿ

ರಾತ್ರಿ ಮಲಗುವ ತನಕ ಪುರುಸೊತ್ತಿಲ್ಲದೇ ಸಾಗುತ್ತದೆ. ಕೆಲಸದಿಂದ ಸಂಜೆ ಮನೆಗೆ ಬಂದ ತಕ್ಷಣ ಅಡುಗೆ, ಮಕ್ಕಳ ಪಾಲನೆ, ವೃದ್ಧರ ಪೋಷಣೆ, ದನಕರುಗಳ ಕಾಳಜಿ ಇತ್ಯಾದಿ ಕೆಲಸಗಳು ಹೆಣ್ಣಿನ ಹೆಗಲೇರುತ್ತವೆ. ಆದರೆ ಕೆಲಸದಿಂದ ಮರಳಿದ ಪುರುಷ ಮಾತ್ರ ಸಂಜೆಯ ವೇಳೆ ಗೆಳೆಯರ ಜೊತೆ ದಣಿವಾರಿಸಿಕೊಳ್ಳಲು ಅನೇಕ ಮಾರ್ಗಗಳನ್ನು ಕಂಡುಕೊಳ್ಳುವ ಅವಕಾಶವಿದೆ. ಇದು ಪುರುಷ ಮತ್ತು ಮಹಿಳೆಯರ ನಡುವೆ ಅಸಮಾನವಾಗಿ ಹಂಚಿಕೆಯಾದ ಶ್ರಮ ವಿಭಜನೆ. ಮಹಿಳೆ ದುಡಿದ ಎಲ್ಲಾ ಪ್ರತಿಫಲವು ಕುಟುಂಬ ನಿರ್ವಹಣೆ ಮತ್ತು ಮನೆಯ ಯಜಮಾನನ ಹೆಚ್ಚುವರಿ ಖರ್ಚಿಗೆ ವ್ಯಯವಾಗುತ್ತದೆ. ಹೀಗೆ ಹೆಣ್ಣಿನ ದುಡಿಮೆ, ಕೊಡುಗೆ ಗಂಡಿಗಿಂತ ಹೆಚ್ಚಾದರೂ ಸಹ ಗಂಡಿನ ನಂತರದ ಸ್ಥಾನ ಹೆಣ್ಣಿಗೆ. ಗೌಳಿ ಸಮುದಾಯದಲ್ಲಿ ಆರ್ಥಿಕ ಸಬಲೀಕರಣವೂ ಹೆಣ್ಣಿಗೆ ಸಾಮಾಜಿಕ ಸ್ವಾತಂತ್ರ್ಯ, ಅಧಿಕಾರ ದೊರಕಿಸಲು ಸಾಧ್ಯವಾಗಿಲ್ಲ.

ಗೌಳಿ ಪುರುಷರು ಕೌಟುಂಬಿಕ ವಿಷಯಗಳಲ್ಲಿ ಸ್ತ್ರೀಯ ಅಭಿಪ್ರಾಯ ಮತ್ತು ಸಲಹೆಗಳನ್ನು ಕೇಳುತ್ತಾರೆ. ಆದರೆ ತೀರ್ಮಾನವನ್ನು ಕುಟುಂಬದ ಮುಖ್ಯಸ್ಥನಾದ ಪುರುಷನೇ ತೆಗೆದುಕೊಳ್ಳುತ್ತಾನೆ. ತೀರ್ಮಾನ ತೆಗೆದುಕೊಳ್ಳುವ ಅಧಿಕಾರ ಸ್ತ್ರೀಗೆ ಇಲ್ಲ. ಎಷ್ಟೋ ಆರ್ಥಿಕ ವಿಷಯಗಳಲ್ಲಿ ಪುರುಷನದೇ ನೇರ ತೀರ್ಮಾನವಾದರೂ ಕೂಡ ಇತ್ತೀಚೆಗೆ ಪ್ರಮುಖ ನಿರ್ಣಯಗಳನ್ನು ತೆಗೆದುಕೊಳ್ಳುವಾಗ ಹಿರಿಯ ಮಹಿಳೆಯರೊಂದಿಗೆ ಚರ್ಚಿಸಿ ನಿರ್ಣಯ ತೆಗೆದುಕೊಳ್ಳವುದು ರೂಢಿಯಾಗುತ್ತಿದೆ. ಆಧುನಿಕರಣದ ಪ್ರಭಾವದಿಂದ ಕ್ರಮೇಣವಾಗಿ ಮಹಿಳೆಯರ ಮೇಲೆ ಇರುವ ಒತ್ತಡ ಕಡಿಮೆಯಾಗುತ್ತಿದೆ ಎಂದು ಹೇಳಬಹುದು.

ಗಂಡ ಕುಡಿದು ಬಂದು ಹೆಂಡತಿಗೆ ಹೊಡೆಯುವುದು ಅಥವಾ ಹೆಣ್ಣಿನ ಶೋಷಣೆ ಅಧಿಕವಿತ್ತು. ಈಗ ಕಡಿಮೆಯಾಗಿದೆ. ಕ್ರಮೇಣ ಮಹಿಳಾ ಶೋಷಣೆ ನಿಲ್ಲಬಹುದು. ಹೆಂಡತಿ ದುಡಿದು ಸಂಬಳ ತರುತ್ತಿದ್ದರೆ ತಂದು ಗಂಡನ ಕೈಗೆ ಕೊಡಬೇಕು. ನಿತ್ಯ ಖರ್ಚಿಗೆ ಹಣಕ್ಕೆ ಪುನಃ ಗಂಡನಿಗೆ ಕೈಯೊಡ್ಡಬೇಕು. ಅಂದರೆ 'ದುಡಿಮೆ ಸ್ತ್ರೀಯ ಪಾಲಿಗೆ, ಹಣ ಗಂಡನ ಪಾಲಿಗೆ'. ಇದು ಸಹ ಸ್ತ್ರೀ ಶೋಷಣೆಯ ಸಂಕೇತ. ಬಹುಪತ್ನಿತ್ವ ಇನ್ನೂ ರೂಢಿಯಲ್ಲಿದೆ. ಇದು ಪುರುಷ ಪ್ರಾಬಲ್ಯದ ಸಂಕೇತ. ಗಂಡನು ಒಬ್ಬ ಹೆಂಡತಿಯನ್ನು ನಿಕೃಷ್ಟವಾಗಿ ಕಾಣಬಹುದು. ಈ ಪ್ರವೃತ್ತಿಯಿಂದ ಸ್ತ್ರೀಯ ಸ್ವಾಭಿಮಾನಕ್ಕೆ, ಸ್ಥಾನಮಾನಕ್ಕೆ ಧಕ್ಕೆಯುಂಟಾಗುವುದು ಸಹಜ. ಗೌಳಿ ಹೆಣ್ಣು ತನ್ನ ಗಂಡ–ಮಕ್ಕಳು, ತನ್ನ ಕುಟುಂಬ ಎಂದು ತನ್ನದೇ ಆದ ಜಗತ್ತಿನಲ್ಲಿ ಗಂಡನಿಗೆ ವಿಧೇಯಳಾಗಿ, ತನ್ನನ್ನು ಕುಟುಂಬದ ನಿರ್ವಹಣೆಯಲ್ಲಿ ತೊಡಗಿಸಿಕೊಂಡು ಸಂತೋಷದಿಂದಿರುತ್ತಿದ್ದಳು. ಈಗ ಹೊರ ಜಗತ್ತಿನ ಅರಿವು ಆಗಿ ಅದರ ಪ್ರಭಾವದಿಂದ ಜೀವನ ಶೈಲಿ, ವರ್ತನೆ ಬದಲಾದದ್ದು ಕಂಡು ಬರುತ್ತದೆ. ಇದರಿಂದ ಕುಟುಂಬದ ಗಂಡಸರಿಗೆ ಇರುಸು–ಮುರುಸಾಗಿ ಘರ್ಷಣೆಗೆ ಹಾದಿ ಮಾಡಬಹುದಲ್ಲದೇ ಸ್ತ್ರೀಯ ಸ್ಥಾನಮಾನಕ್ಕೆ ಧಕ್ಕೆಯಾಗಬಹುದು.

ಗೌಳಿಗರು ತಮ್ಮದೇ ಆದ ಕೆಲವು ಸಹಕಾರಿ ಸಂಘಗಳನ್ನು ಯಲ್ಲಾಪೂರ, ಹಳಿಯಾಳಗಳಲ್ಲಿ ಹೊಂದಿದ್ದಾರೆ. ಅವುಗಳ ಮೂಲಕ ಅಲ್ಪಾವಧಿ ಸಾಲವನ್ನು ಪಡೆದು ಪಶುಸಾಕಾಣಿಕೆ, ವ್ಯಾಪಾರದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಎಲ್ಲಾ ಮೂಲಗಳಿಂದ ಬರುವ ಆದಾಯವು ಮನೆ ನಿರ್ವಹಣೆಗೆ

ಮತ್ತು ಪುರುಷನ ಕುಡಿತಕ್ಕೆ ಸಾಕಾಗುವುದಿಲ್ಲ. ಗಂಡಸಿಗಿಂತ ಹೆಚ್ಚು ಕೆಲಸದಲ್ಲಿ ತೊಡಗಿ ಆದಾಯದ ಮೂಲವಾಗಿದ್ದರೂ ಗೌಳಿ ಮಹಿಳೆಯರ ಶೋಷಣೆ ತಪ್ಪಿದ್ದಲ್ಲ. ಪುರುಷನು ತಾನೇ ಶ್ರೇಷ್ಠನು ತನ್ನ ಆಧೀನದಲ್ಲಿಯೇ ಸ್ತ್ರೀ ಇರಬೇಕು ಎನ್ನುವ ಧೋರಣೆ ಇನ್ನೂ ಕಡಿಮೆಯಾಗಿಲ್ಲ. ಈ ದೃಷ್ಟಿಕೋನದಿಂದ ಸ್ತ್ರೀಯರು ತಮ್ಮ ಸ್ವಂತಿಕೆಯಿಂದ ಬದಲಾಗಬೇಕಾಗಿದೆ.

ಗೌಳಿ ಮಹಿಳೆಯರು ತಾವೇ ಸ್ವಯಂ ಪ್ರೇರಣೆಯಿಂದ ಮುಂದಾಗಿ ಸ್ಥಾಪಿಸಿಕೊಂಡಿರುವ ಸಮೂಹಗಳೇ ಸ್ವ-ಸಹಾಯ ಗುಂಪುಗಳು. ಗೌಳಿ ಮಹಿಳೆಯರ ಪಾಲಿಗೆ ಈ ಬಗೆಯ ಸ್ವ-ಸಹಾಯ ಸಂಘಗಳು ಆರ್ಥಿಕ ಅಭ್ಯುದಯದ ಕೇಂದ್ರಗಳಾಗಿವೆ. ಅನ್ನಪೂರ್ಣೇಶ್ವರಿ, ಅಶ್ವಿನಿ, ಧರ್ಮಸ್ಥಳ ಮಂಜುನಾಥ ಮುಂತಾದ ಹೆಸರಿನಿಂದ ಸ್ವ-ಸಹಾಯ ಗುಂಪುಗಳು ಹೆಸರಿಸಲ್ಪಡುತ್ತವೆ. ಇವುಗಳ ಮೂಲಕ ತಮ್ಮ ಆರ್ಥಿಕ ಸ್ಥಿತಿಗತಿಗಳನ್ನು ಅಭಿವೃದ್ಧಿ ಪಡಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಇವರ ಪ್ರಯತ್ನಕ್ಕೆ ಪುರುಷರ ಸಹಕಾರವು ದೊರೆತರೆ ಸ್ವಲ್ಪ ನೆಮ್ಮದಿಯ ಬದುಕನ್ನು ಹೊಂದಲು ಸಾಧ್ಯವಾಗುತ್ತದೆ. ಸ್ವ-ಸಹಾಯ ಸಂಘಗಳ ಕೆಲವು ಪ್ರಮುಖ ಉದ್ದೇಶಗಳು ಈ ರೀತಿ ಇವೆ.

೧) ಗೌಳಿವಾಡಾಗಳಲ್ಲಿರುವ ಸ್ತ್ರೀಯರಿಗೆ ಉಳಿತಾಯದ ಮನೋಭಾವನೆ ಮೂಡಿಸುವುದು.

೨) ಕಡಿಮೆ ಬಡ್ಡಿ ದರದಲ್ಲಿ ಸಾಲ ಸೌಲಭ್ಯವನ್ನು ಒದಗಿಸುವುದು.

೩) ಮಹಿಳೆಯರು ಏಕತೆಯಿಂದ ಉದ್ಯೋಗ ಕೈಕೊಳ್ಳಲು ಚಾಲನೆ ನೀಡುವುದು.

೪) ಮಹಿಳೆಯರು ತಮ್ಮ ಸಮಸ್ಯೆಗಳನ್ನು ತಾವೇ ಬಗೆಹರಿಸಿಕೊಳ್ಳುವುದು.

ಬಾಲ್ಯವಿವಾಹ ವಿರುದ್ಧ ಧೋರಣೆ ಬಿಂಬಿಸುವಲ್ಲಿಯೂ ಈ ಬಗೆಯ ಸ್ವ-ಸಹಾಯ ಗುಂಪುಗಳು ನೆರವಾಗುತ್ತಿವೆ. ೧೮ ರಿಂದ ೬೦ ವಯೋಮಾನದವರು ಈ ಸಂಘದ ಸ್ವ-ಪ್ರೇರಣೆಯಿಂದ ಸದಸ್ಯರಾಗುತ್ತಿದ್ದಾರೆ. ಒಟ್ಟಿನಲ್ಲಿ ಪುರುಷನಿಗಿಂತ ಹೆಚ್ಚು ಶ್ರಮವಹಿಸಿ ಕೆಲಸ ಕೈಕೊಂಡರೂ ಸ್ತ್ರೀಯರ ಸ್ಥಾನಮಾನಗಳಲ್ಲಿ ಹೇಳಿಕೊಳ್ಳುವಷ್ಟು ಬದಲಾವಣೆಯಾಗಿಲ್ಲದಿರುವುದು ಕಂಡು ಬರುತ್ತದೆ.

ಸ್ತ್ರೀ ಶಕ್ತಿ ಯೋಜನೆ ೨೦೦೧ ರಲ್ಲಿ ಆರಂಭವಾಯಿತು. ನಾನು ಕ್ಷೇತ್ರ ಕಾರ್ಯ ಕೈಕೊಂಡ ವಾಡೆಗಳಲ್ಲಿ ಕೆಲವು ಸ್ತ್ರೀ ಶಕ್ತಿ ಯೋಜನೆಗಳು ಅಸ್ತಿತ್ವದಲ್ಲಿರುವುದನ್ನು ಕಂಡುಕೊಂಡಿದ್ದೇನೆ. ಸ್ತ್ರೀ ಶಕ್ತಿ ಯೋಜನೆಗಳಲ್ಲಿ ೧೫ ರಿಂದ ೨೫ ಮಂದಿ ಸದಸ್ಯರನ್ನು ಹೊಂದಿರುವ ಸ್ತ್ರೀ ಶಕ್ತಿ ಗುಂಪುಗಳಿವೆ. ಸ್ತ್ರೀ ಶಕ್ತಿ ಗುಂಪುಗಳ ಉದ್ದೇಶಗಳು ಇಂತಿವೆ :

೧. ಗೌಳಿ ಮಹಿಳೆಯರನ್ನು ಸಾಮಾಜಿಕವಾಗಿ, ಆರ್ಥಿಕವಾಗಿ ಬಲಪಡಿಸಲು ಯೋಗ್ಯ ಪರಿಸರವನ್ನು ನಿರ್ಮಿಸಿಕೊಡುವುದು.

೨. ಮಹಿಳೆಯರಲ್ಲಿ ಆತ್ಮ-ವಿಶ್ವಾಸ, ಸ್ವಾವಲಂಬನೆ ಮೂಡಿಸುವುದು.

೩. ಮಹಿಳೆಯರನ್ನು ಉತ್ಪಾದಕ ಕಾರ್ಯಗಳಲ್ಲಿ ತೊಡಗಿಸುವುದು ಇತ್ಯಾದಿ.

ರಾಜ್ಯದಲ್ಲಿ ೯೩೦೦೦ ಬುಡಕಟ್ಟು ಮಹಿಳೆಯರು ಸ್ತ್ರೀ ಶಕ್ತಿ ಗುಂಪುಗಳನ್ನು ರಚಿಸಿಕೊಂಡು ಆ ಮೂಲಕ ತಮ್ಮ ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳನ್ನು ಉತ್ತಮಪಡಿಸಿಕೊಳ್ಳುವಲ್ಲಿ ತೊಡಗಿದ್ದಾರೆ.

ಕ್ರಮೇಣವಾಗಿ ಸ್ತ್ರೀಯರ ಸ್ಥಾನಮಾನಗಳು ಮೇಲ್ಮಟ್ಟಕ್ಕೆ ಬರುವುದರಲ್ಲಿ ಸಂದೇಹವಿಲ್ಲ. ಮಹಿಳೆಯರ ಬದುಕಿನಲ್ಲಿ ಹೆಚ್ಚು ಆಶಾಭಾವನೆ ಮೂಡಿಸಿರುವ ಸ್ತ್ರೀಶಕ್ತಿ ಗುಂಪುಗಳನ್ನು ಆರ್ಥಿಕವಾಗಿ ಬಲಪಡಿಸುವುದು ಅಗತ್ಯವಾಗಿದೆ. ಯಾಕೆಂದರೆ ಆಧುನೀಕರಣಗೊಂಡ ಇಂದಿನ ಸಮಾಜದಲ್ಲಿ ಆರ್ಥಿಕತೆಗೆ ಹೆಚ್ಚಿನ ಪ್ರಾತಿನಿಧ್ಯವನ್ನು ನೀಡಲಾಗುತ್ತಿದೆ.

ಮಹಿಳೆಯ ಮತ್ತು ಸಮಾಜದ ಆರ್ಥಿಕ, ಸಾಮಾಜಿಕ, ರಾಜಕೀಯ ಹಿಂದುಳಿದಿರುವಿಕೆಗೆ ಶಿಕ್ಷಣದ ಕೊರತೆಯೇ ಕಾರಣವಾಗುತ್ತದೆ. ಗೌಳಿ ಮಹಿಳೆಯರ ಬದುಕಿನ ಸ್ಥಿತಿಗತಿ, ಆರೋಗ್ಯ ಸಮಸ್ಯೆ ಪರಿಹಾರ, ಆರೋಗ್ಯ ಸುಧಾರಣೆಗೆ ಹಾಗೂ ರಕ್ತ ಹೀನತೆಯಿಂದ ಬಳಲುವ ಗರ್ಭಿಣಿ, ಭಾಣಂತಿಯರಿಗೆ ಕಬ್ಬಿಣಾಂಶದ ಮಾತ್ರೆ ನೀಡುವುದು ಈ ರೀತಿಯಾಗಿ ತಾತ್ಕಾಲಿಕ ಸೌಲಭ್ಯ ಒದಗಿಸುವುದಕ್ಕಾಗಿ 'ಸಂಚಾರಿ ಆರೋಗ್ಯ ಸೇವೆ' ಎನ್ನುವುದನ್ನು ಪ್ರಾರಂಭಿಸಲಾಗಿದೆ.

**ಕೋಷ್ಟಕ ೩.೯**

**ಗೌಳಿ ಮಹಿಳೆಯರ ಆರೋಗ್ಯ ಸಮಸ್ಯೆಗಳು**

| ಹಾಡಿ (ವಾಡೆ) | ದೈಹಿಕ ಸಮಸ್ಯೆಗಳು ಕೈ ಕಾಲು ಬೆನ್ನು, ನಡ ನೋವು | ಮಾನಸಿಕ ಸಮಸ್ಯೆಗಳು | ಮುಟ್ಟಿನ ಸಮಸ್ಯೆಗಳು |
|---|---|---|---|
| ಕಿರುವತ್ತಿ | ೧೫ | ೧೦ | ೩೨.೫ |
| ಹೊಸಳ್ಳಿ | ೨೦ | ೧೨.೫ | ೨೭.೫ |
| ವಿಟ್ನಾಳ | ೧೦ | ೧೦ | ೩೩.೫ |
| ಅಂಬೆವಾಡಿ | ೧೫ | ೧೫ | ೩೫ |
| ಮೈನಳ್ಳಿ | ೧೨.೫ | ೧೭.೫ | ೪೫ |
| **ಸರಾಸರಿ** | **೧೪.೫** | **೧೩** | **೩೫.೫** |

ಕರ್ನಾಟಕದಲ್ಲಿ ೧೯೭೪ ರಲ್ಲಿ ಸ್ಥಾಪಿತವಾದ ಸೇವಾ ಸಂಸ್ಥೆಗಳು ಕಾರ್ಯ ನಿರ್ವಹಿಸುತ್ತಿವೆ. ಸ್ವಯಂ ಸೇವಾ ವಲಯದಲ್ಲಿ ಲಭ್ಯವಿರುವ ಆರೋಗ್ಯ ಸೇವಾ ಸೌಲಭ್ಯಗಳನ್ನು ಸಂಘಟಿಸುತ್ತಿವೆ. ಜನರಿಗೆ ಆರೋಗ್ಯದ ಬಗ್ಗೆ ಜಾಗೃತಿ ಮೂಡಿಸುವಲ್ಲಿ ಪ್ರಯತ್ನಗಳು ನಡೆಯುತ್ತಿವೆ.

ಗೌಳಿಗರ ಅಭಿವೃದ್ಧಿಗೆಂದು ಉತ್ತರ ಕನ್ನಡ ಜಿಲ್ಲೆಯಲ್ಲಿ ೧೨ಕ್ಕೂ ಹೆಚ್ಚು ಸ್ವಯಂ ಸೇವಾ ಸಂಸ್ಥೆಗಳು ಕಾರ್ಯ ನಿರ್ವಹಿಸುತ್ತಿವೆ. ಸ್ವಯಂ ಸೇವಾ ಸಂಸ್ಥೆಗಳ ಪ್ರಯತ್ನದಿಂದ ಇವತ್ತು ಮಕ್ಕಳು ಶಾಲೆಗೆ ಬರುವುದಲ್ಲದೇ ಆರೋಗ್ಯ ಪರೀಕ್ಷೆಗೆ ಒಳಗಾಗುತ್ತಿದ್ದಾರೆ. ಸ್ವಚ್ಛತೆಯ ಕಲ್ಪನೆ ಮೂಡುತ್ತಿದೆ. ಮಹಿಳೆಯರಲ್ಲೂ ಕ್ರಮೇಣ ಜಾಗೃತಿ ಮೂಡುತ್ತಿದೆ. ಗೌಳಿ ಮಹಿಳೆಯು ಈಗ ಆರ್ಥಿಕ ಬದಲಾವಣೆಗಳಿಗೆ ಒಳಗಾಗುತ್ತಿದ್ದಾಳೆ. ಇಂದು ಗೌಳಿ ಮಹಿಳೆಯರು ಸ್ಥಿತ್ಯಂತರ ಹಂತದಲ್ಲಿದ್ದಾರೆ. ಮಹಿಳೆಯರ ಸ್ಥಾನಮಾನದಲ್ಲಿ ಗಮನಾರ್ಹವಾದ ಬದಲಾವಣೆಯಾಗಿಲ್ಲವಾದರೂ ಶಾಲೆಯಲ್ಲಿ ಅಧ್ಯಯನ ಮಾಡುತ್ತಿರುವ ಹೆಣ್ಣು ಮಕ್ಕಳ ಸಂಖ್ಯೆ ಕ್ರಮೇಣ ಹೆಚ್ಚುತ್ತಿರುವುದು ಭವಿಷ್ಯದಲ್ಲಿ ಮಹಿಳೆಯರ ಸ್ಥಾನಮಾನದಲ್ಲಿ ರಚನಾತ್ಮಕ ಬದಲಾವಣೆ ಆಗುವ ಸಾಧ್ಯತೆಯನ್ನು ಸೂಚಿಸುತ್ತದೆ.

## ೩.೪. ಕುಟುಂಬ ಪದ್ಧತಿ ಮತ್ತು ಜೀವನ ಆವರ್ತಗಳು

ಗೌಳಿಗರ ಕೌಟುಂಬಿಕ ವ್ಯವಸ್ಥೆ ಪಿತೃಪ್ರಧಾನವಾಗಿದೆ. ತಂದೆಯ ಕಡೆಯಿಂದಲೇ ಕುಲ ಸಂಬಂಧಿ ಆಚರಣೆಗಳು ನಿರ್ಧರಿಸಲ್ಪಡುತ್ತವೆ. ರೀತಿ-ನೀತಿ ಸಂಪ್ರದಾಯಗಳು ಇವರ ಮೂಲವಾದ ಧನಗರ್ ಸಮೂಹದ ಆಚರಣೆಯನ್ನು ಹೋಲುತ್ತವೆ. ತಮ್ಮ ಕುಲಗೋತ್ರಗಳನ್ನು 'ಕುಳಿ' ಎಂದು ಗುರುತಿಸುತ್ತಾರೆ. ಪ್ರಮುಖವಾದ ಕೆಲವು ಕುಳಿಗಳೆಂದರೆ,

೧] ಜ್ಯೋರೆ (ಪಾಟೀಲ) ೨] ಯಡಿಗ್ಯ ೩] ಲಾಂಬೂರ್ ೪] ಬಜಾರಿ ೫] ತೊರುವತ್ ೬] ಕಾತ್ರೋಟ್ ೭] ಕೊಕರೆ ೮] ಕೊಳಾಪ್ಪೆ ೯] ಜಾನ್ಕರ್ ೧೦] ಶೆಳ್ಕೆ ೧೧] ಗಂಗೇವರಿ ೧೨] ಪಾಂಡರ್‌ಮಿಷೆ ೧೩] ಇಟ್ಟೂಖರಾತ್ ೧೪] ಡೊಯಿಪಡೆ ೧೫] ಸಾಕ್ರಾಹುಂಬಿ ೧೬] ರಾಮುಕಾಳಿ ೧೭] ಅಡೂಳ್ಕರ ೧೮] ಬೋಡ್ಕರ ೧೯] ಪಟ್ಕಾರಿ ೨೦] ಮಲಗುಂಡ್ ೨೧] ಖರಾತ್ ೨೨] ಜಂಗ್ಲಿ ೨೩] ದೊಂಡು ೨೪] ವರುಕ್ ೨೫] ಧೂಳ್ ೨೬] ಬರಾಗಡೆ ೨೭] ಕೋಳೆಕಾರ್ ೨೮] ಧೋಳು ೨೯] ಗಂಗಾರಾಮ ೩೦] ಉಂಡ್ ೩೧] ಪಿಂಗಳ್ಯ ೩೨] ಯಮ್ಕರ ೩೩] ಶಿಂಧೆ ೩೪] ಟಾಕೇಕರ್ ೩೫] ಘೊಂಡೆ ೩೬] ಪಾವಣೆ ೩೭] ತಾಟೆ ೩೮] ಮಿಸಳೆ ೩೯] ಕಾಳೆ ೪೦] ಖೋತ್ ೪೧] ಬಿಚುಕ್ಲ್ಯೆ ೪೨] ಗೌಂಡ್ರ್ಯ ೪೩] ಸಿಂಗಾಡೆ ೪೪] ಬಾವದಾನೆ ೪೫] ಗುರ್ಕೆ ೪೬] ಠವಕೆ ೪೭] ಕಸ್ತೂರೇ ೪೮] ಆವಣೆ ಇತ್ಯಾದಿ.[೨೯] ಇನ್ನು ಕೆಲವು ಕುಳಿಗಳಿರುವದಾಗಿ ತಿಳಿದುಬಂದರೂ, ಹಿರಿಯರಿಂದ ಅವುಗಳ ಕುರಿತು ವಿವರಗಳು ದೊರಕಲಿಲ್ಲ.

ವ್ಯಕ್ತಿಗಳ ಅಡ್ಡ ಹೆಸರುಗಳಲ್ಲಿಯೇ ಕುಳಿಗಳು ಸೇರಿಕೊಂಡಿರುತ್ತವೆ. ಈ ಅಡ್ಡ ಹೆಸರುಗಳು ಅವರ ಸಾಮಾಜಿಕ ಏಣಿಶ್ರೇಣಿಯ ಸೂಚಕಗಳಾಗಿವೆ. ಪುರುಷರ ಹೆಸರುಗಳಲ್ಲಿ ಕೊನೆಗೆ ಬರುವ ಅಡ್ಡ ಹೆಸರು ಕುಳಿಯನ್ನು ಸೂಚಿಸುತ್ತದೆ.

ಉದಾ: ಬಾಗು ಬಾಬು ಪಿಂಗಳೆ
ಬಮ್ಮು ಠಕ್ಕು ತೋರವತ್
ವಿಠಲ ಜಾನು ಪಾಂಡ್ರಮಿಶೆ
ಯಮ್ಮು ಠಕ್ಕು ವರಕ್
ಬಮ್ಮು ಬೀರು ಯಡಗೆ
ವಿಠ್ಠು ಸೋನು ಡೋಯಿಪುಡೆ
ಬೈರೂ ದೋಂಡು ಕಾತ್ರೋಟ
ದೊಂಡು ಕಾಳು ಪಾಟೀಲ (ಜೋರೆ)

ವಿವಾಹದ ನಂತರ ಹೆಣ್ಣು ಮಕ್ಕಳಿಗೆ ಗಂಡನ ಕುಳಿಯ ಅಡ್ಡಹೆಸರು ಬರುತ್ತದೆ.

ಉದಾ: ಬಾಗಿ ಬಾಗು ಪಿಂಗಳೆ
ಗಂಗಿ ಠಕ್ಕು ತೋರವತ್
ದಾಕ್ಲುಬಾಯಿ ದೊಂಡು ಕಾತ್ರೋಟ

ಸಗ್ಗೂಬಾಯಿ ಸೋನು ಲಾಂಬೂರ

ನಾಗುಬಾಯಿ ಜಾನು ಪಾಂಡ್ರಮಿಶೆ

ಧನೂಬಾಯಿ ಧೋಳು ವರಕ್

ಸಕ್ಕೂಬಾಯಿ ಬಮ್ಮು ಯಡಗೆ

ಬೊಮ್ಮುಬಾಯಿ ವಿಥ್ಥು ಡೊಯಿಪುಡೆ

ಸಾಕ್ರಿಬಾಯಿ ದೊಂಡು ಪಾಟೀಲ

ಜೋಗಿ ಕುಳಿ ಶ್ರೇಷ್ಠವೆನ್ನಲಾಗುವದು. ಪ್ರಮುಖ ಧಾರ್ಮಿಕ ಕಾರ್ಯಗಳಲ್ಲಿ ಇವರ ಪಾತ್ರ ಪ್ರಮುಖ. ಇವರು ಅಲೆಮಾರಿ ಜೀವನ ಸಾಗಿಸುವವರು. ಹೈನುಗಾರಿಕೆ ಮಾಡುವುದಿಲ್ಲ. ಪೂಜಾ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಕಾಣಿಕೆ ಪಡೆದು ಜೀವಿಸುವರು. ಇವರು ಎಲ್ಲಿಯೂ ೧-೨ ವಾರಗಳಿಗಿಂತ ಹೆಚ್ಚು ನಿಲ್ಲುವುದಿಲ್ಲ. ಜಡೆಬಿಟ್ಟು ಅಲೆದಾಡುತ್ತಾ ಪೂಜೆ ಪುನಸ್ಕಾರಗಳಲ್ಲಿ ಭಾಗವಹಿಸುವರು. ಇವರು ಹಿತ್ತಾಳೆಯ ಟಗರಿನ ಲಾಂಛನ ಹೊಂದಿದ್ದು, ಅದನ್ನು ಮುಂಡಾಸಿನಲ್ಲಿ ಧರಿಸಿರುತ್ತಾರೆ. ಜೋಗಿಯ ನಂತರದ ಸ್ಥಾನ 'ಯಡಿಗ್ಯ' ಕುಳಿಗೆ ಲಭಿಸುತ್ತದೆ.  ಇವರು ವಾಡೆಯಲ್ಲೇ ಇದ್ದು, ಜಡೆಬಿಟ್ಟು ಪೂಜೆ ಪುನಸ್ಕಾರಗಳನ್ನು ನಡೆಸುತ್ತಾರೆ.

ಯಡಿಗ್ಯನ ನಂತರ 'ಲಾಂಬೋರ್' ಕುಳಿಗೆ ಈ ಗೌರವ ಸಲ್ಲುವುದು.  ಯಡಿಗ್ಯ ಸಿಗದಾಗ ಲಾಂಬೋರ್ ಕುಳಿಗೆ ಸೇರಿದವರು ಧಾರ್ಮಿಕ ಕಾರ್ಯ ನೆರವೇರಿಸುತ್ತಾರೆ.

ನಿಮ್ಮ ಕುಟುಂಬದ ಸ್ವರೂಪ ಯಾವುದೆಂದು ಕೇಳಿದರೆ ವ್ಯಕ್ತಪಡಿಸಿದ ಪ್ರತಿಕ್ರಿಯೆಯನ್ನು ಈ ಕೆಳಗಿನ ಪಟ್ಟಿಯಲ್ಲಿ ಕಾಣಬಹುದು.

**ಕೋಷ್ಟಕ ೩.೧೦**

**ಕುಟುಂಬ ಸ್ವರೂಪ**

| ಕುಟುಂಬ ಸ್ವರೂಪ | ಪ್ರತಿಕ್ರಿಯಿಸಿದವರ ಸಂಖ್ಯೆ | ಶೇಕಡಾವಾರು |
|---|---|---|
| ಪಿತೃ ಪ್ರಧಾನ ಕುಟುಂಬ | ೨೨೫ | ೧೦೦% |
| ಸ್ತ್ರೀಯರಿಗೆ ಮಹತ್ವದ ನಿರ್ಣಯದಲ್ಲಿ ಪಾತ್ರ ಇದೆ | ೧೭೫ | ೭೭.೭೮% |
| ಸ್ತ್ರೀಯರಿಗೆ ಮಹತ್ವದ ನಿರ್ಣಯದಲ್ಲಿ ಪಾತ್ರ ಇಲ್ಲ | ೫೦ | ೨೨.೨೨% |
| | ೨೨೫ | ೧೦೦% |

ಎಲ್ಲ ೨೨೫ ಕುಟುಂಬದವರು ನಮ್ಮ ಕುಟುಂಬ ಪಿತೃ ಪ್ರಧಾನವೆಂದು ಹೇಳಿದ್ದಾರೆ. ಆದರೆ ೧೭೫ ಕುಟುಂಬದವರು ಕುಟುಂಬದ ಕುರಿತು ಮಹತ್ವದ ನಿರ್ಣಯ ಕೈಗೊಳ್ಳುವಾಗ ಕುಟುಂಬದ ಮಹಿಳೆಯರಿಗೆ ನಿರ್ಧಾರದ ಪಾತ್ರವಿದೆ ಎಂದು ಹೇಳಿದರೆ, ೫೦ ಕುಟುಂಬದವರು ಮಹಿಳೆಗೆ ನಿರ್ಧಾರಕ ಪಾತ್ರವಿಲ್ಲ ಎಂದು ಹೇಳಿದ್ದಾರೆ.  ಸಾಮಾನ್ಯ ದೃಷ್ಟಿಯಿಂದ ನೋಡಲಾಗಿ ಪ್ರಮುಖ ನಿರ್ಣಯಗಳನ್ನು ಕೈಗೊಳ್ಳುವಾಗ ಮಹಿಳೆಯರೊಂದಿಗೆ ಚರ್ಚಿಸಿ ನಿರ್ಣಯ ಕೈಗೊಳ್ಳಲಾಗುತ್ತದೆ ಎಂದು ಕಂಡುಬರುತ್ತದೆ.

ಮನೆಯಲ್ಲಿ ಹಿರಿಯ ಮಹಿಳೆಯರಿದ್ದಾಗ ಸಾಮಾನ್ಯವಾಗಿ ಅವರೊಂದಿಗೆ ಚರ್ಚಿಸಿ ನಿರ್ಣಯ ಕೈಗೊಳ್ಳುವುದು ಕಂಡುಬರುತ್ತದೆ. ಆದರೆ ಚಿಕ್ಕ ವಯಸ್ಸಿನ ಮಹಿಳೆಯರಿಗೆ ಇಂತಹ ನಿರ್ಣಾಯಕ ಪಾತ್ರವಿಲ್ಲ.

**೩.೪.೧. ಸಾಮಾಜಿಕ ಶ್ರೇಣೀಕರಣ**[೩೦]

ನನ್ನ ಕ್ಷೇತ್ರ ಕಾರ್ಯ ಸಮಯದಲ್ಲಿ ಗೌಳಿ ಧನಗರ ಸಮಾಜದ ಹಿರಿಯರಿಂದ ತಿಳಿದು ಬಂದ ಪ್ರಕಾರ ಎಲ್ಲ ಧನಗರ ಗೌಳಿಗರು ಸ್ಥಾನಮಾನದಲ್ಲಿ ಸಮಾನರೆಂದರೂ ಕೂಡ ಅವರಲ್ಲಿ ಏಣಿ-ಶ್ರೇಣಿ ಕುರಿತು ವಿಶಿಷ್ಟ ಮಾನ್ಯ/ಶ್ರೇಣಿಗಳಿವೆ. ಈ ಸಮುದಾಯದಲ್ಲಿ ೭ ವಿಧದ ಮಾನ್ಯಗಳಿವೆ. ಇಳಿಕೆಯ ಕ್ರಮದಲ್ಲಿ ಈ ಕೆಳಗೆ ಕಾಣಿಸಲಾಗಿದೆ.

| | |
|---|---|
| ೧) ಸೋಳಾ ಸಿದ್ಧ | (೧೬ ಕುಳಿಗಳು) |
| ೨) ಸಾತ ಮಾನಕರಿ | (೭ ಕುಳಿಗಳು) |
| ೩) ಆಟ್ರಾ ಗೌಂಡಿ | (೧೮ ಕುಳಿಗಳು) |
| ೪) ಬಾರಾ ಬಾಗಾಡಿ | (೧೨ ಕುಳಿಗಳು) |
| ೫) ದಹಾ ದೈವ | (೧೦ ಕುಳಿಗಳು) |
| ೬) ಚಾರ ಚೌಗುಲೆ | (೪ ಕುಳಿಗಳು) |
| ೭) ಸಮಾಜ ದೈವ | (ಇತರ ಎಲ್ಲಾ ಕುಳಿಗಳು) |

**ಸೋಳಾ ಸಿದ್ಧ:** ಈ ಶ್ರೇಣಿಯಲ್ಲಿ ೧೬ ಕುಳಿಗಳಿವೆ. ಇವರಲ್ಲಿ ಯಡಗೆ, ಲಾಂಬೋರ, ಪಿಂಗಳೆ, ಪೋಂಡೆ, ಸಿಂಧೆ, ಬಾರಾಗಡೆ, ಬರಗಾ, ಬೋಡಕೆ, ಕೊಳಕರ ಈ ಕುಳಿಗಳು ಒಳಗೊಂಡಿವೆ. ಉಳಿದ ಏಳು ಕುಳಿಗಳ ಬಗ್ಗೆ ಮಾಹಿತಿ ಲಭ್ಯವಿಲ್ಲ. ಯಡಗೆ ಕುಳಿಯವರೇ ಈ ಶ್ರೇಣಿಯ ಮುಖ್ಯಸ್ಥರು. ಈ ಶ್ರೇಣಿಗೆ ಸೇರಬೇಕಾದ ಮೊದಲ ವೀಳ್ಯ ಯಡಗೆಯವರಿಗೆ ಸಲ್ಲುತ್ತದೆ. ಇವರ ಅನುಪಸ್ಥಿತಿಯಲ್ಲಿ ಅನುಕ್ರಮವಾಗಿ ನಂತರದ ಲಾಂಬೋರ ಕುಳಿಯವರಿಗೆ ವೀಳ್ಯೆ ನೀಡಲಾಗುವುದು. ಯಡಗೆ ಕುಳಿ ಶ್ರೇಷ್ಠ ಕುಳಿ. ಅವರು ಪುರೋಹಿತ ಸ್ಥಾನವನ್ನು ಹೊಂದಿದ್ದಾರೆ.

**ಸಾತ ಮಾನಕರಿ:** ಈ ಶ್ರೇಣಿಯಲ್ಲಿ ೭ ಕುಳಿಗಳಿವೆ. ಈ ಶ್ರೇಣಿಯಲ್ಲಿ ಜೋರೆ/ಪಾಟೀಲ, ಜಾಣಕರ, ಶೆಳಕೆ, ಖರಾತ, ಬೋಡಕರ, ಬಜಾರಿ, ಮಾಲಗೊಂಡ ಎಂಬ ೭ ಕುಳಿಗಳಿದ್ದು, ಜೋರೆ ಕುಳಿಯವರು ಈ ಶ್ರೇಣಿಯ ಮುಖಂಡರಾಗಿರುತ್ತಾರೆ. ಯಾವುದೇ ಕಾರ್ಯಕ್ರಮದಲ್ಲಿ ಈ ಶ್ರೇಣಿಗೆ ಸೇರಬೇಕಾದ ವೀಳ್ಯೆ ಜೋರೆ ಕುಳಿಗೆ ದೊರಕುತ್ತದೆ. ಅವರ ಅನುಪಸ್ಥಿತಿಯಲ್ಲಿ ಅನುಕ್ರಮವಾಗಿ ಉಪಸ್ಥಿತರಿರುವ ನಂತರದ ಕುಳಿಯವರಿಗೆ ವೀಳ್ಯೆ ನೀಡಲಾಗುವುದು.

**ಆಟ್ರಾ ಗೌಂಡಿ :** ಈ ಶ್ರೇಣಿಯಲ್ಲಿ ೧೮ ಕುಳಿಗಳಿವೆ. ಇವರಲ್ಲಿ ಕೊಕರೆ, ತಾಟೆ, ಪಾಟಕರಿ, ಬಾವದಾನೆ, ಇತ್ಯಾದಿ ಕುಳಿಗಳಿದ್ದು, ಉಳಿದ ಕುಳಿಗಳ ಬಗ್ಗೆ ಮಾಹಿತಿ ಲಭ್ಯವಾಗಲಿಲ್ಲ. ಕೊಕರೆ ಕುಳಿಯವರೇ ಈ

ಶ್ರೇಣಿಗೆ ಸೇರಬೇಕಾದ ವೀಳ್ಯ ಸೇರುತ್ತದೆ. ಅವರ ಅನುಪಸ್ಥಿತಿಯಲ್ಲಿ ನಂತರದ ಉಪಸ್ಥಿತರಿರುವ ಕುಳಿಯವರಿಗೆ ವೀಳ್ಯ ನೀಡಲಾಗುವುದು.

**ಬಾರಾ ಬಾಗಾಡಿ:** ಈ ಶ್ರೇಣಿಯಲ್ಲಿ ೧೨ ಕುಳಿಗಳಿವೆ. ಇವರಲ್ಲಿ ಪಾಂಡ್ರಮಿಸೆ, ಗುರ್ಕೆ, ಬಿಚುಕಲೆ, ಗುಂಡ್ರೆ, ಗಾವಡೆ ಇತ್ಯಾದಿ ಒಳಗೊಂಡಿವೆ. ಉಳಿದ ಏಳು ಕುಳಿಗಳ ಹೆಸರಿನ ಬಗ್ಗೆ ಖಚಿತವಾದ ಮಾಹಿತಿ ಯಾರಿಂದಲೂ ದೊರಕಲಿಲ್ಲ. ಈ ಶ್ರೇಣಿಯ ಮುಖಂಡರು ಪಾಂಡರಮಿಸೆ/ಗುರ್ಕೆ ಕುಳಿಯವರಾಗಿರುತ್ತಾರೆ. ಈ ಶ್ರೇಣಿಗೆ ಸೇರಬೇಕಾದ ವೀಳ್ಯ ಪಾಂಡರಮಿಸೆ/ಗುರ್ಕೆಯವರಿಗೆ ದೊರಕುತ್ತದೆ. ಅವರ ಅನುಪಸ್ಥಿತಿಯಲ್ಲಿ ನಂತರದ ಉಪಸ್ಥಿತರಿರುವ ಕುಳಿಯವರಿಗೆ ನೀಡಲಾಗುತ್ತದೆ.

**ದಹಾ ದೈವ:** ಈ ಶ್ರೇಣಿಯಲ್ಲಿ ೧೦ ಕುಳಿಗಳಿವೆ. ಇವರಲ್ಲಿ ಡೊಯಿಪೊಡೆ, ವರಕ, ಥೋರವತ್, ಕಾತ್ರೋಟ, ಕಾಳೆ, ಕೊಲಾಪ್ಪೆ, ಅಡೂಳಕರ, ಯಮಕರ, ಕಸ್ತೂರೆ, ಮಿಸಾಳೆ ಕುಳಿಗಳು ಇದ್ದು, ಡೊಯಿಪೊಡೆ/ವರಕ್ ಕುಳಿಯವರು ಈ ಶ್ರೇಣಿಯ ಮುಖ್ಯಸ್ಥರು. ಈ ಶ್ರೇಣಿಗೆ ಸೇರಬೇಕಾದ ವೀಳ್ಯ ಡೊಯಿಪೊಡೆ/ವರಕ್ ಕುಳಿಯವರಿಗೆ ಸೇರುತ್ತದೆ. ಅವರ ಅನುಪಸ್ಥಿತಿಯಲ್ಲಿ ನಂತರದ ಉಪಸ್ಥಿತರಿರುವ ಕುಳಿಯವರಿಗೆ ನೀಡಲಾಗುತ್ತದೆ.

**ಚಾರ ಚೌಗುಲೆ:** ಈ ಶ್ರೇಣಿಯಲ್ಲಿ ೪ ಕುಳಿಗಳಿವೆ. ಇವರಲ್ಲಿ ಜಂಗಲೆ, ಅವಣೆ ಇತ್ಯಾದಿ ಕುಳಿಯವರು ಒಳಗೊಂಡಿದ್ದಾರೆ. ಜಂಗಲೆ ಕುಳಿಯವರು ಈ ಶ್ರೇಣಿಯ ಮುಖಂಡರು. ಯಾವುದೇ ಕಾರ್ಯಕ್ರಮದಲ್ಲಿ ಈ ಶ್ರೇಣಿಗೆ ಸೇರಬೇಕಾದ ವೀಳ್ಯ ಜಂಗಲೆ ಕುಳಿಗೆ ಸೇರುತ್ತದೆ.

**ಸಮಾಜ ದೈವ:** ಈ ಶ್ರೇಣಿಯಲ್ಲಿ ಉಳಿದ ಎಲ್ಲಾ ಧನಗರ ಕುಳಿಗಳು ಸೇರುತ್ತವೆ.

ಈ ಧನಗರ ಗೌಳಿ ಸಮುದಾಯದಲ್ಲಿ 'ಯಡಗೆ' ಮನೆತನ ಹೆಸರಿನವರು ಉಚ್ಚರೆಂದು ಪರಿಗಣಿಸಲ್ಪಟ್ಟು ಅವರು ಪುರೋಹಿತ/ಗುರು ಸ್ಥಾನದಲ್ಲಿ ಇರುವರು.

**ವಂಶಾವಳಿ:** 'ಕುಳಿ'ಗಳು ನಾಮ ನಿರ್ದೇಶನ ಸಂಕೇತಗಳಲ್ಲದೇ ರಕ್ತ ಸಂಬಂಧ ಸೂಚಕ ಸಂಕೇತಗಳು ಆಗಿರುತ್ತವೆ. ಇದು ಗೌಳಿ ಸಮುದಾಯಕ್ಕೂ ಅನ್ವಯಿಸುವದು. ಅಡ್ಡ ಹೆಸರುಗಳು ವಂಶ ಸೂಚಕಗಳು ಆಗಿರುತ್ತವೆ.

**೩.೪.೨. ವಿವಾಹ ವಿಧಿ-ನಿಯಮಗಳು**

ಗೌಳಿಗರ ವಿವಾಹ ವಿಧಿ-ನಿಯಮಗಳು ವಿಶಿಷ್ಟ ಬುಡಕಟ್ಟಿಗೆ ಅನ್ವಯಿಸುತ್ತವೆ. ಸೋದರ ಕುಳಿಗಳಲ್ಲಿ ವಿವಾಹ ನಿಷೇಧಿಸಲ್ಪಟ್ಟಿದ್ದು, ಇದರಿಂದ ರಕ್ತಸಂಕರ (In-Breeding) ವಾಗದಂತೆ ನೋಡಿಕೊಳ್ಳಲಾಗುತ್ತದೆ. ವರನು ತನ್ನ ತಂದೆಯ ತಂಗಿಯ ಮಗಳನ್ನು ಅಥವಾ ತಾಯಿಯ ಅಣ್ಣ ಅಥವಾ ತಮ್ಮನ ಮಗಳನ್ನು ವಿವಾಹ ಆಗಬಹುದು. ಆದರೆ ಕೆಲವು ಇತರ ಜಾತಿಗಳಲ್ಲಿರುವಂತೆ ಅಕ್ಕನ ಮಗಳನ್ನು ವಿವಾಹ ಆಗುವಂತಿಲ್ಲ. ಒಬ್ಬ ಪುರುಷ ನಾಲ್ಕು ವಿವಾಹ ಆಗುವ ಅವಕಾಶವಿದೆ. ವಿಧವೆಯಾದವಳನ್ನು ವಿವಾಹವಾಗುವ ಸೀರುಡಿಕೆ ಪದ್ಧತಿ ರೂಢಿಯಲ್ಲಿದೆ. ತೊಟ್ಟಿಲಲ್ಲಿರುವ ಹೆಣ್ಣು

ಮಗುವಿಗೆ ವಿವಾಹ ಮಾಡುವ ರೂಢಿಯಿದ್ದ ಬಗ್ಗೆ ಕೆಲವು ಗೌಳಿಗರು ಹೇಳುತ್ತಾರೆ. ಇದು ಈಗ ರೂಢಿಯಲ್ಲಿ ಇಲ್ಲ. ಆದರೂ ಹುಡುಗಿ ಋತುಮತಿಯಾಗುವ ಮೊದಲೇ (೭ ರಿಂದ ೧೪ ವರ್ಷದೊಳಗೆ) ವಿವಾಹ ಮಾಡುತ್ತಾರೆ. ಇದು ಬಾಲ್ಯವಿವಾಹವೇ ಆಗಿದ್ದು, ಕಾನೂನು ಬಾಹಿರವಾಗಿದೆ. ಅಕ್ಕ ತಂಗಿಯನ್ನು ಒಬ್ಬನೇ ಪುರುಷ ವಿವಾಹವಾಗಬಹುದು.

**ಈ ಕೆಳಗಿನ ಸೋದರ ಕುಳಿಗಳ ನಡುವೆ ವಿವಾಹ ನಿಷೇಧವಾಗಿದೆ**[೨೫]

| | | | |
|---|---|---|---|
| ಎ] | ಸೆಳ್ಕೆ – ಢೊಯಿಪಡೆ | ಬಿ] | ತೋರುವತ್ – ಕರಾತ್ |
| ಸಿ] | ಯಡಗ್ಯ – ಲಾಂಬೂರ್ | ಡಿ] | ಕಾತ್ರೋಟ್ – ಢೊಯಿಪಡೆ – ವರಕ್ |
| ಇ] | ಬಾಜಾರಿ – ಜಾನಕರ್ | ಎಪ್] | ತೋರುವತ್ – ಕೋಕರೆ |
| ಜಿ] | ಕೋಕರೆ – ಪಿಂಗಳೆ | ಎಚ್] | ಕರಾತ್ – ಕೋಕರೆ |
| ಐ] | ಜಾನಕರ್ – ಯಮಕರ್ | ಜೆ] | ಢೋಯಿಪಡೆ – ಪಾಂಡ್ರಮಿಶೆ |
| ಕೆ] | ಕೋಕರೆ – ಗೌಂಡ್ರ್ಯ | ಎಲ್] | ಪಾವಣೆ – ಕರಾತ್ |
| ಎಂ] | ತಾಂಬ್ಯೆ – ವರೂಕ್ | ಎನ್] | ವರಕ್ – ಕತ್ರೋಟ್ |
| ಓ] | ಕರಾತ್ – ಸುರಮೆ | ಪಿ] | ವರಕ್ – ಕೋಕರೆ |

**ವಿವಾಹ ನಿಶ್ಚಯ, ತೆರ**

ಸಾಮಾನ್ಯವಾಗಿ ಹೋಳಿ ಹುಣ್ಣಿಮೆಯ ನಂತರ ಎರಡು ತಿಂಗಳು ವಿವಾಹಗಳು ನಡೆಯುವ ಅವಧಿ ಆಗಿದೆ. ಹೆಣ್ಣು ನೋಡಲು ಹುಡುಗನ ತಂದೆ–ತಾಯಿ ದೊಡ್ಡಪ್ಪ, ಚಿಕ್ಕಪ್ಪ ಹಾಗೂ ವಾಡಾದ ಇಬ್ಬರು ಹಿರಿಯರು ಹೋಗುತ್ತಾರೆ. ಹೂ, ಹಣ್ಣು, ಕಾಯಿ ತರುವ ಸಂಪ್ರದಾಯವಿದೆ. ಸಂಬಂಧ ಒಪ್ಪಿಗೆ ಆದರೆ ವೀಳ್ಯದ ಶಾಸ್ತ್ರ ನಡೆಯುತ್ತದೆ. ಹುಡುಗನ ಪಕ್ಷದವರು ತಂದ ತೆಂಗಿನಕಾಯಿ ಒಡೆದು ಹುಡುಗಿಗೆ ಕೊಬ್ಬರಿ ತಿನ್ನಿಸಿ ಉಡಿ ತುಂಬುತ್ತಾರೆ. ಮದುವೆಯ ಮುಹೂರ್ತವನ್ನು ಬ್ರಾಹ್ಮಣ ಪುರೋಹಿತರೇ ನಿಶ್ಚಯ ಮಾಡುತ್ತಾರೆ.

ಇದೇ ಪ್ರಸಂಗದಲ್ಲಿ ಹೆಣ್ಣಿಗೆ ಕೊಡಬೇಕಾದ ತೆರ ನಿಶ್ಚಯವಾಗುವುದು. ಸಾಮಾನ್ಯವಾಗಿ ಇದು ರೂ. ೫೦೦೦/– ರಿಂದ ರೂ. ೧೦,೦೦೦/– ರವರೆಗೂ ಇರಬಹುದು. ಇದಕ್ಕೆ 'ಜಾಜ್' ಎನ್ನುತ್ತಾರೆ. ನಿಶ್ಚಯ ಕಾರ್ಯಕ್ರಮವನ್ನು 'ಸಾಕರಸಾಡೆ' ಎಂದು ಕರೆಯುವರು. ತೆಂಗಿನಕಾಯಿ ಕುಬಸದ ಖಣ, ಅಡಿಕೆ, ಸಕ್ಕರೆ, ವೀಳ್ಯದೆಲೆ ಇತ್ಯಾದಿ ಒಂದು ಕುಕ್ಕೆಯಲ್ಲಿಟ್ಟು ಗಂಡಿನ ಕಡೆಯ ೫ ಜನ 'ಜಾಂತ್ಯಾಲೋಕ' ಹೆಣ್ಣಿನ ಮನೆಗೆ ಬಂದು 'ಜಾಜ್'ನ್ನು ಒಂದು ಬುಟ್ಟಿಯಲ್ಲಿ ಕಟ್ಟಿ ಹೆಣ್ಣಿನ ತಂದೆಗೆ ಒಪ್ಪಿಸುತ್ತಾರೆ. ತಂದೆ ಜಾಜ್ ಬಂದದ್ದನ್ನು ಗಟ್ಟಿಯಾಗಿ ಹೇಳಿದ ನಂತರ ಪರಸ್ಪರ ಸಿಹಿ ಹಂಚಿ ನಿಶ್ಚಯ ಕಾರ್ಯ ಮುಗಿಯುತ್ತದೆ.

ಅಕ್ಕ–ಪಕ್ಕದ ವಾಡೆಗಳಲ್ಲಿಯೇ ಹೆಣ್ಣು – ಗಂಡು ನೋಡುವ ರೂಢಿಯಿದೆ. ಕೆಲವರು ಹಳೆಯ ಸಂಬಂಧವಿರುವ ಮಹಾರಾಷ್ಟ್ರದ ಕನ್ಯೆ ತರುತ್ತಾರೆ. ಪರಸ್ಪರ ಅನುಕೂಲ ಪ್ರಕಾರ ವಿವಾಹದ ದಿನವನ್ನು ನಿರ್ಧರಿಸುತ್ತಾರೆ. ಬೀಗರಿಗೆ ಪ್ರತ್ಯೇಕವಾಗಿ ಜವಳಿ ತರುತ್ತಾರೆ. ವಧುವಿಗೆ ಜವಳಿಯೊಂದಿಗೆ ತಾಳಿ,

ಕಿವಿಯ ಬುಗುಡಿ, ಕಾಲುಂಗುರ ಹಾಗೂ ಕಾಲ್ಗಡಗಗಳನ್ನು ತಪ್ಪದೇ ಗಂಡಿನವರು ತರುತ್ತಾರೆ. ಜವಳಿ ತಂದ ಐದು ದಿನಗಳಲ್ಲಿ ವಿವಾಹ ನಡೆಯುವ ವಾಡಿಕೆಯಿದೆ. ಪುರೋಹಿತರ ನಿರ್ಣಯದ ಪ್ರಕಾರ ಮುಹೂರ್ತವನ್ನು ಸಂಬಂಧಿಕರಿಗೆ ತಿಳಿಸಿ ಅಕ್ಷತೆಕೊಟ್ಟು ಆಮಂತ್ರಿಸುವರು.

ಸಂದರ್ಶನ ಸಮಯಕ್ಕೆ ಕೆಲವು ಸುಶಿಕ್ಷಿತ ಗೌಳಿ ತರುಣರು ತಿಳಿಸಿದ ಪ್ರಕಾರ, ಇತ್ತೀಚೆಗೆ ಅನವಶ್ಯಕ ವೆಚ್ಚವನ್ನು ನಿವಾರಿಸಲು ಒಂದೇ ಗ್ರಾಮಗಳ ಅಥವಾ ಸುತ್ತಮುತ್ತಲ ಗ್ರಾಮದ ವಧು-ವರರ ಸಾಮೂಹಿಕ ವಿವಾಹ ನೆರವೇರಿಸಲು ರೂಢಿ ಆರಂಭವಾಗಿದ್ದು ವಿಠ್ಠಲ-ರುಕ್ಮಾಯಿ ದೇವಸ್ಥಾನದಲ್ಲಿ ಇಂತಹ ವಿವಾಹಗಳು ನಡೆಯುತ್ತವೆ.

**ವಿವಾಹ ವಿಧಾನ**

ವಾಡಾದ ಎಲ್ಲರೂ ವಿವಾಹದಲ್ಲಿ ಪಾಲ್ಗೊಳ್ಳುತ್ತಾರೆ. ವಿವಾಹ ಸಾಮಾನ್ಯವಾಗಿ ಹೆಣ್ಣಿನ ಮನೆಯಲ್ಲಿಯೇ ನಡೆಯುವುದು ವಾಡಿಕೆ. ಗಂಡಿನ ಕಡೆಯವರು ದಿಬ್ಬಣದೊಂದಿಗೆ ಹೆಣ್ಣಿನ ಮನೆಗೆ ಬರುತ್ತಾರೆ. ಮದುವೆ ಗಂಡು ಹೊಸ ಚಾಪೆಯ ಮೇಲೆ ಕೂಡ್ರುತ್ತಾನೆ. ಹೆಣ್ಣಿಗೆ ಅರಿಷಿಣ ಹಚ್ಚಿ, ಬಾಸಿಂಗ್ ಕಟ್ಟಿ ಕೂಡ್ರಿಸುತ್ತಾರೆ. ಅನಂತರ ವರ ಹೆಣ್ಣಿಗೆ ತಾಳಿ ಕಟ್ಟಿ ಅವರು ಪತಿ-ಪತ್ನಿಯರಾಗುತ್ತಾರೆ. (ತಾನು ಕುಳಿತ ಹೊಸ ಚಾಪೆಯನ್ನು ಗಂಡು ತನ್ನ ಮನೆಗೆ ಒಯ್ಯುತ್ತಾನೆ. ಅದನ್ನು ಗಂಗೆಯಲ್ಲಿ ಮುಳುಗಿಸಿ ಮೀನು ಹಿಡಿದರೆ ಅದು ಫಲವಂತಿಕೆಯ ಸಂಕೇತವೆನ್ನಲಾಗುವುದು).

ಮದುವೆಯಲ್ಲಿ ವಾಡಾದ ಬೀದಿಗಳಲ್ಲಿ ಗಂಡು ಹೆಣ್ಣಿನ ಮೆರವಣಿಗೆ ನಡೆಯುವುದು ನಂತರ ಎಲ್ಲರಿಗೂ ಮಾಂಸದೂಟ ಮಾಡಿಸಲಾಗುವುದು. ದೈವದವರಿಗೆ ಪಾಗೋಟ, ಕಾಯಿ ಹಾಗೂ ಹಣವನ್ನು ಉಡುಗೊರೆಯಾಗಿ ಕೊಡುತ್ತಾರೆ. ನಂತರ ಗಂಡು-ಹೆಣ್ಣು ಒಂದೇ ತಟ್ಟೆಯಲ್ಲಿ ಊಟ ಮಾಡುವರು. ಇಲ್ಲಿಗೆ ವಿವಾಹಶಾಸ್ತ್ರ ಮುಗಿಯುವುದು.

ಹುಡುಗಿ ಮೈನೆರೆದಿದ್ದರೆ ಮದುವೆಯಾದ ದಿನವೇ ಐದು ಜನ ಹೆಣ್ಣಿನ ಕಡೆಯವರು ಅವಳನ್ನು ಗಂಡನ ಮನೆಗೆ ಕಳಿಸುತ್ತಾರೆ. ಅಂದಿನ ರಾತ್ರಿ ದೈವ ಪೂಜೆಯ ನಂತರ ಗಂಡಿನ ಕಡೆಯವರಿಗೆ ಮಾಂಸದೂಟ ಬಡಿಸುತ್ತಾರೆ. ಸಂಪ್ರದಾಯದಂತೆ ಎಲ್ಲರೂ ಕಳ್ಳು (ಕಳ್ಳಭಟ್ಟಿ) ಕುಡಿಯುತ್ತಾರೆ.

ಗಂಡನ ಮನೆಗೆ ಬಂದ ೫ನೇ ದಿನಕ್ಕೆ ಹೆಣ್ಣು ವಾಡಾದ ಇತರ ಸುಮಂಗಲೆಯರೊಂದಿಗೆ ಗಂಗೆಪೂಜೆ ಮಾಡಿ ಭೂಮಿಯ ಮೇಲೆ ಭತ್ತ ಹಾಕಿ ನೀರು ಹೊಯ್ಯುತ್ತಾಳೆ. ಇದು ಫಲವಂತಿಕೆಯ ಆಚರಣೆ. ಅಂದೇ 'ಶೋಭನ' ಕಾರ್ಯಕ್ರಮ ನಡೆಯುತ್ತದೆ. ಗಂಡ ಹೆಂಡತಿಯರನ್ನಷ್ಟೇ ಗುಡಿಸಲಲ್ಲಿ ಬಿಟ್ಟು ಮನೆಯ ಇತರರು ಪಕ್ಕದ ಗುಡಿಸಲುಗಳಲ್ಲಿ ಮಲಗುತ್ತಾರೆ.

೫-೧೦ ದಿನಗಳ ನಂತರ ಹೆಣ್ಣಿನ ಕಡೆಯ ಪಂಚರು ಬಂದು ಅವಳನ್ನು ಕರೆದೊಯ್ಯುತ್ತಾರೆ. ಅವರನ್ನು ಗಂಡಿನವರು ಉಪಚರಿಸಿ ಪಾಗೋಟು ಕೊಟ್ಟು ಕಳಿಸುವರು. ಕೆಲ-ದಿನಗಳ ನಂತರ ಹೆಣ್ಣು ತನ್ನ ಗಂಡನ ಮನೆಗೆ ಬಂದು ಹೊಸ ಸಂಸಾರವನ್ನು ಆರಂಭಿಸುತ್ತಾಳೆ.

**ಸೀರುಡಿಕೆ ವಿಧವಾ ವಿವಾಹ ಇತ್ಯಾದಿ**

ಮೊದಲ ಹೆಂಡತಿ ತೀರಿಕೊಂಡಾಗ ಇನ್ನೊಂದು ವಿವಾಹವಾಗುವುದು ಎಲ್ಲ ಸಮಾಜಗಳಲ್ಲಿಯೂ ಕಂಡು ಬರುವ ಸಾಮಾನ್ಯ ರೂಢಿ. ಗೌಳಿಗರಲ್ಲಿ ವಿಧುರನು ಅವಿವಾಹಿತ-ಹೆಣ್ಣನ್ನು ವಿವಾಹವಾದರೆ ಅದಕ್ಕೆ 'ಬಿಪ್ಯೋರ್' ಎನ್ನುತ್ತಾರೆ. ಇಂಥ ವಿವಾಹದಲ್ಲಿ ಹೆಣ್ಣು ಬಾಸಿಂಗವನ್ನು ಧರಿಸುವುದಿಲ್ಲ. ಮೊದಲ ಹೆಂಡತಿ ಬದುಕಿರುವಾಗಲೇ ಮಕ್ಕಳಾಗಲಿಲ್ಲ ಎಂಬ ಕಾರಣಕ್ಕೆ ಇನ್ನೊಂದು ಹೆಣ್ಣನ್ನು ಮದುವೆಯಾಗುವದನ್ನು 'ಗ್ಯಾಟ್' ಎಂದು ಕರೆಯುವರು. 'ಸೀರುಡಿಕೆ' ಅಥವಾ ವಿಧವಾ ವಿವಾಹದ ರೂಢಿ ಇವರಲ್ಲಿ ಮೊದಲಿನಿಂದಲೂ ಇದೆ.

ಎಲ್ಲ ಪ್ರಕಾರದ ವಿವಾಹಗಳಲ್ಲಿಯೂ ವಾಡಾದ ಹಿರಿಯರು 'ಜಾಂತ್ಯಾಲೋಕ' ಹಾಗೂ ಪೂಜಾರಿಗಳು ಇರಲೇಬೇಕು. ಪೂಜಾರಿ ಆಗಿ 'ಯಡಿಗ್ಯ' ಅಥವಾ 'ಲಾಂಬೋರ್' ಕುಳಿಗೆ ಸೇರಿದವರು ಕಾರ್ಯಕ್ರಮ ನಡೆಸುತ್ತಾರೆ.

'ಸೀರುಡಿಕೆ' ಅಥವಾ ವಿಧವಾ ವಿವಾಹದಲ್ಲಿ ಹೆಣ್ಣಿಗೆ ಅರಿಷಿಣ ಹಚ್ಚುವುದು, ಬಾಸಿಂಗ್ ಕಟ್ಟುವುದು ಇರುವುದಿಲ್ಲ. ಮೊದಲೇ ವಿವಾಹವಾಗಿರದ ಪುರುಷನು ವಿಧವೆಯನ್ನು ವರಿಸುವಂತಿಲ್ಲ. 'ಸೀರುಡಿಕೆ' ಮಾಡಿಕೊಳ್ಳುವವಳು ತನ್ನ ಮೊದಲ ಗಂಡ ಕಟ್ಟಿದ ತಾಳಿ, ಕಾಲುಂಗರ, ಕೈಪಾಟಲಿ, ಮೂಗುತಿ, ನತ್ತು ಬುಗುಡಿ ಇತ್ಯಾದಿಗಳನ್ನು ಮೊದಲ ಗಂಡನ ಸಂಬಂಧಿಕರಿಗೆ ಮರಳಿಸಬೇಕು. ಇಂತಹ ಹೆಣ್ಣಿನ ಒಬ್ಬ ಮುತ್ತೈದೆ ಅರಿಷಿಣ, ಕುಂಕುಮ ಹಚ್ಚಿ ಅವಳನ್ನು ಸುಮಂಗಲೆಯನ್ನಾಗಿ ಮಾಡುತ್ತಾರೆ. ಗಂಡು ತಿರಸ್ಕರಿಸಿದ ಹೆಣ್ಣನ್ನು ವಿಧುರ ವಿವಾಹವಾದಾಗಲೂ ಇದೇ ವಿಧಾನ ಅನುಸರಿಸಬೇಕಾಗುತ್ತದೆ. ಇಲ್ಲಿಯೂ ಕೂಡಾ ಹೆಣ್ಣು ತಾಳಿಯನ್ನು ಕಟ್ಟಿಸಿಕೊಳ್ಳುತ್ತಾಳೆ.

ಪುರುಷ ಅಥವಾ ಸ್ತ್ರೀಯ ವ್ಯಭಿಚಾರ, ಪುರುಷನ ನಪುಸಂಕತ್ವ, ಹೆಂಡತಿಯ ಬಂಜೆತನ ಇತ್ಯಾದಿ ಕಾರಣಗಳಿಂದ ವೈವಾಹಿಕ ಜೀವನದಲ್ಲಿ ವಿರಸ ಉಂಟಾದರೆ ಅಂತಹ ಗಂಡ-ಹೆಂಡತಿ ವಿವಾಹ ಬಂಧನದಿಂದ ಬೇರೆಯಾಗಲು ವಾಡಾದ ಹಿರಿಯರು ಒಪ್ಪಿಗೆ ನೀಡುವರು. ಕೆಲಮೊಮ್ಮೆ ವಾಡಾದ ಹುಡುಗ ಹುಡುಗಿ ತಮ್ಮಲ್ಲಿಯೇ ಒಪ್ಪಂದ ಮಾಡಿಕೊಂಡು ಕಾಡಿಗೆ ಹೋಗಿ ಸಂಸಾರ ಆರಂಭಿಸಿದಾಗ ಹಿರಿಯರು ಅವರನ್ನು ವಾಡಾಕ್ಕೆ ಕರೆ ತಂದು ವಿವಾಹ ಮಾಡುತ್ತಾರೆ.

**ಸೀಮಂತ ಕಾರಣ**

ಹೆಣ್ಣಿಗೆ ಮದುವೆ ಎಷ್ಟು ಮುಖ್ಯವೋ ಹಾಗೆಯೇ ತಾಯ್ತನದ ಹಿರಿಮೆ ಕೂಡ ಅಷ್ಟೇ ಮುಖ್ಯ ಎಂದು ಬಲವಾಗಿ ನಂಬಿದ ಇವರು ಹೆಣ್ಣು ಬಸುರಿಯಾದಾಗ ತಾಯಿ ಒಡಲಲ್ಲಿದ್ದ ಮಗುವಿನ ಸಂರಕ್ಷಣೆಗಾಗಿ ಅನೇಕ ವಿಧಾನಗಳನ್ನು ಆಚರಿಸುವುದಲ್ಲದೇ ಸಂಭ್ರಮದ ಸಂಕೇತವಾಗಿ ಸೀಮಂತತನದ ಉತ್ಸವ ಕೈಗೊಳ್ಳುತ್ತಾರೆ. ವಾಸ್ತವಾಗಿ ಹೆಣ್ಣು ಋತುಮತಿಯಾದಾಗ ಇದ್ದ ನಾಚಿಕೆ, ಅಂಜಿಕೆ ಮತ್ತು ಸಂಭ್ರಮ, ಅವಳು ಗರ್ಭಿಣಿಯಾದ ಸಂದರ್ಭದಲ್ಲಿ ಇಮ್ಮಡಿಯಾಗುವದರಿಂದ, ಗರ್ಭಿಣಿ ಸ್ತ್ರೀಗೆ ನಡೆಸುವ ಆಚರಣೆಗಳು ಹಾಗೂ ಉಪಚಾರಗಳು ವಿಶಿಷ್ಟವಾಗಿವೆ.

ಸಾಮಾನ್ಯವಾಗಿ ಗರ್ಭಿಣಿಯಾದ ೮ನೇ ತಿಂಗಳಿನಲ್ಲಿ ಗಂಡನ ಮನೆಯಲ್ಲಿ ಸೀಮಂತ ಕಾರ್ಯ ನಡೆಯುತ್ತದೆ. ಮಡಿಲು ತುಂಬುವ ಪರಿಕರಗಳು ಬೆಲ್ಲ, ಬಾಳೆಹಣ್ಣು, ಅರಿಷಿಣ, ಕುಂಕುಮ, ರವಿಕೆ, ಎಲೆ–ಅಡಿಕೆ ತೆಂಗಿನಕಾಯಿ ಮುಂತಾದ ಮಂಗಲ ದ್ರವ್ಯಗಳನ್ನು ಗಂಡನ ಕಡೆಯವರು ಸಂತಾನವನ್ನು ನಿರೀಕ್ಷಿಸುತ್ತ ಗರ್ಭಿಣಿಗೆ ಅರ್ಪಿಸುತ್ತಾರೆ. ಇವೆಲ್ಲವು ಸಾಂಸ್ಕೃತಿಕವಾಗಿ ಮಹತ್ವ ಪಡೆಯುತ್ತವೆ. ಸೀಮಂತದ ಮರುದಿನ ಅವಳ ಓರೆಗೆಯವರೊಂದಿಗೆ ಕೂಡ್ರಿಸಿ ಅಣಿಗೊಳಿಸಿದ ಅವಳ ಬಯಕೆಯ ಊಟವನ್ನು ಮಾಡಿಸುತ್ತಾರೆ. ಅಷ್ಟೇ ಅಲ್ಲ ಗರ್ಭಿಣಿಯ ಆಶೆ, ಬಯಕೆಗಳನ್ನು ಈಡೇರಿಸುತ್ತಾರೆ. (ಹೆಣ್ಣು ಗರ್ಭಿಣಿಯಾದ ೭ನೇ ತಿಂಗಳಿನಲ್ಲಿ ಬಯಕೆ ತೀರಿಸುವ ಶಾಸ್ತ್ರವುಂಟು, ಬಸುರಿಯ ಬಯಕೆಯನ್ನು ಈಡೇರಿಸುವುದರ ಮೂಲಕ ಫಲವಂತಿಕೆಯನ್ನು ಕಾಪಾಡುವ ಕೆಲಸ ಮಾಡಲಾಗುತ್ತದೆ. ಗರ್ಭಿಣಿಯ ಆರೈಕೆಯನ್ನು ತವರು ಮನೆಯವರು ಬಹು ಹುಷಾರಾಗಿ ನೋಡಿಕೊಳ್ಳುತ್ತಾರೆ. ಇದು ನೇರವಾಗಿ ತಾಯಿಯ ಜವಾಬ್ದಾರಿ.

ಗರ್ಭಿಣಿಯ ಬಯಕೆಗಳನ್ನು ಈಡೇರಿಸದಿದ್ದರೆ ಮಗು ಅಂಗವಿಕಲವಾಗುವದು ಎಂಬ ನಂಬಿಕೆ ಹಾಗೂ ಹೆರಿಗೆ ಎಂಬುದು ಸಾವಿನ ದವಡೆಯಿಂದ ಪುನರ್ ಜನ್ಮ ಪಡೆದಂತೆ ಎನ್ನುವ ನಂಬಿಕೆಗಳ ಹಿನ್ನೆಲೆಯಲ್ಲಿ ಅವರು ನಡೆಸುವ ಆಚರಣೆ ಮತ್ತು ಉಪಚಾರಗಳು ತುಂಬಾ ಸೂಕ್ತವೆನಿಸುತ್ತವೆ.

**೩.೪.೩. ಮಹತ್ವದ ಸಾಮಾಜಿಕ ಆಚರಣೆ ಹಾಗೂ ನಂಬಿಕೆಗಳು**

ಪ್ರತಿಯೊಂದು ಸಾಮಾಜಿಕ ವ್ಯವಸ್ಥೆಯಲ್ಲಿ ಕೆಲವೊಂದು ಆಚರಣೆ ನಂಬಿಕೆಗಳು ಯಾವುದೋ ಒಂದು ಸಮಯದಲ್ಲಿ ಹುಟ್ಟಿಕೊಂಡು ಕ್ರಮೇಣವಾಗಿ ಸ್ತಿರಗೊಳ್ಳುತ್ತವೆ. ಕೆಲವೊಮ್ಮೆ ಇಂತಹ ಆಚರಣೆಗಳ ಪ್ರಸ್ತುತತೆಯನ್ನು ನಾವು ಪ್ರಶ್ನಿಸಿದರೆ ಅದಕ್ಕೆ ಸಮಂಜಸ ಉತ್ತರ ಸಿಗಲಿಕ್ಕಿಲ್ಲ. ಹಿರಿಯರು ಮಾಡುತ್ತಿದ್ದರು ಎಂಬ ಕಾರಣಕ್ಕೆ ನಾವು ಕೂಡಾ ಮಾಡುತ್ತೇವೆ ಎಂಬ ಉತ್ತರವೇ ಹೆಚ್ಚಾಗಿ ದೊರಕುತ್ತದೆ. ಆದರೆ ಇತಿಹಾಸದಲ್ಲಿ ಹೂತು ಹೋದ ಇಂತಹ ಆಚರಣೆಯ ವೈಜ್ಞಾನಿಕ ಮಹತ್ವವನ್ನು ನಾವು ಸಂಪೂರ್ಣವಾಗಿ ನಿರಾಕರಿಸಲು ಬರುವುದಿಲ್ಲ.

ಯಾವುದೇ ಸಮೂಹದ ಆಚರಣೆಗಳಲ್ಲಿ ಜನನ ಹಾಗೂ ಮರಣ ಇವುಗಳಿಗೆ ಸಂಬಂಧಿಸಿದ ಆಚರಣೆಗಳು ಬಹು ಮಹತ್ವದ ಸ್ಥಾನ ಪಡೆಯುತ್ತವೆ ಎಂಬುದು ಎಲ್ಲ ಸಮೂಹಗಳಿಗೂ ಅನ್ವಯಿಸುತ್ತದೆ. ಜನನದಿಂದ ಬುಡಕಟ್ಟಿಗೆ ಇನ್ನೊಬ್ಬ ಸದಸ್ಯ ದೊರಕಿದ ಎಂಬ ಸಂತಸವಾದರೆ, ಮರಣದಿಂದ ಒಬ್ಬ ಸದಸ್ಯನನ್ನು ಕಳೆದುಕೊಂಡ ದುಃಖ ಉಂಟಾಗುತ್ತದೆ. ಈ ರೀತಿಯಲ್ಲಿ ಜನನ ಮರಣದ ಚಕ್ರ ಬುಡಕಟ್ಟಿನ ಚಲನಶೀಲತೆಯ ಒಂದು ಪ್ರಮುಖ ಅಂಗವಾಗಿದೆ.

**ಜನನ ಸಂಸ್ಕಾರ**

ಯಾವುದೇ ಸಮಾಜದಲ್ಲಿ ಜನನ ಹಾಗೂ ಮರಣಗಳು ಪ್ರಮುಖವಾದ ಆಚರಣೆಗಳಿಗೆ ಕಾರಣವಾಗುತ್ತವೆ. ಮಗುವಿನ ಜನನದ ನಂತರ ಸೂತಕದ ಸಮಯದಲ್ಲಿ ಸ್ತ್ರೀ ಯಾವುದೇ ಮಂಗಳಕಾರ್ಯದಲ್ಲಿ ಪಾಲ್ಗೊಳ್ಳುವದಿಲ್ಲ. ಅವಳಿಗೆ ೮ ತಿಂಗಳು ೫ ದಿನಗಳಾದ ನಂತರ ತವರು

ಮನೆಗೆ ತಂದೆ-ತಾಯಿಗಳು ಬಂದು ಕರೆದೊಯ್ಯುತ್ತಾರೆ. ವಾಡಾದ ಪಂಚರ ಪೂಜೆ ನಿರ್ವಹಿಸಿ ಗರ್ಭಿಣಿ ಆಶೀರ್ವಾದ ಪಡೆಯುತ್ತಾಳೆ. ಅವಳ ಜೊತೆ ಮೊಸರನ್ನದ ಬುತ್ತಿ ಉಡಿ ತುಂಬಿ ಕಳುಹಿಸುತ್ತಾರೆ.

ಚೊಚ್ಚಲ ಹೆರಿಗೆ ಹೆಣ್ಣಿನ ತವರು ಮನೆಯಲ್ಲಿಯೇ ನಡೆಯುವುದು ಸಾಮಾನ್ಯ. ಹೆರಿಗೆ ಸಮಯಕ್ಕೆ ಪ್ರತ್ಯೇಕ ಗುಡಿಸಲುಗಳನ್ನು ಗರ್ಭಿಣಿಗಾಗಿ ಸಜ್ಜು ಮಾಡುತ್ತಾರೆ. ಅವಳ ಸ್ನಾನಕ್ಕೊಸ್ಕರವಾಗಿ ಬಿಸಿ-ಬಿಸಿ ನೀರಿನ ವ್ಯವಸ್ಥೆ ಪ್ರತ್ಯೇಕವಾಗಿಯೇ ಮಾಡುತ್ತಾರೆ. ವಾಸ್ತವವಾಗಿ ಹೆರಿಗೆ ಹೆಣ್ಣಿನ ಜೀವನದಲ್ಲಿ ಬಹು ಆತಂಕಕಾರಿಯಾದ ಘಟ್ಟ ಅದಕ್ಕಾಗಿಯೇ ವಿಶೇಷ ಎಚ್ಚರ. ಹೆರಿಗೆ ಸುಲಭವಾಗಿ ಆಗಲು ಇವರು ಕಂಡುಕೊಂಡ ವಿಧಾನಗಳು ಸರಳವಾದವು. ದಿನ ತುಂಬುವ ಮೊದಲೇ ೭ ಅಥವಾ ೮ ನೇ ತಿಂಗಳಲ್ಲಿ ಹೆರಿಗೆ ನೋವು ಕಾಣಿಸಿಕೊಂಡರೆ ಹೊನ್ನೆಮರದ ತೋಟೆಯ ರಸ ಅಥವಾ ಜೀರಿಗೆ ಪುಡಿಯ ಕಷಾಯ ಕುಡಿಸುವರು. ಹೆರಿಗೆಯ ಸಮಯದಲ್ಲಿ ಬಾಣಗಿತ್ತಿಯನ್ನು ತರುತ್ತಾರೆ. (ಇತ್ತೀಚೆಗೆ ಸರಕಾರಿ ವಾಹನ ಸೌಲಭ್ಯವಿರುವುದರಿಂದ ಸಮೀಪದ ಪಟ್ಟಣದ ಸರಕಾರಿ ಆಸ್ಪತ್ರೆಗೆ ಹೋಗುವ ರೂಢಿ ಬೀಳುತ್ತಲಿದೆ) ಒಳ್ಳೆಣ್ಣೆ ಹಾಗೂ ಬಾಳೆಗಿಡದ ಬೇರನ್ನು ಹುರಿದು ಮಾಡಿದ ರಸವನ್ನು ಕುಡಿಯಲು ಕೊಡುತ್ತಾರೆ. ಹೆರಿಗೆ ನಂತರ ಮಾಂಸವನ್ನು ಪ್ರಾಣಿ ಪಕ್ಷಿಗಳಿಂದ ಸುರಕ್ಷಿತವಾಗಿರುವಂತೆ ಒಂದು ಗಡಿಗೆಯಲ್ಲಿ ತುಂಬಿ ಭೂಮಿಯಲ್ಲಿ ಹೂಳುತ್ತಾರೆ.

**ಹೆರಿಗೆ ಸೂತಕ**

ಸೂತಕ ಮುಟ್ಟು ಮೈಲಿಗೆಗಳಿಗೆ ಮಹತ್ವವಿದ್ದು, ಹೆರಿಗೆ ನಂತರ ೫ ದಿನಗಳವರೆಗೆ ಬಾಣಂತಿಯಾಗಲಿ ಅಥವಾ ಬಾಣಗಿತ್ತಿಯಾಗಲಿ ಯಾರನ್ನೂ ಮುಟ್ಟುವಂತಿಲ್ಲ. ವಾಸದ ಗುಡಿಸಲೊಳಗೆ ಪ್ರವೇಶಿಸುವಂತಿಲ್ಲ. ಮನೆದೇವರನ್ನು ಮುಟ್ಟುವಂತಿಲ್ಲ, ಅಡುಗೆ ಮಾಡುವಂತಿಲ್ಲ.

ಗೌಳಿಗರಲ್ಲಿ ಸತ್ತ ಸೂತಕಕ್ಕಿಂತ ಹೆತ್ತ ಸೂತಕಕ್ಕೆ ಹೆಚ್ಚು ಮಹತ್ವವಿದೆ. ಸಾಮಾನ್ಯವಾಗಿ ಹೆತ್ತ ಸೂತಕ ಹೆಚ್ಚು ಅನ್ವಯಗೊಳ್ಳುವದು ತವರಿನವರಿಗೆ, ಹೆರಿಗೆಯಾದ ಮೇಲೆ ಮಗುವಿನ ತಾಯಿ ೧೨ ದಿನಗಳವರೆಗೆ ಅಶುದ್ಧಳು ಎಂದು ಗೌಳಿಗರ ನಂಬಿಕೆ. ಆದುದರಿಂದ ಅವಳಿಗೆ ೫ ವಾರಗಳವರೆಗೆ ಅಡುಗೆ ಮನೆ ಪ್ರವೇಶಿಸಲು ಅವಕಾಶವಿರುವುದಿಲ್ಲ. ಮಗು ಹುಟ್ಟಿದ ಐದು, ಒಂಭತ್ತು, ಹಾಗೂ ಹನ್ನೊಂದನೆಯ ದಿನಗಳಲ್ಲಿ ಸೂತಕ ನಿವಾರಣೆ ವಿಧಿಗಳು ಜರುಗುವುದು ರೂಢಿ. ಫಲವಂತಿಕೆಯಲ್ಲಿ ಈ ಶುದ್ಧೀಕರಣಕ್ಕೆ ಹೆಚ್ಚು ಪ್ರಾಶಸ್ತ್ಯವಿದೆ.

೬ನೇ ದಿನ ಸೂತಕ ನಿವಾರಣೆ ಅಂಗವಾಗಿ ಬಾಣಂತಿ ಮಗುವಿಗೆ ಸ್ನಾನ ಪೂಜೆ ಮಾಡಿಸಿ ಸಂಬಂಧಿಗಳಿಗೆ ಊಟ ಹಾಕುತ್ತಾರೆ. ದೇವರಿಗೆ ಪೂಜೆ ಮಾಡಿ ಆಕಳಿಗೆ ಎಡೆ ಹಿಡಿಯುವುದು ಸಾಮಾನ್ಯ. ಸೂಲಗಿತ್ತಿಗೆ ಹೊಸ ಸೀರೆ ಕೊಡುತ್ತಾರೆ. ಸೂತಕದ ಸಮಯದಲ್ಲಿ ಬಾಣಂತಿಗೆ ಅನ್ವಯವಾಗುವ ಎಲ್ಲ ನಿಯಮಗಳು ಸೂಲಗಿತ್ತಿಗೂ ಅನ್ವಯವಾಗುತ್ತವೆ. ೫ನೇ ದಿನಗಳವರೆಗೆ ಮಗುವನ್ನು ಬಿದಿರ ಬುಟ್ಟಿಯಲ್ಲಿ ಅಥವಾ ಮರದಲ್ಲಿ ಇಡುವ ಪದ್ಧತಿಯಿದೆ.

೬ನೇ ದಿನ ವಾಡಾದ ಪೂಜಾರಿಯಿಂದ ಪೂಜಾ ಮಾಡಿಸಿ ಬಾಣಂತಿ, ಮಗುವಿಗೆ ವಿಶೇಷ ಸ್ನಾನ ಮಾಡಿಸಿ ಮನೆಯೊಳಗೆ ಸೇರಿಸಿಕೊಳ್ಳುತ್ತಾರೆ. ಹಿರಿಯರನ್ನು ಸಂತೆಗೆ ಕರೆದೊಯ್ದು ಉಪಚರಿಸುವುದು, ಗುಡಿಸಲನ್ನು ಶುಚಿಗೊಳಿಸುವುದು ಇತ್ಯಾದಿ ಕಾರ್ಯಗಳ ಖರ್ಚು ವೆಚ್ಚವನ್ನು ಬಾಣಂತಿ ಮನೆಯವರೇ ವಹಿಸಬೇಕು. ಹೆರಿಗೆ ದಿನ ನೋವು ಕಡಿಮೆ ಆಗಲಿ ಎಂದು ಉತ್ತೇಜಿಸಲು ಬಾಣಂತಿಗೆ ಮಧ್ಯಪಾನ ಮಾಡಿಸುತ್ತಾರೆ. ಕೆಲವು ದಿನಗಳವರೆಗೆ ಅವಳಿಗೆ ಸಿಹಿ ತಿನಿಸು ಹಾಗೂ ಪೌಷ್ಟಿಕ ಆಹಾರ ಪೂರೈಸುವರು.

**ನಾಮಕರಣ**

ಮಗುವಿನ ಜನನದ ೧೨ನೇ ದಿನ ನಾಮಕರಣ ಮಾಡುತ್ತಾರೆ. ತೊಟ್ಟಿಲ ಹಬ್ಬವನ್ನು ಬಹು ಸಂಭ್ರಮದಿಂದ ಆಚರಿಸುತ್ತಾರೆ. ಮಗು ಹೆಣ್ಣಾಗಲಿ-ಗಂಡಾಗಲಿ ಕಾಯಿ ಬೆಲ್ಲ ಹಂಚುವರು. ತೊಟ್ಟಿಲು ತೊಳೆದು ಲೋಬಾನ ಹಾಕುವುದು, ಮಗು ತಾಯಿಗೆ ಹೊಸ ಉಡಿಗೆ ತೊಡಿಸುವುದು ರೂಢಿ. ಮಗು ಹುಟ್ಟಿದ ೧೧ ನೇ ದಿನಕ್ಕೆ ಗಂಡನ ಮನೆಯಿಂದ ಬಾಣಂತಿಯ ಆರೈಕೆಗೆ ಅಗತ್ಯವಾದ ಎಲ್ಲ ಸಾಮಗ್ರಿಗಳನ್ನು ತಂದು ಕೊಡುತ್ತಾರೆ. ಆ ಸಂದರ್ಭದಲ್ಲಿ ಅಜ್ಜ, ಅಜ್ಜಿ, ಅಣ್ಣ, ಅತ್ತಿಗೆ ಮುಂತಾಗಿ ಒಂಭತ್ತು ಮಂದಿ ಬರುವುದು ವಾಡಿಕೆ.

ಮಗುವಿನ ನಾಮಕರಣ ಸಂದರ್ಭದಲ್ಲಿ ಕಡಲೆ, ಅಲಸಂದಿ, ಹೆಸರು ಕಾಳು, ಹುರುಳಿ, ಅಕ್ಕಿ ಮುಂತಾದ ೫ ಧಾನ್ಯಗಳಿಗೆ ಬಾಣಂತಿಯ ಕೈಯಿಂದ ನೀರು ಚಿಮುಕಿಸುವ ಶಾಸ್ತ್ರ ಮಾಡಿಸುತ್ತಾರೆ. ಆ ಕಾಳುಗಳ ಮೊಳಕೆ ಬರಲು ಬಿಟ್ಟು, ನಂತರ ಆಕಳಿಗೆ ಕೊಡುತ್ತಾರೆ.

ತೊಟ್ಟಿಲಿಗೆ ಹಾಕುವ ದಿನ ಬಾಣಂತಿ ನದಿಯ ನೀರನ್ನು ತಂದು ಗಂಗಾಪೂಜೆಯನ್ನು ಮಾಡಬೇಕು. ವಿಠೋಬಾ ದೇವರಿಗೆ ಮಗುವನ್ನು ಪಕ್ಕದಲ್ಲಿ ಮಲಗಿಸಿ ಪೂಜೆ ಮಾಡಿ ನೈವೇದ್ಯ ಮಾಡುತ್ತಾರೆ. ಪೂಜಾರಿ ಹಾಗೂ ಅಜ್ಜ-ಅಜ್ಜಿಯವರ ಸಮ್ಮುಖದಲ್ಲಿ ಮಗುವನ್ನು ತೊಟ್ಟಿಲಿಗೆ ಹಾಕುವ ಶಾಸ್ತ್ರವನ್ನು ಮಾಡುತ್ತಾರೆ. ಈ ತೊಟ್ಟಿಲು ಹೊಸದಾಗಿರಬೇಕು. ಅಥವಾ ಮನೆಯದಾಗಿರಬೇಕು. ಆದರೆ ಬೇರೆ ಮನೆಯದಾಗಿರಬಾರದು. ಅಜ್ಜ-ಅಜ್ಜಿಯರು ಮಗುವಿಗೆ ತಮ್ಮ ಹಿರಿಯರ ಹೆಸರು ಇಡುವುದು ರೂಢಿ. ಅವರಿಲ್ಲದಾಗ ಕುಟುಂಬದವರು ಯಾವುದೋ ಒಂದು ಹೆಸರನ್ನು ಇಡುತ್ತಾರೆ. ಮರದಲ್ಲಿದ್ದ ಮಗುವನ್ನು ಹೊರ ತೆಗೆದು ಅದಕ್ಕೆ ಎಣ್ಣೆ ದೀಪ ತೋರಿಸಿ ಸುಮಂಗಲೆಯರು ತೊಟ್ಟಿಲಿಗೆ ಹಾಕುತ್ತಾರೆ. ನಾಮಕರಣ ಸಂದರ್ಭದಲ್ಲಿ ಸುಮಂಗಲೆಯರು ಆರತಿ ಬೆಳಗಿ ಜೋಗುಳ ಹಾಡುತ್ತಾರೆ. ಸತ್ತ ಹಿರಿಯರ ಹೆಸರಿಟ್ಟರೆ ಅವರು ಪುನರ್‌ಜನ್ಮ ಪಡೆದಿದ್ದಾರೆ ಎಂಬ ನಂಬಿಕೆಯಿದೆ.

ಹಿರಿಯರ ಹೆಸರಿಡುವ ಮೊದಲು ವಾಡಾದ ಪೂಜಾರಿಯ ಅನುಮತಿ ಪಡೆಯಬೇಕು. ತೊಟ್ಟಿಲು ಶಾಸ್ತ್ರದ ದಿನ ಸೋದರ ಮಾವ ತೊಟ್ಟಿಲಿಗೆ ಹಗ್ಗ ಕಟ್ಟಿ ಕೊಡಬೇಕು. ಮಗುವಿನ ತಂದೆ ಸೋದರ ಮಾವನ ತಲೆಗೆ ಪಾಗೋಡ ಕಟ್ಟಿ ಗೌರವಿಸುತ್ತಾನೆ. ನಾಮಕರಣದ ಅಂಗವಾಗಿ ಅಂದು ವಾಡಾದ ಸಮಸ್ತರಿಗೂ ಸಿಹಿಯೂಟ ಇರುತ್ತದೆ.

ಮಗುವಿಗೆ ನಾಮಕರಣ/ತೊಟ್ಟಿಲಿಗೆ ಹಾಕುವ ಕಾರ್ಯದಲ್ಲಿ ವಾಡಾದ ಪೂಜಾರಿ (ಯಡಿಗ್ಯ ಇಲ್ಲವೆ ಲಾಂಬೂರ್) ಉಪಸ್ಥಿತರಿರಲೇಬೇಕು. ವಾಡಾದ ಐದು ದೈವದವರ ಕುಟುಂಬದ

ಸುಮಂಗಲೆಯರೂ ಉಪಸ್ಥಿತರಿರಬೇಕು. ಮಗುವಿನ ಜನನದ ನಂತರ ಪಂಚಿ ದೇವತೆ ಆರಾಧನೆ ಮಾಡುವುದು ವಿಶೇಷ. ೧೨ ನೇ ದಿನ ಹೆಸರಿಡುವುದು ಹಾಗೂ ೩ ವರ್ಷ ತುಂಬುವುದಕ್ಕೆ ಮೊದಲು ಈ ದೇವತೆಯ ಮುಂದೆ ತಲೆಕೂದಲನ್ನು ಕತ್ತರಿಸಲಾಗುವುದು. ಈ ಸಂದರ್ಭದಲ್ಲಿ ಕುರಿ ಬಲಿ ಕೊಡುತ್ತಾರೆ. ಮಗುವಿಗೆ ತಮ್ಮ ಅಥವಾ ತಂಗಿ ಹುಟ್ಟುವವರೆಗೆ ಕೂದಲನ್ನು ಕತ್ತರಿಸುವುದಿಲ್ಲ. ೭ ಅಥವಾ ೮ ವರ್ಷದ ನಂತರ ಜುಟ್ಟು ತೆಗೆಸುತ್ತಾರೆ. ಆದರೆ ಈ ಮೊದಲು ೧ ವರ್ಷ ತುಂಬಿದಾಗ 'ಜವುಳ' ತೆಗೆಯುತ್ತಾರೆ. ಇದರಲ್ಲಿ ತಾಯಿಯ ತಮ್ಮ ನೆಪಕ್ಕೆ ಮಾತ್ರ ಎರಡು ಕೂದಲು ತೆಗೆಯುತ್ತಾನೆ. ಇದಕ್ಕೆ "ಧೂದಾತಲೆಭಾತ್" (ಹಾಲನ್ನ) ಎಂಬ ವಿಶೇಷ ಅಡಿಗೆ ತಯಾರಿಸಿ ಅವನಿಗೆ ಉಣಿಸುತ್ತಾರೆ. ಕೆಲವು ವಾಡಾಗಳಲ್ಲಿ ಮೂರು ವರ್ಷ ತುಂಬಿದ ಮೇಲೆ ಎರಡನೇ ಜವಳ ತೆಗೆಸುವುದುಂಟು ಕೂದಲು ಬೋಳಿಸಿದ ೨ ನೇ ವಾರಕ್ಕೆ ಕಿವಿ, ಮೂಗು ಚುಚ್ಚುವ ಶಾಸ್ತ್ರ ನೆರವೇರುತ್ತದೆ.

**ಮರಣ ಸಂಸ್ಕಾರ**

ಮರಣ ಮಾನವ ಜೀವನದ ಕೊನೆಯ ಘಟ್ಟ. ವ್ಯಕ್ತಿ ತನ್ನ ಜೀವನದಲ್ಲಿ ಗಳಿಸಿದ ಪಾಪ ಪುಣ್ಯಗಳ ಆಧಾರದ ಮೇಲೆ ಆತನಿಗೆ ಸ್ವರ್ಗ ಅಥವಾ ನರಕ ಸಿಗುವ ನಂಬಿಕೆ ಇತರ ಹಿಂದೂಗಳಲ್ಲಿ ಇರುವಂತೆ ಗೌಳಿಗರಲ್ಲಿಯೂ ಇದೆ.

ಸಾವನ್ನು ಕ್ರಿಯಾ ಸಮಾಧಿ ಎಂದು ಕರೆಯಲಾಗುತ್ತದೆ. ಸತ್ತವರನ್ನು ಹೂಳುವ, ಮತ್ತು ಸುಡುವ ಎರಡು ಪದ್ಧತಿಗಳು ಇವರಲ್ಲಿವೆ. ಮುಟ್ಟಾದ ಸ್ತ್ರೀ ಮರಣ ಹೊಂದಿದರೆ, ಗರ್ಭಿಣಿ ಸ್ತ್ರೀ, ಬಾಣಂತಿ ಸ್ತ್ರೀ ಮರಣ ಹೊಂದಿದರೆ ಅವರನ್ನು ಸಾಮಾನ್ಯವಾಗಿ ಮಣ್ಣು ಮಾಡುತ್ತಾರೆ. ಕ್ಷಯ ರೋಗ ಅಥವಾ ತೊನ್ನಿನ ರೋಗಕ್ಕೆ ಬಲಿಯಾಗಿದ್ದರೆ ಅವರ ಪ್ರಾರ್ಥಿವ ಶರೀರವನ್ನು ಸುಟ್ಟು ಬೂದಿಯನ್ನು ನದಿಯಲ್ಲಿ ತೇಲಿ ಬಿಡುತ್ತಾರೆ.

ಒಬ್ಬ ವ್ಯಕ್ತಿ ಸಾವಿನ ಸಮೀಪ ಇದ್ದಾನೆ ಎಂದು ಗೊತ್ತಾದರೆ ಅಕ್ಕ ಪಕ್ಕದ ಮನೆಯ ಗೌಳಿಗರು ಪರಸ್ಪರ ಸಹಾಯಕ್ಕೆ ಧಾವಿಸುವರು. ವ್ಯಕ್ತಿ ಜೀವ ಬಿಡುವ ಸಂದರ್ಭದಲ್ಲಿ ಅಲ್ಲಿರುವ ಪ್ರತಿಯೊಬ್ಬ ವ್ಯಕ್ತಿ ನೀರು, ಹಾಲು, ಮೊಸರು ಕುಡಿಸುವ ಸಂಪ್ರದಾಯ.

ಪ್ರಾರ್ಥಿವ ಶರೀರವನ್ನು ಗೌಳಿಗರು ಬಹಳ ಹೊತ್ತು ಇಟ್ಟುಕೊಳ್ಳುವುದಿಲ್ಲ. ಏಕೆಂದರೆ ಅಂತ್ಯ ಸಂಸ್ಕಾರದವರೆಗೂ ಯಾರ ಮನೆಯಲ್ಲೂ ಒಲೆ ಹಚ್ಚಲು ಬರುವುದಿಲ್ಲ. ಮೃತನ ಶವಕ್ಕೆ ಹಿರಿಯ ಮಗ ಬೆಣ್ಣೆ ಲೇಪಿಸಿ ಸ್ನಾನ ಮಾಡಿಸುತ್ತಾನೆ. ಸಂಸ್ಕಾರಕ್ಕೆ ಮೊದಲು ಶವದ ಹಣೆಗೆ ಅರಿಸಿಣ, ಕುಂಕುಮ ಲೇಪಿಸಿ ಪೂಜೆ ಮಾಡುತ್ತಾರೆ. ಸಂಸ್ಕಾರಕ್ಕೆ ಬಂದವರೆಲ್ಲಾ ಈ ಪೂಜೆಯಲ್ಲಿ ಪಾಲ್ಗೊಳ್ಳುವರು. ರಾತ್ರಿ ಮರಣ ಹೊಂದಿದರೆ, ಮೃತನ ಮನೆಯ ಮುಂದೆಯೇ ಬೆಂಕಿ ಹಾಕಿ ಶವವನ್ನು ಕಾಯುತ್ತಾರೆ. ಶವಕ್ಕೆ ಬಿಸಿ ನೀರಿನ ಸ್ನಾನ ಮಾಡಿಸುವರು. ಮನೆಯ ಹೆಣ್ಣು ಮಕ್ಕಳು ತಲೆಗೆ ಎಣ್ಣೆ, ಬೆಣ್ಣೆ, ಲೇಪಿಸಿ ನೀರುಣಿಸಿದ ನಂತರ ನೆರೆದ ಜನರು ನೀರುಣಿಸುವ ಕ್ರಮವಿದೆ. ಆಗ ಹಿರಿಯ ಮಗ ಒಂದು ಗಡಿಗೆಯನ್ನು ನೆಲಕ್ಕೆ ಅಪ್ಪಳಿಸಿ ಒಡೆಯುತ್ತಾನೆ. ಗಡಿಗೆ ಒಡೆದು ಪುಡಿಯಾದ ನಂತರ ನೆರೆದ ಜನರೆಲ್ಲಾ ಜೋರಾಗಿ ಅಳಲು ಪ್ರಾರಂಭಿಸುತ್ತಾರೆ.

ಶವದ ತಲೆಗೆ ರುಮಾಲು ಸುತ್ತಿ ಗೂಟಕ್ಕೆ ಬಡಿದು ಕೂಡಿಸುತ್ತಾರೆ. ತಲೆಗೆ ಮೊಸರು ಎಣ್ಣೆ ಹಾಕಿ, ಕುಂಕುಮ ಹಚ್ಚಿ ಊದಿನಕಡ್ಡಿ ಬೆಳಗುವರು. ಶವವನ್ನು ಚಟ್ಟದ ಮೇಲೆ ಮಲಗಿಸಿ ತೆಗೆದುಕೊಂಡು ಹೋಗುತ್ತಾರೆ. ಶವಕ್ಕೆ ಬೇರೆ ಬೇರೆ ಕುಳಿಯ ಜನರು ಬಂದು ಪೂಜೆ ಮಾಡುವ ರೂಢಿ ಇದೆ. ಸಿದಗಿಯ ಮೇಲೆ ಇರುವ ತಲೆ ಗುಡಿಸಲಿನ ಕಡೆ, ಕಾಲು ಕಾಡಿನ ಕಡೆ ಇರುವ ಹಾಗೆ ಇಡುತ್ತಾರೆ. ಸಿದಗಿಯನ್ನು ಅತ್ತಿ ಮರದ ಬುಡದಲ್ಲಿ ಕಲ್ಲನ್ನು ಸ್ಥಾಪಿಸಿ ನೀರು ಬಿಡುವ ಶಾಸ್ತ್ರ ಮಾಡುತ್ತಾರೆ. ಇದಕ್ಕೆ ಕೂಳು, ನೀರು ಬಿಡುವುದು ಎನ್ನುತ್ತಾರೆ. ಶವವನ್ನು ಹೂಳುವಾಗ ಪೂರ್ವಕ್ಕೆ ತಲೆ ಮಾಡಿ ಮಲಗಿಸಿ ಮಣ್ಣು ಎಳೆದು ಸಮಾಧಿ ಮಾಡುವರು.

ಒಂದು ವೇಳೆ ಶವವನ್ನು ಸುಡುವುದಾದರೆ ಎಲ್ಲ ಸಂಬಂಧಿಕರು ಸುಡುಗಾಡಿನಲ್ಲಿ ಸವದೆ ಹಾಕಿ ಪಶ್ಚಿಮಕ್ಕೆ ಶವದ ತಲೆ ಮಾಡಿ, ದಹನ ಕ್ರಿಯೆ ಮಾಡುತ್ತಾರೆ. ಹಿಂದಿರುಗುವಾಗ ಕೂಳು ನೀರು ಮಾಡಿದ ಕಲ್ಲಿಗೆ ಕಾಡು ಹೂಗಳನ್ನು ಚೆಲ್ಲುತ್ತಾರೆ. ಮನೆಯ ಒಳಗೆ ಹೋಗುವಾಗ ಮೈ-ಮೇಲೆ ನೀರು ಹಾಕಿಕೊಳ್ಳುತ್ತಾರೆ. ಬಂಧುಗಳು ಊಟ ಮಾಡಿ ವಾಡೆಗಳಿಗೆ ಹಿಂದಿರುಗುವಾಗ ಮೊದಲು ಹೊತ್ತಿಸಿಟ್ಟಿದ್ದ ದೀಪವನ್ನು ನೋಡಿ ಮರಳುತ್ತಾರೆ. ಸತ್ತ ಮೂರನೇ ದಿನಕ್ಕೆ ಸುಡುಗಾಡಿಗೆ ಹೋಗಿ ದಹನ ಕ್ರಿಯೆ ಮಾಡಿದ್ದರೆ ಬೂದಿಯನ್ನು, ಹೂಳಿದ್ದರೆ ಮಣ್ಣನ್ನು ಗೂಡಿಸಿ ಗುಡ್ಡೆ ಹಾಕಿ ೩ ಕಲ್ಲುಗಳನ್ನು ಇಟ್ಟು ಅದಕ್ಕೆ ಹಾಲು ಹಾಕುತ್ತಾರೆ. ಇದನ್ನು ಗಂಜಿ ಬಿಡುವುದು ಎನ್ನುತ್ತಾರೆ. ಸಗಣಿ ಉಂಡೆಗಳನ್ನು ಈ ಕಲ್ಲುಗಳ ಮೇಲೆ ಇಟ್ಟು ಅದರ ಮೇಲೆ ರೊಟ್ಟಿಯನ್ನು ಇಟ್ಟು ಅದರ ಮೇಲೆ ಬಿದಿರು ಕೋಲು ನೆಡುತ್ತಾರೆ. ಈ ಬಿದಿರು ಕೋಲಿಗೆ ನಡುವೆ ಗಂಟು ಇರಬಾರದು. ಹಾಗೂ ಮೇಲಿನಿಂದ ಕೆಳಗೆ ಒಂದೇ ರಂದ್ರವಿರಬೇಕು. ಅದರ ಮೂಲಕ ರೊಟ್ಟಿಗೆ ಹಾಲು ಬೀಳುವಂತೆ ಬಿಡುತ್ತಾರೆ. ಇದಕ್ಕೆ ಬದಲಾಗಿ ಪಪ್ಪಾಯಿ ದಂಟನ್ನು ಕೂಡಾ ಬಳಸಲಾಗುತ್ತದೆ. ಅಲ್ಲಿ ನೆರೆದವರೆಲ್ಲರೂ ಇದನ್ನು ಮಾಡುತ್ತಾರೆ. ಕಡೆಗೆ ಗಡಿಗೆಯನ್ನು ಒಡೆದು ಅದರ ಚಿಪ್ಪನ್ನು ನೀರು ನಿಲ್ಲದಂತೆ ನೋಡಿ ಎಸೆಯುತ್ತಾರೆ. ಏಕೆಂದರೆ ಈ ಚಿಪ್ಪುಗಳಲ್ಲಿ ಇರುವ ನೀರನ್ನು ಯಾವ ಪಕ್ಷಿಯಾದರೂ ಕುಡಿದರೆ ಆ ಪಕ್ಷಿಯಿಂದ ಹುಟ್ಟಿದ ಮರಿಯ ನೆರಳು ಹಸುವಿನ ಮೇಲೆ ಬಿದ್ದರೆ ಆ ಹಸು ಪಾರ್ಶ್ವವಾಯುವಾಗಿ ಸಾಯಬಹುದು ಎಂಬ ಭಯ.

ಮರಣದ ೯ನೇ ದಿವಸ ಕುರಿ ಕೊಯ್ದು ಜನರಿಗೆ ಊಟ ಹಾಕುತ್ತಾರೆ. ಹೊಸ ಪಗಡಿ (ಪೇಟ)ಯನ್ನು ತಂದು ಬೀಗರು ಹಾಗೂ ಸತ್ತ ಮನೆಯ ಹಿರಿಯರು ಕೂಡಿ ಹಿರಿಯ ಮಗನಿಗೆ ಹಾಕುತ್ತಾರೆ. ೨೧ನೇ ದಿನದವರೆಗೂ ಸಾವಿನ ಕುಟುಂಬದವರು ವಾಡಾದ ಹೊರಗೆ ಸುಳಿದಾಡುವುದಿಲ್ಲ. ಸಿಹಿ ತಿನಿಸು, ಮದ್ಯ, ಸ್ನಾನ, ಎಣ್ಣೆ ಹಚ್ಚಿಕೊಳ್ಳುವುದು ಈ ಅವಧಿಯಲ್ಲಿ ವರ್ಜ್ಯ. ನಂತರ ದೈವದವರು ಕೂಡಿ ಹುಣಸೆ ಸೊಪ್ಪಿನಿಂದ ಗೋಮೂತ್ರ ಸಿಂಚನಗೈಯ್ದು ಸೂತಕ ಪರಿಹಾರ ಮಾಡುತ್ತಾರೆ.

ಸತ್ತವನ ಹಿರಿಯ ಮಗನ ತಲೆ ಬೋಳಿಸಿ ಕೂದಲನ್ನು ನೀರಿನಲ್ಲಿ ಬಿಟ್ಟು ಮಗನು 'ನೀರು ಕುಡಿದು ಸ್ವರ್ಗಕ್ಕೆ ಹೋಗು' ಎಂದು ತಂದೆ ಅಥವಾ ತಾಯಿಯನ್ನು ಕುರಿತು ಹೇಳುತ್ತಾನೆ. ವಾಡಾದ ಹಿರಿಯ/ಪೂಜಾರಿ ವಿಳ್ಯೆದೆಲೆಯಿಂದ ಒಂದು ನೂರು ಹನಿ ನೀರು ಬಿಟ್ಟು ಸ್ವರ್ಗಕ್ಕೆ ಹೋಗುವಂತೆ ಕೋರುತ್ತಾರೆ. ಬಂಧು-ಬಳಗದವರೆಲ್ಲಾ ಈ ರೀತಿ ಮಾಡಿದ ಮೇಲೆ ಒಣ ಸಗಣಿಯನ್ನು ಸುಟ್ಟು,

ಸಣ್ಣ ಚಿಟಿಕೆ ನೀರನ್ನು ದೈವದವರು ಅದರ ಮೇಲೆ ಸ್ವಲ್ಪ ಸ್ವಲ್ಪ ಹಾಕಿ ನಂತರ ಆ ನೀರನ್ನೆಲ್ಲ ಬಿಲ್ವಪತ್ರಿ, ಕರಕಿ, ಬೇರು, ಮಾವಿನ ಎಲೆ, ತುಳಸಿ ಎಲೆ, ಹಾಗೂ ಕೆಲವು ನಾಣ್ಯಗಳನ್ನು ಚರಿಗೆಗೆ ಹಾಕುತ್ತಾರೆ. ಈ ತೀರ್ಥವನ್ನು ಗುಡಿಸಲಿಗೂ ಹಾಗೂ ಎಲ್ಲರಿಗೂ ಸಿಂಪಡಿಸುತ್ತಾರೆ. ನಂತರ ಸತ್ತವರಿಗೆ ಎಡೆ ಸಲ್ಲಿಸಿ ಕಾಗೆಯನ್ನು ಕರೆಯುತ್ತಾರೆ. ಕಾಗೆ ಎಂಜಲು ಮಾಡಿದರೆ ಯಾವ ತೊಂದರೆಯಿಲ್ಲ. ಇಲ್ಲದಿದ್ದರೆ ಅನಿಷ್ಠ ಎಂಬ ನಂಬಿಕೆ ಇದೆ. ೧೨ ನೇ ದಿನ ಮಾಡುವ ಈ ಕಾರ್ಯಕ್ರಮಕ್ಕೆ 'ಪಾನೀಪಾದಾಜ್' ಎನ್ನುವರು.

ರಾತ್ರಿ ಯಡಿಗ್ಯನನ್ನು ಬಿಟ್ಟು ಎಲ್ಲರಿಗೂ ಮಾಂಸದೂಟ ಇರುತ್ತದೆ. ಯಡಿಗ್ಯನಿಗೆ ಮಾತ್ರ ಮೊಸರನ್ನದ ಊಟವಿರುತ್ತದೆ. ರಾತ್ರಿಯೆಲ್ಲಾ ಭಜನೆ, ಹರಟೆ, ಕಥೆ ಹೇಳುತ್ತಾ ರಾತ್ರಿ ಕಳೆಯುತ್ತಾರೆ. ಈ ಕಾರ್ಯಕ್ರಮ ಮುಗಿದ ನಂತರ ಬಂಧುಗಳು ತಮ್ಮ ಸ್ವ-ಸ್ಥಾನಕ್ಕೆ ಮರಳುವಾಗ ತಲೆ ಬೋಳಿಸಿಕೊಂಡ ವ್ಯಕ್ತಿಗೆ ಮುಂಡಾಸು ಕಟ್ಟುತ್ತಾರೆ. ಅವನಿಗೆ ಮುಂಡಾಸು ಕಟ್ಟಿದ ವ್ಯಕ್ತಿಯೇ ತಂದೆಯ ಸ್ಥಾನದಲ್ಲಿ ನಿಂತು ನೋಡಿಕೊಳ್ಳಬೇಕು ಎಂದು ತಿಳುವಳಿಕೆ ಇದೆ. ಉಳಿದ ಮಕ್ಕಳಿಗೂ ಪಾಗೋಡ ಕಟ್ಟಿ ಆತ್ಮವಿಶ್ವಾಸ ತುಂಬುತ್ತಾರೆ.

ಮೃತ ವ್ಯಕ್ತಿ ಹಿರಿಯರಾಗಿದ್ದರೆ ಅವರ ಆತ್ಮ ಸಂಕೇತವಾಗಿ ಅತ್ತಿ ಮರದ ಬುಡದಲ್ಲಿ ಒಂದು ಕಲ್ಲನ್ನಿಡುವ ಪದ್ಧತಿ ಇದೆ. ಇದಕ್ಕೆ ಕಾಲಕಾಲಕ್ಕೆ ಪೂಜೆ ಸಲ್ಲಿಸಲಾಗುವುದು.

**೩.೪.೪. ದೈವಿಕ ನಂಬಿಕೆ ಹಾಗೂ ಧಾರ್ಮಿಕ ಕೇಂದ್ರಗಳು[೨]**

ಎಲ್ಲ ಬುಡಕಟ್ಟುಗಳಲ್ಲಿರುವಂತೆ ಗೌಳಿಗರಲ್ಲಿ ಕೂಡಾ ನಿಸರ್ಗದ ಎಲ್ಲ ವಸ್ತುಗಳು ದೈವತ್ವದ ಸಂಕೇತಗಳಾಗಿವೆ. ಗೌಳಿಗರಲ್ಲಿ 'ಮನೆದೇವರು', 'ಕುಳಿದೇವರು', 'ವಾಡಾದೇವರು' ಎಂಬ ಮೂರು ಪ್ರಕಾರದ ಆರಾಧನೆ ಕಂಡು ಬರುತ್ತದೆ. ಇವರ ಹೆಚ್ಚಿನ ಮನೆದೇವರು ಮಹಾರಾಷ್ಟ್ರದ ಮೂಲ ಹೊಂದಿರುವುದು ಕಂಡು ಬರುತ್ತದೆ. ಮನೆದೇವರ ಪರಿಕಲ್ಪನೆ ಬೇರೆ ಬೇರೆ ಕುಳಿಗಳಿಗೆ ಭಿನ್ನವಾಗಿರುವುದು ಕಂಡು ಬರುತ್ತದೆ.

| **ಮನೆತನದ ಅಡ್ಡ ಹೆಸರು** | | | **ಮನೆದೇವರ ಹೆಸರು** |
|---|---|---|---|
| ೧. | ಜಂಗಲಿ | – | ಇಂಜ್ಯಾ ಪದ್ಮಾವತಿ |
| ೨. | ಖರತ್ | – | ವಿಠೋಬಾ |
| ೩. | ಕೋಕರೆ | – | ಇಂಜ್ಯಾ ಘಾಟ್ಯಾ |
| ೪. | ತೋರತ್ | – | ಜಾನ್ಯಾ ಸಿದ್ಧಜಿ |
| ೫. | ಪಟಕರೆ | – | ಜಾನ್ಯಾ ವಾಗ್ಯಾ/ಖಂಡೋಬಾ |
| ೬. | ಯಡಿಗೆ | – | ನಿನ್ಯಾನವಲ್ಯಾ |
| ೭. | ಪಾವಣೆ | – | ವಿಠೋಬಾ |
| ೮. | ಜೋರೆ/ಪಾಟೀಲ | – | ಜಾನ್ಯಾನವಲ್ಯಾ/ವಿಠಲ ರುಕ್ಮಾಯಿ |
| ೯. | ತಾಟೆ | – | ಅಂಬಾಯಿ |

| | | | |
|---|---|---|---|
| ೧೦. | ಘೊಂಡೆ | – | ನೀನ್ನಾಯಿ ಸುಕಾಯಿ/ಮಾಲಾಕಾಪುರ |
| ೧೧. | ಘೋಡಕೆ | – | ವಿಠಲಾ ಕಾಳಮ್ಮ |
| ೧೨. | ಪಿಂಗಳೆ | – | ಮಾನ್ಯಾಮಳ್ಯಾ |
| ೧೩. | ಯಮಕರ್ | – | ಸಿದ್ಧಾಯಿ |
| ೧೪. | ಗಾವಡೆ | – | ಜಾನ್ಯಾ ಮಳ್ಯಾ |
| ೧೫. | ಲ್ಯಾಂಬೋರ | – | ಅಂಬಾಬಾಯಿ ಸಿದ್ಧಾಜಿ |
| ೧೬. | ವರಕ್ | – | ಜಾನ್ಯಾ ವಿಠಲ್ಯಾ |
| ೧೭. | ಖೋತ | – | ಮಾಳ್ಯಾ ಜಾನ್ಯಾ |
| ೧೮. | ಸೆಳಕೆ | – | ಖಾನೋಬಾ ದುಲೋಭಾ |
| ೧೯. | ಜಾನಕರ | – | ಸಿದ್ಧಾಜೀ |
| ೨೦. | ಟಾಕೇಕರ್ | – | ಜ್ಯೋತಿಬಾ |
| ೨೧. | ಶೆಳಕೆ | – | ಮೋನ್ಯಾಕೇದಾರಿ/ಮನಾಯಿ |
| ೨೨. | ಪಾಂಡ್ರಮಿಸೆ | – | ಜಾನ್ಯಾ |
| ೨೩. | ಬಾಜಾರಿ | – | ಕಾಳಮ್ಮಾ/ನಿನ್ಯಾಇವಲ್ಯಾ/ಖಂಡೋಬಾ |
| ೨೪. | ಕೋಕರೆ | – | ಧೋಳೊಬಾ ವಾಗ್ಯಾ |
| ೨೫. | ಮಿಸಳ್ | – | ಧೋಳೊಭಾ, ಜಾನ್ಯಾ ನವಲ್ಯಾ |
| ೨೬. | ಅಡೋಳಕರ್ | – | ವಿಠೋಬಾ |
| ೨೭. | ಡೊವಿಘೊಡೆ | – | ಮಳ್ಯಾ/ಕಾಳಮ್ಮ |
| ೨೮. | ಹುಂಬೆ | – | ಜುಗಾಯಿ |
| ೨೯. | ಬೋಡಕರ | – | ಅಂಬಾಯಿ |
| ೩೦. | ಕೊಳಾಪ್ಪೆ | – | ಮಾನಾತೆದರಲಿಂಗ |

ಗೌಳಿಗರು ಎಲ್ಲೇ ನೆಲೆಸಿದರೂ ಕುಳಿದೈವದ ಪೂಜೆ ಮಾಡಲೇಬೇಕು. ಮಕ್ಕಳು ತಂದೆಯಿಂದ ಪ್ರತ್ಯೇಕಗೊಂಡರೂ ಕೂಡಾ ಕುಳಿದೈವ ತಂದೆಯ ಮನೆಯಲ್ಲಿದ್ದರೂ ಸಾಂಕೇತಿಕವಾಗಿ ತಮ್ಮ ಮನೆಯಲ್ಲಿ ಕಾಯಿ ಇಟ್ಟು ಪೂಜಿಸುತ್ತಾರೆ. ತಂದೆ ಯಾವ ಮಗನ ಮನೆಯಲ್ಲಿ ಸಾಯುತ್ತಾನೋ ಆ ಮನೆಯಲ್ಲಿ ಕುಳಿದೈವ ಪೂಜೆ ಮುಂದುವರೆಯುತ್ತದೆ. ತಮ್ಮ ಎಲ್ಲ ಕಷ್ಟಗಳಿಗೂ ದೇವರೆ ಪರಿಹಾರ ಎಂದು ನಂಬಿರುತ್ತಾರೆ.

ಸಾಮಾನ್ಯವಾಗಿ ವಿಠೋಬಾ, ಖಂಡೋಬಾ, ಭೈರೋಬಾ ಈ ಮೂರು ದೈವಗಳು ವಾಡಾದ ದೈವಗಳೆಂದು ಪೂಜಿಸಲ್ಪಡುತ್ತವೆ. ಇದರಲ್ಲಿ ವಿಠೋಬಾ, ಅಥವಾ ವಿಠಲ ರುಕ್ಮಾಯಿ ಎಂಬ ದೈವದ ಬಗ್ಗೆ ಇವರಿಗೆ ಅಪಾರ ಭಕ್ತಿಯಿದೆ. ಪಂಢರಪುರದ ವಿಠ್ಠಲ ಮಂದಿರವು ಭಾರತದ ಪಂಚಬ್ರಹ್ಮ ಮಂದಿರದಲ್ಲಿ ಒಂದಾಗಿದ್ದು. ವಿಠಲನಿಗೆ 'ನಾದಬ್ರಹ್ಮ' ಎಂದು ಪರಿಗಣಿಸಲಾಗುತ್ತದೆ. ವರ್ಷಕ್ಕೊಮ್ಮೆ

ಮಹಾರಾಷ್ಟ್ರದ ಪಂಢರಪುರಕ್ಕೆ ವಿಠಲನ ಭಕ್ತರು ನಡೆಯುತ್ತಲೇ ಹೋಗುವುದು ವಾಡಿಕೆ. ಇವರು ಒಟ್ಟುಗೂಡಿ ಹೋಗುವುದಕ್ಕೆ 'ದಿಂಡಿ' ಎನ್ನುತ್ತಾರೆ. ಅವರನ್ನು ಪ್ರತಿಯೊಂದು ವಾಡೆಯವರು ಬೀಳ್ಕೊಡುತ್ತಾರೆ. ಪಂಢರಪುರದಿಂದ ಮರಳಿ ಬಂದವರು ತುಳಸಿಮಾಲೆ ಹಾಕಿಕೊಂಡಿದ್ದರೆ ಅವರನ್ನು 'ಸಂತ್' ಎಂದು ಗೌರವಿಸಲಾಗುವುದು. ಮಧ್ಯ ಮಾಂಸಾಹಾರ ಸೇವಿಸುವುದಿಲ್ಲ. ಅವರು ಸಾತ್ವಿಕ ಜೀವನ ನಡೆಸಬೇಕು.

ಧನಗರ ಗೌಳಿ ಬುಡಕಟ್ಟಿನವರು ಆರಾಧಿಸುವ ಗಂಡು ಹಾಗೂ ಹೆಣ್ಣು ದೈವಗಳು ಈ ಕೆಳಗಿನಂತಿವೆ.

| **ಗಂಡು ದೈವಗಳು** | **ಹೆಣ್ಣು ದೈವಗಳು** |
|---|---|
| ವಿಠೋಬಾ, ಬೀರೋಬಾ | ಜ್ಯಾನ್ಯಾ, ನವಲ್ಯಾ, ಇಂಜ್ಯಾ, ಫ್ಯಾಟ್ಯಾ |
| ಧೂಳೋಬಾ, ಭೈರೋಬಾ | ಇಂಜ್ಯಾ ಪದ್ಮಾಯಿ, ಜೂಗಾಯಿ |
| ವಿಠೋಬಾ ಕೇವಾರಿ | ವಿಠಲ್ಯಾ ಕಾಳಾಮಾ, ಮಳಾಯಿ, |
| ದಾಡೋಬಾ ಭೈರೋಬಾ | ವಾಗಜ್ಯಾ, ಕನ್ಯಾ ಭಾಗೊ |
| ಸಿದ್ದಾಜಿ, ಖಂಡೋಬಾ | ಕನ್ಯಾ ನಾಗೊ, ಜನಾಯಿ, ಜೋಲ್ಲಾ, |
| ಜ್ಯೋತಿಬಾ, ರವಳೆಬಾಬಾ | ಕಾನಬಾಯಿ, ರೇಣುಬಾಯಿ, |
| ಪಾರವಿಸ್ ಗೇಲಾ | ಚನ್ಯಾ ಪಾಚ್ಯಾ, ತುಕಾಯಿ, |
| ಮ್ಹಾಸೋಬಾ, ಬೇಹಾರಿ | ಮೆಮಾಯಿ, ಸತ್ವಾಯಿ, ಜೋಖಾಯಿ, |

**ಅಡವಿಯ ದೈವಗಳು:** ಚೌಡಿ, ಮಾರಿ, ದುರ್ಗಿ ಇತ್ಯಾದಿ ಅಡವಿಯ ದೈವಗಳಾಗಿದ್ದು, ಈ ದೈವಗಳಿಗೆ ಕೋಳಿ ಕುರಿ ಮಾಂಸದ ನೈವೇದ್ಯ ಮಾಡುವುದು ವಾಡಿಕೆ. ಇತ್ತೀಚೆಗೆ ಗೌಳಿಗರು ಪಂಢರಪುರದ ವಿಠೋಬನ ಗುಡಿಗಳನ್ನು ಕಟ್ಟಿಸುತ್ತಿದ್ದು, ಯಡಿಗ್ಯನ ಮನೆಯ ದೈವಾಚರಣೆ ಈ ಗುಡಿಗೆ ಸ್ಥಳಾಂತರ ಹೊಂದಿದೆ. ಈ ಗುಡಿಗಳ ಮೇಲೆ ಕೆಂಪು ಹಾಗೂ ಬಿಳಿ ಬಣ್ಣದ ಬಾವುಟಗಳಿರುತ್ತವೆ. ಇವರಲ್ಲಿಯ ಪೆಟ್ಟಿಗೆ ದೈವಗಳು ಇವರು ಅಲೆಮಾರಿಗಳು ಎಂಬುದಕ್ಕೆ ಸಾಕ್ಷಿಯಾಗಿವೆ.

**೩.೪.೫ ಗೌಳಿಗರ ಹಬ್ಬಗಳು**

ಗೌಳಿಗರು ಆಚರಿಸುವ ಪ್ರಮುಖ ಹಬ್ಬಗಳೆಂದರೆ, ಯುಗಾದಿ, ಬುಯಿಮ ಪೂಜಾ, ಹೋಳಿ ಹುಣ್ಣಿಮೆ, ವರಕೂತ್, ಮಹಾನವಮಿ, ಹಿರಿಯರ ಹಬ್ಬಗಳು ಸೇರಿವೆ.

**ಯುಗಾದಿ:** ಇದು ವರ್ಷಾರಂಭದ ಹಬ್ಬವಾಗಿದ್ದು ತಮಗೆ ಫಲವನ್ನು ಅನುಗ್ರಹಿಸಿದ ಪ್ರಕೃತಿಗೆ ಕೃತಜ್ಞತೆ ಸಲ್ಲಿಸಲು ಹೊಸ ಉಡುಪು ತೊಟ್ಟು ಸಂಭ್ರಮ ಪಡುವ ಹಬ್ಬವಾಗಿದೆ. ಇದರಲ್ಲಿ ಮನೆಯ ಕುಳಿದೈವ ಪೂಜೆ ಮಾಡಿ ಬೇವು ಬೆಲ್ಲವನ್ನು ತಿನ್ನುತ್ತಾರೆ.

**ಬುಯಿಂಮ ಪೂಜಾ:** ಇದು ಭೂಮಿ ಹುಣ್ಣಿಮೆಯಾಗಿದೆ. ಹೊಲದಲ್ಲಿ ೫ ಕಲ್ಲುಗಳನ್ನಿಟ್ಟು ಅದಕ್ಕೆ ಅರಿಷಿಣ, ಕುಂಕುಮ ಹಚ್ಚಿ ಪೂಜೆ ಮಾಡುತ್ತಾರೆ. ಏಕೆಂದರೆ ತಮ್ಮನ್ನೇ ತಾವು ಪಾಂಡವರೆಂದು ನಂಬುತ್ತಾರೆ. ಆ ನಂತರ ಹೊಲದಲ್ಲಿ ಚರಗ ಚಲ್ಲುತ್ತಾರೆ.

**ಹೋಳಿ ಹುಣ್ಣಿಮೆ:** ಇದು ಇವರ ಅತ್ಯಂತ ಪ್ರಮುಖ ಹಬ್ಬವಾಗಿದೆ. ೫ ದಿನಗಳವರೆಗೆ ಈ ಹಬ್ಬವನ್ನು ಸಂಭ್ರಮದಿಂದ ಆಚರಿಸುತ್ತಾರೆ. ಸಾಂಪ್ರದಾಯಿಕ ಬಟ್ಟೆ ತೊಟ್ಟು, ತಾಳ ಹಾಗೂ ಡೊಳ್ಳುಗಳನ್ನು ಬಾರಿಸುತ್ತಾ, ಕುಣಿಯುತ್ತಾ ಮನೆ–ಮನೆಗೆ ಹೋಗಿ ಹಣ ಸಂಗ್ರಹಿಸುತ್ತಾರೆ. ಇದರ ಅಂಗವಾಗಿ ಊರಿನ ಕಾಡು ಕಲ್ಲನ್ನು ಇಟ್ಟಿರುತ್ತಾರೆ. ಇದನ್ನೇ 'ಶಿಲೆಂಗನ್' ಎಂದು ಕಾಮನ ಪೂಜೆಗೆ ಉಪಯೋಗಿಸುತ್ತಾರೆ. ಕಾಮನನ್ನು ಸುಡುವ ಆಚರಣೆಗೆ 'ಶಿಲ್ಗೊ' ಎನ್ನುತ್ತಾರೆ. ಹೆಂಗಸರು ಮಾಡುವ ನೃತ್ಯಕ್ಕೆ 'ಪುಗುಡಿ' ಎಂದು, ಗಂಡಸರ ನೃತ್ಯಕ್ಕೆ 'ಜಗಾ' ಎಂದು ಕರೆಯುತ್ತಾರೆ. ಬೇಟೆಯಾಡಿದ ಮೊಲ ಇತ್ಯಾದಿಗಳ ಜೊತೆಗೆ ಕುರಿಯ ಮಾಂಸದೂಟವನ್ನು ಮಾಡುತ್ತಾರೆ. ಮುಂಜಾನೆ ಓಕುಳಿ ಆಡುತ್ತಾರೆ. ಈ ಸಂದರ್ಭದಲ್ಲಿ ಹುಡುಗರು ಗಂಡಸರು ಹಾಗೂ ಕೆಲವು ಹೆಣ್ಣು ಮಕ್ಕಳು ಕಳ್ಳು ಕುಡಿಯುತ್ತಾರೆ. ತರುಣರು ಹೋಳಿ ಹುಣ್ಣಿಮೆ ಹಾಡುಗಳನ್ನು ಹಾಡುತ್ತಾ ಖುಷಿ ಪಡುತ್ತಾರೆ.

**ವರಕೂತ್ ಹಬ್ಬ:** ಮನೆ ದೇವರಿಗೆ ಪೂಜೆ ಸಲ್ಲಿಸುವ ಹಬ್ಬವನ್ನು ವರಕೂತ್ ಹಬ್ಬವೆಂದು ಕರೆಯುತ್ತಾರೆ. ಇದನ್ನು ಆಯಾ ಮನೆಯವರು ತಮಗೆ ಅನುಕೂಲವಾದ ದಿನದಂದು ಆಚರಿಸುತ್ತಾರೆ. ಕೆಲವರು ಎರಡು ಅಥವಾ ಮೂರು ವರ್ಷಗಳಿಗೊಮ್ಮೆ ಆಚರಿಸುತ್ತಾರೆ. ಇದರಲ್ಲಿ ವಾಡಾದ ಪೂಜಾರಿಯಾದ ಯಡಗ್ಯ ಇಲ್ಲವೆ ಲ್ಯಾಂಬೋರ್ ಪೂಜಾವಿಧಿ ನೆರವೇರಿಸುತ್ತಾನೆ.

**ಮಹಾನವಮಿ:** ಇದು ಗೌಳಿಗರ ಪ್ರಮುಖ ಹಬ್ಬವಾಗಿದೆ. ಹೊಸ ಬಟ್ಟೆ ಹಾಕಿಕೊಂಡು ೧೧ ದಿನಗಳವರೆಗೆ ಮಡಿ, ನೇಮ, ಉಪವಾಸದ ಆಚರಣೆಯ ಮೂಲಕ ಆಚರಿಸುವರು. ಈ ಸಮಯದಲ್ಲಿ ಮಾಂಸ, ಮಧ್ಯಪಾನ, ವರ್ಜ್ಯವಾಗಿರುತ್ತದೆ. ದೈವಗಳನ್ನು ಹೊಳೆಗೆ ತೆಗೆದುಕೊಂಡು ಹೋಗಿ ತಾಮ್ರದ ಬಿಂದಿಗೆಯಲ್ಲಿ ನೀರನ್ನು ತಂದು ಪೂಜಿಸುತ್ತಾರೆ.

ಬನ್ನಿ ತರಲು ಪಕ್ಕದ ಕಾಡಿಗೆ ಯಡಿಗ್ಯ, ಗಂಡಸರು ಹಾಗೂ ತರುಣರು ಹೋಗುತ್ತಾರೆ. ಇದಕ್ಕೆ 'ಮಾರಗಿ ಪಾಟಿ' ಎಂದು ಕರೆಯುತ್ತಾರೆ. ಬನ್ನಿ ಮರವನ್ನು ಪೂಜಾ ಮಾಡಿ ಯಡಿಗ್ಯನು ಅದರ ಟೊಂಗೆಯನ್ನು ತನ್ನ ಖಡ್ಗದಿಂದ ಕತ್ತರಿಸುತ್ತಾನೆ. ಅದು ನೆಲಕ್ಕೆ ಬೀಳದಂತೆ ಪಂಚೆಯನ್ನು ಹಿಡಿದು ಬನ್ನಿ ತರುತ್ತಾರೆ.

ಯಡಿಗ್ಯನ ಮನೆಯಲ್ಲಿ ಪೂಜಾ ಕಾರ್ಯಕ್ರಮಗಳು ನಡೆಯುತ್ತವೆ. ಇದಕ್ಕೆ 'ಜಾಂತ್ಯಲೋಕ'ಗಳು ಹಾಜರಿರುತ್ತಾರೆ. ಹುಡುಗರು, ಮಧ್ಯ ವಯಸ್ಕರು, ಡೋಲು, ತಾಳ ಹಾಗೂ ಗಂಗಾಳ ಬಾರಿಸುತ್ತಾ ಕುಣಿಯುತ್ತಾರೆ. ಈ ಧ್ವನಿಯ ಮಧ್ಯೆ ಯಡಿಗ್ಯನ ಮೈಯಲ್ಲಿ ದೈವ ಬಂದು ಅವನು ನಡುಗುತ್ತಾ ಚೀರುತ್ತಾ ಊರಿನ ಭವಿಷ್ಯ ನುಡಿಯುತ್ತಾನೆ. ತಲವಾರದಿಂದ ಹೊಟ್ಟೆಗೆ ಹೊಡೆದುಕೊಳ್ಳುವ, ಇರಿದುಕೊಳ್ಳುವ, ಆವೇಶ ಭರಿತ ಆಚರಣೆಗಳಲ್ಲಿ ವಾಡೆ ಜನರೆಲ್ಲರೂ ಪಾಲ್ಗೊಳ್ಳುತ್ತಾರೆ.

**ದೀಪಾವಳಿ:** ಇದು ಕೂಡಾ ಗೌಳಿಗರ ಪ್ರಮುಖ ಹಬ್ಬವಾಗಿದ್ದು, ಪಾಡ್ಯದ ದಿನ ಮನೆಯ ದೈವಕ್ಕೆ ಪೂಜೆ ಮಾಡಿ, ಆಕಳು ಎಮ್ಮೆಗಳನ್ನು ಪೂಜಿಸುತ್ತಾರೆ. ಕೊಟ್ಟಿಗೆ, ಕಂಬಗಳು, ತಮ್ಮೆಲ್ಲ ಉಪಕರಣಗಳಿಗೂ ಅಂದು ಪೂಜೆ ಮಾಡುತ್ತಾರೆ. ದೀಪಾವಳಿಯಂದು ತಮ್ಮ ಹಟ್ಟಿಯ ದನಗಳನ್ನು ಸಿಂಗರಿಸಿ ಓಡಿಸುವ ಕಾರ್ಯಕ್ರಮಕ್ಕೆ 'ಪಳವಾಜಿ' ಎಂದು ಕರೆಯುತ್ತಾರೆ.

**ಹಿರಿಯರ ಹಬ್ಬ:** ದೀಪಾವಳಿಯ ಎರಡು ವಾರ ಮೊದಲು ಈ ಹಬ್ಬವನ್ನು ಆಚರಿಸಲಾಗುವುದು. ಕೆಲವೊಮ್ಮೆ ಈ ದಿನವನ್ನು ಅಮವಾಸ್ಯೆಯ ದಿನದಂದು ಆಚರಿಸಿದರೆ, ಕೆಲವೊಮ್ಮೆ ಹುಣ್ಣಿಮೆಯಾದ ೫ ದಿನಕ್ಕೆ ಆಚರಿಸಲಾಗುವುದು. ಪ್ರತಿ ವರ್ಷವೂ ಈ ಹಬ್ಬದ ತಿಥಿ ಬೇರೆಯಾಗಿರುತ್ತದೆ. ತಮ್ಮ ಕುಲದ ಪೂರ್ವಜರನ್ನು ನೆನಪಿಸಿಕೊಳ್ಳುವ ಹಬ್ಬ ಇದಾಗಿದೆ. ಇದಕ್ಕೆ ಬಂಧು-ಬಾಂದವರನ್ನು ಆಮಂತ್ರಿಸಲಾಗುವುದು. ಬ್ರಾಹ್ಮಣ ಸಂಪ್ರದಾಯದಲ್ಲಿರುವಂತೆ ಕಾಗೆಗೆ ಪಿಂಡ ಇಡುವುದು ರೂಢಿಯಲ್ಲಿದೆ. ಏಕೆಂದರೆ ಹಿರಿಯರು ಕಾಗೆಯ ರೂಪದಲ್ಲಿ ಬಂದು ಹೋಗುತ್ತಾರೆ ಎಂಬ ನಂಬಿಕೆ. ಕಾಗೆ ಪಿಂಡ ಮುಟ್ಟದಿದ್ದರೆ ಏನೋ ತಪ್ಪಾಗಿದೆ ಎಂದು ನಂಬಲಾಗುತ್ತದೆ. ಹಬ್ಬದ ದಿನ ರಾತ್ರಿ ಬಂಧು-ಬಳಗದವರು ಸೇರಿ ಕಳ್ಳನ್ನು ಕುಡಿದು ಶಾಖಾಹಾರಿ ಊಟ ಮಾಡುತ್ತಾರೆ.

**೩.೪.೬ ಮಾಟ-ಮಂತ್ರ ನಂಬಿಕೆಗಳು**

ಮಾಟ ಮಂತ್ರಗಳಲ್ಲಿ ಗೌಳಿಗರಿಗೆ ನಂಬಿಕೆ ಇದೆ. ತಮಗೆ ಹಾಗೂ ಪ್ರಾಣಿಗಳಿಗೆ ಇದಕ್ಕಾಗಿ ಪುರೋಹಿತರಿಂದ ಮಂತ್ರ ಮಾಡಿಸಿಕೊಳ್ಳುತ್ತಾರೆ. ಆಲದ ಮರ ಹಾಗೂ ಹುಣಸೆಮರಗಳಲ್ಲಿ ದೆವ್ವ ಭೂತಗಳಿರುತ್ತವೆ ಎಂದು ನಂಬಲಾಗಿದೆ. (ಭೂತ) ಕಲ್ಲುಗಳಿಗೂ ಪೂಜೆ ಸಲ್ಲಿಸಿ ಕುರಿ ಕೋಳಿಗಳನ್ನು ಬಲಿಕೊಟ್ಟು, ಅವುಗಳನ್ನು ಸಂತೃಪ್ತವಾಗಿಡಲು ಪ್ರಯತ್ನಿಸುತ್ತಾರೆ. ಈ ನಂಬಿಕೆಗಳು ಇತರ ಬುಡಕಟ್ಟುಗಳಲ್ಲೂ ಕಂಡು ಬರುತ್ತವೆ.

ತಮ್ಮನ್ನು ಅವಲಂಬಿಸಿದವರಿಗೆ ಆರೋಗ್ಯ ಸರಿಯಿಲ್ಲದಿದ್ದರೆ ದನಕರು ಎಮ್ಮೆಗಳು ತೀರಿಕೊಂಡರೆ ಇನ್ನೂ ಅನೇಕ ಬಗೆಯ ತೊಂದರೆಗಳಿಗೆ ಗುರಿಯಾದರೆ ಸಾಮಾನ್ಯವಾಗಿ ಮಾಟ ಮಂತ್ರಗಳ ಕೈವಾಡವಿರಬೇಕೆಂದು ಶಂಕಿಸುತ್ತಾರೆ. ಈ ಸಂಬಂಧವಾಗಿ ಕೆಲವು ನಂಬಿಕೆಗಳು ಇವರಲ್ಲಿ ಪ್ರಚಲಿತವಿದೆ.

- ರಾವು ಬಡಿದರೆ ಗಾಳಿ, ಸೋಂಕು ಉಂಟಾದರೆ ಮಂತ್ರ ಹಾಕಿಸಬೇಕು.
- ಮಕ್ಕಳು ಹೆದರಿಕೊಂಡು ಜ್ವರ ಬಂದರೆ ತಾಮ್ರ ಅಥವಾ ಬೆಳ್ಳಿ ತಗಡಿನಲ್ಲಿ ತಾಯಿತ ಮಾಡಿಸಿ ಕಟ್ಟಿಸಬೇಕು.
- ಮಾಟ ಮಾಡಿಸಿದರೆ ಮಂತ್ರ ಹಾರದಿಂದ ಅದನ್ನು ತೆಗೆಸಬೇಕು.
- ರಣಮಾಟ ಮಾಡಿಸಿದರೆ ವೈರಿ ಸಾಯುವುದು ನಿಶ್ಚಿತ. ಅದಕ್ಕೆ ಪ್ರತಿ ರಣಮಾಟವನ್ನೇ ಮಾಡಿಸಬೇಕು.
- ಮನೆಯಲ್ಲಿ ಜನ/ಜಾನುವಾರು ರಕ್ತಕಾರಿ ಸತ್ತರೆ ಅದು ಮಾಟದ ಕಾರಣದಿಂದಾಗಿಯೇ ಆದುದು.

ಹೀಗೆ ಇವರಿಗೆ ಮಾಟ ಮಂತ್ರಗಳಲ್ಲಿ ಗಾಢವಾದ ನಂಬಿಕೆ ಇದ್ದಂತೆ ಕಂಡು ಬರುವುದಾದರೂ ಮಾಟಗಾರಿಕೆಯಲ್ಲಿ ಪರಿಣಿತರಾದವರು ಇವರಲ್ಲಿ ಯಾರೂ ಸಿಗದಿರುವುದು ಸೋಜಿಗ. ಅಗತ್ಯ ಎನಿಸಿದಾಗ ಇತರ ಕೋಮಿಗೆ ಸೇರಿದ ಮಾಟಗಾರರನ್ನು ಸಂಪರ್ಕಿಸುವುದೇ ಹೆಚ್ಚು. ದ್ವೇಷಾಸೂಯೆಗಳು ಇಂಥ ಮಾಟಕ್ಕೆ ಕಾರಣವಾದ್ದರಿಂದ ಈ ರೀತಿಯ ಕಪ್ಪುಮಾಟ (Black Magic) ರೂಢಿಗೆ ಬಂದಂತೆ ಕಾಣುತ್ತದೆ. ಸಾಮಾನ್ಯವಾಗಿ ಕೇಡುಂಟು ಮಾಡಿದವರಿಗೆ ಮಾತ್ರ ಮಾಟದ ಪರಿಣಾಮವಾಗುವುದೆಂದೂ ಒಳ್ಳೆಯವರ ಮೇಲೆ ಇದು ಪ್ರಭಾವ ಬೀರದೆಂದೂ ನಂಬಿಕೆ.[೩೩]

### ೩.೪.೭ ಧನಗರ್ ಗೌಳಿ ಸಮುದಾಯದಲ್ಲಿ ಒಳಾಡಳಿತ ವ್ಯವಸ್ಥೆ – ನ್ಯಾಯ ಪಂಚಾಯತಿ[೩೪]

ಗೌಳಿಗರ ಒಳಾಡಳಿತ ವ್ಯವಸ್ಥೆ ವಿಶಿಷ್ಟ ಬಗೆಯದಾಗಿದೆ. ಪರಂಪರಾಗತವಾಗಿ ಗೌಳಿ ಸಮುದಾಯದಲ್ಲಿ ನಡೆದು ಬಂದ ಒಳಾಡಳಿತ ವ್ಯವಸ್ಥೆ ನಿಜವಾದ ಅರ್ಥದಲ್ಲಿ ಒಂದು ನ್ಯಾಯ ಪಂಚಾಯತಿ ವ್ಯವಸ್ಥೆಯೆ ಆಗಿದೆ. ಈ ನ್ಯಾಯ ಪಂಚಾಯತಿಯಲ್ಲಿ ವಾಡೆಯ ಹಿರಿಯರೂ ದೈವದವರೂ ಎಂದು ಪರಿಗಣಿತರಾದ ಐವರು ಸದಸ್ಯರಿರುತ್ತಾರೆ. ಇವರನ್ನು 'ಪಂಚರು' ಎಂದೂ ಕರೆಯುವುದುಂಟು. ಯಡಿಗ, ಕೊಕ್ರೆ, ಶಳಕೆ, ಬೋಡಿಕಾರ್, ಪಾಂಡ್ರಮಿಶೆ ಈ ಐದು ಕುಳಿಗಳ ಮುಖ್ಯರು ನ್ಯಾಯ ಪಂಚಾಯತಿಯ ಸದಸ್ಯರಾಗಿ ಕಾರ್ಯ ಮಾಡುವ ವಾಡಿಕೆ ಇದೆ. ಈ ಕುಳಿಗಳ ಜನರು ಇಲ್ಲದ ಪಕ್ಷದಲ್ಲಿ ನಂತರದ ಸ್ಥಾನಗಳಲ್ಲಿ ಲಾಂಬೋರ್, ಯಮಕರ್, ಪಿಂಗಳೆ, ವರಕ್, ಕೊಕ್ರೆ ಇವರು 'ಜಾಂತೆ ಲೋಕ' ಕಾರ್ಯನಿರ್ವಹಿಸುತ್ತಾರೆ. ಈ ದೈವದವರು ತಮ್ಮೊಳಗೆ ಒಬ್ಬ ಹಿರಿಯನನ್ನು 'ಜಾಂತಾಗಡಿ'ಯಾಗಿ ಅಂದರೆ ನ್ಯಾಯ ಪಂಚಾಯತಿಯ ಮುಖ್ಯಸ್ಥನನ್ನಾಗಿ ನೇಮಿಸಿಕೊಳ್ಳುತ್ತಾರೆ. ಆತನನ್ನು 'ಜಾಂತಾ' ಎಂದು ಕರೆಯುತ್ತಾರೆ. ಪ್ರೀತಿಯಿಂದ 'ಮಾಮ', 'ಜಾಂತಾಮಾಮಾ', 'ಗೌಡಯ್ಯ' ಎಂದು ಕರೆಯುವುದುಂಟು. ಜಾಂತಾನಿಗೆ ಸಹಾಯ ಮಾಡಲು ವಾಡೆಗೊಬ್ಬ 'ಪಟೇಲ್' ಇರುತ್ತಾನೆ. ಪಟೇಲ್ ಸಾಮಾನ್ಯವಾಗಿ 'ಕೋಳೆಕಾರ' ಕುಳಿಗೆ ಸೇರಿದವನಿರುತ್ತಾನೆ. ಪಾಂಡ್ರಮಿಶೆ ಕುಳಿಗೆ ಸೇರಿದ ಹಿರಿಯನನ್ನು 'ಗೌಡ' ಎಂದು ಗೌರವಿಸುವುದು ರೂಢಿ. ವಾಡೆಯ ತಪ್ಪು–ಒಪ್ಪುಗಳನ್ನು ಮೊದಲು ಪರಿಶೀಲಿಸುವುದು 'ಜಾಂತ್ಯಾ'. ಇವನು ನಂತರ ದೈವದವರನ್ನು ಕರೆದು ಸಮಸ್ಯೆಯನ್ನು ವಿವರಿಸುತ್ತಾನೆ. ಸಣ್ಣಪುಟ್ಟ ತೊಂದರೆಗಳಾದರೆ ಪ್ರಾಥಮಿಕ ಹಂತದಲ್ಲೇ ಇತ್ಯರ್ಥಗೊಳಿಸುವ ಹೊಣೆ ಅವನದು. ಅವನ ಮಾತಿಗೆ ಸರ್ವತ್ರ ಮನ್ನಣೆ ಇರುತ್ತದೆ.

ಸಾಮಾನ್ಯವಾಗಿ ನ್ಯಾಯ ಪಂಚಾಯತಿಯು ಯಡಿಗ್ಯನ ಅಥವಾ 'ಜಾಂತ್ಯಾ' ನ ಮನೆಯಲ್ಲಿ ನಡೆಯುತ್ತಿತ್ತು. ಈಗ ಸಾಮಾನ್ಯವಾಗಿ ದೇವಾಲಯ ಅಥವಾ ವಾಡೆಯ ಕೇಂದ್ರ ಸ್ಥಾನದಲ್ಲಿ ಅದಕ್ಕೆ ಮೀಸಲಾದ ಕಟ್ಟೆಯ ಮೇಲೆ ಕುಳಿತು ಪಂಚಾಯತಿ ನಡೆಸುತ್ತಾರೆ. ನ್ಯಾಯ ಕೊಡಲು ಪಂಚರು ಕೂಡ್ರುವ ತಾಣ ಗೌಳಿಗರ ಪಾಲಿಗೆ ನ್ಯಾಯಾಲಯ. ಈ ಸಭೆಗೆ ನ್ಯಾಯಸ್ಥಾನಕ್ಕೆ ಸಲ್ಲುವ ಎಲ್ಲ ಗೌರವಾದರಗಳು ಸಲ್ಲುತ್ತವೆ. ನ್ಯಾಯ ತೀರ್ಮಾನ ಕೈಗೊಳ್ಳಲು ದೈವದವರು ನಡೆಸುವ ಸಭೆಗೆ ಎಲ್ಲರಿಗೂ ಪ್ರವೇಶವಿರುತ್ತದೆ. ಸಾಮಾನ್ಯವಾಗಿ ಸ್ತ್ರೀಯರಿಗೆ ಪ್ರವೇಶವಿರುವುದಿಲ್ಲ. ಆದರೆ ಸ್ತ್ರೀಯರಲ್ಲಿ ಯಾರಾದರೂ ವಾದಿ/ಪ್ರತಿವಾದಿ/ಸಾಕ್ಷಿದಾರರು/ ಆರೋಪಿ ಇದ್ದಲ್ಲಿ ಅಲ್ಲಿಗೆ ಬರಬಹುದಾಗಿದೆ. ಅಲ್ಲಿ ನಡೆಯುವ ಚರ್ಚೆಯಲ್ಲಿ ವಾಡೆಯ ಸಮಸ್ತರೂ ಭಾಗವಹಿಸಿಬಹುದಾಗಿದೆ ಮತ್ತು ಪಂಚರಿಗೆ ಸಲಹೆಯನ್ನು ನೀಡಬಹುದು. ಆದರೆ ಅಂತಿಮ ನ್ಯಾಯ ತೀರ್ಮಾನ ಮಾತ್ರ ದೈವದವರದೇ ಆಗಿರುತ್ತದೆ. ಪಂಚರು ಜಗಳಗಳನ್ನು ತಲಸ್ಪರ್ಶಿಯಾಗಿ ಪರಿಶೀಲಿಸಿ ಬುಡಕಟ್ಟಿನ ಪರಂಪರೆ, ಹಿಂದೆ ನಡೆದ ತೀರ್ಮಾನಗಳ ಹಿನ್ನೆಲೆಯಲ್ಲಿ ದಂಡ ಹಾಗೂ ಶಿಕ್ಷೆಗಳನ್ನು ನೀಡುತ್ತಾರೆ. ಒಮ್ಮೆ ದೈವದವರಿಂದ ತೀರ್ಪು ಹೊರಬಿದ್ದ ಮೇಲೆ ಅದನ್ನು ಯಾರೂ (ನ್ಯಾಯ ಯಾಚಿಸಿದವರು ಮತ್ತು ನ್ಯಾಯ ಅಥವಾ ದೌರ್ಜನ್ಯ ಮಾಡಿದವರು) ಪ್ರಶ್ನಿಸುವಂತಿಲ್ಲ ಹಾಗೂ ಅದನ್ನು ಯಾವುದೇ ರೀತಿಯಿಂದ ಉಲ್ಲಂಘಿಸಲಾಗುವುದಿಲ್ಲ.

ಅಸ್ತಿತ್ವದಲ್ಲಿರುವ ನ್ಯಾಯಪಂಚಾಯತಿಯು ವಾಡೆಯ ಜನಗಳ ಸಮಸ್ಯೆಗಳನ್ನು ಬಗೆಹರಿಸುವ ಕಾರ್ಯವನ್ನು ಮಾಡುತ್ತದೆ. ವಾಡೆಯಲ್ಲಿ ನಡೆಯುವ ವ್ಯಕ್ತಿಗಳ ಕುಟುಂಬದ ನ್ಯಾಯಗಳು, ವಿಧಿ-ಆಚರಣೆಗೆ ಸಂಬಂಧಿಸಿದ ಧಾರ್ಮಿಕ ನ್ಯಾಯಗಳು, ವಿವಾಹ, ವ್ಯಭಿಚಾರ, ಕಳ್ಳತನ, ಮೋಸಗಳಿಗೆ ಸಂಬಂಧಿಸಿದ ಅಹವಾಲುಗಳನ್ನು ನ್ಯಾಯ ಪಂಚಾಯತಿ ನಿಭಾಯಿಸುತ್ತದೆ. ಶಾಂತಿಯಿಂದ ನೆಮ್ಮದಿಯಿಂದ ಜೀವನ ಸಾಗಿಸುವಂತೆ ಮಾಡಲು ಪಂಚಾಯತಿ ಸದಾ ಕಾರ್ಯನಿರತವಾಗಿರುತ್ತದೆ. ಸಮುದಾಯದ ಸಂಘಟನೆಯ ದೃಷ್ಟಿಯಿಂದ ಹಾಗೂ ವಾಡೆಯ ಮೇಲಿನ ಅಭಿಮಾನ ಗೌರವಗಳನ್ನು ಕಾಪಾಡಿಕೊಳ್ಳುವುದಕ್ಕಾಗಿ ಗೌಳಿಗರು ತಮ್ಮ ವಿವಾದಗಳನ್ನು ಬಯಲು ಮಾಡದೇ ತಮ್ಮ ತಮ್ಮಲ್ಲೆ ಬಗೆ ಹರಿಸಿಕೊಳ್ಳಲು ಇಚ್ಛಿಸುತ್ತಾರೆ. ಅದಕ್ಕಾಗಿ ತಮ್ಮಲ್ಲಿ ಉದ್ಭವಿಸುವ ಜಗಳ ಇಲ್ಲವೆ ಜಟಿಲ ಸಮಸ್ಯೆಗಳು ಎಂಥ ಪ್ರಸಂಗದಲ್ಲೂ ಅನ್ಯ ಸಮಾಜದವರಿಗೆ ತಿಳಿಯದಂತೆ ಜಾಗ್ರತೆ ವಹಿಸುತ್ತಾರೆ. ಎಲ್ಲ ಬಗೆಯ ಅಪರಾಧಗಳಿಗೂ ಇವರು ದೈವದವರ ಬಳಿ ನ್ಯಾಯ ಬಯಸುತ್ತಾರೆ.

ಗೌಳಿಗರಲ್ಲಿ ಬುಡಕಟ್ಟಿನ ಒಳಾಡಳಿತ ವ್ಯವಸ್ಥೆಯನುಸಾರ ಅಪರಾಧಿಗಳಿಗೆ ಅವರ ಅಪರಾಧಗಳಿಗನುಗುಣವಾಗಿ ನಾನಾ ಬಗೆಯ ದಂಡನೆಗಳು ಹಾಗೂ ಶಿಕ್ಷಾ ಪದ್ಧತಿಗಳಿವೆ. ಈ ದಂಡನೆ, ಶಿಕ್ಷೆಗಳಿಂದಾಗಿ ಬುಡಕಟ್ಟಿನಲ್ಲಿನ ದುಷ್ಟ ಹಾಗೂ ದುರ್ನಡತೆಯ ವ್ಯಕ್ತಿಗಳನ್ನು ನಿಯಂತ್ರಣದಲ್ಲಿಟ್ಟುಕೊಳ್ಳಲು ಸಾಧ್ಯವಾಗುತ್ತದೆ. ವಾಸ್ತವವಾಗಿ ಎಲ್ಲ ಗೌಳಿವಾಡಗಳಲ್ಲೂ ಕೆಲವು ನಿರ್ದಿಷ್ಟ ಕಾನೂನು ಕಟ್ಟಳೆಗಳು ಇವೆ. ಗೌಳಿಗರಲ್ಲಿ ರೂಢಿಯಲ್ಲಿರುವ ಬಹು ಕಠಿಣವಾದ ಶಿಕ್ಷೆ ಎಂದರೆ ಬಹಿಷ್ಕಾರ. ಅಪರಾಧಗಳು ಮತ್ತು ಅವುಗಳಿಗೆ ವಿಧಿಸುವ ಶಿಕ್ಷೆಗಳು ಹೀಗಿವೆ.

೧) ಗೌಳಿ ಹೆಣ್ಣು ಮಗಳು ಅನ್ಯ ಬುಡಕಟ್ಟಿನವರನ್ನು ಅಥವಾ ಬೇರೆ ಜಾತಿಯವರನ್ನು ಕೂಡಿದರೆ ಆಕೆಯನ್ನು ಬುಡಕಟ್ಟಿನಿಂದ ಹೊರ ಹಾಕುವುದಲ್ಲದೆ ದಂಡ ವಿಧಿಸುತ್ತಾರೆ. ಆ ಹೆಣ್ಣುಮಗಳು ಗರ್ಭಿಣಿಯಾಗಿದ್ದರಂತೂ ವಾಡೆಯೊಳಗೆ ಪ್ರವೇಶ ಮಾಡಲು ಬಿಡುವುದಿಲ್ಲ. ಒಂದು ವೇಳೆ ಅದಕ್ಕೆ ಕಾರಣನಾದ ವ್ಯಕ್ತಿ ಗೌಳಿ ಬುಡಕಟ್ಟಿಗೆ ಸೇರಿದ್ದರೆ ಆತನಿಗೆ ಮದುವೆ ಮಾಡಿಸುತ್ತಾರೆ.

೨) ಒಂದೇ ಕುಳಿಗೆ ಸೇರಿದ ಅವಿವಾಹಿತ ಗಂಡು-ಹೆಣ್ಣುಗಳು ಲೈಂಗಿಕ ಸಂಪರ್ಕ ಸಾಧಿಸಿ ಹೆಣ್ಣು ಗರ್ಭಿಣಿಯಾದರೆ ಅವಳನ್ನು ಬುಡಕಟ್ಟಿನ ನೆಲೆಯಿಂದಲೇ ಹೊರ ಹಾಕುತ್ತಾರೆ. ಮುಂದೆ ಆಕೆ ವಿವಾಹ ಜೀವನ ನಡೆಸಲು ಕೂಡ ಬಿಡುವುದಿಲ್ಲ. ಎಂದರೆ ಆಜೀವ ಪರ್ಯಂತ ಅವಿವಾಹಿತಳಾಗಿಯೇ ಅವಳು ಉಳಿಯಬೇಕಾಗುತ್ತದೆ.

೩) ಒಂದೇ ಕುಳಿಗೆ ಸೇರಿದ ಗಂಡು ಹೆಣ್ಣುಗಳು ಪರಸ್ಪರ ಒಪ್ಪಿಗೆಯಿಂದ ಮದುವೆಯಾಗ ಬಯಸಿದರೆ ಪ್ರಾಯಶ್ಚಿತ್ತ ವಿಧಿಗೆ ಗುರಿಯಾಗಬೇಕಾಗುತ್ತದೆ. ಈ ಇಬ್ಬರೂ ಐವರು ಪಂಚರೊಡನೆ ನದಿಗೆ ಹೋಗಿ ಗಂಗಾಪೂಜೆ ನಿರ್ವಹಿಸಿ ಜಳಕ ಮಾಡಬೇಕು. ಪಂಚರು ಬೊಗಸೆಯಿಂದ ನೀರು ಪ್ರೋಕ್ಷಿಸಿದ ಮೇಲೆ ಹೊಸ ವಸ್ತ್ರ ಕೊಟ್ಟು ಕರೆದು ತರುತ್ತಾರೆ.

ಅಂಗೈ ಮೇಲೆ ಗೋಮೂತ್ರ ಹಾಕಿ ಕುಡಿಸುವುದು ವಾಡಿಕೆ. ಕೊನೆಯಲ್ಲಿ ವಿಠಲ ದೇವರಿಗೆ ತಪ್ಪು ಕಾಣಿಕೆ ಸಲ್ಲಿಸಿ ಕ್ಷಮೆಯಾಚಿಸಬೇಕು. ಆ ದಿನದ ಕ್ರಿಯಾಚರಣೆಯ ಅಂಗವಾಗಿ ಒಂದು ಕೋಳಿಯನ್ನು ಬಲಿ ಕೊಡುತ್ತಾರೆ. ಒಂದು ತಂಬಿಗೆಗೆ ನೀರು ಹಾಕಿ ತುಳಸಿ, ಸೆಗಣಿ, ಗೋಮೂತ್ರ ಎಲ್ಲ ಸೇರಿಸಿ ಮಾವಿನ ಸೊಪ್ಪಿನಿಂದ ಮನೆಗೆ ಸಿಂಪಡಿಸಿ ಶುದ್ಧ ಮಾಡುತ್ತಾರೆ. ಇಬ್ಬರೂ ತಲಾ ೫೦ ರೂಪಾಯಿ ದಂಡ ಪಾವತಿ ಮಾಡಿ ವಿಠೋಬ ದೇವರಿಗೆ ಕಾಯಿ ಒಡೆಯುತ್ತಾರೆ.

೪) ವಿವಾಹಿತ ಹೆಣ್ಣು ಅವಿವಾಹಿತ ಗಂಡನ್ನು ಕೂಡಿದರೆ ಅಥವಾ ಇಷ್ಟಪಟ್ಟರೆ ಪಂಚರು ಆಕೆಗೆ ದಂಡ ವಿಧಿಸಿ, ಶುದ್ಧೀಕರಣ ಮಾಡುತ್ತಾರೆ. ಆಕೆಗೆ ಸೆಗಣಿ ನೀರನ್ನು ಚಿಮಕಿಸಿ, ಚಪ್ಪಲಿಯಿಂದ ಹೊಡೆದು ನಂತರ ಗಂಗೆಯಲ್ಲಿ ಮುಳುಗಿಸಿ ಪವಿತ್ರಗೊಳಸಿ ಕರೆತಂದು ಯಡಿಗ್ಯನ ಸಮಕ್ಷಮದಲ್ಲಿ ನೆಲದ ಮೇಲೆ ಊಟ ಮಾಡಿ ವಿಠೋಬನನ್ನು ನೆನೆಸಿಕೊಂಡು ಶುದ್ಧಳಾಗಬೇಕಾಗುತ್ತದೆ.

೫) ವಿಧವೆ ಬೇರೆಯವರಿಂದ ಗರ್ಭಧರಿಸಿದರೆ ಅವಳು ಹೆರುವ ಮಗುವನ್ನು ಕೆಳಜಾತಿಯವರಿಗೆ ದಾನ ಮಾಡಿ, ಆಕೆಯನ್ನು ಬುಡಕಟ್ಟಿನ ಕಟ್ಟಳೆಗನುಸಾರವಾಗಿ ಶುದ್ಧೀಕರಣಕ್ಕೆ ಗುರಿ ಮಾಡುತ್ತಾರೆ. ತಾಯಿಯು ಮಗುವನ್ನು ತೊರೆಯಲು ಒಪ್ಪದಿದ್ದರೆ ಅವಳನ್ನು ಮಗುವಿನೊಡನೆ ಕೆಳಜಾತಿಯವರು ಕರೆದೊಯ್ಯುತ್ತಾರೆ.

೬) ಗೌಳಿ ಪುರುಷನು ತಮಗಿಂತ ಕೀಳೆಂದು ಪರಿಗಣಿತರಾದ ಸ್ತ್ರೀಯನ್ನು ಕೂಡಿದರೆ ಗೌಳಿಯ ಜುಟ್ಟು ತೆಗೆಯುವುದು ಕ್ರಮ. ಆದರೆ ಮೀಸೆಯನ್ನು ಮಾತ್ರ ಬೋಳಿಸಿಕೊಳ್ಳುವಂತಿಲ್ಲ. ಜುಟ್ಟು ತೆಗೆಸಿಕೊಂಡವರು ಬುಡಕಟ್ಟಿನ ಅನಾದರಕ್ಕೆ ಗುರಿಯಾಗುವುದು ಸಹಜ.

೭) ನೇಣು ಹಾಕಿಕೊಂಡು ಸಾಯಲು ಕಾರಣವಾದವರಿಗೆ ಹಸು ಅಥವಾ ಎಮ್ಮೆಯನ್ನು ಕೊಂದವರಿಗೆ, ನಾಯಿ ಅಥವಾ ಬೆಕ್ಕಿನ ಶವವನ್ನು ಮುಟ್ಟಿದವರಿಗೆ ದಂಡ ವಿಧಿಸಲಾಗುವುದು. ಬೆಕ್ಕು ಸತ್ತ ಮನೆಯಲ್ಲಿ ಐದು ವಾರಗಳ ಕಾಲ ಅಡುಗೆ ಮಾಡುವುದಿಲ್ಲ.

೮) ಬುಡಕಟ್ಟಿನ ನಿಯಮದ ಪ್ರಕಾರ ಗೌಳಿಗರು ಸಾಕಿದ ದನಕರುಗಳನ್ನು ಹಗ್ಗದಿಂದ ಕಟ್ಟಿ ಹಾಕಿದಾಗ ಅಥವಾ ಮುಗುದಾಣಕ್ಕೆ ಗಂಟು ಇರುವಾಗ ಸತ್ತರೆ ಹಾಗೂ ಕೋಲಿನಿಂದ ಹೊಡೆದಾಗ ಸತ್ತರೆ ಯಾವ ವ್ಯಕ್ತಿ ಆ ಹಗ್ಗವನ್ನು ಕೊರಳಿಗೆ ಕಟ್ಟಿರುತ್ತಾರೊ ಅಂತವರಿಗೆ, ಯಾವ ವ್ಯಕ್ತಿ ಕೋಲಿನಿಂದ ಹೊಡೆದಿರುತ್ತಾನೋ ಅಂತವರಿಗೆ ಪರಾಶಿತ್ ಬರುತ್ತದೆ. ಪ್ರಾಯಶ್ಚಿತ್ತವಾಗಿ ಆ ವ್ಯಕ್ತಿಯನ್ನು ೨೧ ದಿನದವರೆಗೆ ಮನೆಯೊಳಗೆ ಕರೆದುಕೊಳ್ಳುವುದಿಲ್ಲ. ಅವನು ಮನೆಯ ಹೊರಗೆ ಇರಬೇಕು ಆಹಾರವನ್ನು ನೆಲದ ಮೇಲೆ ಉಣ್ಣಬೇಕು. ನೀರನ್ನು ಮೇಲಿಂದ ಕುಡಚಿಯಲ್ಲಿ ಹಾಕಿದಾಗ ಕುಡಿಯಬೇಕು. ೨೧ ದಿನದ ನಂತರ ಬುಡಕಟ್ಟಿನ ಕಟ್ಟಳೆಗನುಸಾರವಾಗಿ ಶುದ್ಧೀಕರಣಕ್ಕೊಳಗಾಗಬೇಕು.

೯) ಹಿಂಸೆ, ಕೊಲೆ ಅನಾಚಾರಾದಿಗಳಿಗಾಗಿ ಬಹಿಷ್ಕೃತರಾದವರು ಧರತಿ ಮತ್ತು ಗಂಗಾಪೂಜೆಯನ್ನು ನಿರ್ವಹಿಸಬೇಕು. ನಂತರ ವಾಡೆಯ ಸಮಸ್ತರ ಸಮಕ್ಷಮದಲ್ಲಿ

ಕೆಲವು ಕ್ರಿಯಾವಿಧಿಗಳನ್ನು ಪಾಲಿಸಬೇಕಾಗುತ್ತದೆ. ಮೊದಲಿಗೆ ಮೈಮೇಲಿನ ವಸ್ತ್ರಗಳನ್ನು ಕಳೆದು ನಿಂತುಕೊಳ್ಳಬೇಕು. ಎರಡನೆಯದಾಗಿ ಹುಲ್ಲು ಬೆಂಕಿಯಲ್ಲಿ ನಗ್ನವಾಗಿ ನಿಂತು ಪವಿತ್ರರಾಗಬೇಕು. ಮೂರನೆಯದಾಗಿ ಕಿವಿ ಹಿಡಿದುಕೊಂಡು ಕುಳಿತು ಸೆಗಣಿ ತಿನ್ನಬೇಕು. ಕಿವಿಗೆ ಕಲ್ಲು ಹರಳು ತುಂಬಿ ಹಣೆಗೆ ನಾಣ್ಯ ಅಂಟಿಸಿಕೊಂಡು ಯಡಿಗ್ಯನ ಪಾದಪೂಜೆ ಮಾಡಿ ನೀರು ಕುಡಿಯುವುದು ನಾಲ್ಕನೆಯ ಕ್ರಿಯೆ. ಹೀಗೆ ಶುದ್ದೀಕರಣಕ್ಕೊಳಗಾದ ತಪ್ಪಿತಸ್ಥರು ಮೊದಲಿನ ಗೌರವಾದರಗಳನ್ನು ಮರಳಿ ಸಂಪಾದಿಸುವುದು ಸಾಧ್ಯ.

ದೇವರೊಡನೆ, ಯಡಿಗ್ಯನೊಡನೆ ಅಸಭ್ಯವಾಗಿ ವರ್ತಿಸಿದರೆ ದಂಡ ತೆರಬೇಕಾಗುತ್ತದೆ. ಬಹುತೇಕ ನ್ಯಾಯಗಳು ಬುಡಕಟ್ಟಿನ ನಿಯಮ/ಕಟ್ಟಳೆಗಳನ್ನು ಉಲ್ಲಂಘಿಸುವವರ ವಿರುದ್ಧ ನಡೆಸುವ ಶಿಕ್ಷೆಗಳ ತೀರ್ಮಾನಗಳೇ ಆಗಿರುತ್ತವೆ. ಒಟ್ಟಿನಲ್ಲಿ ಗೌಳಿಗರ ಒಳಾಡಳಿತ ವ್ಯವಸ್ಥೆ ವಿಶಿಷ್ಟ ರೀತಿಯದ್ದಾಗಿದೆ.

ಇಡೀ ಬುಡಕಟ್ಟು ಜೀವನವನ್ನು ನಿಯಂತ್ರಿಸುತ್ತಿರುವ ಈ ಒಳಾಡಳಿತ ವ್ಯವಸ್ಥೆಯ ಸಾಂಪ್ರದಾಯಿಕ ಗುರುತುಗಳಿನ್ನೂ ಮಾಸಿಲ್ಲದಿರುವುದು ಗಮನಾರ್ಹವಾಗಿದೆ. ಇವರ ಒಳಾಡಳಿತ ವ್ಯವಸ್ಥೆಯ ಮೇಲೆ ಎಷ್ಟೋ ಬೇರೆ ಬುಡಕಟ್ಟುಗಳ ಪ್ರಭಾವ ಆಗಿದ್ದರೂ ಹಳೆಯ ಒಳಾಡಳಿತ ವ್ಯವಸ್ಥೆ ಸ್ವಲ್ಪ ಮಟ್ಟಿಗೆ ಅಸ್ತಿತ್ವದಲ್ಲಿರುವುದು ಕಂಡು ಬರುತ್ತದೆ.

ಈ ರೀತಿಯಲ್ಲಿ ಗೌಳಿಗರ ಸಾಮಾಜಿಕ ಜೀವನ ಒಂದು ವೈಶಿಷ್ಟ್ಯ ಪೂರ್ಣವಾದ ಸಾಮಾಜಿಕ ವ್ಯವಸ್ಥೆಯನ್ನು ಪ್ರತಿನಿಧಿಸುವುದನ್ನು ನಾವು ಕಾಣುತ್ತೇವೆ. ಯಾವುದೇ ಬುಡಕಟ್ಟಿನ ಅಧ್ಯಯನದಲ್ಲಿ ಕೆಲವು ಸಾಮಾನ್ಯ ಅಂಶಗಳು ಕಂಡು ಬಂದರೂ ಕೂಡಾ ತನ್ನದೇ ಆದ ಕೆಲವು ವೈಶಿಷ್ಟ್ಯ ಪೂರ್ಣ ಲಕ್ಷಣಗಳಿಂದ ಇತರ ಬುಡಕಟ್ಟುಗಳಿಗಿಂತಲೂ ಭಿನ್ನವಾಗಿರುತ್ತದೆ ಎಂಬುದು ನಿರ್ವಿವಾದ. ಗೌಳಿಗರ ವಸತಿಗಳು, ಕುಟುಂಬ ವ್ಯವಸ್ಥೆ, ವಿವಾಹ, ಸೀಮಂತ, ಜನನ, ಮರಣ, ಇತ್ಯಾದಿ ಸಮಯದ ಆಚರಣೆಗಳು ಅವರ ಬದುಕಿನ ಮೂಲಾಧಾರವಾಗಿರುವ ಅಡವಿಗೆ ಹೊಂದಿಕೊಂಡಿರುವುದು ನಾವು ಗಮನಿಸಬೇಕಾದ ಪ್ರಮುಖ ಅಂಶವಾಗಿದೆ. ತಮ್ಮ ಮೂಲಸ್ಥಾನದಿಂದ ೩-೪ ತಲೆಮಾರು ಹಿಂದೆಯೇ ನೂರಾರು ಮೈಲು ದಾಟಿ ವಲಸೆ ಬಂದಿರುವ ಕರ್ನಾಟಕದ ಗೌಳಿಗರು ತಮ್ಮ ಸಾಮಾಜಿಕ ರೂಢಿ ನೀತಿಗಳು ಹಾಗೂ ದೈವಾಚಾರಣೆಗಳನ್ನು ಇನ್ನು ಕಾಯ್ದುಕೊಂಡಿರುವುದು ಇವರ ವೈಶಿಷ್ಟ್ಯಪೂರ್ಣ ಬದುಕಿಗೆ ಒಂದು ಪ್ರಮುಖ ಸಾಕ್ಷಿಯಾಗಿದೆ.

**ಕತೆ**

ಗೌಳಿ ಸ್ತ್ರೀಯರು ಸಾಮಾನ್ಯವಾಗಿ ಎಮ್ಮೆ ಕರುಗಳ ಕೊಟ್ಟಿಗೆ ಕೆಲಸದಲ್ಲಿ ನಿರತರಾಗಿರುವುದರಿಂದ ಕಚ್ಚೆ ಧರಿಸುವುದು ಅನಿವಾರ್ಯವಾಗುತ್ತದೆ. ಕಚ್ಚೆಯನ್ನು ಹಾಕಿಕೊಳ್ಳುವ ಬಗ್ಗೆ ಸ್ತ್ರೀಯರು ಕತೆಯನ್ನು ಹೇಳುತ್ತಾರೆ. ಹಿಂದಿನ ಕಾಲದಲ್ಲಿ ಎಮ್ಮೆ ಕರುಗಳಿಗೆ ಮೇವನ್ನು ತರಲು ಹೋದ ಗರ್ಭಿಣಿ ಹೆಂಗಸೊಬ್ಬಳು ಮರದ ಮೇಲೆ ಹತ್ತಿ ಸೊಪ್ಪನ್ನು ಗಿಡದಿಂದ ಸವರುತ್ತಿರುವಾಗ ಹೆರಿಗೆಯ ಬೇನೆ ಬಂದು ಮಗುವನ್ನು ಮರದ ಮೇಲೆ ಕುಳಿತುಕೊಂಡೇ ಹೆತ್ತಳು. ಆಗ ಮಗು ಮರದಿಂದ ಕೆಳಗೆ ಬಿದ್ದು ಪ್ರಾಣ ಬಿಟ್ಟಿತಂತೆ. ಒಂದು ವೇಳೆ ಆ ಹೆಂಗಸು ಕಚ್ಚೆಯನ್ನು ಹಾಕಿಕೊಂಡಿದ್ದರೆ ಮಗು ಕೆಳಗೆ ಬೀಳುವ ಅಪಾಯ ಸಂಭವಿಸುತ್ತಿರಲಿಲ್ಲ. ಅಂದಿನಿಂದ ಗೌಳಿ ಸ್ತ್ರೀಯರು ಕಚ್ಚೆ ಹಾಕಿಕೊಂಡು ಕೆಲಸ ಮಾಡಲು ಪ್ರಾರಂಭಿಸಿದರು.

**ಅಡಿಟಿಪ್ಪಣಿಗಳು :**

೧) R.E. Enthoven - The Tribes & Castes of Bombay-1922, PP. 311

೨) ಅದೇ ಪು. ೩೧೧.

೩) ಅದೇ ಪು. ೩೧೮

೪) ಅದೇ ಪು. ೩೧೮, ೩೧೯

೫) ಅದೇ ಪು. ೩೧೯

೬) ಅದೇ ಪು. ೩೧೯

೭) ಅದೇ ಪು. ೩೧೯

೮) ಅದೇ ಪು. ೩೧೯

೯) ಅದೇ ಪು. ೩೧೪

೧೦) ಮುಂಬೈ ಇಲಾಖೆಗೆ ಸೇರಿದ ಕರ್ನಾಟಕ ಭಾಗದ ಗ್ಯಾಝೆಟಿಯರ್ – ೧೮೯೨. ಪು. ೪೩೮–೪೧

೧೧) ಅಂಬಳಿಕೆ ಹಿರಿಯಣ್ಣ, 'ಕಚ್ಚೆಗೌಳಿಗರ ಸಂಸ್ಕೃತಿ' – ೧೯೯೨. ಪು. ೩, ೪.

೧೨) ಅದೇ ಪು. ೯, ೧೦.

೧೩) ಕ್ಷೇತ್ರ ಕಾರ್ಯ, ಸಂದರ್ಶನ ಹಾಗೂ ಗುಂಪು ಚರ್ಚೆ, ಗೌಳಿವಾಡಾ ಮುಖಂಡರ ಸಂದರ್ಶನ,

೧೪) ಡಾ॥ ಎಚ್. ಎಮ್. ಮಹೇಶ್ವರಯ್ಯ – 'ಗೌಳಿಗರು' ಲೇಖನ, ಕರ್ನಾಟಕ ಬುಡಕಟ್ಟುಗಳು, ಸಂಪುಟ–೧. ಪುಟ–೧೧೧

೧೫) ಕ್ಷೇತ್ರ ಕಾರ್ಯ, ಸಂದರ್ಶನ : ಬಾಗು ಪಿಂಗಳೆ.

೧೬) ಹಾಗೂ ಗುಂಪು ಚರ್ಚೆ, ಗೌಳಿವಾಡಾ ಮುಖಂಡರ ಸಂದರ್ಶನ,

೧೭) ಐ.ಸಿ. ಮುಳಗುಂದ – ಸಾಮಾಜಿಕ ಸಂಸ್ಥೆಗಳು, ಸಾಮಾಜಿಕ ಸಮೂಹಗಳು ಮತ್ತು ಪರಿವರ್ತನೆ, ೨೦೧೧, ಪು. ೧೨೨, ೧೨೩

೧೮) ಅದೇ ಪು. ೧೨೩.

೧೯) ಅದೇ ಪು. ೧೩೦.

೨೦) ಅದೇ ಪು. ೧೩೦, ೧೩೧

೨೧) ಐ.ಸಿ. ಮುಳಗುಂದ – ಭಾರತೀಯ ಸಮಾಜದ ಅಧ್ಯಯನ, ೨೦೦೯ ಪು. ೧೩,೧೪.

೨೨) ಅದೇ ಪು. ೧೫.

೨೩) ಅದೇ ಪು. ೧೫,೧೬

೨೪) ಅದೇ ಪು. ೧೬,೧೭

೨೫) ಡಾ॥ ಪಿ.ಚಿ. ಬೋರಲಿಂಗಯ್ಯ–'ಕುಣಬಿಯರು', ಪ್ರಸಾರಾಂಗ, ಕ.ವಿ.ವಿ. ಹಂಪಿ–೨೦೧೦, ಪು. ೩೮, ೩೯.

೨೬) R.E. Enthoven - The Tribes & Castes of Bombay-1922, PP. 311

೨೭) Gadgil & Malhotra - The Ecological Basis of the Geographical Distribution of the Dhangars : A Pastoral Caste-cluster of Maharashtra, South Asian Authropologist-1981, PP. 50.

೨೮) 'ಧನಗರಗೌಳಿ ಸಮುದಾಯದ ಸಾಂಪ್ರದಾಯ ಪದ್ಧತಿಯ ಇಣುಕು ನೋಟ' ಬಾಗು ಬಾಬು ಪಿಂಗಳೆ (ಸಂ) – ಉ.ಕ. ಜಿಲ್ಲಾ ದನಗರ ಗೌಳಿ ಸಮುದಾಯ ಸಮಿತಿ (ರಿ), ಮಾದೇಕೊಪ್ಪ, ಯಲ್ಲಾಪೂರ – ಪ್ರಕಾಶಕರು ಪುಟ–೩, ೪.

೨೯) ಡಾ॥ ಎಚ್. ಎಮ್. ಮಹೇಶ್ವರಯ್ಯ – 'ಗೌಳಿಗರು' ಲೇಖನ, ಪುಟ–೧೦೩ ಮತ್ತು ಬಾಗು ಬಾಬು ಪಿಂಗಳೆ (ಸಂ) – ದನಗರ ಗೌಳಿ ಸಮುದಾಯದ ಸಾಂಪ್ರದಾಯ ಪದ್ಧತಿಯ ಇಣುಕು ನೋಟ. ಪುಟ–೩.

೩೦) ಬಾಗು ಪಿಂಗಳೆ (ಸಂ) – 'ದನಗರ ಗೌಳಿ ಸಮುದಾಯದ ಸಾಂಪ್ರದಾಯ ಪದ್ಧತಿಯ ಇಣುಕು ನೋಟ'. ಪುಟ–೬. ಮತ್ತು ಕ್ಷೇತ್ರಕಾರ್ಯ – ಸಮುದಾಯದ ಹಿರಿಯರೊಂದಿಗೆ ಅಂಬಿಕಾನಗರದ ಅಡಿಟ್ ನಂ. II ಗ್ರಾಮದಲ್ಲಿ ೧೭/೬/೨೦೧೦ ರಂದು ಗುಂಪು ಚರ್ಚೆ – ಸಾಮಾಜಿಕ ಶ್ರೇಣೀಕರಣ ಕುರಿತು.

೩೧) ಡಾ॥ ಎಚ್. ಎಂ. ಮಹೇಶ್ವರಯ್ಯ – ಗೌಳಿಗರು, ಲೇಖನ, ಪು. ೧೦೫.

೩೨) ಕ್ಷೇತ್ರಕಾರ್ಯ – ಮಾಹಿತಿ

೩೩) ಅಂಬಳಿಕೆ ಹಿರಿಯಣ್ಣ – ಕಚ್ಚೆಗೌಳಿಗರ ಸಂಸ್ಕೃತಿ – ೧೯೯೩. ಪು. ೧೩೫, ೧೩೬.

೩೪) ಅದೇ ಪು. ೫೭–೬೩.



# ಅಧ್ಯಾಯ ೪

# ಗೌಳಿ ಸಮುದಾಯದ ಸಾಮಾಜಿಕ ಸಮಸ್ಯೆಗಳು

ಅಧ್ಯಾಯ ೪

# ಗೌಳಿ ಸಮುದಾಯದ ಸಾಮಾಜಿಕ ಸಮಸ್ಯೆಗಳು

'ಗೌಳಿ ಸಮುದಾಯದ ಸಾಮಾಜಿಕ ಸಮಸ್ಯೆಗಳು' ಇದು ನನ್ನ ಈ ಅಧ್ಯಯನ ಮುಖ್ಯ ಧ್ಯೇಯವಾಗಿದ್ದರಿಂದ ಸಮಸ್ಯೆ ಪದದ ಅರ್ಥದ ಬಗ್ಗೆ ಸ್ಪಷ್ಟ ಕಲ್ಪನೆ ಅವಶ್ಯ. ಒಬ್ಬ ವ್ಯಕ್ತಿಯು ತನ್ನ ದೈನಂದಿನ ಜೀವನವನ್ನು ನಡೆಸುವ ಪ್ರಯತ್ನದಲ್ಲಿ ಅನುಭವಿಸುವ ಕಷ್ಟವೇ ಒಂದು ಸಮಸ್ಯೆ. ಜೀವನದ ಪ್ರತಿಯೊಂದು ಹಂತದಲ್ಲಿಯೂ ನಾವು ಸಮಸ್ಯೆಗಳನ್ನು ಎದುರಿಸುತ್ತೇವೆ. ನಾವು ಎದುರಿಸುವಂತಹ ಸಮಸ್ಯೆಗಳು ಹಂತದಿಂದ ಹಂತಕ್ಕೆ ಭಿನ್ನವೆನಿಸಬಹುದು. ಸಮಸ್ಯೆ ಇಲ್ಲದ ಜೀವನ, ಒಂದು ಜೀವನವೇ ಅಲ್ಲ. ಸಾಮಾನ್ಯ ಸಮಸ್ಯೆ, ಸಾಮಾಜಿಕ ಸಮಸ್ಯೆಯಾಗಿ ಪರಿವರ್ತನೆಯಾಗಬಹುದು. ಸಮಾಜದಲ್ಲಿ ಹೆಚ್ಚಿನ ಸಂಖ್ಯೆಯ ಜನರು ಒಂದು ಸಮಸ್ಯೆಯನ್ನು ಅನುಭವಿಸಲು ತೊಡಗಿ, ವ್ಯಕ್ತಿಯ ಹಂತದಲ್ಲಿ ಸಮಸ್ಯೆಯನ್ನು ನಿವಾರಿಸಲು ಸಾಧ್ಯವೆನಿಸದೇ ಇತರರ ಮಧ್ಯಸ್ಥಿಕೆ/ಸಹಾಯವನ್ನು ನಿರೀಕ್ಷಿಸುವ ಹಂತವನ್ನು ತಲುಪಿದಾಗ, ಸಮಾಜಶಾಸ್ತ್ರಜ್ಞರ ಪ್ರಕಾರ ಆ ಸಮಸ್ಯೆಯು ಒಂದು ಸಾಮಾಜಿಕ ಸಮಸ್ಯೆ ಎನಿಸುತ್ತದೆ. ಸಮಾಜಶಾಸ್ತ್ರಜ್ಞ ಗಿಲೆನ್‌ರು 'ಸಾಮಾಜಿಕ ಸಮಸ್ಯೆಗಳು' ಎಂಬ ತಮ್ಮ ಹೊತ್ತಿಗೆಯಲ್ಲಿ 'ಸಮುದಾಯದಲ್ಲಿ ತಲೆದೋರಿರುವ ವಾದಗ್ರಸ್ತವಾದ ಪ್ರಮುಖ ಸಮಸ್ಯೆಗೆ ಸಾಮಾಜಿಕ ಸಮಸ್ಯೆ ಎಂದು ವ್ಯಾಖ್ಯಾನಿಸಿದ್ದಾರೆ.'[೧] ಸಮುದಾಯದ ಏಳ್ಗೆಯ ದೃಷ್ಟಿಯಿಂದ ಇಂತಹ ವಾದಗ್ರಸ್ತ ಸಮಸ್ಯೆಗಳ ನಿವಾರಣೆಯು ಅತ್ಯಧಿಕ ಮಹತ್ವದ್ದಾಗಿದೆ. ಕೆಲವು ಸಮಸ್ಯೆಗಳು ಮಾತ್ರ ಸಾಮಾಜಿಕ ಸಮಸ್ಯೆಯ ಸ್ವರೂಪವನ್ನು ಪಡೆಯುತ್ತವೆ.

ಸಾಮಾಜಿಕ ಸಮಸ್ಯೆಗಳು ಒಂದು ಸಮಾಜದ ಅನಾರೋಗ್ಯಕರ ಸ್ಥಿತಿಯನ್ನು ಸೂಚಿಸುತ್ತವೆ. ಈ ಸಾಮಾಜಿಕ ಸಮಸ್ಯೆಗಳ ಸಂಖ್ಯೆ ಮತ್ತು ತೀವ್ರತೆ ಬೇರೆ ಬೇರೆ ಸಮಾಜಗಳಲ್ಲಿ ಭಿನ್ನವಾಗಿರಬಹುದು. ಸಮಾಜದ ಅಭಿವೃದ್ಧಿ ಮತ್ತು ಆರೋಗ್ಯಕರ ಬೆಳವಣಿಗೆಯ ದೃಷ್ಟಿಯಿಂದ ಈ ಸಾಮಾಜಿಕ ಸಮಸ್ಯೆಗಳ ನಿವಾರಣೆ ಅತ್ಯಂತ ಅವಶ್ಯಕ. ಭಾರತದ ಸಾಮಾಜಿಕ ಸಮಸ್ಯೆಗಳಲ್ಲಿ ಬಹುಪಾಲು ಸಮಸ್ಯೆಗಳು ಇತರ

ಎಲ್ಲ ಸಮಾಜಗಳಲ್ಲಿಯೂ ಕಂಡುಬರುವಂತಹ ಮತ್ತು ನಾಗರಿಕತೆಯೊಂದಿಗೆ ಅಂಟಿಕೊಂಡು ಬಂದಂತಹ ಸಮಸ್ಯೆಗಳೇ ಆಗಿವೆ. ಅಸ್ಪೃಶ್ಯತೆ ಭಾರತಕ್ಕೆ ವಿಶಿಷ್ಟವಾದ ಸಮಸ್ಯೆ ನಗರಗಳ ಬೆಳವಣಿಗೆ, ಕೈಗಾರಿಕೀಕರಣದಂತಹ ಇತ್ತೀಚಿನ ಪ್ರಭಾವಶಾಲಿ ಅಂಶಗಳ ಪರಿಣಾಮದಿಂದಾಗಿ ಉದ್ಭವಿಸುವಂತಹ ಸಮಸ್ಯೆಗಳು ಮತ್ತು ಅದಕ್ಕೂ ಹಿಂದಿನಿಂದ ಅಸ್ತಿತ್ವದಲ್ಲಿದ್ದ ಸಮಸ್ಯೆಗಳು ಎಲ್ಲವೂ ಹೆಚ್ಚು ಪ್ರಬಲಗೊಂಡಿವೆ, ಹೆಚ್ಚು ಮಾರಕವೆನಿಸಿವೆ. ಸಮಸ್ಯೆಗಳ ಸಂಖ್ಯೆ ಹೆಚ್ಚಿದೆ ಹಾಗೂ ಸಮಸ್ಯೆಗಳ ಭೀಕರತೆ ಹೆಚ್ಚಿದೆ. ಹೆಚ್ಚು ಲಾಭದಾಯಕವಲ್ಲದ ಕೃಷಿ ಪ್ರಧಾನ ಆರ್ಥಿಕ ವ್ಯವಸ್ಥೆ, ಹಲವು ನಂಬಿಕೆ ಮತ್ತು ಪದ್ಧತಿಗಳು, ನಾನಾ ಸಾಮಾಜಿಕ ಸಮಸ್ಯೆಗಳಿಗೆ ಎಡೆಮಾಡಿಕೊಟ್ಟಿವೆ. ಸಾಮಾಜಿಕ ರೋಗಗ್ರಸ್ಥ ಪರಿಸ್ಥಿತಿಗೆ ಅತ್ಯಂತ ತ್ವರಿತಗತಿಯ ಪರಿವರ್ತನ ಅಂಶಗಳೂ ಕಾರಣವೆನಿಸಿವೆ. ಗ್ರಾಮೀಣ ಆರ್ಥಿಕ ವ್ಯವಸ್ಥೆಯಿಂದ ನಗರ ಆರ್ಥಿಕ ವ್ಯವಸ್ಥೆ ಮತ್ತು ಕುಶಲ ಕೈಗಾರಿಕೆಯಿಂದ ಯಂತ್ರ ಕೈಗಾರಿಕೆಗೆ ಆದಂತಹ ಪರಿವರ್ತನೆ, ಅತ್ಯಂತ ಶೀಘ್ರಗತಿಯಲ್ಲಿ ಬೆಳೆದ ರೇಲ್ವೆ ನಗರಗಳು ಮತ್ತು ಪಟ್ಟಣಗಳು ಭಾರತೀಯ ಜನ–ಜೀವನದ ಮೇಲೆ ಮಹತ್ವದ ಪರಿಣಾಮವನ್ನು ಬೀರಿವೆ. ಈ ಪರಿವರ್ತನೆಯು ತೀವ್ರತರ ಆರ್ಥಿಕ ಒತ್ತಡ, ಅವಿಭಕ್ತ ಕುಟುಂಬಗಳ ಶಿಥಿಲತೆ, ಜಾತಿ ಪದ್ಧತಿಯ ಸಡಿಲತೆ ಇತ್ಯಾದಿಗಳನ್ನು ತಂದಿದೆ. ಲಾಭದಾಯಕವಲ್ಲದ ಕೃಷಿ ಕಸುಬು, ಸಾಲದ ಹೊರೆ, ನಿರುದ್ಯೋಗ ಸಮಸ್ಯೆ, ನಿರಂತರವಾಗಿ ನಗರಾಭಿಮುಖ ವಲಸೆ, ಮಹಿಳೆಯರಿಗೆ ಉದ್ಯೋಗ ಅವಕಾಶಗಳ ಕೊರತೆ ಇತ್ಯಾದಿ ಅಂಶಗಳು ಹಿಂದೆಂದೂ ಕಾಣದ ಪ್ರಮಾಣದಲ್ಲಿ ಸಾಮಾಜಿಕ ಮತ್ತು ನೈತಿಕ ಮಟ್ಟಗಳಲ್ಲಿ ಇಳಿಮುಖಕ್ಕೆ ಕಾರಣವೆನಿಸಿವೆ.[೨]

ಸಮಸ್ಯೆಗಳನ್ನು ಕುರಿತಾದ, ಶಾಸ್ತ್ರಾಧಾರಿತ ಮಾಹಿತಿ ಮತ್ತು ಜ್ಞಾನದ ಅವಶ್ಯಕತೆಯ ಅರಿವು ಮತ್ತು ಅದನ್ನು ಪಡೆಯುವ ಪ್ರಯತ್ನ ಇತ್ತೀಚಿನದೇ ಆಗಿದೆ. ಸಮಾಜವನ್ನು ಸುಧಾರಣೆಗೊಳಿಸುವ ಉದ್ದೇಶದಿಂದ ಸಾಮಾಜಿಕ ಸಮಸ್ಯೆಗಳನ್ನು ಕುರಿತಾದ ವೈಜ್ಞಾನಿಕ ಅಧ್ಯಯನದ ಅವಶ್ಯಕತೆಯ ಬಗ್ಗೆ ಪ್ರತ್ಯೇಕವಾಗಿ ಹೇಳಬೇಕಾದ ಅವಶ್ಯಕತೆಯಿಲ್ಲ. ನಾನಾ ರೀತಿಯ ಅನಿಷ್ಟಗಳಿಗೆ ಪ್ರೋತ್ಸಾಹ ಕೊಡುವಂತಹ ವಿಷವರ್ತುಲಗಳಿಗೆ ಮುಗ್ಧರು ಬಲಿಯಾಗುವುದನ್ನು ತಪ್ಪಿಸಬೇಕಾದ ಅವಶ್ಯಕತೆಯಿದೆ. ವರದಕ್ಷಿಣೆ, ಮಧ್ಯಪಾನ, ಮಾದಕ ವಸ್ತುಗಳ ನಿರ್ಬಂಧಕ್ಕೆ ಪ್ರಯತ್ನಿಸಬೇಕಾದ ಅವಶ್ಯಕತೆಯಿದೆ.[೩]

**೪.೧. ಪೀಠಿಕೆ**

ಭಾರತೀಯ ಸಾಮಾಜಿಕ ವ್ಯವಸ್ಥೆ ಒಂದು ವೈಶಿಷ್ಟ್ಯಪೂರ್ಣವಾದ ಸಂಕೀರ್ಣ ಸ್ವರೂಪದ ವ್ಯವಸ್ಥೆ ಆಗಿದೆ. ಇದರಿಂದಾಗಿ ಈ ವ್ಯವಸ್ಥೆಯಲ್ಲಿ ವರ್ಣಮಯ ವೈವಿಧ್ಯತೆ ಕಂಡು ಬರುವುದು. ಈ ವೈವಿಧ್ಯತೆ ಸಂಸ್ಕೃತಿಯ ವಿವಿಧ ರೂಪಗಳನ್ನು ಪ್ರತಿನಿಧಿಸುತ್ತದೆ. ಭಾರತೀಯ ಸಂಸ್ಕೃತಿ ಎಂಬುದು ಒಂದು ಬೃಹತ್ ಮರದ ರೂಪದಲ್ಲಿದ್ದು, ಇದರೊಳಗಿನ ಉಪಸಂಸ್ಕೃತಿಗಳು ಅದರ ವಿವಿಧ ಶಾಖೆಗಳಂತಿವೆ ಎನ್ನಬಹುದು. ನಗರ ಸಮಾಜ, ಗ್ರಾಮೀಣ ಸಮಾಜ ಎಂಬುದರೊಂದಿಗೆ, ನಾವು ಬುಡಕಟ್ಟು ಸಮಾಜ ಅಥವಾ ಸಂಸ್ಕೃತಿ ಎಂಬ ಇನ್ನೊಂದು ಸಮಾಜವನ್ನು ಗುರುತಿಸುತ್ತೇವೆ. ಏಕೆಂದರೆ ಇದು ಇತರ ಸಮಾಜಗಳಿಗಿಂತ ಭಿನ್ನವಾದ ಒಂದು ಸ್ವರೂಪವನ್ನು ಹೊಂದಿರುವುದು. ಬುಡಕಟ್ಟುಗಳ ಇತಿಹಾಸವನ್ನು ವಿಶ್ಲೇಷಿಸಲು ಪ್ರಯತ್ನಿಸಿದರೆ, ಪ್ರಪಂಚದ ವಿವಿಧ ಪ್ರದೇಶಗಳಲ್ಲಿ ವಿವಿಧ ಮಾನವ ಜನಾಂಗಗಳಿಗೆ ಸೇರಿದ ವಿವಿಧ ಸ್ವರೂಪಗಳ ಬುಡಕಟ್ಟುಗಳು ಕಂಡು ಬರುತ್ತವೆ.

'ನಮ್ಮ ರಾಷ್ಟ್ರದ ಆದಿವಾಸಿಗಳದ್ದು ವಿಸ್ಮಯ ಪ್ರಪಂಚ. ಅವರ ಆಚಾರ–ವಿಚಾರಗಳು, ರೀತಿ–ನೀತಿಗಳು, ಉಡುಗೆ–ತೊಡುಗೆಗಳು, ಜೀವನ ಶೈಲಿಗಳು ವೈವಿಧ್ಯಮಯ. ನಾಡಿನ ಜನರಿಗೆ ಆದಿವಾಸಿಗಳ ಬಗೆಗೆ ಏನೋ ಒಂದು ಬಗೆಯ ಕುತೂಹಲ. ನೀಲಗಿರಿಯ ತೋಡರು, ಹಿಮಾಲಯದ ಬಕ್ಕರ್‌ವಾಲರು ಮತ್ತು ಗದ್ದಿಯರು, ಸಾತ್‌ಪುರ ಗಿರಿಶ್ರೇಣಿಗಳ ಗೊಂಡರು ಮತ್ತು ಬೈಗರು, ಲೋಹಿತ್ ಕಣಿವೆಯ ಮಿಶ್ಮಿಯರು, ರಾಜಾಸ್ಥಾನದ ಮರುಭೂಮಿಯ ಬಂಜಾರರು, ಲಡಾಖ್‌ನ ಚಂಗ್‌ಪಾಗಳು ಮತ್ತಿತರ ಆದಿವಾಸಿಗಳ ಸಮುದಾಯಗಳು ತಲೆತಲಾಂತರಗಳಿಂದ ನಿಸರ್ಗದ ಮಡಿಲಲ್ಲಿ ವಾಸಿಸುತ್ತ ಬಂದಿವೆ. ಹಾಗೆಯೇ ಕರ್ನಾಟಕದಲ್ಲಿ ವಾಸವಿರುವ ಚಾಮರಾಜನಗರ ಜಿಲ್ಲೆಯ ಸೋಲಿಗರು, ಮೈಸೂರು ಮತ್ತು ಮಡಿಕೇರಿಯ ಜೇನು ಕುರುಬರು ಮತ್ತು ಕಾಡುಕುರುಬರು, ದಕ್ಷಿಣ ಕನ್ನಡದ ಮಲೆಕುಡಿಯರು ಮತ್ತು ಕೊರಗರು, ಉತ್ತರ ಕನ್ನಡದ ಸಿದ್ದಿ ಮತ್ತು ಹಸಲರು ಮುಂತಾದ ವಿವಿಧ ಬುಡಕಟ್ಟು ಜನರು ನಿಸರ್ಗದಲ್ಲಿ ಒಂದಾಗಿ ವಾಸಿಸುತ್ತಾ ಬಂದಿದ್ದಾರೆ. ಇನ್ನೂ ಅಧಿಕೃತವಾಗಿ ಬುಡಕಟ್ಟು ಪಂಗಡಕ್ಕೆ ಸೇರಿಲ್ಲದಿದ್ದರೂ ತಮ್ಮ ಜೀವನ ವೈವಿಧ್ಯತೆ ಮೂಲಕ ಸಮೃದ್ಧ ಬುಡಕಟ್ಟು ಕಾಣಸಿಗುವ ಉತ್ತರ ಕನ್ನಡದ ಗೌಳಿಗರು, ಹಾಲಕ್ಕಿ ಒಕ್ಕಲಿಗರು, ಕುಣಬಿಯರು ಕೂಡಾ ನಿಸರ್ಗದ ಮಡಿಲಲ್ಲಿ ತಲೆತಲಾಂತರದಿಂದ ವಾಸ ಮಾಡುತ್ತಾ ಬಂದಿದ್ದಾರೆ. ಪ್ರಕೃತಿಯೊಡನೆ ಅವರದ್ದು ಅವಿನಾಭಾವ ಸಂಬಂಧ. ಅರಣ್ಯ, ಪರ್ವತ ಅಥವಾ ಮರುಭೂಮಿಯಲ್ಲಿ ಸರಳ ಜೀವನ ನಡೆಸುವ ಆದಿವಾಸಿಗಳ ಬಗೆಗೆ ಯಾಂತ್ರಿಕ ಬದುಕಿನ ನಗರ ಜೀವಿಗಳದ್ದು ಮಾಂತ್ರಿಕ ಸಂವೇದನೆ. ನೈಸರ್ಗಿಕ ಲಯಗಳೊಡನೆ ಶ್ರುತಿಗೊಂಡಿರುವ ಆದಿವಾಸಿ ಸಂಸ್ಕೃತಿ ಹೆಚ್ಚು ಮುಗ್ಧ ಎಂಬುದನ್ನು ಫ್ರೆಂಚ್ ತತ್ವಜ್ಞಾನಿ ರುಸೊ ಪ್ರತಿಪಾದಿಸಿದ. ಆದಿವಾಸಿ ಒಬ್ಬ ಘನ ಕಾಡುಮನುಷ್ಯ ಹಾಗೂ ಅವನ ವಾಸಸ್ಥಾನಗಳು ಸ್ವರ್ಗದ ಉದ್ಯಾನಗಳು ಎಂಬ ಕಲ್ಪನೆ ಮುಂದುವರೆಯುತ್ತ ಬಂದಿದೆ. ಈ ಕಲ್ಪನೆಯೇ ಆದಿವಾಸಿಗಳಿಗೆ ಮಾರಕವಾಗಿ ಪರಿಣಮಿಸಿದೆ ಎಂದರೆ ಅತಿಶಯೋಕ್ತಿಯಾಗುವುದಿಲ್ಲ. ಏಕೆಂದರೆ ಕಾಡುಮನುಷ್ಯನನ್ನು ನಾಗರಿಕರನ್ನಾಗಿ ಪರಿವರ್ತಿಸಬೇಕು, ಅವನ ಭೂಮಿಯನ್ನು ಅಭಿವೃದ್ಧಿಗೊಳಿಸಬೇಕೆಂಬ ನಂಬಿಕೆ ಈ ಕಲ್ಪನೆಯ ಜೊತೆ ತಳಕು ಹಾಕಿಕೊಂಡಿದೆ. ಈ ನಿಟ್ಟಿನಲ್ಲಿ ಅವನು ಅನೇಕ ಅಕ್ರಮಣಗಳು, ವ್ಯಾಪಕ ಶೋಷಣೆ ಮತ್ತು ದೌರ್ಜನ್ಯಗಳಿಗೆ ಒಳಗಾಗಿದ್ದಾನೆ. ಇವುಗಳಿಂದ ಆದಿವಾಸಿ ಜನರ ಮತ್ತು ಸ್ಥಳಗಳ ಅಭೂತಪೂರ್ವ ಅನೇಕತೆ ಅಂತ್ಯಗೊಳ್ಳುವ ಸಾಧ್ಯತೆಗಳು ಅಧಿಕ'.[೪]

ಮೇಲ್ಕಾಣಿಸಿದಂತೆ ನಮ್ಮ ದೇಶದಲ್ಲಿ ವಿವಿಧ ಬುಡಕಟ್ಟುಗಳು ಕಂಡು ಬರುತ್ತಿದ್ದು, ಇವೆಲ್ಲ ವಿವಿಧ ವಲಯಗಳಲ್ಲಿ ಹಂಚಿ ಹೋಗಿವೆ. ಬೆಟ್ಟ, ಗುಡ್ಡ, ಕಾಡು, ಗಿರಿಶಿಖರ, ಕಣಿವೆ ಕಾನನ ಹಾಗೂ ಕರಾವಳಿ ತಪ್ಪಲಿನ ಪಶ್ಚಿಮ ಘಟ್ಟಗಳಲ್ಲಿ ವಾಸಿಸುವ ಬುಡಕಟ್ಟುಗಳನ್ನು ಕಾಣಬಹುದು. ಹಲವು ಬುಡಕಟ್ಟುಗಳು ಸರ್ಕಾರದಿಂದ ಗುರುತಿಸಲ್ಪಟ್ಟಿದ್ದರೆ, ಇತರ ಕೆಲವು ಬುಡಕಟ್ಟುಗಳು ಗುರುತಿಸಲ್ಪಡದೇ ಹಾಗೇ ಉಳಿದುಕೊಂಡಿರುವುದುಂಟು. ಇಂಥ ಬುಡಕಟ್ಟುಗಳು ಅಭಿವೃದ್ಧಿಯ ಮುಖ್ಯ ವಾಹಿನಿಯಿಂದ ದೂರ ಉಳಿದುಕೊಂಡಿವೆ ಎಂಬುದು ವಿಷಾದಕರ ಸಂಗತಿ. ಕೆಲವು ಬುಡಕಟ್ಟುಗಳು ನಾಗರಿಕ ಸಮಾಜ ಹಾಗೂ ಜಾತಿ ವ್ಯವಸ್ಥೆಯ ಪ್ರಭಾವಕ್ಕೊಳಗಾಗಿ ಬದಲಾವಣೆಯ ಬಿರುಗಾಳಿಗೆ ಸಿಲುಕಿವೆ. ಬುಡಕಟ್ಟು ಸಮಾಜಗಳ ಸಾಂಸ್ಕೃತಿಕ ಹಾಗೂ ಭೌಗೋಲಿಕ ಪ್ರತ್ಯೇಕತೆಯಿಂದಾಗಿ ಇವರು ಹಲವಾರು ಸಮಸ್ಯೆಗಳನ್ನು

ಎದುರಿಸುತ್ತಿದ್ದಾರೆ. ಈ ಸಮುದಾಯಗಳು ಪ್ರಾಚೀನ ಸ್ವರೂಪದ್ದಾಗಿರುವುದರಿಂದ ಇವರ ಹಿಂದುಳಿಯುವಿಕೆಗೆ ಅದೂ ಕೂಡ ಒಂದು ಕಾರಣವೆನ್ನಬಹುದು. ಸಾಂಸ್ಕೃತಿಕವಾಗಿ ಈ ಬುಡಕಟ್ಟುಗಳು ಶ್ರೀಮಂತವಾಗಿದ್ದರೂ ಕೂಡ ಇವರು ಆರ್ಥಿಕ ಹಾಗೂ ಸಾಮಾಜಿಕ ಸ್ಥಿತಿಗತಿಗಳ ದೃಷ್ಟಿಯಿಂದ ಬಹಳ ಹಿಂದುಳಿದವರಾಗಿದ್ದಾರೆ.

ಭಾರತದ ಬುಡಕಟ್ಟುಗಳು ಬಹು ಹಿಂದಿನಿಂದಲೂ ಸಾಮಾಜಿಕ, ರಾಜಕೀಯ, ಆರ್ಥಿಕ ಮತ್ತು ಸಾಂಸ್ಕೃತಿಕ ನ್ಯೂನ್ಯತೆಗಳನ್ನು ಅನುಭವಿಸುತ್ತಾ ಬಂದಿವೆ. ಅನಾದಿ ಕಾಲದಿಂದಲೂ ಅವು ಸಾಂಸ್ಕೃತಿಕ ಪ್ರತ್ಯೇಕತೆಯನ್ನು ಉಳಿಸಿಕೊಂಡಿದ್ದರ ಪರಿಣಾಮವಾಗಿ ಸಮಾಜದ ಇತರ ವರ್ಗಗಳ ಶೋಷಣೆಗೆ ಗುರಿಯಾಗಿ ಬಹು ಹಿಂದುಳಿಯಬೇಕಾಯಿತು. ಬಹು ಹಿಂದಿನಿಂದಲೂ ನಾಡಿನ ಸಮಸ್ಯೆ ಪರಿಹಾರಕ್ಕೆ ಕಾಡನ್ನು ಬಳಿಸಿಕೊಳ್ಳಲಾಗಿದೆ. ನಾಡಿನ ಜನರು ತಮ್ಮ ಮೌಲ್ಯಗಳಿಂದ ಬುಡಕಟ್ಟು ಜನರ ಬದುಕನ್ನು ಅಳೆದು ತೀರ್ಮಾನಕ್ಕೆ ಬರುವ ಕ್ರಮ ರೂಢಿಯಾಗಿತ್ತು. ಅದು ಅನಿವಾರ್ಯವಾಗಿ ಅಂದಿನ ಅರಣ್ಯವಾಸಿಗಳಿಗೆ ಸಮಸ್ಯೆ ಸೃಷ್ಟಿಸಿದೆ. ಅವರ ಬದುಕನ್ನು ಸ್ಥಿತ್ಯಂತರಗೊಳಿಸಿದೆ. ಊರಲ್ಲಿ ಜನಸಂಖ್ಯೆ ಹೆಚ್ಚಾಗಿ, ಕೃಷಿಗೆ ಭೂಮಿ ಅಗತ್ಯವಿದೆ ಎಂದ ಕೂಡಲೇ ಪಕ್ಕದ ಕಾಡು ನಾಡಾಗಬೇಕಿತ್ತು. ಅದಕ್ಕೆ ಕಾಡು ಕಡಿಯುವುದು, ಅರಣ್ಯ ಭೂಮಿಯನ್ನು ಕೃಷಿ ಭೂಮಿಯನ್ನಾಗಿ ಪರಿವರ್ತಿಸುವುದು, ಬುಡಕಟ್ಟು ಜನರು ವಿರೋಧಿಸುವುದು ಸಾಮಾನ್ಯವಾಗಿತ್ತು. ಖಾಸಗಿ ಆಸ್ತಿಯ ಕಲ್ಪನೆ ನಮ್ಮ ಚರಿತ್ರೆಯಲ್ಲಿ ಬಹು ಹಿಂದಿನಿಂದಲೇ ಇತ್ತು. ಎಷ್ಟೇ ರಾಜರುಗಳು ತಮಗೆ ಇಷ್ಟಬಂದ ಹಾಗೆ ದಾನ ಮಾಡಲು ಭೂಮಿ ಕೊರತೆಯಾದಾಗ ಸಣ್ಣ ಭೂಪ್ರದೇಶ, ಅದಕ್ಕೆ ಸೇರಿದ ಕಾಡನ್ನು ದಾನವಾಗಿ ಕೊಡುವ ಪ್ರವೃತ್ತಿಯಿತ್ತು. ಅಂತಹ ಸಂದರ್ಭಗಳಲ್ಲಿ ಕಾಡನ್ನು ತಮ್ಮ ಬದುಕಿನ ಆಸರೆಯಾಗಿ ನಂಬಿದ್ದ ಬುಡಕಟ್ಟು ಜನರ ಬದುಕು ಸ್ಥಿತ್ಯಂತರಗೊಂಡಿದೆ. ಹೀಗೆ ಬುಡಕಟ್ಟು ಜನರ ಬದುಕನ್ನು ಆವರಿಸಿಕೊಳ್ಳುವ ಪ್ರವೃತ್ತಿ ನಮ್ಮ ಸಂಸ್ಕೃತಿಯ ಭಾಗವೂ ಆಗಿತ್ತು.

### ೪.೨. ಆಧುನಿಕತೆ ಮತ್ತು ಗೌಳಿ ಸಮುದಾಯ

ಬ್ರಿಟಿಷ್ ವಸಾಹತು ಆಡಳಿತ ಕಾಲದಲ್ಲಂತೂ ಬುಡಕಟ್ಟುಗಳ ಜೀವನಸ್ಥಿತಿ ತುಂಬಾ ಆತಂಕಕ್ಕೊಳಪಟ್ಟಿತು. ವಸಾಹತುಶಾಹಿಯು ತನ್ನ ಕೊಳ್ಳೆ ಹೊಡೆಯುವ ಕ್ರಿಯೆಯಿಂದಾಗಿ ಅರಣ್ಯಗಳನ್ನು ನಿರ್ದಾಕ್ಷಿಣ್ಯವಾಗಿ ವಶಪಡಿಸಿಕೊಂಡು ನಿಶ್ಚಿಂತೆಯಿಂದ ಸ್ವಚ್ಛಂದವಾಗಿ ಬದುಕುತ್ತಿದ್ದ ಬುಡಕಟ್ಟು ಜನರನ್ನು ತೀವ್ರವಾದ ಶೋಷಣೆಗೊಳಪಡಿಸಿತು. ಬ್ರಿಟಿಷ್ ವಸಾಹತು ಆಡಳಿತ ಕಾಲದಲ್ಲಿ ಅರಣ್ಯ ಪ್ರದೇಶದ ಅಳತೆ ನಡೆಯಿತು. ವ್ಯಾಪ್ತಿ ನಿರ್ಧಾರವಾಯಿತು. ಅರಣ್ಯ ವಸಾಹತು ಸರ್ಕಾರದ ಸೊತ್ತಾಯಿತು. ಸುತ್ತಲಿನ ಜನರು ಅರಣ್ಯ ಪ್ರವೇಶ ಮಾಡುವದು ನಿಷೇಧವಾಯಿತು. ಸಾವಿರಾರು ವರ್ಷಗಳಿಂದ ಅರಣ್ಯದಲ್ಲಿ ವಾಸಿಸುತ್ತಿದ್ದ ಬುಡಕಟ್ಟು ಜನರು ಕಾನೂನು ಬಾಹಿರವಾಗಿ ಅರಣ್ಯ ಪ್ರದೇಶದಲ್ಲಿ ಇರುವವರು ಎಂದಾಯಿತು. ಹಲವಾರು ಅರಣ್ಯಗಳು (ಬೆಂಗಾಳ, ಆಸ್ಸಾಂ, ಕರ್ನಾಟಕ ಪ್ರದೇಶಗಳಲ್ಲಿ) ಟೀ, ಕಾಫೀ, ರಬ್ಬರ್ ತೋಟಗಳಾಗಿ ಪರಿವರ್ತನೆಗೊಂಡವು. ಅರಣ್ಯ ಪ್ರದೇಶ ವಿಸ್ತಾರವಾಗಿ ಇದ್ದ ಕಡೆ ಆ ಅರಣ್ಯಗಳಲ್ಲಿ ವಾಸಿಸುತ್ತಿದ್ದ ಬುಡಕಟ್ಟು ಜನರು ಇನ್ನೂ ಹಿಂದಕ್ಕೆ ಸರಿದರು. ಆದರೆ ಎಷ್ಟೋ ಕಡೆ ಅಂತಹ ಸಾಧ್ಯತೆಗಳಿಲ್ಲದೇ

ವಾಣಿಜ್ಯ ಬೆಳೆಗಳನ್ನು (ಟೀ, ಕಾಫೀ, ರಬ್ಬರ್) ಬೆಳೆಯುವ ತೋಟಗಳಲ್ಲಿ ಕೂಲಿಯಾಗಿ ದುಡಿಯುವುದು ಅನಿವಾರ್ಯವಾಯಿತು. ಈ ಆದಿವಾಸಿ ಗುಂಪುಗಳ ಜೊತೆ ವ್ಯವಹರಿಸುವ ಬಗೆಗೆ ವಸಾಹತುಶಾಹಿ ಅಧಿಕಾರಿಗಳ ನಡುವೆ ಭಿನ್ನಾಭಿಪ್ರಾಯಗಳಿದ್ದವು. ಒಂದೆಡೆ, ಅವರಿಗೆ ಆದಿವಾಸಿಗಳ ಅರಣ್ಯ ಭೂಮಿಯಲ್ಲಿನ ಯಥೇಚ್ಛ ಮರಮಟ್ಟು, ಖನಿಜಗಳು ಮತ್ತಿತರ ಕಚ್ಚಾ ಪದಾರ್ಥಗಳನ್ನು ಕೈಗಾರಿಕೆಗಳಿಗಾಗಿ ಬಳಸುವ ಇರಾದೆಯಿತ್ತು. ಇನ್ನೊಂದೆಡೆ, ತಮ್ಮ ಸಾಮ್ರಾಜ್ಯದ ಪ್ರಜೆಗಳ ಸ್ಥಿತಿಯನ್ನು ಸುಧಾರಿಸುವ ದೃಷ್ಟಿಕೋನವೂ ಇತ್ತು. ಈ ಕಾಳಜಿಗಳು 'ಮೀಸಲು ಅರಣ್ಯ'ಗಳೆಂಬ ಪರಿಕಲ್ಪನೆಗೆ ನಾಂದಿ ಹಾಕಿದವು. ಅವು ಆದಿವಾಸಿ ಜಗತ್ತಿನಲ್ಲಿ ನೂರಾರು ವರ್ಷಗಳಿಂದ ನಡೆಯುತ್ತಿದ್ದ ಬೇಟೆ, ಕಾಡಿನ ಉತ್ಪನ್ನಗಳ ಸಂಗ್ರಹಣೆ ಮತ್ತು ಪೈರು ಪಚ್ಚೆಗಳನ್ನು ಬಳಸುವ ಅವರ ಸ್ವಾಭಾವಿಕ ಹಕ್ಕುಗಳಿಗೆ ಚ್ಯುತಿ ತಂದವು. ಹಾಗೆಯೇ ಕಾಡುಗಳಲ್ಲಿ ನಾಗರಿಕತೆ ನೆಲೆಸುವಂತಾಗಲು ಆದಿವಾಸಿ ಪ್ರದೇಶಗಳಲ್ಲಿ ಶಾಲೆಗಳು ಮತ್ತು ಚರ್ಚುಗಳನ್ನು ಸ್ಥಾಪಿಸಲು ಮಿಷನರಿಗಳನ್ನು ಹುರಿದುಂಬಿಸಲಾಯಿತು. ಇದರಿಂದ ಆದಿವಾಸಿಗಳ ಮೂಲ ಜೀವನಾಧಾರಗಳಿಗೆ ಧಕ್ಕೆಯಾಯಿತು. ಅವರು ನಡೆಸುತ್ತಿದ್ದ ಸಾಂಪ್ರದಾಯಿಕ ಜೀವನಶೈಲಿಗೆ ಭಂಗ ಉಂಟಾಯಿತು. ಅವರ ಸಾಂಸ್ಕೃತಿಕ ಅಭಿಮಾನಕ್ಕೆ ಕುತ್ತು ಒದಗಿತು. ಕ್ರಮೇಣ ಅವರು ತಮ್ಮಲ್ಲಿದ್ದ ಭರವಸೆಯನ್ನು ಕಳೆದುಕೊಳ್ಳತೊಡಗಿದರು.[೫]

ನಮ್ಮ ರಾಷ್ಟ್ರ ದಾಸ್ಯದಿಂದ ವಿಮೋಚನೆಗೊಂಡಾಗ ಅಂದರೆ ಸ್ವಾತಂತ್ರ್ಯದ ನಂತರ ಬುಡಕಟ್ಟು ಜನರು ನೆಮ್ಮದಿಯಿಂದ ಬದುಕಬಹುದು ಎನ್ನುವ ನಂಬಿಕೆ ಇತ್ತು. ಯಾಕಂದರೆ ನಮ್ಮವರೇ ಸರ್ಕಾರ ನಡೆಸುತ್ತಾರೆ. ಅವರಿಗೆ ನಮ್ಮದೇ ಬುಡಕಟ್ಟು ಜನರ ಸಮಸ್ಯೆಯ ಅರಿವಿದೆ. ಆದುದರಿಂದ ಅವರು ತಾಳುವ ನಿರ್ಧಾರಗಳು ಬುಡಕಟ್ಟು ಜನರ ಬದುಕಿಗೆ ವಿರುದ್ಧ ಇರುವುದಿಲ್ಲ ಇತ್ಯಾದಿ. ಆದರೆ ಸ್ವಾತಂತ್ರ್ಯ ನಂತರದ ಕೆಲವೇ ವರ್ಷಗಳಲ್ಲಿ ಆ ನಂಬಿಕೆಗಳೆಲ್ಲ ಬುಡಮೇಲು ಆದವು. ಬ್ರಿಟಿಷ್ ವಸಾಹತು ಆಳ್ವಿಕೆ ತನ್ನ ಬೊಕ್ಕಸ ತುಂಬಿಸಲು ಎಗ್ಗಿಲ್ಲದೇ ಅರಣ್ಯ ನಾಶ ಮಾಡಿದರೆ, ಸ್ವಾತಂತ್ರ್ಯ ನಂತರ ನಮ್ಮ ಸರಕಾರ ಅಭಿವೃದ್ಧಿ ಹೆಸರಿನಲ್ಲಿ ಅದೇ ಕೆಲಸವನ್ನು ಮಾಡಿತು. ರೇಲ್ವೆ ಹಳಿಗಳನ್ನು ಹಾಕುವುದು, ಡಿಫೆನ್ಸ್ ಉದ್ದೇಶಕ್ಕಾಗಿ ಬೃಹತ್ ಆಣೆಕಟ್ಟುಗಳಿಗಾಗಿ ಹೀಗೆ ಹತ್ತು ಹಲವು ಯೋಜನೆಗಳಿಗೆ ಸಾವಿರಾರು ಎಕರೆ ಅರಣ್ಯ ನಾಶವಾಯಿತು. ಅಷ್ಟು ಮಾತ್ರವಲ್ಲ ಆ ಅರಣ್ಯಗಳನ್ನು ನಂಬಿಕೊಂಡು ಬಂದ ಲಕ್ಷಾಂತರ ಬುಡಕಟ್ಟು ಜನರು ನೆಲೆ ಕಳೆದುಕೊಂಡರು. ಆ ರೀತಿ ನೆಲೆ ಕಳೆದುಕೊಂಡವರಲ್ಲಿ ಕೆಲವರು ಯೋಜನೆ ಮುಕ್ತಾಯದ ನಂತರ ಉದ್ಯೋಗ ಅರಸಿ ನಗರ ಪ್ರದೇಶಗಳಿಗೆ ವಲಸೆ ಹೋಗುವುದು ಮತ್ತು ಅಲ್ಲಿನ ಜೋಪಡಿಪಟ್ಟಿಗಳಲ್ಲಿ ನೆಲೆ ಕಾಣುವುದು ಸಾಮಾನ್ಯವಾಯಿತು. ಈ ಕ್ರಮದ ಆಧುನೀಕರಣ ಒಂದು ಕಡೆಯಿಂದ ಚಾರಿತ್ರಿಕವಾಗಿ ರೂಪಗೊಂಡ ಅವರ ಬದುಕನ್ನು ಕಿತ್ತುಕೊಂಡರೆ ಮತ್ತೊಂದು ಕಡೆಯಿಂದ ಬದಲಿ ಬದುಕನ್ನು ಕೊಡಲು ಸಫಲವಾಗಲಿಲ್ಲ.[೬]

ಆದಿವಾಸಿ ಪ್ರಶ್ನೆ ಅಥವಾ ಆಧುನಿಕ ಭಾರತದಲ್ಲಿನ ಅವರ ಸ್ಥಾನಮಾನದ ವಿಷಯ ಪ್ರಖರತೆಯನ್ನು ಪಡೆದುಕೊಂಡಿತು. ಆದಿವಾಸಿಗಳಿಗೆ ತಮ್ಮ ಜೀವನವನ್ನು ತಾವೇ ನಿರ್ಧರಿಸುವ ಹಕ್ಕಿರಬೇಕೆಂದು ವೆರ್ರಿಯರ್ ಎಲ್ವಿನ್‌ರಂತಹ ಮಾನವಶಾಸ್ತ್ರಜ್ಞರು ಬಲವಾಗಿ ಪ್ರತಿಪಾದಿಸಿದರು. ಆತ ಇಂದಿನ ಮಧ್ಯಪ್ರದೇಶದ

'ಬೈಗ' ಮತ್ತು 'ಗೊಂಡಾ' ಹಾಗೂ ಛತ್ತೀಸಗಡದ 'ಮುರಿಯಾ' ಆದಿವಾಸಿಗಳ ಗುಂಪುಗಳ ಬಗೆಗೆ ದೀರ್ಘ ಅಧ್ಯಯನ ನಡೆಸಿದ. ಆದಿವಾಸಿಗಳದ್ದು ಹಲವು ವೈಶಿಷ್ಟ್ಯಗಳ ಸಂಸ್ಕೃತಿ. ಅದು ಆಗಿನ ಹಿಂದೂ ಸಮಾಜ ಮತ್ತು ಕ್ರೈಸ್ತ ಮಿಷನರಿಗಳಿಂದ ಆಘಾತಕ್ಕೆ ಒಳಗಾಗುವುದೆಂದು ಆತನ ವಾದವಾಗಿತ್ತು. ಆದುದರಿಂದ ಭಾರತ ಸರಕಾರ ಆದಿವಾಸಿ ಪ್ರದೇಶಗಳು ಶೋಷಣೆಗೆ ಈಡಾಗದಂತೆ ಸೂಕ್ತ, ಪರಿಣಾಮಕಾರಿ ಕ್ರಮಗಳನ್ನು ಜಾರಿಗೊಳಿಸಬೇಕೆಂದು ಒತ್ತಾಯಿಸಿದ. ಎಲ್ವಿನ್‌ರ ಈ ಅಭಿಪ್ರಾಯಗಳು ಮಾನವಶಾಸ್ತ್ರಜ್ಞ ಜಿ.ಎಸ್.ಗುರ್ರೈಗೆ ಸರಿಕಾಣಲಿಲ್ಲ. ಸಾಮಾಜಿಕ ಗುಂಪುಗಳ ನಡುವಿನ ಭಿನ್ನತೆಗಳನ್ನು ಬೆರಳುಮಾಡಿ ತೋರಿಸುವುದರ ಮೂಲಕ ಎಲ್ವಿನ್ ಭಾರತವನ್ನು ವಿಭಜಿಸುತ್ತಿದ್ದಾನೆಂಬುದು ಆತನ ಆರೋಪವಾಗಿತ್ತು. ಆದಿವಾಸಿಗಳು ಅರಣ್ಯಗಳಲ್ಲಿ ಕಳೆದು ಹೋಗಿರುವ ಹಿಂದುಳಿದ ಹಿಂದೂಗಳೆಂದು ವರ್ಣಿಸಿದ. ಅವರನ್ನು ರಾಷ್ಟ್ರದ ಪ್ರಧಾನ ಹಾಗೂ ಪ್ರಬಲ ಸಂಸ್ಕೃತಿಯ ಜೊತೆ ಸೇರಿಸಬೇಕೆಂದು ಆಗ್ರಹಿಸಿದ. ಈ ದೃಷ್ಟಿಕೋನವನ್ನು ಆಧರಿಸಿಯೇ ವನವಾಸಿ ಕಲ್ಯಾಣ ಆಶ್ರಮದಂತಹ ಹಿಂದೂ ರಾಷ್ಟ್ರೀಯ ಸಂಸ್ಥೆ ಕಾರ್ಯ ನಿರ್ವಹಿಸುತ್ತಿದೆ. ಆದಿವಾಸಿಗಳ ಪದ್ಧತಿಗಳನ್ನು ಬದಲಾಯಿಸಿ, ಅವರನ್ನು ಉಚ್ಚ ಜಾತಿಯ ಹಿಂದೂ ಮಾದರಿಗೆ ಅನುರೂಪಗೊಳಿಸುವುದೇ ಈ ಸಂಸ್ಥೆಯ ಧ್ಯೇಯೋದ್ದೇಶವಾಗಿದೆ.[೭] ವನವಾಸಿ ಕಲ್ಯಾಣ ಆಶ್ರಮವು ಕೇವಲ ಧನಗರ ಗೌಳಿ ವಿದ್ಯಾರ್ಥಿಗಳಿಗೆಂದೇ ಒಂದು ವಸತಿ ನಿಲಯವನ್ನು ಉತ್ತರ ಕನ್ನಡ ಜಿಲ್ಲೆಯ ಅಂಬಿಕಾನಗರದಲ್ಲಿ ನಡೆಸುತ್ತಿದೆ ಎಂಬುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು.

ಒಂದೆಡೆ ಮಾನವಶಾಸ್ತ್ರಜ್ಞರು, ಸಮಾಜಸುಧಾರಕರು, ಗಾಂಧೀವಾದಿಗಳು ಮತ್ತು ಕ್ರೈಸ್ತ ಮಿಶನರಿಗಳು ಆದಿವಾಸಿ ಪ್ರಶ್ನೆಯ ಕುರಿತು ಚರ್ಚೆ ಹಾಗೂ ಸಂವಾದವನ್ನು ನಡೆಸುತ್ತಿದ್ದರು. ಇನ್ನೊಂದೆಡೆ ಆದಿವಾಸಿಗಳ ಬೇಕು-ಬೇಡಗಳನ್ನು ವಿಚಾರಿಸಲು ಇವರು ಮುಂದಾಗಲಿಲ್ಲ. ಮೂಲ ನಿವಾಸಿಗಳ ಬಗೆಗೆ ಸಂವಿಧಾನಶಿಲ್ಪಿ ಬಿ.ಆರ್.ಅಂಬೇಡ್ಕರ್ ಹೊಂದಿದ್ದ ನಿಲುವು ನಂಬಲಸಾಧ್ಯವಾಗಿತ್ತು. ಸೈಮನ್ ಆಯೋಗದ ಮುಂದೆ ಸಾಕ್ಷಿ ಹೇಳುವ ಸಂದರ್ಭದಲ್ಲಿ ಅವರು ಅಸ್ಪೃಶ್ಯರಿಗೆ ಮತದಾನದ ಹಕ್ಕನ್ನು ನೀಡಬೇಕೆಂದು ಆಗ್ರಹಿಸಿದರು. ಆದಿವಾಸಿಗಳಿಗೆ (ಮೂಲ ನಿವಾಸಿಗಳಿಗೆ) ಈ ಹಕ್ಕನ್ನು ನೀಡಲು ಕಾಲ ಸನ್ನಿಹಿತವಾಗಿಲ್ಲ ಎಂಬ ನಿಲುವನ್ನು ತಳೆದರು. ಇಡೀ ಆದಿವಾಸಿ ಸಂಸ್ಕೃತಿಯನ್ನೇ ಒಂದು ಸಮಸ್ಯೆಯನ್ನಾಗಿ ಪರಿಭಾವಿಸಿ, ಅದಕ್ಕೆ ರಕ್ಷಣೆ ನೀಡಬೇಕೆಂದೋ ಅಥವಾ ಅದನ್ನು ಮುಖ್ಯವಾಹಿನಿಯಲ್ಲಿ ಅಂತರ್ಗತ ಮಾಡಿಕೊಳ್ಳಬೇಕೆಂದೋ ಜನಪ್ರಿಯ ಚಿಂತನೆ ಮತ್ತು ಸರಕಾರಗಳ ಗ್ರಹಿಕೆಯಾಗಿರುವುದು ಸ್ಪಷ್ಟ. ಆದಿವಾಸಿಗಳು ತಮ್ಮನ್ನು ಸೂಕ್ತವಾಗಿ ಪ್ರತಿನಿಧಿಸಲಾರರು ಎಂಬುದೂ ಇವುಗಳಲ್ಲಿ ಅಡಗಿರುವ ಪರಿಕಲ್ಪನೆ.

ಆದಿವಾಸಿ ಸಂಸ್ಕೃತಿಯನ್ನು ಸಂರಕ್ಷಿಸಬೇಕೆಂಬ ವೆರ್ರಿಯರ್ ಎಲ್ವಿನ್‌ರ (ನೋಡಿ: ವೆರಿಯರ್ ಎಲ್ವಿನ್‌ರ ಗಿರಿಜನ ಪ್ರಪಂಚ) ನಿಲುವಿನ ಬಗೆಗೆ ಭಾರತದ ಪ್ರಥಮ ಪ್ರಧಾನಿ ನೆಹರೂರವರಿಗೆ ಸಹಾನುಭೂತಿಯಿತ್ತು. ಅವರ ಸರಕಾರ ಸಂವಿಧಾನದ ಐದು ಮತ್ತು ಆರನೇ ಅನುಸೂಚಿಯಡಿ ಮಧ್ಯ ಮತ್ತು ಈಶಾನ್ಯ ಭಾರತದಲ್ಲಿ ಅಪಾರ ಸಂಖ್ಯೆಯಲ್ಲಿದ್ದ ಆದಿವಾಸಿ ಪ್ರದೇಶಗಳನ್ನು ಗುರುತಿಸಿತು. ಆದಿವಾಸಿಗಳ ಭೂಮಿಯನ್ನು ಪರಭಾರೆ ಮಾಡದಂತೆ ಕೆಲವು ನಿಯಮಗಳನ್ನು ರೂಪಿಸಿತು. ಅವರಿಗೆ ಸರಕಾರಿ ಹುದ್ದೆಗಳಲ್ಲಿ ಮತ್ತು ಶಿಕ್ಷಣ ಸಂಸ್ಥೆಗಳಲ್ಲಿ ಮೀಸಲಾತಿಯ ಸೌಲಭ್ಯವನ್ನು ಕಲ್ಪಿಸಿತು.[೮]

ಕೆಲವೊಂದು ಪ್ರದೇಶಗಳಲ್ಲಿ ಸರ್ಕಾರ ಬುಡಕಟ್ಟು ಜನರ ಪಾರಂಪರೆ ಹಕ್ಕುಗಳನ್ನು ಮನ್ನಿಸಿ ಅದಕ್ಕೆ ಅನುಗುಣವಾದ ನೀತಿಗಳನ್ನು ಜಾರಿಗೆ ತಂದಿದೆ. ಉದಾಹರಣೆಗೆ ನಾಗಾಲ್ಯಾಂಡ್, ಮಣಿಪುರ ಮುಂತಾದ ಕಡೆಗಳಲ್ಲಿ ಸರ್ಕಾರದ ರಕ್ಷಿತ ಅರಣ್ಯ ಕಾನೂನು ಶೇಕಡಾ ೧೦ರಷ್ಟು ಅರಣ್ಯ ಪ್ರದೇಶಗಳನ್ನು ಒಳಗೊಂಡಿಲ್ಲ. ಶೇಕಡಾ ೯೦ರಷ್ಟು ಅರಣ್ಯ ಪ್ರದೇಶ ಬುಡಕಟ್ಟು ಜನರ ಸಮುದಾಯ ನೀತಿಗೆ ಅನುಸಾರ ನಿರ್ವಹಣೆಗೊಳ್ಳುತ್ತಿದೆ. ಹಾಗೆಂದು ಇದೇ ನೀತಿ ಭಾರತದ ಎಲ್ಲ ಕಡೆ ಇದೆ ಎನ್ನಲು ಸಾಧ್ಯವಿಲ್ಲ. ಉದಾಹರಣೆಗೆ ಕರ್ನಾಟಕದ ಪಶ್ಚಿಮ ಘಟ್ಟಗಳಲ್ಲಿ ಹಲವಾರು ಬುಡಕಟ್ಟುಗಳು ಶತಮಾನಗಳಿಂದ ಇವೆ. ಅವು ಯಾವುವೂ ಕೂಡಾ ತಾವು ಶತಮಾನಗಳಿಂದ ಬದುಕುತ್ತಿರುವ ಅರಣ್ಯ ಪ್ರದೇಶದ ಮೇಲೆ ಯಾವುದೇ ಹಕ್ಕನ್ನು ಹೊಂದಿಲ್ಲ.[೯] ಇದು ನನ್ನ ಪ್ರಸ್ತುತ ಅಧ್ಯಯನದ ಗೌಳಿ ಸಮುದಾಯಕ್ಕೂ ಅನ್ವಯಿಸುತ್ತದೆ. ಕೆಲವು ಕಡೆ ಬುಡಕಟ್ಟು ಪಂಚಾಯತ್ ವ್ಯವಸ್ಥೆ ಕೆಲಸ ಮಾಡಲು ಪೂರಕವಾದ ವ್ಯವಸ್ಥೆ ಇದ್ದರೆ ಇನ್ನು ಕೆಲವು ಕಡೆ ಅವರುಗಳು ಮುಖ್ಯವಾಹಿನಿಯ ನ್ಯಾಯ ತೀರ್ಮಾನದ ವ್ಯವಸ್ಥೆಗೆ ತಮ್ಮನ್ನು ಒಪ್ಪಿಸಿಕೊಳ್ಳಬೇಕಾಗಿದೆ. ಹೀಗೆ ಗೌಳಿಗರು ಸೇರಿದಂತೆ ಭಾರತದ ಎಲ್ಲ ಬುಡಕಟ್ಟುಗಳಿಗೆ ಅನ್ವಯವಾಗುವ ಅಭಿವೃದ್ಧಿ ನೀತಿ ನಮ್ಮಲ್ಲಿ ಇಲ್ಲ. ಭಾರತದ ವಿವಿಧ ಪ್ರದೇಶಗಳಲ್ಲಿರುವ ಬುಡಕಟ್ಟುಗಳು ಒಂದೇ ಅಲ್ಲ. ಅವರ ಆಚಾರ-ವಿಚಾರ, ಜೀವನ ಕ್ರಮ, ಲೋಕದೃಷ್ಟಿ ಇತ್ಯಾದಿಗಳು ಭಿನ್ನವಾಗಿರುವಾಗ ಅವರಿಗೆಲ್ಲಾ ಒಂದೇ ಅಭಿವೃದ್ಧಿ ನೀತಿ ಇರುವುದು ಅಭಿವೃದ್ಧಿ ನೀತಿಗೆ ಪೂರಕವಲ್ಲ. ಆದರೆ ನೀತಿಯಲ್ಲಿನ ಈ ವಿವಿಧತೆ ಬುಡಕಟ್ಟು ಜನರ ವಿವಿಧತೆಯನ್ನು ಮನಗಂಡು ಆಗಿದೆ ಎನ್ನುವಂತಿಲ್ಲ. ಯಾವ ಕಡೆ ಬುಡಕಟ್ಟು ಜನರು ಸಂಘಟಿತರಾಗಿ ತಮ್ಮ ಹಕ್ಕಿಗೆ ಹೋರಾಡಿದ್ದಾರೆ ಅಂತಹ ಕಡೆ ಅವರಿಗೆ ಮುಖ್ಯವಾಹಿನಿಯ ಹಿಡಿತದಿಂದ ತಕ್ಕಮಟ್ಟಿನ ಬಿಡುಗಡೆ ದೊರಕಿದೆ. ಹೆಚ್ಚು ಸಂಖ್ಯೆಯಲ್ಲಿ ಬುಡಕಟ್ಟು ಜನರು ಇರುವ ಉತ್ತರ ಭಾರತದಲ್ಲಿ ಈ ಕ್ರಮದ ಪ್ರತ್ಯೇಕತೆ ಸಾಧ್ಯವಾಗಿದೆ. ದಕ್ಷಿಣ ಭಾರತದಲ್ಲಿ ಅದರಲ್ಲೂ ಕರ್ನಾಟಕದಲ್ಲಿ ಹಲವಾರು ಬುಡಕಟ್ಟು ಜನರಿದ್ದಾರೆ. ಆದರೆ ಅವರ ಅಭಿವೃದ್ಧಿಗೆ ಪ್ರತ್ಯೇಕ ನೀತಿ ಇಲ್ಲ. ಲ್ಯಾಂಪ್ಸ್ (ಬುಡಕಟ್ಟು ಜನರ ಅರಣ್ಯ ಉತ್ಪನ್ನಗಳನ್ನು ಮಾರಲು ಅನುಕೂಲ ಮಾಡಿಕೊಡುವ ಸಹಕಾರಿ ಸಂಘ), ಆಶ್ರಮ ಶಾಲೆ (ಬುಡಕಟ್ಟು ಮಕ್ಕಳಿಗೆ ಮೀಸಲಿರುವ ವಸತಿ ಶಾಲೆ) ಇತ್ಯಾದಿ ಅಭಿವೃದ್ಧಿ ಕಾರ್ಯಕ್ರಮಗಳು ಮಾತ್ರ ಕರ್ನಾಟಕದಲ್ಲಿ ಇವೆ. ಕರ್ನಾಟಕದಲ್ಲಿ ಸಮಾಜ ಕಲ್ಯಾಣ ಇಲಾಖೆಯೇ ಬುಡಕಟ್ಟು ಜನರ ಅಭಿವೃದ್ಧಿಯ ಉಸ್ತುವಾರಿ ನೋಡಿಕೊಳ್ಳುವುದು. ಅವರ ಅಭಿವೃದ್ಧಿಗೆ ಪ್ರತ್ಯೇಕ ವ್ಯವಸ್ಥೆ ಅಥವಾ ಇಲಾಖೆ ಇಲ್ಲ. ಕರ್ನಾಟಕದಲ್ಲಿ ಪ್ರಸ್ತುತ 'ಬುಡಕಟ್ಟು ನಿರ್ದೇಶನಾಲಯ' ಕಾರ್ಯನಿರ್ವಹಿಸುತ್ತಿದೆಯಾದರೂ, ಅದು ಕೇಂದ್ರ ಸರಕಾರದ ಯೋಜನೆಗಳ ಅನುಷ್ಠಾನಕ್ಕೆ ಮಾತ್ರ ಸೀಮಿತವಾಗಿದೆ. ಅಂದರೆ ಬುಡಕಟ್ಟು ಅಭಿವೃದ್ಧಿ ಎನ್ನುವುದು ತುಂಬಾ ಸಂಕೀರ್ಣ ಸಮಸ್ಯೆಯಾಗಿ ನಮ್ಮ ಮುಂದೆ ಇದೆ. ಬುಡಕಟ್ಟೋದ್ಧಾರ ಕಾರ್ಯಕ್ರಮಗಳು ನಿಜವಾಗಿ ಅವರನ್ನು ಉದ್ಧಾರ ಮಾಡುತ್ತಿಲ್ಲ. ಬದಲಿಗೆ ಶೋಷಣೆ ಮಾಡುತ್ತಿವೆ. ಜತೆಗೆ ಚಾರಿತ್ರಿಕವಾಗಿ ಅವರು ರೂಢಿಸಿಕೊಂಡು ಬಂದ ಬದುಕಿಗೆ ಅನುಗುಣವಾಗಿ ಬದುಕಲು ಅಸಾಧ್ಯವಾದ ಸ್ಥಿತಿ ನಿರ್ಮಾಣವಾಗಿದೆ.[೧೦] ಬುಡಕಟ್ಟು ಜನರ ಬದುಕು ತುಂಬಾ ಹದಗೆಟ್ಟಿದೆ. ಅವರ ಮೂಲಸ್ಥಾನ ಅರಣ್ಯ ಇಂದು ಅವರುಗಳ ಮೂಲಭೂತ ಅವಶ್ಯಕತೆಗಳನ್ನು ಪೂರೈಸುತ್ತದೆ ಎನ್ನಲು ಸಾಧ್ಯವಿಲ್ಲ. ಅವರಿಗೆ ಇಷ್ಟ ಇರಲಿ, ಬಿಡಲಿ ತಮ್ಮ ಅವಶ್ಯಕತೆಗಳನ್ನು ಭರಿಸಲು

ಹೊರಗಿನ ಲೋಕದೊಂದಿಗೆ ಸಂಪರ್ಕ ಅನಿವಾರ್ಯ. ಸಂಪರ್ಕ ಬಂದಾಗಲೆಲ್ಲಾ ಅವರು ಒಂದಲ್ಲ ಒಂದು ವಿಧದ ಶೋಷಣೆಗೆ ಒಳಗಾಗುವುದು ಕೂಡಾ ಅನಿವಾರ್ಯ ಆಗಿದೆ. ಕೂಲಿಗೆ ಹೋದರೆ ಕಡಿಮೆ ಕೂಲಿ, ಅರಣ್ಯ ಉತ್ಪನ್ನಗಳನ್ನು ಮಾರಲು ಹೋದರೆ ಕಡಿಮೆ ಬೆಲೆ. ನಗರದಲ್ಲಿ ಸುಖ ಸಿಗಬಹುದೆಂದು ಹೋದರೆ ಜೋಪಡಿಪಟ್ಟಿಗಳಲ್ಲಿ ವಾಸ. ಹೀಗೆ ಪ್ರತಿಯೊಂದರಲ್ಲೂ ಕೊನೆಯ ಸರತಿ ಬುಡಕಟ್ಟು ಜನರದ್ದು.[೧೧]

ಹಿಂದಿನ ರೀತಿಯಲ್ಲಿ ಅರಣ್ಯ ಅವರ ಮೂಲಭೂತ ಅವಶ್ಯಕತೆಗಳನ್ನು ಪೂರೈಸುತ್ತಿಲ್ಲವಾದ್ದರಿಂದ, ತಮ್ಮ ಮೂಲಭೂತ ಅವಶ್ಯಕತೆಗಳ ಪೂರೈಕೆಗೆ ಅವರು ಹೊರಗಿನ ಲೋಕದೊಂದಿಗೆ ಸಂಪರ್ಕ ಹೊಂದುವುದು ಅನಿವಾರ್ಯವಾಗಿದೆ. ಹೀಗೆ ಮತ್ತೊಂದು ಲೋಕದ ಸಂಪರ್ಕ ಬುಡಕಟ್ಟು ಸಮುದಾಯಗಳ ಬದುಕಿನ ಕ್ರಮಗಳನ್ನೇ ಬದಲಾಯಿಸುತ್ತದೆ. ಈ ಬದಲಾವಣೆಗಳು ಆಗುವುದು ಅನಿವಾರ್ಯ. ಬುಡಕಟ್ಟು ಸಮುದಾಯಗಳಿಗೆ ದ್ವೀಪದಂತೆ ಪ್ರತ್ಯೇಕವಾಗಿ ಬದುಕಬೇಕೆಂಬ ಆಸೆ ಇದ್ದರೂ ಸಾಧ್ಯವಾಗದಂತಹ ಸ್ಥಿತಿ ನಿರ್ಮಾಣವಾಗಿದೆ. ಸಮುದಾಯಗಳು ಕಲೆತು ಬದುಕುವುದು ಇಂದಿನ ಅನಿವಾರ್ಯತೆ. ಇದರಿಂದ ಯಾರೂ ತಪ್ಪಿಸಿಕೊಂಡು ಬದುಕಲು ಸಾಧ್ಯವಿಲ್ಲ. ಆದರೆ ಸಮುದಾಯ ಕೇಂದ್ರಿತ ಒಳಿತಿನ ಕಲ್ಪನೆಗಳು ಮತ್ತು ಮೌಲ್ಯಗಳು, ಸಮುದಾಯಗಳ ಪರಸ್ಪರ ಕಲೆತು ವ್ಯವಹರಿಸುವಲ್ಲಿ ದೊಡ್ಡ ತೊಡಕಾಗಿವೆ. ಅಂದರೆ ಪರಕೀಯ ಸಂಸ್ಕೃತಿಯ ಸಂಪರ್ಕದಿಂದ ಬುಡಕಟ್ಟು ಸಂಸ್ಕೃತಿ ಕಲುಷಿತಗೊಳ್ಳಬಹುದು ಎಂಬ ವಾದವಿದೆ. ಆದರೆ ಕರ್ನಾಟಕದ ಬುಡಕಟ್ಟು ಸಂಶೋಧಕರಲ್ಲಿ ಪ್ರಮುಖರೆಂದು ಗುರುತಿಸಿಕೊಳ್ಳುವ ಹಿ. ಚಿ. ಬೋರಲಿಂಗಯ್ಯನವರ ಪ್ರಕಾರ ಪರಕೀಯ ಸಂಸ್ಕೃತಿಯ ಸಂಪರ್ಕವು ಒಂದು ಸಂಸ್ಕೃತಿಯನ್ನು ಮೂಲಭೂತವಾಗಿ ಬದಲಾಯಿಸುತ್ತದೆ ಅಥವಾ ಕಲುಷಿತಗೊಳಿಸುತ್ತದೆ ಎನ್ನುವುದು ಸರಿಯಲ್ಲ. ಅವರ ಸಿದ್ಧಾಂತದ ಪ್ರಕಾರ ಪ್ರತಿ ಸಂಸ್ಕೃತಿಗೂ ಅದರದೇ ಆದ ಒಳ ತಿರುಳು ಮತ್ತು ಹೊರ ಪದರು ಇರುತ್ತದೆ. ಹೊರಗಿನ ಪೊರೆ ಪರಕೀಯ ಸಂಸ್ಕೃತಿಯಿಂದ ಬರುವ ಅಂಶಗಳನ್ನು ಪರಿಶೀಲಿಸುತ್ತದೆ. ಅನಿವಾರ್ಯವಾದರೆ ಬುಡಕಟ್ಟು ಸಂಸ್ಕೃತಿ ತನ್ನ ಆಂತರಿಕ ತತ್ವಕ್ಕೆ ಅನುಗುಣವಾದ ಅಂಶಗಳನ್ನು ಮಾತ್ರ ಸ್ವೀಕರಿಸುತ್ತದೆ. ಎರಡನೆಯದಾಗಿ ಪರಕೀಯ ಸಂಸ್ಕೃತಿಯ ಅಂಶಗಳನ್ನು ಸ್ವೀಕರಿಸುವಾಗ ಅದನ್ನು ಅವುಗಳ ಮೂಲ ಸ್ವರೂಪದಲ್ಲಿ ಸ್ವೀಕರಿಸುವುದಿಲ್ಲ. ಬದಲಿಗೆ ತನ್ನ ಸಂಸ್ಕೃತಿಯ ತತ್ವಕ್ಕೆ ಅನುಗುಣವಾದ ರೂಪದಲ್ಲಿ ಸ್ವೀಕರಿಸುತ್ತದೆ. ಅಂದರೆ ಕೆಲವೊಂದು ಬಾರಿ ಬುಡಕಟ್ಟು ಸಂಸ್ಕೃತಿಗಳು ಪರಕೀಯ ಸಂಸ್ಕೃತಿಯ ಚೌಕಟ್ಟನ್ನು ಮಾತ್ರ ಸ್ವೀಕರಿಸಿ, ಆ ಚೌಕಟ್ಟಿನೊಳಗೆ ತಮ್ಮದೇ ಸಂಸ್ಕೃತಿಯ ಅಂಶಗಳನ್ನು ಇಡಲು ಪ್ರಯತ್ನಿಸುತ್ತವೆ. ಆದುದರಿಂದ ಪರಕೀಯ ಸಂಸ್ಕೃತಿಯ ಸಂಪರ್ಕದಿಂದ ಬುಡಕಟ್ಟು ಅಥವಾ ಮುಖ್ಯವಾಹಿನಿಯ ಸಂಸ್ಕೃತಿ ಕಲುಷಿತಗೊಳ್ಳುತ್ತದೆ ಎನ್ನುವುದು ಸರಿಯಲ್ಲ. ಈ ಹಿನ್ನೆಲೆಯಲ್ಲಿ ಮತ್ತು ಬುಡಕಟ್ಟು ಜನರಿಗೆ ಮುಖ್ಯವಾಹಿನಿಯೊಂದಿಗೆ ಬೆರೆಯುವುದು ಅನಿವಾರ್ಯವಾದ ಕಾರಣ ಬೆರೆಯುವುದೇ ಉಚಿತ. ಆದರೆ ಬುಡಕಟ್ಟು ಜನರನ್ನು ಮುಖ್ಯವಾಹಿನಿಗೆ ತರುವ ಹಾದಿಯಲ್ಲಿ ಆಧುನೀಕರಣ ಅಭಿವೃದ್ಧಿ ಸಂದರ್ಭದಲ್ಲಿ ಬೃಹತ್ ಅಣೆಕಟ್ಟು, ಡಿಫೆನ್ಸ್ ಪ್ರೊಜೆಕ್ಟ್ ಇತ್ಯಾದಿಗಳಿಂದ ಅರಣ್ಯ ನಾಶವಾಗಿ ಬುಡಕಟ್ಟುಗಳಿಗಿದ್ದ ನೈಸರ್ಗಿಕ ಸಂಪನ್ಮೂಲಗಳು, ಅದರ ಶಕ್ತಿ ಮೂಲಗಳನ್ನು ನಾಶಮಾಡಿದೆಯಲ್ಲದೇ ಬುಡಕಟ್ಟು ಜನರು ಸಾಕಷ್ಟು ನೋವು, ನಷ್ಟ

ಅನುಭವಿಸುವಂತಾಗಿದೆ.[೧೨] ಈ ಅಭಿವೃದ್ಧಿಪರ ನಾಗರೀಕರಣವು ಬುಡಕಟ್ಟಿನ ಅನನ್ಯತೆಯನ್ನು ಮುಚ್ಚಿಹಾಕಿ ಮುಖ್ಯವಾಹಿನಿಯೊಂದಿಗೆ ಬೆರೆಯುವಂತೆ ಮಾಡುತ್ತದೆ.

ಅಭಿವೃದ್ಧಿಯ ನೆಪದಲ್ಲಿ ಬುಡಕಟ್ಟು ಜನರನ್ನು ಕಾಡಿನಿಂದ ನಾಡಿಗೆ ತಂದು, ಕಾಡಿನೊಳಗೆ ಇದ್ದ ಅವರ ಬದುಕಿನ ನೆಲೆ ತಪ್ಪಿಸುವ ಪ್ರಯತ್ನ ಮುಂದುವರೆದಿದೆ. 'ಕಾಡಿನ ನಂಟು ಕಡಿಯಿತು. ಆದರೆ ನೆಲದೊಂದಿಗೆ ನಂಟು ಸಾಧ್ಯವಾಗಲಿಲ್ಲ' ಎಂಬ ಈ ಬಿರುಕು ಬುಡಕಟ್ಟು ಸಮುದಾಯಗಳ ಮುಂದಿರುವ ಬಹು ದೊಡ್ಡ ಸಂಘರ್ಷ ಮತ್ತು ಸಮಸ್ಯೆಯೂ ಹೌದು. ಇಂಥಹ ಅಭಿವೃದ್ಧಿಪರ ಪ್ರಕ್ರಿಯೆಗಳಿಂದ ಪರಿಹಾರವಾಗಬೇಕಾದರೆ ಅಭಿವೃದ್ಧಿ ವ್ಯಾಖ್ಯಾನ ಮತ್ತು ಕಾರ್ಯರೂಪಾಚರಣೆ ಬದಲಾಗಬೇಕು. ಸರಕಾರ ತನ್ನ ಬುಡಕಟ್ಟು ಸುಧಾರಣಾ ನೀತಿಗಳನ್ನು ಕುರಿತು ಆತ್ಮಾವಲೋಕನ ಮಾಡಿಕೊಳ್ಳಬೇಕು. ಯಾಕೆಂದರೆ, ನಮ್ಮ ಅಭಿವೃದ್ಧಿ ಪರಿಕಲ್ಪನೆ ಪಶ್ಚಿಮದಿಂದ ಸ್ವೀಕರಿಸಿದ್ದು ಮತ್ತು ಅದು ಇಡಿಯಾಗಿ ಆರ್ಥಿಕ ನೆಲೆಯನ್ನು ಆಧರಿಸಿರುವಂತದ್ದು. ಇಂತಹ ಯೋಜನೆಗಳಿಗೆ ನಮ್ಮ ಸಾಂಸ್ಕೃತಿಕ ಬಹುರೂಪತೆಗಳ ನೋಟ ಇಲ್ಲ. ಅಂದರೆ ನಮಗಿರುವುದು ಪಾಶ್ಚಿಮಾತ್ಯರಿಗೆ ಇರುವಂತೆ ಬರೀ ಆರ್ಥಿಕ ಆಯಾಮವಷ್ಟೇ ಅಲ್ಲ. ಆರ್ಥಿಕತೆಯ ಆಚೆಗೆ ಮಾನವನ ಬದುಕನ್ನು ಸಂಪನ್ನಗೊಳಿಸುವ ಸಾಂಸ್ಕೃತಿಕ ಆಯಾಮವಿದೆ. ಹೀಗಾಗಿ ಪಶ್ಚಿಮದ 'ಅಭಿವೃದ್ಧಿ ಎಂದರೆ ಆರ್ಥಿಕ ಚೈತನ್ಯ' ಎನ್ನುವ ಪರಿಕಲ್ಪನೆ ನಮ್ಮ ಸಂದರ್ಭಕ್ಕೆ ಹೊಂದುವುದಿಲ್ಲ. ಆದ್ದರಿಂದ ನಮ್ಮ ಈ ಪಾಶ್ಚಿಮಾತ್ಯ ಅನುಕರಣೆಯ, ಇಡಿಯಾಗಿ ಆರ್ಥಿಕ ನೆಲೆಯಾಧರಿಸಿರುವ ಬುಡಕಟ್ಟು ಅಭಿವೃದ್ಧಿ ಯೋಜನೆ ಅನುಷ್ಠಾನಗೊಳಿಸುವಾಗ ಇಕ್ಕಟ್ಟಿನ ಸಮಸ್ಯೆ ಎದುರಿಸಬೇಕಾಗುತ್ತದೆ. ಇಲ್ಲಿನ ವೈರುಧ್ಯ ಎಂದರೆ ಬುಡಕಟ್ಟೊಂದನ್ನು ಮುಖ್ಯವಾಹಿನಿಗೆ ಸೇರಿಸುವ, ಆರ್ಥಿಕ ಚೈತನ್ಯ ನೀಡುವ ಪ್ರಯತ್ನವು ಅವರ ಸಾಂಸ್ಕೃತಿಕ ವಿಶಿಷ್ಟತೆಯನ್ನು ಹಾಳು ಮಾಡುತ್ತದೆ. ಬುಡಕಟ್ಟೊಂದರ ಸಾಂಸ್ಕೃತಿಕ ವೈಶಿಷ್ಟ್ಯತೆಯನ್ನು ಉಳಿಸುವ ಪ್ರಯತ್ನಗಳು ಅವರನ್ನು ಆರ್ಥಿಕ ಚೈತನ್ಯದಿಂದ ವಂಚಿಸುತ್ತವೆ. ಇಂತಹ ವೈರುಧ್ಯದಲ್ಲಿ ಬುಡಕಟ್ಟುಗಳು ಇಂದು ಬದುಕುತ್ತಿವೆ.[೧೩]

ಆದ್ದರಿಂದ ಮೇಲಿನ ಸಂದರ್ಭಕ್ಕೆ ಹೊಂದುವಂತೆ ನಮ್ಮ 'ಬುಡಕಟ್ಟು ಅಭಿವೃದ್ಧಿ' ವ್ಯಾಖ್ಯಾನ ಮತ್ತು ಅನುಷ್ಠಾನ ಪದ್ಧತಿ, ಅಲ್ಲದೇ 'ಬುಡಕಟ್ಟು ಸುಧಾರಣಾ ನೀತಿ' ಬದಲಾಗಬೇಕಿದೆ. ಈಗಿನ ಸಂದರ್ಭಕ್ಕೆ ಅನಿವಾರ್ಯವಾಗಿರುವುದು ಆರ್ಥಿಕತೆಯ ಜೊತೆಗೆ ಮಾನವ ಕೇಂದ್ರಿತ ಅಭಿವೃದ್ಧಿ ಆಗಬೇಕಿದೆ. ಬುಡಕಟ್ಟು ಜನರ ಅಂತಃಸತ್ವವನ್ನು ಧಮನಿಸಿ ಅಭಿವೃದ್ಧಿ ಸಾಧ್ಯವಾಗುವುದಿಲ್ಲ ಹಾಗೂ ಅವರನ್ನು ಮುಖ್ಯವಾಹಿನಿಗೆ ತರುವುದೂ ಸಾಧ್ಯವಾಗುವುದಿಲ್ಲ. ಯಾವುದೇ ಅಭಿವೃದ್ಧಿಯ ಪ್ರಕ್ರಿಯೆಗಳಲ್ಲಿ ಬುಡಕಟ್ಟಿನ ಪಾರಂಪರಿಕ ಜ್ಞಾನೀಯ ನೆಲೆಗಳ ಕೋಶದೊಳಗಿನ ಸ್ಮೃತಿ ಜಗತ್ತನ್ನು ಧಕ್ಕೆಪಡಿಸದೇ ಅದರ ಮೂಲಕವೇ ನಾಗರಿಕ ಜಗತ್ತಿನ ಪಾತಕಗಳಿಗೆ, ದುಗುಡ-ದುಮ್ಮಾನಗಳಿಗೆ ದಿವ್ಯೌಷಧ ಕಂಡುಹಿಡಿಯುವ ಜೀವಜಲವಾಗಬೇಕಿದೆ. ಅಂದರೆ ಬುಡಕಟ್ಟುಗಳ ಸಾಂಸ್ಕೃತಿಕ ಅನನ್ಯತೆಯನ್ನು ಉಳಿಸಿಕೊಂಡು, ಅವರ ಸಾಂಸ್ಕೃತಿಕ ಬದುಕಿಗೆ ಪುನಃಶ್ಚೇತನ ನೀಡುವ ಮೂಲಕವೇ ಅವರ ಆರ್ಥಿಕ ಅಭಿವೃದ್ಧಿ ಸಾಧ್ಯವಾಗುವಂತಾಗಬೇಕು. ಬುಡಕಟ್ಟು ಅಭಿವೃದ್ಧಿಗೊಂದು ಮಾರ್ಗಸೂಚಿ ಇರಬೇಕು.

ಇದೇ ಸರಕಾರ ತ್ವರಿತ ಕೈಗಾರಿಕೀಕರಣಕ್ಕೆ ಮುಂದಾದಾಗ, ಇದರಿಂದ ಸಂವಿಧಾನದಡಿ ಗುರುತಿಸಲ್ಪಟ್ಟ ಅನುಸೂಚಿತ ಪ್ರದೇಶಗಳಲ್ಲಿ ವ್ಯಾಪಕ ಗಣಿಗಾರಿಕೆ. ಆಣೆಕಟ್ಟುಗಳ ನಿರ್ಮಾಣಕ್ಕೆ ನಾಂದಿ ಹಾಡಿದವು. ವಸಾಹತುಶಾಹಿ ಪ್ರಭುತ್ವ ತನ್ನದಾಗಿಸಿಕೊಂಡಿದ್ದ ಅರಣ್ಯ ಪ್ರದೇಶಗಳು ಸರ್ಕಾರದ ವಶದಲ್ಲೇ ಉಳಿದವು. ಅವುಗಳಲ್ಲಿದ್ದ ಆದಿವಾಸಿಗಳ ಹಕ್ಕುಗಳಿಗೆ ಮಾನ್ಯತೆ ಮಾತ್ರ ದೊರಕಲಿಲ್ಲ. ಅರಣ್ಯ ಪ್ರದೇಶಗಳಲ್ಲಿ ಆದಿವಾಸಿಗಳೇತರ ಜನರು ವಾಸ್ತವ್ಯ ಮಾಡುವುದು ಹೆಚ್ಚಾಯಿತು. ಇದರಿಂದ ಸಾಮಾಜಿಕ ಗತಿಶೀಲತೆಯ ನಕ್ಷೆಯೇ ಬದಲಾಯಿತು. ಆದಿವಾಸಿಗಳು ಮೇಲ್ಜಾತಿಯ ಪೂರ್ವಾಗ್ರಹಗಳು ಮತ್ತು ಶೋಷಣೆಗಳಿಗೆ ಬಲಿಯಾಗತೊಡಗಿದರು. ಕ್ರಮೇಣ ತಮ್ಮ ಭೂಮಿಯಲ್ಲೇ ಅವರ ಸಂಸ್ಕೃತಿ ಅನೇಕ ಬಗೆಯ ಆಕ್ರಮಣಗಳಿಗೆ ಈಡಾಯಿತು.

ಆದಿವಾಸಿಗಳನ್ನು ಪ್ರಮುಖವಾಗಿ ಕಾಡಿದ್ದು ಭೂಪರಾಧೀನತೆ ಮತ್ತು ಉಚ್ಚಾಟನೆ. ವಿಶ್ವದ ಇತರೆಡೆ ಮೂಲನಿವಾಸಿಗಳು ಮತ್ತು ನೆಲೆವೂರಿದ ಬಿಳಿಯರ ನಡುವಿನ ವಿಭಜನೆ ತೀವ್ರ ಸ್ವರೂಪದ್ದಾಗಿತ್ತು. ಭಾರತದಲ್ಲಿ ಆದಿವಾಸಿಗಳು ಮತ್ತು ಹಿಂದೂ ಸಮಾಜದ ನಡುವಿನ ಸೀಮೆಗಳು ತೆಳುವಾಗಿದ್ದವು. ಆದುದರಿಂದ ಭಾರತದಲ್ಲಿ ಆದಿವಾಸಿಗಳ ಒಂದುಗೂಡುವಿಕೆ ಪಶ್ಚಿಮದಲ್ಲಿ ಜರುಗಿದ ಹಿಂಸಾಚಾರಗಳ ಮತ್ತು ಏಕಾಧಿಪತ್ಯದ ತೀವ್ರ ಸ್ವರೂಪವನ್ನು ಪಡೆಯಲಿಲ್ಲ. ಆದಾಗ್ಯೂ ಅದು ಆದಿವಾಸಿಗಳ ಆತ್ಮಗೌರವವನ್ನು ನಿಧಾನವಾಗಿ ಕಬಳಿಸುತ್ತ ಬಂದಿತು.

ಕಳೆದ ಇಪ್ಪತ್ತು ವರ್ಷಗಳಿಂದ ಜಾರಿಯಲ್ಲಿರುವ ಆರ್ಥಿಕ ಉದಾರೀಕರಣ ಆದಿವಾಸಿ ಪ್ರದೇಶಗಳ ಮೇಲೆ ಅನೇಕ ಬಗೆಯ ಒತ್ತಡಗಳನ್ನು ಹೇರಿದೆ. ಆದಿವಾಸಿಗಳು ವಾಸಮಾಡುತ್ತಿರುವ ದೊಡ್ಡ ಪ್ರದೇಶಗಳು ಗಣಿ ನಿಗಮಗಳಿಗೆ ಮತ್ತಿತರ ಉದ್ಯಮಗಳಿಗೆ ವರ್ಗಾಯಿಸಲ್ಪಡುತ್ತಿವೆ. ಸ್ಥಳೀಯ ಜನರಿಗೆ ಯಾವುದೇ ರೀತಿಯ ಪರಿಹಾರಗಳು ದೊರಕುತ್ತಿಲ್ಲ. ನಮ್ಮ ರಾಷ್ಟ್ರದ ಹೆಚ್ಚುತ್ತಿರುವ ವಿದ್ಯುತ್ತಿನ ಬೇಡಿಕೆಗಳನ್ನು ಪೂರೈಸುವ ನಿಟ್ಟಿನಲ್ಲಿ ಅಧಿಕ ಸಂಖ್ಯೆಯ ದೊಡ್ಡ ಆಣೆಕಟ್ಟುಗಳನ್ನು ಆದಿವಾಸಿಗಳ ಪ್ರದೇಶಗಳಲ್ಲಿ ನಿರ್ಮಿಸಲಾಗುತ್ತಿದ್ದು, ಇದರ ಪರಿಣಾಮಗಳು ಭಾರಿ ಪ್ರಮಾಣದ ಕಾಡುಗಳ ಮುಳುಗಡೆ ಮತ್ತು ಜನರ ಸ್ಥಳಾಂತರಕ್ಕೆ ಕಾರಣವಾಗಿವೆ. ನಮ್ಮ ರಾಷ್ಟ್ರದಲ್ಲಿ ಪರಿಸರ ಸಂರಕ್ಷಣಾ ನೀತಿಗಳಡಿಯಲ್ಲಿ ಸ್ಥಾಪಿಸಲ್ಪಟ್ಟಿರುವುದು ರಾಷ್ಟ್ರೀಯ ಉದ್ಯಾನಗಳು, ವನ್ಯಜೀವಿ ಅಭಯಾರಣ್ಯಗಳು ಇತ್ಯಾದಿ. ಇವುಗಳಲ್ಲಿ ಆದಿವಾಸಿಗಳ ಜಾನುವಾರುಗಳಿಂದ ಮೇಯುವಿಕೆ, ಅರಣ್ಯ ಉತ್ಪನ್ನಗಳ ಸಂಗ್ರಹಣೆ ಮತ್ತಿತರ ಚಟುವಟಿಕೆಗಳು ನಿಷೇಧಿಸಲ್ಪಟ್ಟಿವೆ. ಹೊಸದಾಗಿ ರಚಿಸಿರುವ ಸಂರಕ್ಷಿತ ಪ್ರದೇಶಗಳಿಂದ ಜನರನ್ನು ಒಕ್ಕಲೆಬ್ಬಿಸಲಾಗಿದೆ.[೧೪] ಅಭಿವೃದ್ಧಿ ಎಂದರೆ ಬುಡಕಟ್ಟು ಜನರ ಆರ್ಥಿಕ ನೆಲೆಗಳನ್ನು ಸ್ಥಳಾಂತರಿಸಿ ಅನಾಮಿಕ ನೆಲೆಗಳಲ್ಲಿ ತಂದುಬಿಟ್ಟು ಅವರನ್ನು ಗುಲಾಮಿ ಸ್ಥಿತಿಗೆ ತಳ್ಳುವದಲ್ಲ. ಬದಲಿಗೆ ಅವರ ಅನಿವಾರ್ಯತೆಗಳನ್ನು ಅಲ್ಲಿಯೇ ಪೂರೈಸುವುದು. ಅಭಿವೃದ್ಧಿ ಪ್ರವಾಹ ಅವರ ಧಾರಣ ಶಕ್ತಿಯನ್ನು ಇನ್ನಷ್ಟು ಪ್ರಬಲಗೊಳಿಸಬೇಕೇ ಹೊರತು ಬದುಕು, ಉದ್ಯೋಗದ ಮಾರ್ಗಗಳನ್ನು ಒಂದೇ ಏಟಿಗೆ ಕತ್ತರಿಸುವುದಲ್ಲ.

ಈ ವಿಷಯದಲ್ಲಿ, ನಮ್ಮನ್ನಾಳುತ್ತ ಬಂದಿರುವ ಸರಕಾರಗಳು ದ್ವಂದ್ವ ಮಾನದಂಡಗಳನ್ನು ಪ್ರಯೋಗಿಸುತ್ತಿವೆ. ಅವು ದೊಡ್ಡ ಕೈಗಾರಿಕಾ ಯೋಜನೆಗಳಿಗಾಗಿ ಕಾಡುಗಳನ್ನು ತೆರವು ಮಾಡಿಕೊಡುತ್ತಿವೆ.

ಹಾಗೆಯೇ, ಆದಿವಾಸಿಗಳಿಂದ ಜರುಗುವ ಕಡಿಮೆ ಪ್ರಮಾಣದ ಅರಣ್ಯ ಬಳಕೆಗೆ ತಡೆಯೊಡ್ಡುತ್ತಿವೆ. ಈ ರೀತಿಯ ಕ್ರಮಗಳಿಂದ ಆದಿವಾಸಿಗಳು ವಲಸೆ ಹೋಗುತ್ತಿದ್ದಾರೆ. ಕಟ್ಟಡಗಳ ನಿರ್ಮಾಣದಲ್ಲಿ, ಸಿಲಿಕಾ ಕಾರ್ಖಾನೆಗಳಲ್ಲಿ, ಕೃಷಿ ಭೂಮಿಗಳಲ್ಲಿ ಕಡಿಮೆ ವರಮಾನದ ಕೂಲಿಗಳಾಗಿ ಕೆಲಸ ಮಾಡುತ್ತಿದ್ದಾರೆ. ಹಲವರು ತಮ್ಮ ಪ್ರಾಣಕ್ಕೆ ಕುತ್ತು ತರುವ ಅಪಾಯಕಾರಿ ಉದ್ಯೋಗಗಳಲ್ಲಿ ನಿರತರಾಗಿದ್ದಾರೆ.

ಆದಿವಾಸಿಗಳ ಉಳಿವಿನ ಹೋರಾಟ ರಾಜಕೀಯ ಮತ್ತು ಆರ್ಥಿಕ ಹಕ್ಕುಗಳ ಗಳಿಸುವಿಕೆಯ ಜೊತೆ ತಳುಕು ಹಾಕಿಕೊಂಡಿದೆ. ಅವರು ದಶಕಗಳಿಂದ ತಮ್ಮ ಹಕ್ಕುಗಳಿಗಾಗಿ ಬೇಡಿಕೆಗಳನ್ನು ಮಂಡಿಸುತ್ತ ಬಂದಿದ್ದಾರೆ. ಇವುಗಳಿಗೆ ಸ್ಪಂದಿಸಿ ಸರಕಾರ ಸನ್ ೧೯೯೬ರ ಪಂಚಾಯತಿ ಕಾಯ್ದೆ ಮತ್ತು ೨೦೦೬ರಲ್ಲಿ ಅರಣ್ಯ ಹಕ್ಕು ಕಾಯ್ದೆಯನ್ನು ಜಾರಿಮಾಡಿತು. ಇವುಗಳ ಉದ್ದೇಶ ಆದಿವಾಸಿಗಳಿಗೆ ಸಂಪನ್ಮೂಲಗಳ ಮೇಲೆ ವಿಕೇಂದ್ರಿತ ಹತೋಟಿ ಮತ್ತು ಇತರ ಕಾಡಿನ ನಿವಾಸಿಗಳಿಗೆ ಅರಣ್ಯಗಳ ಮೇಲಿರುವ ಅವರ ಹಕ್ಕುಗಳ ಮಾನ್ಯತೆ. ಈ ಕಾಯ್ದೆಗಳನ್ನು ಸಮರ್ಪಕವಾಗಿ ಜಾರಿಗೊಳಿಸಲಾಗಿಲ್ಲ. ಇದರಿಂದ ಧಕ್ಕೆಯೊದಗಿರುವುದು ಆದಿವಾಸಿಗಳ ಸಬಲೀಕರಣಕ್ಕೆ. ಇದೊಂದು ದುರಂತದ ಬೆಳವಣಿಗೆಯೇ ಸರಿ.

ಅನೇಕ ಆದಿವಾಸಿಗಳು ತಮ್ಮ ಘನತೆಯನ್ನು ಕಳೆದುಕೊಂಡು ನಿರ್ಗತಿಕರಾಗಿ ಜೀವನ ಸವೆಸುತ್ತಿದ್ದಾರೆ. ಅವರ ಜೀವನಾಧಾರಗಳನ್ನು ಕಸಿದುಕೊಳ್ಳಲಾಗಿದೆ. ನಮ್ಮ ರಾಷ್ಟ್ರ ಸ್ವಾತಂತ್ರ್ಯ ಗಳಿಸಿ ಅರವತ್ತು ವರ್ಷಗಳ ಮೇಲಾದರೂ ಅವರ ಮೇಲಿನ ದೌರ್ಜನ್ಯ, ಅನ್ಯಾಯಗಳು, ಅವ್ಯಾಹತವಾಗಿವೆ. ಅವರ ಮುಖಾಂತರ ವಿವಿಧ ಜನ ವರ್ಗಗಳು ಉದ್ಧಾರವಾಗಿವೆ. ಅವರು ಮಾತ್ರ ಉಪೇಕ್ಷೆಗೆ ಒಳಗಾಗಿ 'ಆಂತರಿಕ ನಿರ್ವಸತಿಕರಣ'ಕ್ಕೆ ತುತ್ತಾಗಿದ್ದಾರೆ. ಈ ಎಲ್ಲ ಕಾರಣಗಳಿಂದ ಅವರು ಶಾಂತಿಯುತ ಮತ್ತು ಉಗ್ರಗಾಮಿ ರಾಜಕೀಯ ಹೋರಾಟಗಳಲ್ಲಿ ತೊಡಗಿದ್ದಾರೆ. ಅನೇಕ ಸಾಮಾಜಿಕ ಚಳುವಳಿಗಳ ಜೊತೆ ತಮ್ಮನ್ನು ಸಮೀಕರಿಸಿಕೊಂಡು, ಗಣಿಗಾರಿಕೆ ಮತ್ತು ಆಣೆಕಟ್ಟುಗಳಿಂದಾಗುವ ನಿರ್ವಸತಿ ಕುರಿತು ಪ್ರಬಲ ಧ್ವನಿಯನ್ನು ಎತ್ತಿದ್ದಾರೆ. ಕೆಲವು ಸಂದರ್ಭಗಳಲ್ಲಿ ಮಾವೋವಾದಿಗಳ ಜೊತೆ ಸೇರಿ ಕ್ರಾಂತಿಕಾರಕ ಹೋರಾಟಗಳಲ್ಲೂ ಭಾಗವಹಿಸುತ್ತಿದ್ದಾರೆ. ತಮ್ಮ ಸ್ವಾಯತ್ತತೆಗಾಗಿ ಪ್ರತ್ಯೇಕ ರಾಜ್ಯಗಳ ಸ್ಥಾಪನೆಯ ಬೇಡಿಕೆಗಳನ್ನು ಮಂಡಿಸುತ್ತಿದ್ದಾರೆ. ಈಗಾಗಲೇ ಜಾರ್ಖಂಡ ರಾಜ್ಯ ಅಸ್ತಿತ್ವಕ್ಕೆ ಬಂದಿದೆ. ಪ್ರಸ್ತುತ ಅವರು ಪ್ರತ್ಯೇಕ ಭಿಲೀಸ್ತಾನ್ ರಾಜ್ಯ ಸ್ಥಾಪನೆಗಾಗಿ ಆಗ್ರಹಿಸುತ್ತಿದ್ದಾರೆ. ಇವುಗಳು ಆದಿವಾಸಿ ಸಮುದಾಯಗಳ ರಾಜಕೀಯ, ಸಾಂಸ್ಕೃತಿಕ ಮತ್ತು ಆರ್ಥಿಕ ಆಶೋತ್ತರಗಳ ಸಿದ್ಧಿಯ ಅಭಿವ್ಯಕ್ತಿಗಳು ಎಂಬುದನ್ನು ಮರೆಯಬಾರದು.[೧೫]

ಭಾರತ ದೇಶದಲ್ಲಿ ಬುಡಕಟ್ಟುಗಳ ಸಮಸ್ಯೆ ಒಂದೇ ತೆರನಾಗಿಲ್ಲ. ಹಲವು ಬುಡಕಟ್ಟುಗಳು ಗುರುತಿಸಲ್ಪಡದೇ ಅಭಿವೃದ್ಧಿಯ ವಾಹಿನಿಯಿಂದ ದೂರ ಉಳಿದಿವೆ ಮತ್ತು ಸಮಸ್ಯೆಗಳನ್ನು ಎದುರಿಸುತ್ತಿವೆ. ಕೆಲವು ಬುಡಕಟ್ಟುಗಳು ಭಾರತದ ಜಾತಿ ವ್ಯವಸ್ಥೆಯ ಪ್ರಭಾವಕ್ಕೊಳಗಾಗಿ ಬದಲಾವಣೆಯ ಗಾಳಿಯಲ್ಲಿ ಸಿಲುಕಿವೆ. ಬಹುತೇಕ ಉತ್ತರ ಭಾರತದ ಬುಡಕಟ್ಟುಗಳು ಅವುಗಳ ಜನಸಂಖ್ಯಾ ಪ್ರಾಬಲ್ಯ ಮತ್ತು ತಕ್ಕಮಟ್ಟಿನ ಶಿಕ್ಷಣದಿಂದಾಗಿ ತಮ್ಮ ಸಂವಿಧಾನಾತ್ಮಕ ಹಕ್ಕುಗಳ ರಕ್ಷಣೆಯ ಜೊತೆಗೆ ಸರಕಾರದಿಂದ ವಿಶೇಷ ಸವಲತ್ತುಗಳನ್ನು ಪಡೆಯುವಲ್ಲಿ ಸಫಲವಾಗಿವೆ. ಆದರೆ ದಕ್ಷಿಣ ಭಾರತದ ಬೆಟ್ಟಗುಡ್ಡ, ಕಾಡುಗಳಲ್ಲಿ

ವಾಸಿಸುವ ಬುಡಕಟ್ಟುಗಳು ಮೂಲ ಸವಲತ್ತುಗಳಿಲ್ಲದೇ ತುಂಬಾ ನಿಕೃಷ್ಟ ಸ್ಥಿತಿಯಲ್ಲಿವೆ ಎಂಬುದು ಅವರ ನೆಲೆಗಳನ್ನು ನೋಡಿದರೆ ಗೊತ್ತಾಗುತ್ತದೆ. ಬಯಲು ಪ್ರದೇಶಗಳಲ್ಲಿ ವಾಸಿಸುವ ಬುಡಕಟ್ಟುಗಳು ಸಂವಿಧಾನಾತ್ಮಕ ಸವಲತ್ತುಗಳನ್ನು ಪಡೆಯುವುದರ ಜೊತೆಗೆ ಜೀವನ ವಿಧಾನಗಳಲ್ಲಿ ಜಾತಿ ವ್ಯವಸ್ಥೆಗೆ ಹತ್ತಿರವಾಗುತ್ತಿವೆ. ಇಂತಹ ಬುಡಕಟ್ಟುಗಳು ತಮ್ಮಷ್ಟಕ್ಕೆ ತಾವು ಪ್ರತ್ಯೇಕವಾಗಿದ್ದರೂ ಸಹ ಸರ್ಕಾರದ ಕಾರ್ಯಕ್ರಮಗಳಲ್ಲಿ ಇವರ ಪಾಲ್ಗೊಳ್ಳುವಿಕೆ ಇದೆ. ಇನ್ನೂ ಕೆಲವು ಬುಡಕಟ್ಟು ನೆಲೆಗಳಲ್ಲಿ ಅಂದರೆ ಕಂದಾಯ ಗ್ರಾಮವೆಂದು ಸರ್ಕಾರದಿಂದ ಘೋಷಿಸದೇ ಇರುವಂತಹ ಬುಡಕಟ್ಟುಗಳ ಪ್ರದೇಶ ಮತ್ತು ಕಂದಾಯ ನೆಲೆಗಳಲ್ಲದಿರುವಂತಹ ಬುಡಕಟ್ಟು ನೆಲೆಗಳಿಗೆ ಹಲವು ಮೂಲ ಸೌಕರ್ಯಗಳಿಲ್ಲದೇ ಅವರ ದಿನನಿತ್ಯದ ಜೀವನ ನಿರ್ವಹಣೆಗೆ ತುಂಬಾ ಅಡ್ಡಿಯಾಗಿರುವುದು ಕಂಡು ಬರುತ್ತದೆ. ಬುಡಕಟ್ಟು ಜನರು ಮುಖ್ಯ ನಾಗರಿಕ ಸಮಾಜದಿಂದ ದೂರವಿದ್ದುದರಿಂದ, ಸಾಂಸ್ಕೃತಿಕವಾಗಿ ಮತ್ತು ಭೌಗೋಳಿಕವಾಗಿ ಪ್ರತ್ಯೇಕವಾಗಿದ್ದುದರಿಂದ ಹಾಗೂ ಶೈಕ್ಷಣಿಕವಾಗಿ ಹಿಂದುಳಿದಿದ್ದರಿಂದ ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಬುಡಕಟ್ಟು ಜನರು ಎದುರಿಸುವ ಪ್ರಮುಖ ಸಮಸ್ಯೆಗಳೆಂದರೆ, ಭೂಮಿ, ಬಡತನ, ಅನಕ್ಷರತೆ, ಆರೋಗ್ಯ, ನಿರುದ್ಯೋಗ, ವಸತಿ, ಸಂಪರ್ಕ, ಶೋಷಣೆ, ಅಮಾನವೀಯ ಪದ್ಧತಿಗಳು, ಬುಡಕಟ್ಟಾಗದ ಸಮಸ್ಯೆ ಇತ್ಯಾದಿ.

ಆದಿವಾಸಿಗಳು ರಾಜಕೀಯವಾಗಿ ಸಂಘಟಿತರಾಗುತ್ತಿರುವ ಸಂದರ್ಭದಲ್ಲಿ ಅವರ ಸಮಸ್ಯೆಗಳು ಹೆಚ್ಚು ಹೆಚ್ಚಾಗಿ ವಿವಾದಾತ್ಮಕವಾಗುತ್ತಿವೆ. ಹೊಸ ರೂಪವನ್ನು ಪಡೆಯುತ್ತಿವೆ. ನಗರ ಭಾರತದ ಆದಿವಾಸಿ ಆಸಕ್ತಿ, ಆದಿವಾಸಿ ಸಂಸ್ಕೃತಿಗಳು ಉಸಿರುಕಟ್ಟುವ ವಾತಾವರಣದಲ್ಲಿರುವಾಗ ಪರಿಸರವಾದಿಗಳು ಮತ್ತು ಜೈವಿಕ/ಸಾಂಸ್ಕೃತಿಕ ವೈವಿಧ್ಯಗಳನ್ನು ಜತನ ಮಾಡುವ ಕಾಳಜಿಯುಳ್ಳವರು ಅವುಗಳ ಪರವಾಗಿ ನಿಂತಿದ್ದಾರೆ. ಪರಿಸರ ಮತ್ತು ಸಾಂಸ್ಕೃತಿಕ ಶ್ರೀಮಂತಿಕೆಯ ವೈವಿಧ್ಯಗಳನ್ನು ಧೂಳಿಪಟ ಮಾಡುತ್ತಿವೆ. ಜಾಗತಿಕ ಕೈಗಾರಿಕೀಕರಣ ಮತ್ತು ಉಪಭೋಗವಾದ ಈ ಬೆಳವಣಿಗೆಗಳನ್ನು ನಿಷ್ಕರ್ಷಕ್ಕೊಳಪಡಿಸುತ್ತಿರುವವರಿಗೆ ಪ್ರಕೃತಿಯೊಡನೆ ಗೌರವದ ಜೀವನ ನಡೆಸುತ್ತ ಬಂದಿರುವ ಆದಿವಾಸಿ ಜೀವನ ಶೈಲಿ ಒಂದು ಪರ್ಯಾಯ ಮಾದರಿಯಾಗಿದೆ. ಇದನ್ನು ಸುಧಾರಣೆಯೆಂದು ಕರೆಯಬಹುದಾದರೂ ಈ ದೃಷ್ಟಿಕೋನ ಸರಿಯಾದುದಲ್ಲ. ಆದಿವಾಸಿಗಳನ್ನು ಪರಕೀಯರೆಂದು ಭಾವಿಸದೆ, ಅವರಿಗೂ ಇತರ ನಾಗರಿಕರಂತೆ ಸಮಾನ ಹಕ್ಕುಗಳಿವೆ ಎಂಬುದನ್ನು ಮಾನ್ಯ ಮಾಡಬೇಕಿರುವುದು ಇಂದಿನ ತುರ್ತು ಅಗತ್ಯ.[೧೬]

ಈ ಹಿನ್ನೆಲೆಯಲ್ಲಿ ಉತ್ತರ ಕನ್ನಡದ ಗೌಳಿ ಸಮುದಾಯವನ್ನು ನಾವು ನೋಡಬೇಕಾಗಿದೆ. ಉತ್ತರ ಕನ್ನಡದ ಹಳಿಯಾಳ, ದಾಂಡೇಲಿ, ಅಂಬಿಕಾನಗರ, ಯಲ್ಲಾಪೂರ, ಮುಂಡಗೋಡ, ಜೋಯಿಡಾ ಮುಂತಾದ ದಟ್ಟ ಅರಣ್ಯ ಪ್ರದೇಶದಲ್ಲಿ ಜೀವನ ಸಾಗಿಸುತ್ತಿರುವ ಗೌಳಿಗರು ಇತ್ತೀಚಿನ ವರ್ಷಗಳಲ್ಲಿ ಆಧುನಿಕತೆಯ ಪ್ರಭಾವಕ್ಕೆ ಒಳಗಾಗಿದ್ದಾರೆ. ಮೂಲತಃ ಪಶುಸಂಗೋಪಕರಾದ ಇವರು ಇಂದಿಗೂ ಹಾಲು ಉತ್ಪನ್ನವನ್ನು ಪ್ರಮುಖ ವೃತ್ತಿಯನ್ನಾಗಿ ಪರಿಗಣಿಸಿದ್ದಾರೆ. ಅಲ್ಲಲ್ಲಿ ಕೃಷಿ ಭೂಮಿಯನ್ನು ಬೇಸಾಯಕ್ಕಾಗಿ ಬಳಸುವ ಪ್ರಯತ್ನ ಮಾಡುತ್ತಿದ್ದಾರೆ. ಆದರೆ ಪ್ರಮುಖವಾಗಿ ಇವರಿಗೆ ಆಧುನಿಕತೆಯ ಕಾರಣದಿಂದಾಗಿ ಎರಡು ಬಗೆಯ ಸಮಸ್ಯೆಗಳು ಉಂಟಾಗಿವೆ. ಆಧುನಿಕ ಡೈರಿಯ ಕಲ್ಪನೆ ಮತ್ತು

ಅದರ ಅನುಷ್ಠಾನದಿಂದಾಗಿ ಗೌಳಿಗರ ಹಾಲಿನ ಉತ್ಪಾದನೆ ಕುಂಠಿತಗೊಳ್ಳುತ್ತಿದೆ. ಅರಣ್ಯ ನಾಶ, ಅರಣ್ಯದಲ್ಲಿಯ ಅಭಿವೃದ್ಧಿ ಯೋಜನೆಗಳು, ಕಾಳಿ ನದಿಯ ವಿದ್ಯುತ್ ಯೋಜನೆಗಳು, ಅಭಯಾರಣ್ಯದ ಕಲ್ಪನೆ ಇವೆಲ್ಲವು ಅವರ ಕಾಡಿನ ಜೀವನದ ಮೇಲೆ ವ್ಯತಿರಿಕ್ತವಾದ ಪರಿಣಾಮ ಉಂಟು ಮಾಡುತ್ತಿವೆ. ಮೂಲತಃ ಅಲೆಮಾರಿಗಳಾದ ಇವರು ಒಂದು ಕಡೆ ನೆಲೆಗೊಳ್ಳಬೇಕಾದ ಅನಿವಾರ್ಯತೆಗೆ ಒಳಗಾಗಿರುವುದರಿಂದ ಏಕಕಾಲದಲ್ಲಿ ಕೃಷಿ ಮತ್ತು ಹಾಲು ಉತ್ಪಾದನೆಯ ವೃತ್ತಿಯನ್ನು ಕಾಪಾಡಿಕೊಳ್ಳಲಾಗದ ಸಂಕಷ್ಟಕ್ಕೆ ಒಳಗಾಗಿದ್ದಾರೆ. ಆಧುನಿಕ ಯುಗದ ಸಮಗ್ರ ಡೈರಿ ಅಭಿವೃದ್ಧಿಯ ಕಲ್ಪನೆ, ಅರಣ್ಯ ಕಾನೂನುಗಳ ಬಿಗಿ ಹಿಡಿತದ ನಡುವೆ ತಮ್ಮ ಎರಡೂ ವೃತ್ತಿಗಳನ್ನು ಉಳಿಸಿಕೊಳ್ಳಲಾಗದ ಸ್ಥಿತಿಯಲ್ಲಿದ್ದಾರೆ. ಹಾಗೆಯೇ ಹೊಸ ರಾಜಕಾರಣ ವ್ಯವಸ್ಥೆ, ವಿಭಕ್ತ ಕುಟುಂಬಗಳ ಹೆಚ್ಚಳಿಕೆ, ಆಂತರಿಕ ನ್ಯಾಯ ವ್ಯವಸ್ಥೆಯ ಸಡಿಲಿಕೆ, ಮಾಧ್ಯಮಗಳ ಪ್ರಭಾವ ಮುಂತಾದ ಹೊಸಯುಗದ ಎಲ್ಲ ಪ್ರಭಾವಗಳು ಅವರ ಮೇಲಾಗುತ್ತಿವೆ. ಈ ಹಿನ್ನೆಲೆಯಲ್ಲಿ ಗೌಳಿಗರ ವಿವಿಧ ಬಗೆಯ ಸಾಮಾಜಿಕ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳಬೇಕಾಗಿದೆ.

**೪.೩. ಕರ್ನಾಟಕದ ಗೌಳಿಗರು ಮತ್ತು ಅವರ ಸಮಸ್ಯೆಗಳು**[೭೭]

ಬುಡಕಟ್ಟುಗಳ ದೃಷ್ಟಿಯಿಂದ ಅಧ್ಯಯನ ಮಾಡಿದಾಗ ಕರ್ನಾಟಕದ ಗೌಳಿಗರು ಇತರ ಬುಡಕಟ್ಟುಗಳಿಗಿಂತ ಭಿನ್ನವಾಗಿರದಿದ್ದರೂ, ಇವರು ಕೆಲವೊಂದು ಅಂಶಗಳಲ್ಲಿ ಮಾತ್ರ ಇತರರಿಗಿಂತ ಭಿನ್ನವಾಗಿದ್ದಾರೆ ಎಂಬುದು ಗಮನಾರ್ಹ. ಹೆಚ್ಚಿನ ಬುಡಕಟ್ಟುಗಳು ತಮ್ಮ ಮೂಲ ನೆಲೆಯಿಂದ ಪ್ರತ್ಯೇಕಗೊಂಡು ದೂರ ಪ್ರದೇಶಗಳಿಗೆ ವಲಸೆ ಹೋಗುವ ಸಾಧ್ಯತೆ ಬಹಳ ಕಡಿಮೆ. ಆದರೆ ಕರ್ನಾಟಕದ ಗೌಳಿಗರು ತಮ್ಮ ಮೂಲ ನೆಲೆಯಾದ ಮಹಾರಾಷ್ಟ್ರ ರಾಜ್ಯದಿಂದ ಪಕ್ಕದ ಕರ್ನಾಟಕ ರಾಜ್ಯದ ಅರಣ್ಯ ಪ್ರದೇಶಗಳಿಗೆ ವಲಸೆ ಬಂದಿರುವ ಅವರನ್ನು ಇತರ ಬುಡಕಟ್ಟುಗಳಿಗೆ ಹೋಲಿಸಿ ನೋಡಿದಾಗ ಅವರ ಭಿನ್ನತೆಯ ವೈಶಿಷ್ಟ್ಯತೆಯ ಅರಿವು ನಮಗುಂಟಾಗುವುದು.

ಯಾವುದೇ ಒಂದು ಸಮುದಾಯವು ವಿವಿಧ ಕಾರಣಗಳಿಂದಾಗಿ ತನ್ನ ಮೂಲ ನೆಲೆಯನ್ನು ಬಿಟ್ಟು ಬೇರೆಡೆಗೆ ವಲಸೆ ಬಂದಾಗ, ಹೊಸ ವಾತಾವರಣದಲ್ಲಿ ಅನೇಕ ಪ್ರಕಾರದ ಸಮಸ್ಯೆಗಳನ್ನು ಎದುರಿಸುವ ಅನಿವಾರ್ಯತೆ ಉಂಟಾಗುವುದು ಸಹಜವಾಗಿದೆ. ಹೊಸ ಸಂಸ್ಕೃತಿಯೊಂದಿಗೆ ಘರ್ಷಣೆ, ಹೊಂದಾಣಿಕೆಗಳು ಅನಿವಾರ್ಯವಾಗುತ್ತವೆ. ಯುರೋಪ ಖಂಡದ ವಿವಿಧ ದೇಶಗಳಿಂದ ಅಮೇರಿಕಕ್ಕೆ ವಲಸೆ ಹೋದ ಜನರು ಅಲ್ಲಿಯ ಸ್ಥಾನಿಕ ರೆಡ್ ಇಂಡಿಯನ್ ಬುಡಕಟ್ಟನ್ನು ಅಸ್ತಿತ್ವವೇ ಉಳಿಯದಂತೆ ನಿರ್ನಾಮ ಮಾಡಿದ್ದು ಒಂದು ಐತಿಹಾಸಿಕ ಸತ್ಯ. ಆದರೆ ವಲಸೆ ಹೋದ ಯುರೋಪಿಯನ್ನರು ಇಂದು ಅಮೇರಿಕ ದೇಶದಲ್ಲಿ ಆರ್ಥಿಕ, ಸಾಮಾಜಿಕ ಹಾಗೂ ರಾಜಕೀಯ ಪ್ರಾಬಲ್ಯವನ್ನು ಹೊಂದಿರುವರು.

ಕರ್ನಾಟಕದ ಗೌಳಿಗರ ಕುರಿತು ವಿಚಾರ ಮಾಡುವಾಗ ಕಂಡುಬರುವ ಸ್ಥಿತಿಗತಿಗಳು ಮೇಲಿನಗಿಂತ ಭಿನ್ನವಾಗಿವೆ. ಪಕ್ಕದ ರಾಜ್ಯಗಳಿಂದ ಕರ್ನಾಟಕಕ್ಕೆ ವಲಸೆ ಬಂದ ಗೌಳಿಗರು ತಮ್ಮ ಸುತ್ತಮುತ್ತಲಿನ ನಾಗರಿಕ ಸಮಾಜದ ಮೇಲೆ ಯಾವುದೇ ಪ್ರಭಾವ ಬೀರಿಲ್ಲ, ಅಥವಾ ವಲಸೆ ಬಂದ ಗೌಳಿಗ ಸಮುದಾಯದ ಮೇಲೆ ಅವರ ಸುತ್ತಮುತ್ತಲಿನ ನಗರ ಜೀವನ ಇಲ್ಲವೇ ನಾಗರಿಕ ಸಮಾಜ ಯಾವುದೇ ಹೆಚ್ಚಿನ ಪ್ರಭಾವ ಬೀರಿಲ್ಲ. ಇದಕ್ಕೆ ಕಾರಣವೇನೆಂದರೆ ಅವರು ವಲಸೆ ಬಂದು ವಸತಿ ಹೂಡಿರುವುದು

ನಾಗರಿಕ ಸಮಾಜದಿಂದ ದೂರವಿರುವ ಅಡವಿಗಳಲ್ಲಿ ಹಾಗೂ ಅಲ್ಲಿಯೇ ತಮ್ಮ ಜೀವನ ನಿರ್ವಹಣೆ ಮಾಡುತ್ತಿದ್ದಾರೆ. ಇವರ ವಲಸೆಯ ಮುಖ್ಯ ಕಾರಣವೇನೆಂದರೆ, ಇವರ ಮೂಲ ನೆಲೆಯಲ್ಲಿ ದನಕರುಗಳಿಗೆ ಮೇವು-ಆಹಾರವಿಲ್ಲದಂಥ ಸ್ಥಿತಿ ನಿರ್ಮಾಣವಾಗಿ ಇವರ ಮುಖ್ಯ ಉದ್ಯೋಗವಾದ ಹೈನುಗಾರಿಕೆಗೆ ಧಕ್ಕೆ ಉಂಟಾದದ್ದು ಎಂದು ಹೇಳಬಹುದು. ಹೀಗೆ ವಲಸೆ ಬಂದಂಥ ಗೌಳಿಗರು ಇಂದು ಕರ್ನಾಟಕದಲ್ಲಿ ನೈಸರ್ಗಿಕ, ರಾಜಕೀಯ ಹಾಗೂ ಸಾಮಾಜಿಕ ಸ್ಥಿತ್ಯಂತರಗಳಿಂದಾಗಿ ವಿವಿಧ ಪ್ರಕಾರದ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಅವುಗಳಲ್ಲಿ ಈ ಕೆಳಗೆ ಉಲ್ಲೇಖಿಸಿದ ಕೆಲವು ಸಮಸ್ಯೆಗಳು ಪ್ರಮುಖವಾಗಿವೆ.

**ಕೋಷ್ಟಕ ೪.೧**

**ಪ್ರಮುಖ ಸಮಸ್ಯೆಗಳು**

| ಪ್ರಮುಖ ಸಮಸ್ಯೆಗಳು | ಪ್ರತಿಕ್ರಿಯಿಸಿದವರ ಸಂಖ್ಯೆ | ಶೇಕಡಾವಾರು |
|---|---|---|
| ಶೈಕ್ಷಣಿಕ ಅವಕಾಶಗಳ ಕೊರತೆ | ೨೨೫ | ೧೦೦% |
| ಉದ್ಯೋಗ ಅವಕಾಶಗಳ ಕೊರತೆ | ೨೨೫ | ೧೦೦% |
| ಬಂಡವಾಳದ ಕೊರತೆ | ೨೨೫ | ೧೦೦% |
| ರಾಜಕೀಯ ಅಧಿಕಾರದ ಕೊರತೆ | ೨೨೧ | ೯೮% |
| ಇತರೆ | ೬ | ೨.೬% |




ಉತ್ತರ ಕನ್ನಡ ಜಿಲ್ಲೆಯ ಗೌಳಿ ಸಮುದಾಯದ ಸಂದರ್ಶಿತ ಕುಟುಂಬಗಳು ವ್ಯಕ್ತಪಡಿಸಿದ ಸಮಸ್ಯೆಗಳು ಹಲವಾರು. ಆದರೆ ಎಲ್ಲ ೨೨೫ ಕುಟುಂಬಗಳು ತಮ್ಮ ನಾಲ್ಕು ಪ್ರಮುಖ ಸಮಸ್ಯೆಗಳನ್ನು ವ್ಯಕ್ತಪಡಿಸಿದ್ದಾರೆ ಅವು ಯಾವುವೆಂದರೆ, ಶೈಕ್ಷಣಿಕ ಅವಕಾಶಗಳ ಕೊರತೆ, ಉದ್ಯೋಗ ಅವಕಾಶಗಳ ಕೊರತೆ, ಬಂಡವಾಳದ ಕೊರತೆ ಹಾಗೂ ರಾಜಕೀಯ ಅಧಿಕಾರದ ಕೊರತೆ ಆಗಿದೆ. ಕೇವಲ ಆರು ಕುಟುಂಬದ ಜನರು ಕೆಲವು ಇತರ ಸಮಸ್ಯೆಗಳ ಕುರಿತು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಇಲ್ಲಿ ಪ್ರಮುಖ ಸಮಸ್ಯೆ ಎಂದರೆ ಶೈಕ್ಷಣಿಕ ಅವಕಾಶಗಳ ಕೊರತೆಯೇ ಆಗಿದೆ ಎನ್ನಬಹುದು. ಏಕೆಂದರೆ ಶಿಕ್ಷಣವಿಲ್ಲದ ಇವರಿಗೆ ಕೃಷಿ, ಕೂಲಿಯ ಹೊರತು ಹೆಚ್ಚಿನ ಆದಾಯ ನೀಡುವಂತಹ ಉದ್ಯೋಗ ದೊರಕುವುದು ಅಸಾಧ್ಯ. ಹೆಚ್ಚಿನ ಆದಾಯವಿಲ್ಲದೇ ಬಂಡವಾಳಕ್ಕೆ ಹಣ ಕೂಡಿಸುವದಕ್ಕಾಗಲೀ ಅಥವಾ ಹಣ ಹೂಡುವುದಾಗಲೀ ಅಸಾಧ್ಯವಾದಂತಹ ಸಂಗತಿಯಾಗಿದೆ. ಇನ್ನು ರಾಜಕೀಯ ಅಧಿಕಾರವಾದರೂ ಇದ್ದರೆ ಆ ಮೂಲಕ ಈ ಸೌಲಭ್ಯಗಳನ್ನು ಪಡೆಯಬಹುದಾಗಿತ್ತು. ಆದರೆ ಒಂದೆರಡು ಚಿಕ್ಕಪುಟ್ಟ ಪಂಚಾಯಿತಿ ಮಟ್ಟದ ರಾಜಕೀಯ ಸ್ಥಾನಗಳನ್ನು ಬಿಟ್ಟರೆ ಇವರಲ್ಲಿ ರಾಜಕೀಯ ಅಧಿಕಾರ ಎಂಬುದು ಇಲ್ಲವೇ ಇಲ್ಲ. ಇದು ಕೂಡ ಅವರ ಇಂದಿನ ಸಮಸ್ಯೆಗಳಿಗೆ ಪರೋಕ್ಷವಾಗಿ ಕಾರಣವಾಗಿದೆ ಎಂದು ಹೇಳಬಹುದು.

ಒಟ್ಟಿನಲ್ಲಿ ಹೇಳಬೇಕೆಂದರೆ ಸಾಮಾಜಿಕ ಸಮಸ್ಯೆಗಳು, ಆರ್ಥಿಕ ಸಮಸ್ಯೆಗಳು, ಶೈಕ್ಷಣಿಕ ಸಮಸ್ಯೆಗಳು ಮತ್ತು ರಾಜಕೀಯ ಸಮಸ್ಯೆಗಳು ಪ್ರಮುಖವಾದವುಗಳು. ಇತರ ಸಮಸ್ಯೆಗಳೆಂದರೆ ಭೂಮಿ ಸಮಸ್ಯೆ, ವಸತಿ ಸಮಸ್ಯೆ, ಆರೋಗ್ಯ – ನೈರ್ಮಲ್ಯದ ಸಮಸ್ಯೆ, ನೈಸರ್ಗಿಕ ಸಮಸ್ಯೆ, ಅಮಾನವೀಯ ಮೂಢನಂಬಿಕೆ/ಪದ್ಧತಿಗಳ ಸಮಸ್ಯೆ, ಬಡತನ ಸಮಸ್ಯೆ, ಶೋಷಣೆ ಸಮಸ್ಯೆ, ಪ್ರತ್ಯೇಕತೆಯ ಸಮಸ್ಯೆ, ಬುಡಕಟ್ಟೆಂದು ಪರಿಗಣಿಸದ ಸಮಸ್ಯೆ ಮತ್ತು ಸರಕಾರಿ ಸೌಲಭ್ಯಗಳಿಂದ ವಂಚಿತರಾಗಿರುವುದು. ಪ್ರಸ್ತುತ ಅಧ್ಯಯನದಲ್ಲಿ ಈ ಸಮಸ್ಯೆಗಳ ಕುರಿತು ವಿವರಗಳನ್ನು ಒದಗಿಸಲು ಒಂದು ಪ್ರಾಮಾಣಿಕ ಪ್ರಯತ್ನ ಮಾಡಲಾಗಿದೆ.

**೪.೪. ಸಾಮಾಜಿಕ ಸಮಸ್ಯೆಗಳು**

ಇತರ ಬುಡಕಟ್ಟುಗಳಂತೆ ಗೌಳಿಗರೂ ಕೂಡ ತಮ್ಮ ಜೈವಿಕ ಪ್ರತ್ಯೇಕತೆಯನ್ನು ಕಾಯ್ದುಕೊಂಡು ಬದುಕುತ್ತಿರುವ ಒಂದು ಬುಡಕಟ್ಟು ಸಮುದಾಯವಾಗಿದ್ದಾರೆ. ಇವರು ನಗರಜೀವನ ಹಾಗೂ ನಾಗರಿಕ ಸಮಾಜದಿಂದ ದೂರವಿರುವಂಥ ಅಡವಿಗಳಲ್ಲಿ ವಸತಿಗಳನ್ನು ನಿರ್ಮಿಸಿಕೊಂಡು ಪ್ರತ್ಯೇಕವಾಗಿ ಜೀವಿಸುತ್ತಾರೆ. ಬಾಹ್ಯ ಪ್ರಪಂಚದ ಬಗ್ಗೆ ಅಥವಾ ಅದರೊಂದಿಗೆ ಸಂಪರ್ಕವಿಟ್ಟುಕೊಳ್ಳುವ ಬಗ್ಗೆ ಇವರಲ್ಲಿ ಅವಶ್ಯಕತೆಯ ಭಾವನೆಯೇ ಇಲ್ಲ. ಅವರ ಬಗ್ಗೆ ಚಿಂತಿಸುವವರಿಗೆ ಇದು ಗಂಭೀರ ಸಮಸ್ಯೆಯೆನಿಸಿದರೂ ಕೂಡ, ಸ್ವತಃ ಅವರಿಗೇನೆ ಅದರ ಬಗ್ಗೆ ಅಷ್ಟೊಂದು ಚಿಂತೆ ಇಲ್ಲದಿರುವುದು ಒಂದು ವೈಚಿತ್ರ್ಯಮಯ ಸ್ಥಿತಿಯಾಗಿದೆ.

ಇವರ ಸಾಮಾಜಿಕ ಪ್ರತ್ಯೇಕತೆಯಿಂದಾಗಿ ಇವರು ಇತರ ಬುಡಕಟ್ಟು ಸಮೂಹಗಳೊಂದಿಗೆ ಬೆರೆಯಲು ಅವಕಾಶವಿಲ್ಲವಾಗಿದೆ. ಇವರಲ್ಲಿ ರೂಢಿಯಲ್ಲಿರುವ ಒಳಬಾಂಧವ್ಯ ಹಾಗೂ ಬಾಲ್ಯವಿವಾಹ, ವಿಧವಾವಿವಾಹ ಪದ್ಧತಿಗಳಿಂದಾಗಿ ಬಾಹ್ಯ ಸಂಪರ್ಕಕ್ಕೆ ಅವಕಾಶ ಇನ್ನೂ ಕಡಿಮೆ ಆಗುತ್ತದೆ. ಇದರಿಂದ ಉಂಟಾಗುವ ವಿವಿಧ ಸಮಸ್ಯೆಗಳ ಕುರಿತು ಕೂಡ ಅವರು ಚಿಂತಿಸುವುದಿಲ್ಲ. ಬಹುಪತ್ನಿತ್ವ ಪದ್ಧತಿ ಇವರಲ್ಲಿ ಇಂದಿಗೂ ರೂಢಿಯಲ್ಲಿದೆ. ಒಬ್ಬ ಪತ್ನಿ ಜೀವಿಸಿರುವಾಗಲೇ ಇನ್ನೂ ಒಬ್ಬ ಅಥವಾ ಇಬ್ಬರು ಸ್ತ್ರೀಯರನ್ನು ವಿವಾಹವಾಗಲು ಕೆಲವೇ ಶಿಥಿಲವಾದ ನಿರ್ಬಂಧಗಳಿವೆ. ಇವರು ಮುಗ್ಧರು, ಅನಕ್ಷರಸ್ಥರೂ ಆಗಿರುವುದರಿಂದ ಕೆಲವೊಂದು ಮೂಢನಂಬಿಕೆಗಳನ್ನು ಉಳಿಸಿಕೊಂಡು, ಬೆಳೆಸಿಕೊಂಡುಬರುತ್ತಾ ಅಮಾನುಷ ಸಂಪ್ರದಾಯಗಳಿಗೆ ಬಲಿಯಾಗುತ್ತಿದ್ದಾರೆ. ಉದಾ: ಋತುಮತಿ ವೇಳೆ ಬೇರೆ ಗುಡಿಸಲಿನಲ್ಲಿ ವಾಸ, ಗರ್ಭಿಣಿ ಸ್ತ್ರೀ ಹಾಗೂ ಮಗುವನ್ನು ಹೆತ್ತ ಸ್ತ್ರೀಯನ್ನು ಗುಡಿಸಲಿನಿಂದ ಬಹುದೂರ ಇನ್ನೊಂದು

ಗುಡಿಸಲಿನಲ್ಲಿ ಒಂಟಿಯಾಗಿ ಬಿಡುವುದು, ಮೈಲಿಗೆ, ಸೂತಕ ಆಚರಿಸುವುದು, ರೋಗ ರುಜಿನಗಳಿಗೆ ಮಾಟ-ಮದ್ದುಗಳಿಂದ ಪರಿಹಾರ ಹುಡುಕುವುದು ಇತ್ಯಾದಿ. ಇದಲ್ಲದೆ ವಧುದಕ್ಷಿಣೆ, ಮಾಟಮಂತ್ರಗಳಲ್ಲಿ ನಂಬಿಕೆ, ಮಹಿಳೆಯರ ಮೇಲೆ ದೌರ್ಜನ್ಯ, ಕೌಟುಂಬಿಕ ವಿಷಯಗಳಲ್ಲಿ ಮಹಿಳೆಯರಿಗೆ ನಿರ್ಧಾರಕ ಪಾತ್ರವಿಲ್ಲದೇ ಇರುವುದು ಇತ್ಯಾದಿ ಗಂಭೀರವಾದ ಸಮಸ್ಯೆಗಳೇ ಆಗಿವೆ. ಇವುಗಳನ್ನು ಮೀರಿದ ಇನ್ನೊಂದು ಸಮಸ್ಯೆಯೆಂದರೆ ಸ್ತ್ರೀ-ಪುರುಷರು ಮದ್ಯಪಾನ ಹಾಗೂ ಧೂಮಪಾನ ಮಾಡುವುದು ಆಗಿದೆ.

**ಕೋಷ್ಟಕ ೪.೨**

**ಗೌಳಿಗರ ವೈವಾಹಿಕ ಸ್ಥಾನಮಾನ**[೮]

| ವೈವಾಹಿಕ ಸ್ಥಾನಮಾನ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|
| ಅವಿವಾಹಿತರು | ೭೫೭ | ೫೨.೧% |
| ವಿವಾಹಿತರು | ೬೮೧ | ೪೬.೮% |
| ವಿಧುರ-ವಿಧವೆಯರು | ೧೬ | ೧.೧% |
| **ಒಟ್ಟು** | **೧೪೫೪** | **೧೦೦%** |




ಸಂದರ್ಶಿಸಿದ ಒಟ್ಟು ಕುಟುಂಬಗಳಲ್ಲಿ ಅವಿವಾಹಿತರ ಸಂಖ್ಯೆ ೭೫೭ ರಷ್ಟಿದ್ದು, ವಿವಾಹಿತ ಸಂಖ್ಯೆ ೬೮೭ ರಷ್ಟಿದೆ. ವಿಧುರ-ವಿಧವೆಯರ ಸಂಖ್ಯೆ ಕೇವಲ ೧೬ರಷ್ಟಿದೆ. ಸಾಮಾನ್ಯವಾಗಿ ಗೌಳಿ ಸಮುದಾಯದಲ್ಲಿ ಸ್ತ್ರೀ-ಪುರುಷರ ವಿವಾಹದ ವಯಸ್ಸು ಅತಿ ಕಡಿಮೆ ಇರುತ್ತದೆ. ಕಾನೂನಿನ ಮಿತಿಗಿಂತ ಕಡಿಮೆ ವಯಸ್ಸಿನಲ್ಲಿಯೇ ಇವರಲ್ಲಿ ವಿವಾಹ ಆಗುವುದು ಸಾಮಾನ್ಯವಾಗಿದೆ. ಚಿಕ್ಕ ವಯಸ್ಸಿನಲ್ಲಿಯೇ ಮರಣ ಹೊಂದುವವರ ಸಂಖ್ಯೆ ಹೆಚ್ಚಿಗಿದ್ದು, ವಿಧುರ-ವಿಧವೆಯರ ಸಂಖ್ಯೆ ಕಡಿಮೆ ಇರಲು ಇದೂ ಕೂಡ ಒಂದು ಕಾರಣವಾಗಿದೆ ಎಂದು ಹೇಳಬಹುದು.

ನಿಮ್ಮ ಸಮುದಾಯದಲ್ಲಿ ಪುರುಷರಿಗೆ ಹೋಲಿಸಿ ಸ್ತ್ರೀಯರ ಸ್ಥಾನಮಾನವೇನು ಎಂಬ ಪ್ರಶ್ನೆಗೆ ಅವರ ಪ್ರತಿಕ್ರಿಯೆ ಈ ಕೆಳಗಿನಂತಿತ್ತು.

**ಕೋಷ್ಟಕ ೪.೩**

**ಗೌಳಿ ಸ್ತ್ರೀಯರ ಸ್ಥಾನಮಾನ[೧೯]**

| ಸ್ತ್ರೀಯರ ಸ್ಥಾನಮಾನ | ಪ್ರತಿಕ್ರಿಯಿಸಿದವರ ಸಂಖ್ಯೆ | ಶೇಕಡಾವಾರು |
|---|---|---|
| ಸ್ತ್ರೀ ಸ್ಥಾನಮಾನ ಹೆಚ್ಚೆಂದವರು | ೩೫ | ೧೫.೫೫% |
| ಸ್ತ್ರೀ ಸ್ಥಾನಮಾನ ಕಡಿಮೆಯೆಂದವರು | ೧೮೬ | ೮೨.೬೭% |
| ಸ್ತ್ರೀ–ಪುರುಷ ಸಮಾನವೆಂದವರು | ೪ | ೧.೭೮ |
| **ಒಟ್ಟು** | **೨೨೫** | **೧೦೦%** |




೩೫ ಕುಟುಂಬದವರು ಸ್ತ್ರೀಯರ ಸ್ಥಾನಮಾನ ಪುರುಷರಿಗಿಂತ ಮೇಲು ಎಂದು ಹೇಳಿದರೆ, ೧೮೬ ಕುಟುಂಬದವರು ಪುರುಷರಿಗಿಂತ ಕೀಳು ಎಂದು ಹೇಳಿದ್ದಾರೆ. ಕೇವಲ ೪ ಕುಟುಂಬದವರು ಸ್ತ್ರೀ ಪುರುಷರ ಸ್ಥಾನಮಾನ ಸಮಾನ ಎಂದು ಹೇಳಿದ್ದಾರೆ. ಸಾಮಾನ್ಯ ದೃಷ್ಟಿಯಿಂದ ನೋಡುವುದಾದರೆ ಇಲ್ಲಿ ಸ್ತ್ರೀಯರನ್ನು ಪುರುಷರಿಗಿಂತ ಕೀಳು ಎಂದು ಪರಿಗಣಿಸಲಾಗುತ್ತದೆ.

**ಕೋಷ್ಟಕ ೪.೪**

**ಮಹಿಳೆಯರಿಗೆ ಶಿಕ್ಷಣದ ಅವಕಾಶಗಳು[೨೦]**

| | | |
|---|---|---|
| ಸ್ತ್ರೀ ಶಿಕ್ಷಣಕ್ಕೆ ಮುಕ್ತ ಅವಕಾಶ ಇದೆ | ೨೦೨ | ೮೯.೭೮% |
| ಸ್ತ್ರೀ ಶಿಕ್ಷಣಕ್ಕೆ ಮುಕ್ತ ಅವಕಾಶ ಇಲ್ಲ | ೨೩ | ೧೦.೨೨% |
| **ಒಟ್ಟು** | **೨೨೫** | **೧೦೦%** |

ಸ್ತ್ರೀಯರ ಶಿಕ್ಷಣಕ್ಕೆ ತಮ್ಮ ಸಮುದಾಯದಲ್ಲಿ ಮುಕ್ತ ಅವಕಾಶವಿದೆಯೆಂದು ೨೦೨ ಕುಟುಂಬದವರು ಹೇಳಿದರೆ, ೨೩ ಕುಟುಂಬದವರು ಅವಕಾಶವಿಲ್ಲವೆಂದು ಹೇಳಿದ್ದಾರೆ. ಸಮಾನ ದೃಷ್ಟಿಯಿಂದ ನೋಡಲಾಗಿ ಇಲ್ಲಿ ಮಹಿಳೆಯರಿಗೆ ಶೈಕ್ಷಣಿಕ ಅವಕಾಶ ವಿಸ್ತೃತವಾಗಿದೆ ಎಂದು ಹೇಳಬಹುದು. ಪ್ರತಿಯೊಂದು

ಗೌಳಿವಾಡಾ ಅಥವಾ ಸಮೀಪದ ವಾಡಾದಲ್ಲಿ ೫ ರಿಂದ ೮ನೇ ವರ್ಗದವರೆಗೆ ಕಲಿಯುವ ಅವಕಾಶವಿರುವ ಶಾಲೆಗಳನ್ನು ಒದಗಿಸಲಾಗಿದ್ದು, ಬಾಲಕಿಯರು ಆ ಶಾಲೆಗೆ ಹೋಗುವದು ಕ್ಷೇತ್ರ ಅಧ್ಯಯನದಲ್ಲಿ ಕಂಡು ಬಂದಿತು. ಇತ್ತೀಚಿಗೆ ಬಾಲಕಿಯರಿಗೆ ಶೈಕ್ಷಣಿಕ ಅವಕಾಶ ಹಾಗೂ ನೌಕರಿಗಳಿಗೆ ಹೋಗಲು ಅವಕಾಶ ಉಂಟಾಗಿದೆ.

**ಕೋಷ್ಟಕ ೪.೫**

**ಮಹಿಳೆಯರಿಗೆ ಉದ್ಯೋಗ ಅವಕಾಶಗಳು**

| | | |
|---|---|---|
| ಸ್ತ್ರೀ ಉದ್ಯೋಗ ಮಾಡಲು ಮುಕ್ತ ಅವಕಾಶ ಇದೆ | ೨೧೭ | ೯೬.೪೪% |
| ಸ್ತ್ರೀ ಉದ್ಯೋಗ ಮಾಡಲು ಮುಕ್ತ ಅವಕಾಶ ಇಲ್ಲ | ೮ | ೩.೫೬ |
| **ಒಟ್ಟು** | **೨೨೫** | **೧೦೦%** |

ಮಹಿಳೆಯರು ಸರಕಾರಿ ಉದ್ಯೋಗ ಮಾಡಲು ಮುಕ್ತ ಅವಕಾಶವಿದೆ ಎಂದು ೨೧೭ ಕುಟುಂಬದವರು ಅಭಿಪ್ರಾಯ ಪಟ್ಟಿದ್ದಾರೆ. ಕೇವಲ ೮ ಕುಟುಂಬದವರು ಇಂತಹ ಅವಕಾಶವಿಲ್ಲವೆಂದು ಹೇಳಿದ್ದಾರೆ. ಅಂದರೆ ಸಾಂಪ್ರದಾಯಿಕ ಉದ್ಯೋಗವನ್ನು ಹೊರತು ಪಡಿಸಿ ಬೇರೆ ಉದ್ಯೋಗವನ್ನು ಮಾಡಲು ಕೂಡ ಈ ಸಮುದಾಯದಲ್ಲಿ ಅವಕಾಶವಿದೆ ಎಂದು ಕಂಡುಬರುತ್ತದೆ.

ಸಂದರ್ಶಿಸಿದ ೨೨೫ ಕುಟುಂಬಗಳಲ್ಲಿ ದೌರ್ಜನ್ಯ ಪ್ರಕರಣಗಳ ಕುರಿತ ಪ್ರತಿಕ್ರಿಯೆ ಈ ಕೆಳಗಿನಂತಿದೆ.

**ಕೋಷ್ಟಕ ೪.೬**

**ದೌರ್ಜನ್ಯ ಪ್ರಕರಣಗಳು**

| | | |
|---|---|---|
| ಸಾಮಾಜಿಕ ದೌರ್ಜನ್ಯಕ್ಕೊಳಗಾದ ಕುಟುಂಬಗಳ ಸಂಖ್ಯೆ | ೧೧ | ೪.೮೮% |
| ತಮ್ಮದೆ ಸಮಾಜದಿಂದ ದೌರ್ಜನ್ಯಕ್ಕೊಳಗಾದ ಕುಟುಂಬಗಳ ಸಂಖ್ಯೆ | ೧೦ | ೪.೪೪% |
| ಬೇರೆ ಜಾತಿಗಳಿಂದ ದೌರ್ಜನ್ಯಕ್ಕೊಳಗಾದ ಕುಟುಂಬಗಳ ಸಂಖ್ಯೆ | ೦೧ | ೦.೪೪% |
| ಬೇರೆ ಧರ್ಮದವರಿಂದ ದೌರ್ಜನ್ಯಕ್ಕೊಳಗಾದ ಕುಟುಂಬಗಳ ಸಂಖ್ಯೆ | – | – |
| ಮೇಲ್ವರ್ಗದವರಿಂದ ಶೋಷಣೆಗೊಳಗಾದ ಕುಟುಂಬಗಳ ಸಂಖ್ಯೆ | ೩೪ | ೧೫.೧೧% |

೩೦ ಕುಟುಂಬದವರು ತಾವು ಸಾಮಾಜಿಕ ದೌರ್ಜನ್ಯಕ್ಕೆ ಒಳಗಾಗಿದ್ದಾರೆಂದರೆ, ೨೧೪ ಕುಟುಂಬದವರು ಇಂತಹ ದೌರ್ಜನ್ಯಕ್ಕೆ ಒಳಗಾಗಿಲ್ಲವೆಂದು ಪ್ರತಿಕ್ರಿಯೆ ನೀಡಿದ್ದಾರೆ. ೧೦ ಕುಟುಂಬದವರು ತಮ್ಮದೇ ಸಮಾಜದಿಂದ ದೌರ್ಜನ್ಯಕ್ಕೆ ಒಳಗಾಗಿದ್ದಾರೆ. ೧ ಕುಟುಂಬದವರು ಬೇರೆ ಜಾತಿಗಳಿಂದ ದೌರ್ಜನ್ಯಕ್ಕೆ ಒಳಗಾಗಿದ್ದೇವೆಂದು ಹೇಳಿದ್ದಾರೆ. ಬೇರೆ ಧರ್ಮ ಕೋಮುಗಳಿಂದ ಯಾರೂ ದೌರ್ಜನ್ಯಕ್ಕೆ ಒಳಗಾದ ಬಗ್ಗೆ ಹೇಳಿಕೆಗಳಿಲ್ಲ. ಮೇಲ್ವರ್ಗದವರಿಂದ ಶೋಷಣೆಗೆ ಒಳಗಾಗಿದ್ದೇವೆಂದು ೩೪ ಕುಟುಂಬದವರು ಹೇಳಿದರೆ, ೧೯೧ ಕುಟುಂಬದವರು ಇಲ್ಲವೆಂದು ಹೇಳಿದ್ದಾರೆ.

ಇಲ್ಲಿ ಒಂದೇ ಕುಟುಂಬ ಮಾತ್ರ ಬೇರೆ ಜಾತಿಯವರಿಂದ ಸಮಾಜಿಕ ದೌರ್ಜನ್ಯಕ್ಕೆ ಒಳಗಾದ ಉದಾಹರಣೆಯುಂಟು ಎಂದು ಹೇಳಿದ್ದಾರೆ. ಇದು ನಿರ್ಲಕ್ಷಿಸಬಹುದಾದ ಅಥವಾ ಗಣನೀಯವಲ್ಲದ

ಅಂಶವಾಗಿದೆ. ೧೦ ಕುಟುಂಬದವರು ತಮ್ಮದೇ ಸಮಾಜದಿಂದ ದೌರ್ಜನ್ಯಕ್ಕೊಳಗಾದ ಉದಾಹರಣೆ ಹೇಳಿದರು. ಆದರೆ ಸಾಮಾನ್ಯವಾಗಿ ಗೌಳಿ ಸಮುದಾಯದಲ್ಲಿ ತಮ್ಮ ಸಮಾಜದವರಿಂದಲೇ ಆದ ಇಂತಹ ಪ್ರಕರಣಗಳಾದಾಗ ಪೊಲೀಸರಿಗೆ ಅದನ್ನು ತಿಳಿಸುವ ರೂಢಿ ಇಲ್ಲ. ಸಮುದಾಯದ ಹಿರಿಯರೇ ತಮ್ಮದೆ ನ್ಯಾಯ ಪಂಚಾಯತಿಯ ನಿಯಮಾವಳಿಗಳ ಪ್ರಕಾರ ಸಮಸ್ಯೆಯನ್ನು ಬಗೆಹರಿಸಿಕೊಳ್ಳುತ್ತಾರೆ. ಇತರರಿಗೆ ತಿಳಿಯದಂತೆ ನೋಡಿಕೊಳ್ಳುತ್ತಾರೆ. ಹೀಗಾಗಿ ಪ್ರಸ್ತುತ ಅಧ್ಯಯನದಲ್ಲಿ ಇಂತಹ ಪ್ರಕರಣಗಳ ವಿವರಗಳನ್ನು ಪಡೆಯಲು ಆಗಿಲ್ಲ. ಬೇರೆ ಧರ್ಮ (ಕ್ರಿಶ್ಚಿಯನ್, ಮುಸ್ಲಿಮ)ದವರಿಂದ ಯಾರೂ ದೌರ್ಜನ್ಯಕ್ಕೊಳಗಾದ ಉದಾಹರಣೆಗಳಿಲ್ಲ. ಇನ್ನು ಮೇಲ್ವರ್ಗದವರಿಂದ ಶೋಷಣೆಗೊಳಗಾದ ಕುಟುಂಬಗಳ ಸಂಖ್ಯೆ ೩೪ (೧೫.೧೧%). ಶೋಷಣೆಯ ಸ್ವರೂಪ ಹೀಗಿದೆ. ಬಡ ಗೌಳಿಗರು ಕಷ್ಟಕಾಲದಲ್ಲಿ ತಮ್ಮ ಮಕ್ಕಳ ಮದುವೆಗೆ ಅಥವಾ ಮನೆ ಕಟ್ಟುವ ಸಲುವಾಗಿ ತಾವು ದುಡಿಯುತ್ತಿರುವ ಮೇಲ್ಜಾತಿಯ ಭೂಮಾಲಿಕರ ಬಳಿ ವಿಧಿಯಿಲ್ಲದೇ ಸಾಲ ಮಾಡಿ, ಭೂಮಾಲಿಕರು ವಿಧಿಸುವ ಹೆಚ್ಚಿನ ಬಡ್ಡಿದರದಿಂದ ಸಾಲ ತೀರಿಸಲಾಗದೇ ಗೋಳಾಡುವ ಬಡ ಗೌಳಿಗರ ಅಸಹಾಯಕತೆಯನ್ನು ದುರುಪಯೋಗಿಸಿಕೊಂಡು ಭೂಮಾಲಿಕರು ತಮ್ಮ ಜಮೀನಿನಲ್ಲಿ ಸಾಲ ಮಾಡಿದ ಗೌಳಿಗರನ್ನು ವರ್ಷಗಟ್ಟಲೆ ಕಡಿಮೆ ಕೂಲಿಗೆ ದುಡಿಸಿಕೊಳ್ಳುವ ಮೂಲಕ ಶೋಷಿಸುತ್ತಿದ್ದರು. ಅದರಂತೆ ಅತೀ ಕಡಿಮೆ ಭೂಮಿಯನ್ನು ಹೊಂದಿದ ಗೌಳಿಗರು ಬೀಜ, ಗೊಬ್ಬರ ಕೊಳ್ಳುವ ಸಲುವಾಗಿ ಜಮಿನ್ದಾರರ ಬಳಿ ಸಾಲ ಮಾಡಿ, ಬೆಳೆ ವಿಫಲವಾದರೆ ಸಾಲ ತೀರಿಸಲಾಗದ ಅವರ ಪರಿಸ್ಥಿತಿಯಲ್ಲಿ ಕೆಲವು ವರ್ಷಗಳವರೆಗೆ ಸಾಲ ತೀರಿಸದೇ ಹೋದರೆ ಅದೇ ನೆಪವನ್ನು ಮುಂದಿಟ್ಟು ದುರುಪಯೋಗಿಸಿಕೊಂಡು ಸಾಲ ಮಾಡಿದ ಗೌಳಿಗರ ಭೂಮಿಯನ್ನು ಜಮಿನ್ದಾರರು ಕಬಳಿಸುತ್ತಿದ್ದರು.

ಉತ್ತರ ಕನ್ನಡ ಜಿಲ್ಲೆಯ ಒಟ್ಟು ೨೨೫ ಗೌಳಿ ಕುಟುಂಬಗಳನ್ನು ಸಂದರ್ಶಿಸಲಾಗಿ, ಅವರ ಸಮಾಜದಲ್ಲಿ ಕಂಡುಬಂದ ಸಾಮಾಜಿಕ ವಿಸಂಗತಿಗಳ ವಿವರ ಈ ಕೆಳಗಿನಂತಿದೆ.

**ಕೋಷ್ಟಕ ೪.೭**

**ಸಾಮಾಜಿಕ ವಿಸಂಗತಿಗಳು**[೨೧]

| ವಿಸಂಗತಿಗಳು | ಪ್ರತಿಕ್ರಿಯಿಸಿದವರ ಸಂಖ್ಯೆ | ಶೇಕಡಾವಾರು |
|---|---|---|
| ಜಾತಿ ಪದ್ಧತಿ ರೂಢಿಯಲ್ಲಿದೆ | ೧೯೦ | ೮೪.೪೪% |
| ಜಾತಿ ಆಧಾರಿತ ಮೇಲು-ಕೀಳು ಅಂತಸ್ತಿನ ಭಾವನೆಗಳಿವೆ | ೧೬೯ | ೭೫.೧೧% |
| ಇತರ ಕೋಮು ಜಾತಿಗಳೊಂದಿಗೆ ಘರ್ಷಣೆಯಾಗಿದೆ | ೦೧ | ೦.೪% |
| ಮಹಿಳೆಯರ ಮೇಲೆ ದೌರ್ಜನ್ಯವಾಗಿದೆ | ೧೨ | ೫.೩೩% |
| ಸಮುದಾಯದಲ್ಲಿ (ಸ್ತ್ರೀ-ಪುರುಷರು) ಮದ್ಯಪಾನ ಮಾಡುವರು | ೧೬೮ | ೭೪.೬೬% |
| ಧೂಮಪಾನ ಮಾಡುವರು | ೫೦ | ೨೨.೨೨ |
| ವೈಶ್ಯಾವಾಟಿಕೆ ಇದೆ | ೦೧ | ೦.೪೪% |
| ಚಿಕ್ಕಮಕ್ಕಳ ಲೈಂಗಿಕ ಶೋಷಣೆ | - | - |
| ಮಹಿಳೆಯರನ್ನು ಒತ್ತಾಯಪೂರ್ವಕವಾಗಿ ಮೋಸದಿಂದ ವೈಶ್ಯಾವಾಟಿಕೆಗೆ ತಳ್ಳಿದ ಪ್ರಕರಣ | - | - |




೧೯೦ ಕುಟುಂಬಗಳು ತಮ್ಮಲ್ಲಿ ಜಾತಿ ಪದ್ದತಿ ರೂಢಿಯಲ್ಲಿ ಇದೆ ಎಂದು ಒಪ್ಪಿದರೆ, ೩೫ ಕುಟುಂಬಗಳು ಇಲ್ಲವೆಂದು ಉತ್ತರಿಸಿದ್ದಾರೆ.

ಜಾತಿ ಆಧಾರಿತ ಮೇಲು-ಕೀಳು ಅಂತಸ್ತಿನ ಭಾವನೆಗಳಿವೆ ಎಂದು ೧೬೯ ಕುಟುಂಬಗಳು ಉತ್ತರಿಸಿದರೆ, ಇಂತಹ ಭಾವನೆಗಳು ಇಲ್ಲವೆಂದು ೫೬ ಕುಟುಂಬಗಳು ಉತ್ತರಿಸಿದ್ದಾರೆ.

೧ ಕುಟುಂಬ ಮಾತ್ರ ಇತರ ಕೋಮುಜಾತಿಗಳೊಂದಿಗೆ ಘರ್ಷಣೆಗಳಿಗೆ ಇಳಿದದ್ದುಂಟು ಎಂದು ಹೇಳಿದರೆ, ೨೨೪ ಕುಟುಂಬಗಳು ಇಂತಹ ಯಾವುದೇ ಘರ್ಷಣೆಗೆ ಇಳಿದ ಉದಾಹರಣೆ ಇಲ್ಲವೆಂದು ಹೇಳಿದ್ದಾರೆ.

೧೨ ಕುಟುಂಬಗಳು ತಮ್ಮ ಸಮಾಜದಲ್ಲಿ ಮಹಿಳೆಯರ ಮೇಲೆ ತಮ್ಮವರಿಂದಲೇ ದೌರ್ಜನ್ಯದ ಪ್ರಕರಣಗಳಾಗಿವೆಯೆಂದು ಹೇಳಿದರೆ, ೨೧೩ ಕುಟುಂಬಗಳು ಇಂತಹ ಯಾವುದೇ ಪ್ರಕರಣಗಳಾಗಿಲ್ಲವೆಂದು ಪ್ರತಿಕ್ರಿಯಿಸಿದ್ದಾರೆ. ಸಾಮಾನ್ಯವಾಗಿ ಗೌಳಿ ಸಮುದಾಯದಲ್ಲಿ ಇಂತಹ ಪ್ರಕರಣಗಳಾದಾಗ ಪೋಲಿಸರಿಗೆ ಅದನ್ನು ತಿಳಿಸುವ ರೂಢಿ ಇಲ್ಲ. ಸಮುದಾಯದ ಹಿರಿಯರೇ ತಮ್ಮದೇ ನಿಯಮಾವಳಿಗಳ ಪ್ರಕಾರ ಸಮಸ್ಯೆಯನ್ನು ಬಗೆಹರಿಸಿಕೊಳ್ಳುತ್ತಾರೆ. ಹೀಗಾಗಿ ಪ್ರಸ್ತುತ ಅಧ್ಯಯನದಲ್ಲಿ ಇಂತಹ ಪ್ರಕರಣಗಳ ವಿವರವನ್ನು ಪಡೆಯಲು ಆಗಿಲ್ಲ.

೧೬೮ ಕುಟುಂಬಗಳು ತಮ್ಮ ಸಮುದಾಯದಲ್ಲಿ ಸ್ತ್ರೀ-ಪುರುಷರು ಮದ್ಯಪಾನ ಮಾಡುವರು ಎಂದು ಹೇಳಿದರೆ, ೫೭ ಕುಟುಂಬಗಳವರು ಇಂತಹ ರೂಢಿ ಇಲ್ಲವೆಂದು ಹೇಳಿದ್ದಾರೆ.

೫೦ ಕುಟುಂಬಗಳವರು ಗೌಳಿಸಮುದಾಯದ ಸ್ತ್ರೀ-ಪುರುಷರು ಧೂಮಪಾನ ಮಾಡುವರೆಂದು ಹೇಳಿದರೆ, ೧೭೫ ಕುಟುಂಬಗಳವರು ಇಲ್ಲವೆಂದು ಉತ್ತರಿಸಿದರು.

ಚಿಕ್ಕ ಮಕ್ಕಳ ಮೇಲೆ ಲೈಂಗಿಕ ಶೋಷಣೆ ಮಾಡಿದ ಒಂದೂ ಪ್ರಕರಣವಿಲ್ಲವೆಂದು ಎಲ್ಲರೂ ಪ್ರತಿಕ್ರಿಯೆ ನೀಡಿದ್ದಾರೆ.

ನಿಮ್ಮ ಸಮುದಾಯದಲ್ಲಿ ವೇಶ್ಯಾವಾಟಿಕೆ ರೂಢಿಯಲ್ಲಿದೆಯೇ ಎಂಬ ಪ್ರಶ್ನೆಗೆ ಕೇವಲ ಒಂದು ಕುಟುಂಬ ಇದೆ ಎಂದು ಹೇಳಿದರೆ, ೨೨೪ ಕುಟುಂಬಗಳು ಇಲ್ಲವೆಂದು ಹೇಳಿದ್ದಾರೆ. ಒತ್ತಾಯ ಪೂರ್ವಕವಾಗಿ ಮೋಸದಿಂದ ಮಹಿಳೆಯರನ್ನು ವೇಶ್ಯಾವಾಟಿಕೆಗೆ ತಳ್ಳಿದ ಒಂದೂ ಪ್ರಕರಣವಿಲ್ಲವೆಂದು ಎಲ್ಲ ೨೨೫ ಕುಟುಂಬಗಳು ಪ್ರತಿಕ್ರಿಯಿಸಿದ್ದಾರೆ.

**೪.೪.೧ ಶೋಷಣೆ**

ಬಡತನದಲ್ಲಿಯೇ ಜನಿಸಿ, ಬಡತನದಲ್ಲಿಯೇ ಬದುಕಿ ಬಡತನದಲ್ಲಿಯೇ ಸತ್ತು ಮುಂದಿನ ಪೀಳಿಗೆಗೆ ಬಡತನ ಹಾಗೂ ಸಾಲಗಳನ್ನೇ ಬಳುವಳಿಯಾಗಿ ಬಿಟ್ಟು ಹೋಗುವುದು ನಮ್ಮ ದೇಶದ ಅನೇಕ ಬುಡಕಟ್ಟುಗಳ ಕತೆ ಆಗಿದೆ. ಕೆಲವು ಬುಡಕಟ್ಟುಗಳ ಜನರನ್ನು ಮೇಲ್ಜಾತಿಯವರು ಯಾವ ಪರಿಯಲ್ಲಿ ಶೋಷಣೆ ಮಾಡುತ್ತಿದ್ದಾರೆ ಎಂದರೆ ಅವರ ಮಕ್ಕಳನ್ನು ಶಾಲೆಗೆ ಕಳಿಸದಂತೆ ಅಡೆತಡೆ ಮಾಡುತ್ತಿದ್ದಾರೆ. ೨೧ನೆಯ ಶತಮಾನದಲ್ಲಿಯೂ ನಮ್ಮ ದೇಶದಲ್ಲಿ ಹಾಡುಹಗಲೇ ಈ ಪ್ರಕಾರ ಮಾನವ ಹಕ್ಕುಗಳ ಉಲ್ಲಂಘನೆ ಆಗುತ್ತಿರುವುದು ವಿಷಾದನೀಯವಾಗಿದೆ.

ನಗರದ ಜನರಂತೆ ಚಾಲಾಕಿತನ ಇಲ್ಲದ, ಮುಗ್ಧ ಜೀವಿಗಳಾದ ಬುಡಕಟ್ಟು ಜನರು ಇತರೆ ಸಮಾಜದ ಜನಗಳಿಂದಾಗಿ ಹಲವು ರೀತಿಯ ಶೋಷಣೆಗೆ ಒಳಗಾಗುತ್ತಿದ್ದಾರೆ. ಇವರ ಅನಕ್ಷರತೆ, ಅಜ್ಞಾನ, ಮುಗ್ಧತೆಯನ್ನು ಬೇರೆ ಸಮುದಾಯದ ಜನರು ದುರುಪಯೋಗಪಡಿಸಿಕೊಳ್ಳುತ್ತಾರೆ. ಕಡಿಮೆ ಕೂಲಿಗೆ ತಮ್ಮ ಜಮೀನಿನಲ್ಲಿ ದುಡಿಸಿಕೊಳ್ಳುವುದು, ಅವಾಚ್ಯ ಶಬ್ದಗಳಿಂದ ನಿಂದಿಸುವುದು, ಮಹಿಳೆಯರಿಗೆ ಲೈಂಗಿಕ ಕಿರುಕುಳ ಕೊಡುವುದು, ಜೀತದಾಳಾಗಿ ದುಡಿಸಿಕೊಳ್ಳುವುದು, ಅಮಾನವೀಯ ಪದ್ಧತಿಗಳನ್ನು ಬಲವಂತವಾಗಿ ಹೇರುವುದು, ಭೂಕಬಳಿಕೆ ಮುಂತಾದವುಗಳು ಶೋಷಣೆಯ ವಿವಿಧ ಮುಖಗಳು. ಉದಾ : ಮಲೆಕುಡಿಯರನ್ನು ಜಮೀನ್ದಾರ ವರ್ಗ ಜೀತದಾಳುಗಳನ್ನಾಗಿ ದುಡಿಸಿಕೊಳ್ಳುವುದು, ದಕ್ಷಿಣ ಭಾರತದ ಕೆಲವು ಬುಡಕಟ್ಟುಗಳ ಜನರಿಂದ ಭೂ ಮಾಲೀಕರು ಬಲವಂತವಾಗಿ ಭೂಮಿಯನ್ನು ಕಬಳಿಸಿಕೊಳ್ಳುವುದು ಇತ್ಯಾದಿ.

ತೀವ್ರ ಬಡತನ ಎದುರಿಸುತ್ತಿರುವ ಗೌಳಿಗರು ತಮ್ಮ ಕಷ್ಟಕಾಲದಲ್ಲಿ ಮಕ್ಕಳ ಮದುವೆಗೆ, ಮನೆ ಕಟ್ಟುವ ಸಲುವಾಗಿ ಜಮೀನುದಾರರ ಬಳಿ ಅಥವಾ ತಾವು ದುಡಿಯುತ್ತಿರುವ ಭೂಮಾಲಿಕರ ಬಳಿ ಸಾಲ ಮಾಡಬೇಕಾದ ಅನಿವಾರ್ಯತೆಯಿಂದ ಸಾಲ ಮಾಡದೇ ವಿಧಿ ಇರಲಿಲ್ಲ. ಆದರೆ ಭೂಮಾಲೀಕರು ಹೆಚ್ಚಿನ ಬಡ್ಡಿದರವನ್ನು (೩೬%) ವಿಧಿಸುತ್ತಿದ್ದುದರಿಂದ ಸಾಲ ತೀರಿಸಲಾಗದೇ ಗೋಳಾಡುವ ಬಡ ಗೌಳಿಗರ ಅಸಹಾಯಕ ಸ್ಥಿತಿಯನ್ನು ಭೂಮಾಲಿಕರು ದುರುಪಯೋಗಿಸಿಕೊಂಡು ತಮ್ಮ ಜಮೀನಿನಲ್ಲಿ ಅವರನ್ನು ವರ್ಷಗಟ್ಟಲೆ ಕಡಿಮೆ ಕೂಲಿಗೆ ದುಡಿಸಿಕೊಳ್ಳುವ ಮೂಲಕ ಶೋಷಿಸುತ್ತಿದ್ದರು. ಅತೀ ಕಡಿಮೆ ಜಮೀನು ಹೊಂದಿರುವ ಗೌಳಿಗರೂ ಮಕ್ಕಳ ಮದುವೆಯಲ್ಲದೇ ಬೀಜ, ಗೊಬ್ಬರ ಕೊಳ್ಳುವ ಸಲುವಾಗಿಯೂ ಜಮೀನ್ದಾರರ ಬಳಿ ಸಾಲ ಮಾಡುತ್ತಿದ್ದರು. ಬೆಳೆ ವಿಫಲವಾದರೆ ಸಾಲ ತೀರಿಸಲಾಗದ ಅವರ ಪರಿಸ್ಥಿತಿಯ ದುರುಪಯೋಗ ಪಡೆದು ಕೆಲವು ವರ್ಷಗಳವರೆಗೆ ಸಾಲ ತೀರಿಸದೇ ಹೋದರೆ, ಅದೇ ನೆಪದಿಂದ ಜಮೀನ್ದಾರರು ಸಾಲ ಮಾಡಿದ ಗೌಳಿಗರ ಭೂಮಿಯನ್ನು ಕಬಳಿಸುತ್ತಿದ್ದರು. ಇನ್ನು

ಹಣದ ಲೇವಾದೇವಿಗಾರರಿಂದ ಅರಣ್ಯ ಇಲಾಖೆಯವರಿಂದ ಗೌಳಿಗರು ನಿರಂತರ ಶೋಷಣೆಗೆ ಒಳಗಾಗುತ್ತಿದ್ದಾರೆ. ಹೀಗೆ ಮೇಲ್ವರ್ಗದ ಜಮೀನದಾರರಿಂದ, ಹಣದ ಲೇವಾದೇವಿಗಾರರಿಂದ ಹಾಗೂ ಅರಣ್ಯ ಇಲಾಖೆಯವರಿಂದ ಗೌಳಿಗರು ನಿರಂತರ ಶೋಷಣೆಗೆ ಒಳಗಾಗುತ್ತಲೇ ಬಂದಿದ್ದಾರೆ. ಆದರೆ ಈಗ ಶೋಷಣೆಯು ಕಡಿಮೆಯಾಗಿದೆ. ಯಾಕೆಂದರೆ (೧) ಶಿಕ್ಷಣ ಪ್ರವೇಶದಿಂದ ಇಂದಿನ ಗೌಳಿ ಯುವಕರು ಜಾಗೃತರಾಗಿದ್ದಾರೆ. (೨) ಸಹಕಾರಿ ಸಂಘಗಳಿಂದ ಹಾಗೂ ಬ್ಯಾಂಕುಗಳಿಂದ ಸಾಲ ಸೌಲಭ್ಯ ಹೆಚ್ಚಾಗಿ, ಹಣದ ಲೇವಾದೇವಿಗಾರರು ಮತ್ತು ಜಮೀನ್ದಾರರು ಹೆಚ್ಚಿನ ಬಡ್ಡಿಗೆ ಸಾಲಕೊಟ್ಟು ಶೋಷಣೆ ಮಾಡುವುದು ಕಡಿಮೆಯಾಗಿದೆ. (೩) ವೃತ್ತಿ ಪಲ್ಲಟನೆಯಿಂದ ಆರ್ಥಿಕ ಸುಧಾರಣೆಯಾಗಿದೆ.

**೪.೪.೨ ಅಮಾನವೀಯ ಮೂಢನಂಬಿಕೆ/ಪದ್ಧತಿಗಳ ಸಮಸ್ಯೆ**

ಸಂಪ್ರದಾಯದ ಹೆಸರಿನಲ್ಲಿ ಭಾರತ ದೇಶದ ಅನೇಕ ಬುಡಕಟ್ಟುಗಳಲ್ಲಿ ಇಂದಿಗೂ ಕೆಲವು ಅಮಾನವೀಯವಾದಂಥ ಮೂಢನಂಬಿಕೆ ಆಧರಿತ ಆಚರಣೆಗಳು ಪ್ರಚಲಿತವಿವೆ. ಇವು ಯಾವುದೇ ತಾರ್ಕಿಕ ಆಧಾರವಿಲ್ಲದೇ ತಲೆಮಾರುಗಳಿಂದ ಆಚರಣೆಯಲ್ಲಿ ಬಂದಿರುವಂಥ ಆಚರಣೆಗಳಾಗಿವೆ. ಉದಾ : ೧) ಋತುಮತಿ ವೇಳೆ ಬೇರೆ ಗುಡಿಸಲಿನಲ್ಲಿ ವಾಸ ೨) ಹೆರಿಗೆಯಾದ ಮಗು, ಬಾಣಂತಿಯನ್ನು ದೂರ ಬೇರೆ ಗುಡಿಸಲಿನಲ್ಲಿ ಒಂಟಿಯಾಗಿ ಬಿಡುವುದು. ಅಂದರೆ ಮೈಲಿಗೆ, ಸೂತಕ ಆಚರಿಸುವುದು. ೩) ರೋಗ-ರುಜಿನಗಳಿಗೆ ಮಾಟ ಮದ್ದುಗಳಿಂದ ಪರಿಹಾರ ಹುಡುಕುವುದು ಇತ್ಯಾದಿ. ಅತ್ಯಂತ ಹಿಂದುಳಿದ ಗ್ರಾಮೀಣ ಪ್ರದೇಶಗಳಲ್ಲಿಯ ಬುಡಕಟ್ಟುಗಳಲ್ಲಿ ಮನುಷ್ಯ ಕುಲವೇ ನಾಚಿಕೆಪಡುವಂತಹ ಜೀವಿ ವಿರೋಧಿ ಅಮಾನವೀಯ ಆಚರಣೆಗಳು ರೂಢಿಯಲ್ಲಿವೆ. ಇದಕ್ಕೆ ಜ್ವಲಂತ ಉದಾಹರಣೆಯೆಂದರೆ ದಕ್ಷಿಣ ಕನ್ನಡದ ಕೊರಗ ಬುಡಕಟ್ಟಿನಲ್ಲಿರುವ ಅಜಲು ಪದ್ಧತಿ. ಇತ್ತೀಚೆಗೆ ಕರ್ನಾಟಕ ರಾಜ್ಯ ಸರಕಾರವು ಈ ಅಜಲು ಪದ್ಧತಿಯನ್ನು ಕಾನೂನಿನ ಮೂಲಕ ನಿಷೇಧಿಸಿದ್ದರಿಂದ ಈ ಪದ್ಧತಿಯು ಕಡಿಮೆಯಾಗುತ್ತಿದೆ.

ಇನ್ನೊಂದು ಅಮಾನವೀಯ ಆಚರಣೆಯೆಂದರೆ, ಹೆರಿಗೆ ಪ್ರಕ್ರಿಯೆ ಪ್ರಕೃತಿದತ್ತವಾಗಿದ್ದರೂ ಅತ್ಯಂತ ಸೂತಕವೆಂಬ ಆಚರಣೆ. ಬಸುರಿ ಹೆಂಗಸಿಗೆ ಹೆರಿಗೆ ನೋವು ಕಾಣಿಸಿಕೊಂಡ ತಕ್ಷಣ ಅವಳನ್ನು ಹಟ್ಟಿಯಿಂದ ದೂರ ಕರೆದೊಯ್ದು ಅವಳಿಗಾಗಿಯೇ ನಿರ್ಮಿಸಿದ ಗುಡಿಸಲಿನಲ್ಲಿ ಒಂಟಿಯಾಗಿ ಇಡಲಾಗುತ್ತದೆ. ಅಲ್ಲಿ ಅಪ್ಪ, ಅಮ್ಮ ಅಥವಾ ಸಂಬಂಧಿಕರೆನಿಸಿಕೊಂಡವರ್‍ಯಾರೂ ಅವಳನ್ನು ಮುಟ್ಟುವಂತಿಲ್ಲ, ನೆರವಿಗೆ ಹೋಗುವಂತಿಲ್ಲ. ಬಸುರಿ ಹೆಂಗಸು ತನಗೆ ತಾನೇ ಹೆರಿಗೆ ಮಾಡಿಕೊಳ್ಳಬೇಕಾಗುತ್ತದೆ. ಕರುಳ ಬಳ್ಳಿಯನ್ನು ತಾನೇ ಕತ್ತರಿಸಬೇಕಾಗುತ್ತದೆ. ದೇವರ ಕೃಪೆಯಿಂದ ಹೆರಿಗೆ ಸಲೀಸಾಗಿ ಆದರೆ ಮಗು, ತಾಯಿ ಬದುಕುಳಿಯುತ್ತಾರೆ. ಇಲ್ಲವಾದರೆ ಸಾವನ್ನಪ್ಪುತ್ತಾರೆ. ಹೆರಿಗೆಯ ನಂತರ ಎರಡು ತಿಂಗಳಿಗೂ ಹೆಚ್ಚು ಕಾಲ ಮಗು ಮತ್ತು ಬಾಣಂತಿಯನ್ನು ಮುಟ್ಟುವಂತಿಲ್ಲ ಹಾಗೂ ಅವರ ನೆರಳು ಬೇರೆಯವರ ಮೇಲೆ ಬೀಳುವಂತಿಲ್ಲ. ಒಂದು ವೇಳೆ ನೆರಳು ಬಿದ್ದರೆ ಅವರೂ ಮೈಲಿಗೆಯಾಗುತ್ತಾರೆ. ಅವರು ಮತ್ತು ಬುಡಕಟ್ಟು ದೇವರಿಗೆ ದಂಡ ತೆತ್ತು ಶುಚಿತ್ವ ಪಡೆಯಬೇಕಾಗುತ್ತದೆ. ಹೀಗೆ ಸುಮಾರು ೩ ತಿಂಗಳುಗಳ ಕಾಲ ಮಗು ಮತ್ತು ಬಾಣಂತಿಯು ಯಾರ ನೆರವಿಲ್ಲದೇ, ಮಳೆಯೆನ್ನದೇ, ಗಾಳಿ, ಗುಡುಗು, ಮಿಂಚೆನ್ನದೇ ಅವಳಿಗಾಗಿಯೇ ನಿರ್ಮಿಸಿದ ಗುಡಿಸಲಿನಲ್ಲಿ ಕಾಲ ಕಳೆಯಬೇಕಾಗುತ್ತದೆ. ಈ ಪದ್ಧತಿ ಕಾಡುಗೊಲ್ಲ ಬುಡಕಟ್ಟಿನಲ್ಲಿ ಪ್ರಚಲಿತವಿದೆ.

ಗೌಳಿಗರಲ್ಲಿಯೂ ಕೂಡ ಅನೇಕ ಮೂಢನಂಬಿಕೆ ಹಾಗೂ ಆಚರಣೆಗಳು ಪ್ರಚಲಿತವಿವೆ. ಇತರ ಬುಡಕಟ್ಟು ಜನರಂತೆ ಗೌಳಿಗರೂ ಕೂಡ ಸಂಪ್ರದಾಯ ಶರಣರೇ ಆಗಿದ್ದಾರೆ. ಅವುಗಳ ಮೂಲಾಧಾರದ ಬಗ್ಗೆ ವಿಚಾರ ಮಾಡದೇ ಅವು ಹಿರಿಯರಿಂದ ಬಂದ ನಂಬಿಕೆಗಳೆಂದೇ ಇವರು ಮುಂದುವರೆಸಿಕೊಂಡು ಹೋಗುತ್ತಿದ್ದಾರೆ. ಮನುಷ್ಯರಿಗಾಗಲೀ, ದನಕರುಗಳಿಗಾಗಲೀ ಕಾಯಿಲೆ, ಕಸಾಲೆ ಬಂದರೆ, ಇದು ದೆವ್ವ, ಭೂತ, ಪಿಶಾಚಿಗಳಿಂದ ಉಂಟಾಗುತ್ತದೆ ಎಂದು ನಂಬುತ್ತಾರೆ. ಈ ಸಮಸ್ಯೆಗಳ ನಿವಾರಣೆಗೆ ವೈದ್ಯಕೀಯ ಸಹಾಯ ಪಡೆಯುವ ವಿಚಾರವನ್ನೇ ಮಾಡುವುದಿಲ್ಲ. ಮಾಟ ಮಂತ್ರ ಇತ್ಯಾದಿಗಳನ್ನು ಮಾಡಿಸುವ ರೂಢಿಯಿದೆ. ಯಾವುದಾದರೂ ಮನುಷ್ಯನಿಗೆ ದೆವ್ವ ಹಿಡಿದಿದೆ ಎಂದು ಅನಿಸಿದರೆ ಅವನಿಗೆ ದೈಹಿಕ ಚಿತ್ರಹಿಂಸೆ ನೀಡುವುದು, ಕಲ್ಲು ಹೊರಿಸುವುದು, ಮುಳ್ಳು, ಬೆಂಕಿ ತುಳಿಸುವುದು, ಕಾಡಿನಲ್ಲಿ ಬಿಡುವುದು ಇತ್ಯಾದಿ ರೂಢಿಗಳಿವೆ.

ಬಾಣಂತಿಯನ್ನು ಕೂಸಿನ ಜೊತೆಗೆ ಸೂತಕಕ್ಕಾಗಿ ಪ್ರತ್ಯೇಕ ಗುಡಿಸಲಿನಲ್ಲಿ ಇಡುತ್ತಾರೆ. ಇದರಿಂದ ತಾಯಿ ಮಗುವಿಗೆ ಅಪಾಯವಿದೆಯೆಂದು ಭಾವಿಸುವುದಿಲ್ಲ. ಈ ಬುಡಕಟ್ಟಿನಲ್ಲಿ ಮಾಟ, ಮಂತ್ರ ಮಾಡುವ ಜನ ಇಲ್ಲದಿದ್ದರೂ ಬೇರೆ ಜಾತಿಗೆ ಸೇರಿದ ಮಾಂತ್ರಿಕರಿಂದ ಮಾಟ ಮಂತ್ರ ಮಾಡಿಸುವುದು ರೂಢಿಯಲ್ಲಿದೆ.

**೪.೪.೩ 'ಬುಡಕಟ್ಟು' ಎಂದು ಪರಿಗಣಿಸದ ಸಮಸ್ಯೆ**

ಬುಡಕಟ್ಟು ಅಥವಾ 'ಪರಿಶಿಷ್ಟ ಬುಡಕಟ್ಟು' ಎಂದು ಯಾವುದೇ ಒಂದು ಸಮುದಾಯವು ಪರಿಗಣಿಸಲ್ಪಟ್ಟರೆ ಅದು ಸರ್ಕಾರದಿಂದ ಕೆಲವು ಸೌಲಭ್ಯಗಳನ್ನು, ಅವಕಾಶಗಳನ್ನು ಪಡೆಯಲು ಅರ್ಹವಾಗುತ್ತದೆ. ಬುಡಕಟ್ಟು ಜನರ ರಾಜಕೀಯ ನಾಯಕತ್ವದ ಕೊರತೆಯಿಂದಲೋ ಅಥವಾ ಸರಕಾರ ವೈಜ್ಞಾನಿಕವಾಗಿ ಬುಡಕಟ್ಟು ಜನರು ಯಾರು ಎಂದು ಗುರುತಿಸಲು ಸಾಧ್ಯವಾಗದೇ ಇರುವುದರಿಂದಲೋ ಅಥವಾ ಬುಡಕಟ್ಟು ಜನರು ತಾವು ಬುಡಕಟ್ಟು ಜನಾಂಗವೆಂದು ಸರಿಯಾಗಿ ಬಿಂಬಿಸಲು ಸಾಧ್ಯವಾಗದೇ ಇರುವದರಿಂದಲೋ ಎಷ್ಟೋ ಬುಡಕಟ್ಟುಗಳು ಬುಡಕಟ್ಟಿನ ಅಧಿಕೃತ ಸ್ಥಾನಮಾನ ಪಡೆಯುವುದೇ ಇಲ್ಲ. ಇಂತಹ ಸಂದರ್ಭವನ್ನು ಭಾರತದಾದ್ಯಂತ ನೋಡಬಹುದು. ಎಷ್ಟೋ ಸಂದರ್ಭಗಳಲ್ಲಿ ಮೀಸಲಾತಿ ನೀತಿ ನಿರೂಪಿಸುವಾಗ ಜಾತಿ ಯಾವುದು, ಜಾತಿಯಿಂದ ಎಲ್ಲಾ ವಿಧದಲ್ಲಿ ಬೇರೆಯಾಗಿರುವ ಬುಡಕಟ್ಟು ಯಾವುದು ಎಂಬ ವ್ಯತ್ಯಾಸದ ಅರಿವಿನ ಕೊರತೆಯಿರುವುದು ಮೀಸಲಾತಿಯ ನೀತಿಯನ್ನು ಮತ್ತು ಆಯೋಗಗಳ ಶಿಫಾರಸ್ಸುಗಳನ್ನು ಅನುಷ್ಠಾನ ಮಾಡುವಲ್ಲಿ ಕಂಡುಬರುತ್ತದೆ. ಇಂತಹ ಸಂದರ್ಭದಲ್ಲಿ ಆರ್ಥಿಕವಾಗಿ ಸಬಲವಾಗಿರುವ ಮತ್ತು ರಾಜಕೀಯ ನಾಯಕತ್ವವನ್ನು ಪಡೆದಿರುವ ಜನಾಂಗಗಳು ಅಧಿಕೃತ ಬುಡಕಟ್ಟು ಸ್ಥಾನಮಾನವನ್ನು ಪಡೆಯುತ್ತಿವೆ. ನಿಜವಾಗಿ ಬುಡಕಟ್ಟು ಲಕ್ಷಣಗಳನ್ನು ಹೊಂದಿದ್ದು, ಜಾತಿ ವ್ಯವಸ್ಥೆಯಿಂದ ದೂರವಿರುವ ಎಷ್ಟೋ ಬುಡಕಟ್ಟುಗಳು ಇಂದಿಗೂ ಬುಡಕಟ್ಟು ಸ್ಥಾನಮಾನ ಪಡೆಯದೇ ಸರಕಾರದ ಎಲ್ಲಾ ಅವಕಾಶಗಳಿಂದ ವಂಚಿತವಾಗಿವೆ. ಅಂದರೆ ಈ ಸಮುದಾಯಗಳು ಆರ್ಥಿಕ, ಸಾಮಾಜಿಕ ಮತ್ತು ಶೈಕ್ಷಣಿಕವಾಗಿ ಹಿಂದುಳಿದಿದ್ದು, ಬುಡಕಟ್ಟಾಗಿದ್ದೂ ಬುಡಕಟ್ಟಾಗದ ಸಮಸ್ಯೆಯನ್ನು ಎದುರಿಸುತ್ತಿವೆ. ಉದಾ: ಕರ್ನಾಟಕದ ಕಾಡುಗೊಲ್ಲರು, ಉತ್ತರ ಕನ್ನಡ ಜಿಲ್ಲೆಯ ಧನಗರ ಗೌಳಿಗಳು.

ಕರ್ನಾಟಕದ ಗೌಳಿ ಸಮುದಾಯವನ್ನು ಇಲ್ಲಿಯವರೆಗೆ ಪರಿಶಿಷ್ಟ ಬುಡಕಟ್ಟುಗಳ ಪಟ್ಟಿಗೆ ಸೇರಿಸಲಾಗಿಲ್ಲ. ಕೆಲವು ಸುಶಿಕ್ಷಿತ ಪ್ರಜ್ಞಾವಂತ ಗೌಳಿ ತರುಣರು ಇದಕ್ಕಾಗಿ ಶತಪ್ರಯತ್ನ ಮಾಡುತ್ತಿದ್ದರೂ ಈ ದಿಶೆಯಲ್ಲಿ ಅವರಿಗೆ ಇನ್ನೂ ಯಶಸ್ಸು ದೊರಕಿಲ್ಲವೆಂದೇ ಹೇಳಬಹುದು. ಕೆಲವು ಸಂಘಟನೆಗಳನ್ನು ರೂಪಿಸಿಕೊಂಡು ಕೂಡ ಇವರು ಪ್ರಯತ್ನ ಮಾಡುತ್ತಿದ್ದಾರೆ. ಸನ್ ೨೦೧೧ರ ಜನಗಣತಿಯ ನಂತರ ಈ ದಿಶೆಯಲ್ಲಿ ಏನಾದರೂ ಪ್ರಗತಿ ಆಗಬಹುದೇನೋ ಎಂದು ಕಾದು ನೋಡಬೇಕಿದೆ.

**೪.೪.೪. ಪ್ರತ್ಯೇಕತೆಯ ಸಮಸ್ಯೆ**

ನಾಗರಿಕ ಸಮಾಜದಿಂದ ದೂರವಾಗಿ ವಾಸಿಸುವ ಬುಡಕಟ್ಟುಗಳು ಒಂದು ವಿಶಾಲ ಸಮುದ್ರದಲ್ಲಿರುವ ನಡುಗಡ್ಡೆಗಳಂತಿವೆ. ಸಮುದ್ರದೊಳಗೇ ಇದ್ದರೂ ಅವು ಸಮುದ್ರಕ್ಕೇ ಸಂಬಂಧವಿಲ್ಲದಂತಿವೆ. ಕರ್ನಾಟಕದ ಗೌಳಿಗರೂ ಕೂಡ ಈ ನಿಯಮಕ್ಕೆ ಹೊರತಾಗಿಲ್ಲ. ನಾಗರಿಕ ಸಮಾಜದಿಂದ ದೂರವೇ ಉಳಿದು ತಮ್ಮ ಸಂಸ್ಕೃತಿಯನ್ನು ಉಳಿಸಿಕೊಂಡು ಬದುಕುತ್ತಿದ್ದರೂ ಕೂಡ ಈ ಪ್ರತ್ಯೇಕತೆಯಿಂದಾಗಿ ಅವರು ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ.

೧) **ಸಾಮಾಜಿಕ ಪ್ರತ್ಯೇಕತೆ:** ಜೈವಿಕವಾಗಿ ಈ ಬುಡಕಟ್ಟಿನ ವಿಶಿಷ್ಠ ಹಾಗೂ ವಿಭಿನ್ನ ಲಕ್ಷಣಗಳನ್ನು ಹೊಂದಿದ್ದಾರೆ. ಇವರು ಸಾಮಾನ್ಯವಾಗಿ ಗೋಧಿ ವರ್ಣದವರಾಗಿದ್ದು, ನೋಡಲು ಅಷ್ಟೊಂದು ರೂಪವಂತರಾಗಿರುವುದಿಲ್ಲ. ಇವರು ಮೂಢನಂಬಿಕೆಗಳೊಂದಿಗೆ ಬದುಕುವ ನಿರಕ್ಷರಿಗಳಾಗಿದ್ದಾರೆ. ನಾಗರಿಕ ಜೀವನದ ಸಂಸ್ಕೃತಿಯನ್ನು ಅಳವಡಿಸಿಕೊಳ್ಳಲು ಅಸಮರ್ಥರಾಗಿದ್ದಾರೆ. ಹೀಗಾಗಿಯೇ ಇವರು ನಾಗರಿಕ ಸಮಾಜದಿಂದ ದೂರವಾಗಿ ಉಳಿಯಬೇಕಾದ ಅನಿವಾರ್ಯ ಸ್ಥಿತಿಯಲ್ಲಿದ್ದಾರೆ ಎನ್ನಬಹುದು. ಸ್ವಚ್ಛ ಹಾಗೂ ಶಿಸ್ತಿನ ಶಾರೀರಿಕ ನೈರ್ಮಲ್ಯದ ಅರಿವು ಇವರಿಗಿಲ್ಲ.

ನಾಗರಿಕ ಸಮುದಾಯದಲ್ಲಿಯೂ ಗೌಳಿಗರ ಬಗ್ಗೆ ವಿಚಿತ್ರ ಭಾವನೆಗಳಿವೆ. ಇವರ ಪ್ರತ್ಯೇಕ ಸಂಸ್ಕೃತಿಯಿಂದಾಗಿ ಇವರು ನಮ್ಮೊಂದಿಗೆ ವಾಸಿಸಲು ಅನರ್ಹರು ಎಂದು ನಾಗರಿಕ ಸಮುದಾಯ ಭಾವಿಸುತ್ತದೆ. ಇದರಿಂದಾಗಿ ಈ ಜನರಲ್ಲಿ ಕೀಳರಿಮೆ ಬೆಳೆದು ಸ್ವತಃ ತಾವೇ ನಾಗರಿಕ ಸಮಾಜದಿಂದ ದೂರವಾಗಿಯೇ ಉಳಿಯಲು ಇಚ್ಛಿಸುತ್ತಾರೆ. ಮುಂದುವರೆದ ಸಮೂಹಗಳ ಜೊತೆಗೆ ಇವರು ವೈವಾಹಿಕ ಸಂಬಂಧ ಬೆಳೆಸುವುದಂತೂ ಇನ್ನೂ ದೂರದ ಸಂಗತಿ ಆಗಿದೆ ಎನ್ನಬಹುದು.

೨) **ಭೌಗೋಳಿಕ ಪ್ರತ್ಯೇಕತೆ:** ಭೌಗೋಳಿಕವಾಗಿಯೂ ಗೌಳಿಗರು ನಾಗರಿಕ ಸಮಾಜದಿಂದ ದೂರವಾಗಿಯೇ ಉಳಿದಿರುವುದು ಇವರ ಇನ್ನೊಂದು ಸಮಸ್ಯೆ ಆಗಿದೆ. ಸಾಮಾನ್ಯವಾಗಿ ದಟ್ಟ ಅರಣ್ಯಗಳು ಹಾಗೂ ದುರ್ಗಮ ಸ್ಥಳಗಳಲ್ಲಿಯೇ ವಾಸಿಸುವ ಇವರಿಗೆ ಬಾಹ್ಯ ಜಗತ್ತಿನ ಸಂಪರ್ಕ ಬಹು ಕಡಿಮೆ ಆಗಿರುತ್ತದೆ. ಅನೇಕ ವಾಡೆಗಳಿಗೆ ವಾರ್ತಾ ಪತ್ರವಾಗಲಿ ಅಥವಾ ಟಿ.ವ್ಹಿ. ಇರುವಂತಹ ಮನೆಗಳಾಗಲೀ ಇರುವುದು ಅತಿ ಕಡಿಮೆ ಅಥವಾ ಇಲ್ಲವೇ ಇಲ್ಲವೆಂದು ಕೂಡ ಹೇಳಬಹುದು. ಇವರು ವಾಸಿಸುವ ದಟ್ಟಡವಿ ಹಾಗೂ ಅರಣ್ಯಗಳಲ್ಲಿರುವ ವಾಡೆಗಳಿಗೆ ಇಂದಿಗೂ

ಕೂಡ ವರ್ಷದುದ್ದಕ್ಕೂ ಸಾರಿಗೆ ಸಂಪರ್ಕ ವ್ಯವಸ್ಥೆ ಇಲ್ಲವಾಗಿದೆ. ಇದರಿಂದಾಗಿ ಇವರು ಆಧುನಿಕ ಜಗತ್ತಿನಿಂದ ಪ್ರತ್ಯೇಕವಾಗಿಯೇ ಉಳಿದಿದ್ದಾರೆ.

ಈ ಪ್ರಕಾರದ ಪ್ರತ್ಯೇಕತೆ ಇವರ ಸಮಸ್ಯೆಗಳನ್ನು ಇನ್ನಷ್ಟು ಸಂಕೀರ್ಣಗೊಳಿಸಿದೆಯೆಂದರೆ ಅತಿಶಯೋಕ್ತಿ ಆಗಲಾರದು.

**೪.೪.೫. ಸರ್ಕಾರಿ ಸೌಲಭ್ಯಗಳಿಂದ ವಂಚಿತರಾಗಿರುವ ಸಮಸ್ಯೆ**

ನಮ್ಮ ದೇಶದಲ್ಲಿ ನಮ್ಮ ಎಲ್ಲ ಸಮಸ್ಯೆಗಳಿಗೂ ಪರಿಹಾರ ಹುಡುಕಲು ಸರ್ಕಾರವೇ ಜವಾಬ್ದಾರ ಎಂದು ಭಾವಿಸುವ ಹಾಗೂ ಎಲ್ಲದಕ್ಕೂ ಸರ್ಕಾರವನ್ನು ನಿಂದಿಸುವ ರೂಢಿ ಸಾಮಾನ್ಯವಾಗಿ ನಾಗರಿಕರಾದಿಯಾಗಿ ಎಲ್ಲರಲ್ಲಿಯೂ ಕಂಡು ಬರುತ್ತದೆ. ಇದು ನಗರ, ಗ್ರಾಮ ಹಾಗೂ ಬುಡಕಟ್ಟು ಎಲ್ಲ ಜನರಿಗೂ ಅನ್ವಯಿಸುತ್ತದೆ.

ಭಾರತ ಸರ್ಕಾರವು ಸಂಯುಕ್ತ ರಾಷ್ಟ್ರ ಸಂಘದ ಮಾನವ ಹಕ್ಕುಗಳ ಪಟ್ಟಿಗೆ (U.N. Charter of Human Right) ಆದ್ಯತೆ ನೀಡಿರುವ ಜಗತ್ತಿನ ಪ್ರಮುಖ ರಾಷ್ಟ್ರಗಳ ಪಟ್ಟಿಯಲ್ಲಿದೆ. ಜನಸಂಖ್ಯೆಯ ದೃಷ್ಟಿಯಿಂದ ಇಂದು ಭಾರತ ದೇಶ ಜಗತ್ತಿನ ಅತಿ ದೊಡ್ಡ ಪ್ರಜಾಪ್ರಭುತ್ವವಾಗಿದೆ. ದೇಶದ ಪ್ರತಿಯೊಬ್ಬ ಪ್ರಜೆಗೂ ಘನತೆ ಹಾಗೂ ಗೌರವಗಳಿಂದ ಬದುಕಲು ಸಮಾನ ಅವಕಾಶ ಒದಗಿಸಬೇಕಾದದ್ದು ಸರ್ಕಾರದ ಕರ್ತವ್ಯವಾಗಿದೆ.

ಈ ಘನ ಉದ್ದೇಶವನ್ನು ಸಾಧಿಸುವ ದೃಷ್ಟಿಯಿಂದ ಅಲೆಮಾರಿಗಳು, ಬುಡಕಟ್ಟು ಜನಾಂಗಗಳು ಇತ್ಯಾದಿಯವರನ್ನು ರಾಷ್ಟ್ರೀಯ ಮುಖ್ಯ ಪ್ರವಾಹಕ್ಕೆ ತರುವ ಉದ್ದೇಶದಿಂದ ಭಾರತೀಯ ಸಂವಿಧಾನದಲ್ಲಿಯೇ ಕೆಲವು ಮಹತ್ವದ ವಿಧಿಗಳನ್ನು ಅಳವಡಿಸಿ ಅವುಗಳ ಮೂಲಕ ಇವರಿಗೆ ಸಮಾನ ಅವಕಾಶ ಸೌಲಭ್ಯಗಳನ್ನು ಒದಗಿಸಲು ಪ್ರಯತ್ನಿಸಲಾಗಿದೆ.

**ಬುಡಕಟ್ಟು ಸಮುದಾಯಗಳಿಗೆ ಸಮಾನ ಅವಕಾಶ ಒದಗಿಸುವ ಸಂವಿಧಾನಾತ್ಮಕ ಕ್ರಮಗಳು**

೧) ಸಂವಿಧಾನದ ೧೫ನೆಯ ವಿಧಿಯ ಪ್ರಕಾರ ಇವರಿಗೆ ಸಮಾಜದಲ್ಲಿ ಸಮಾನ ಅವಕಾಶಗಳುಂಟು.

೨) ಸಂವಿಧಾನದ ೧೬(೪) ಹಾಗೂ ೩೨೦(೪) ವಿಧಿಗಳನ್ವಯ ಇವರಿಗೆ ಸರ್ಕಾರಿ ಉದ್ಯೋಗಗಳಲ್ಲಿ ಸಮಾನ ಅವಕಾಶಗಳುಂಟು.

೩) ಸಂವಿಧಾನದ ೩೩೦,೩೩೨ ಹಾಗೂ ೩೩೪ನೇ ವಿಧಿಗಳ ಪ್ರಕಾರ ರಾಜ್ಯದ ಶಾಸನ ಸಭೆಗಳಲ್ಲಿ ಇವರಿಗೆ ಮೀಸಲಾತಿ ಒದಗಿಸಲಾಗಿದೆ.

೪) ಸಂವಿಧಾನದ ೧೫(೪) ಹಾಗೂ ೨೯(೨) ವಿಧಿಗಳ ಪ್ರಕಾರ ಶೈಕ್ಷಣಿಕ ಅಬಿವೃದ್ಧಿಯ ದೃಷ್ಟಿಯಿಂದ ಈ ಜನರಿಗೆ ಅಗತ್ಯವಿರುವ ಸೌಲಭ್ಯಗಳನ್ನು ಕಲ್ಪಿಸಿಕೊಡಬಹುದು.

೫) ಸಂವಿಧಾನದ ೨೭೫ನೇ ವಿಧಿಯ ಪ್ರಕಾರ ಭಾರತದ ಸಂಚಿತ ನಿಧಿ (Consolidated Fund of India) ಯಿಂದ ಈ ಜನರ ಕಲ್ಯಾಣಕ್ಕಾಗಿ ಹಣ ಒದಗಿಸಬಹುದಾಗಿದೆ.

೬) ಸಂವಿಧಾನದ ೧೬೪ನೆ ವಿಧಿಯ ಪ್ರಕಾರ ಅಡವಿ ಜನರ ಹಿತಾಸಕ್ತಿಗಳ ಪೋಷಣೆಗಾಗಿಯೇ ಪ್ರತ್ಯೇಕ ಮಂತ್ರಿಗಳನ್ನು ನೇಮಿಸಲು ಅವಕಾಶವಿದೆ.

೭) ಸಂವಿಧಾನದ ೩೪೦ನೆ ವಿಧಿಯ ಪ್ರಕಾರ ಬುಡಕಟ್ಟು ಜನರ ಹಿತಾಸಕ್ತಿಗಳ ಪೋಷಣೆಗಾಗಿ ವಿಶೇಷ ಕಮೀಷನರ್ ನೇಮಿಸಲು ಅವಕಾಶವಿದೆ.

ಈ ರೀತಿಯಲ್ಲಿ ಭಾರತೀಯ ಸಂವಿಧಾನದಲ್ಲಿ ಬುಡಕಟ್ಟು ಜನರ ಕಲ್ಯಾಣಕ್ಕಾಗಿ ಅನೇಕ ಅವಕಾಶ ಹಾಗೂ ಕ್ರಮಗಳನ್ನು ಕಲ್ಪಿಸಲಾಗಿದೆ. ಈ ಕ್ರಮಗಳನ್ನು ಯಾವ ರಾಜ್ಯವೂ ಉಲ್ಲಂಘಿಸುವಂತಿಲ್ಲ. ಈ ಸೌಲಭ್ಯಗಳಿಗಾಗಿ ಸಂಬಂಧಪಟ್ಟ ಬುಡಕಟ್ಟು ಜನರು ಅಥವಾ ಅವರ ಪ್ರತಿನಿಧಿಗಳು ನ್ಯಾಯಾಲಯದ ಮೂಲಕ ಕ್ರಮ (Adjudication) ಕೈಕೊಳ್ಳಬಹುದಾಗಿದೆ.

ಈ ಮೇಲಿನ ಸಂವಿಧಾನಾತ್ಮಕ ಕ್ರಮಗಳಲ್ಲದೇ ಭಾರತ ಸರ್ಕಾರ ಹಾಗೂ ಕರ್ನಾಟಕ ಸರ್ಕಾರಗಳು ಹಲವಾರು ಆಯೋಗ ಮತ್ತು ಸಮಿತಿಗಳನ್ನು ರಚಿಸಿ ಈ ಜನರ ಏಳ್ಗೆಗಾಗಿ ವಿಶೇಷ ಇಲಾಖೆಗಳನ್ನು ಕೂಡಾ ತೆರೆಯಲಾಗಿದೆ. ಕಾಕಾ ಕಾಲೇಲ್ಕರ ನೇತೃತ್ವದ ಹಿಂದುಳಿದ ವರ್ಗಗಳ ಆಯೋಗ, ಶ್ರೀಮತಿ ರೇಣುಕಾದೇವಿ ನೇತೃತ್ವದ ಹಿಂದುಳಿದ ವರ್ಗಗಳ ಆಯೋಗ, ಮಂಡಲ ಆಯೋಗ, ಕರ್ನಾಟಕ ಸರ್ಕಾರದ ಚಿನ್ನಪ್ಪರೆಡ್ಡಿ ಆಯೋಗ, ಹಾಗೂ ವೆಂಕಟಸ್ವಾಮಿ ಆಯೋಗ ಇವೆಲ್ಲ ಆಯೋಗಗಳು ಈ ಸಮುದಾಯಗಳ ಜೀವನ ಹಾಗೂ ಅವರ ಸಮಸ್ಯೆಗಳ ಬಗ್ಗೆ ಅಧ್ಯಯನ ನಡೆಸಿ ಪರಿಹಾರ ಸೂಚಿಸಿವೆ. ಇವುಗಳಲ್ಲದೇ ಅನೇಕ ಸ್ವಯಂ ಸೇವಾ ಸಂಘ–ಸಂಸ್ಥೆಗಳು, ಪತ್ರಿಕೆಗಳು ಇತ್ಯಾದಿ ಇವರ ಉದ್ಧಾರಕ್ಕಾಗಿ ಶ್ರಮಿಸುತ್ತಲಿವೆ.

ಇಷ್ಟೆಲ್ಲ ಸೌಲಭ್ಯಗಳಿದ್ದರೂ ಕೂಡಾ ಈ ಜನರು ಇನ್ನೂ ಹಿಂದುಳಿದೇ ಇರಲು ಕಾರಣವೇನೆಂದರೆ, ಇವರಿಗೆ ಕೊಡಮಾಡಿದ ಅಧಿಕಾರ, ಸೌಲಭ್ಯಗಳು ಇಲ್ಲಿಯವರೆಗೆ ಕೇವಲ ಕಾಗದದ ಹುಲಿಗಳಾಗಿಯೇ ಉಳಿದುಕೊಂಡಿವೆ. ಬುಡಕಟ್ಟು ಎಂದು ಗುರುತಿಸಲ್ಪಡದೇ ಇರುವುದರಿಂದ ಗೌಳಿಗರು ಈ ಸೌಲಭ್ಯಗಳಿಂದ ವಂಚಿತರಾಗಿದ್ದಾರೆ ಎಂಬುದೊಂದು ವಿಪರ್ಯಾಸ. ಈ ಜನರು ಬದುಕುತ್ತಿರುವ ಜೀವನ ಶೈಲಿಯನ್ನು ಗಮನಿಸಿದರೆ ಇವರಿಗೆ ಈ ಸೌಲಭ್ಯಗಳನ್ನು ಪಡೆಯಲು ತಾವು ಹೊಂದಿರುವ ಹಕ್ಕನ್ನು ಚಲಾಯಿಸುವ ಸಾಮೂಹಿಕ ಇಚ್ಛಾಶಕ್ತಿ ಇಲ್ಲವಾಗಿದೆ. ಈ ಇಚ್ಛಾಶಕ್ತಿಯನ್ನು ರೂಪಿಸಲು ಅಗತ್ಯವಿರುವ ಶಿಕ್ಷಣವೇ ಇವರಿಗೆ ದೊರಕಿಲ್ಲವಾದ್ದರಿಂದ, ಅಜ್ಞಾನ ಹಾಗೂ ನಿಷ್ಕ್ರೀಯತೆಯ ವಿಷ ವರ್ತುಲದಲ್ಲಿ ಇವರು ಸಿಲುಕಿದ್ದಾರೆ. ಕೆಲವು ಮುಂದುವರೆದ ಜಾತಿಗಳ ನಾಯಕರು ಇವರಿಗೆ ಸೌಲಭ್ಯಗಳನ್ನು ಕೊಡಿಸುವುದಾಗಿ ಹೇಳಿ, ಇವರ ಮುಗ್ಧತೆಯನ್ನು ತಮ್ಮ ರಾಜಕೀಯ ಲಾಭಕ್ಕಾಗಿ ಬಳಸಿಕೊಂಡಂಥ ಜೀವಂತ ಉದಾಹರಣೆಗಳಿವೆ.

ಜಗತ್ತಿನ ಅತಿ ದೊಡ್ಡ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ, ಜನಸಂಖ್ಯೆಯ ಒಂದು ಪ್ರಮುಖ ಭಾಗ ಸರ್ಕಾರದ ಸರ್ವ ಸೌಲಭ್ಯಗಳಿಂದ ವಂಚಿತರಾಗಿ ಉಳಿದಿರುವುದು ನಾಗರಿಕ ಸಮಾಜ ತಲೆತಗ್ಗಿಸುವಂಥ ಸಂಗತಿ ಆಗಿದೆ ಎನ್ನಬಹುದು.

### ೪.೪.೬. ಸರ್ಕಾರದ ಪರಿಹಾರ ಕ್ರಮಗಳು

ಸಾಮಾಜಿಕ, ಆರ್ಥಿಕ ಹಾಗೂ ಶೈಕ್ಷಣಿಕವಾಗಿ ಹಿಂದುಳಿದಿರುವ ಜಾತಿ, ಸಮುದಾಯಗಳನ್ನು ಗುರುತಿಸಿ, ಅವುಗಳ ಕುರಿತು ಅಧ್ಯಯನ ಮಾಡಿ, ಅವರಲ್ಲಿರುವ ಅಸಮಾನತೆ ಹಾಗೂ ಹಿಂದುಳಿಯುವಿಕೆಯನ್ನು ತೊಡೆದು ಹಾಕಿ ಸಾಮಾಜಿಕ ನ್ಯಾಯ ಒದಗಿಸುವ ಉದ್ದೇಶದಿಂದ ಭಾರತ ಸರ್ಕಾರವು ಅನೇಕ ಸಂವಿಧಾನಾತ್ಮಕ ಕ್ರಮಗಳನ್ನು ಕೈಗೊಂಡಿದೆ. ಈ ಕ್ರಮಗಳಿಂದ ಈ ಬುಡಕಟ್ಟುಗಳಿಗೆ ಸಂವಿಧಾನಾತ್ಮಕ ಹಕ್ಕನ್ನು ಕಲ್ಪಿಸಲಾಗುತ್ತದೆ.

೧) ಸಂವಿಧಾನದ ೩೪೨(೧)ನೇ ವಿಧಿಯ ಪ್ರಕಾರ ರಾಷ್ಟ್ರಪತಿಯವರು ಹಾಗೂ ಸಂಸತ್ತು ಎಲ್ಲ ರೀತಿಯಿಂದಲೂ ಹಿಂದುಳಿದ ಅರ್ಹ ಸಮುದಾಯಗಳೆಂದು ಗುರುತಿಸಿ, ಅವುಗಳನ್ನು ಬುಡಕಟ್ಟುಗಳೆಂದು ಪರಿಗಣಿಸಿ ವಿವಿಧ ಕ್ಷೇತ್ರಗಳಲ್ಲಿ ಅವುಗಳಿಗೆ ಮೀಸಲಾತಿ ಒದಗಿಸಬಹುದಾಗಿದೆ. ಇವುಗಳನ್ನು ಒದಗಿಸುವುದು ಸಂಬಂಧಪಟ್ಟ ರಾಜ್ಯಗಳಿಗೆ ಕಡ್ಡಾಯವಾಗಿರುತ್ತದೆ.

೨) ಸಂವಿಧಾನದ ೪೬ನೇ ಅನುಚ್ಛೇದವು ರಾಜ್ಯದ ದುರ್ಬಲ ವರ್ಗಗಳ ಅದರಲ್ಲಿಯೂ ಬುಡಕಟ್ಟುಗಳ ಶೈಕ್ಷಣಿಕ ಹಾಗೂ ಆರ್ಥಿಕ ಹಿತಾಸಕ್ತಿಗಳನ್ನು ರಕ್ಷಿಸಬೇಕು ಎಂದು ಹೇಳುತ್ತದೆ.

೩) ಸಂವಿಧಾನದ ೨೪೪ನೆ ವಿಧಿಯ ಪ್ರಕಾರ ಹೆಚ್ಚಿನ ಸಂಖ್ಯೆಯಲ್ಲಿ ಬುಡಕಟ್ಟು ಜನರಿರುವ ಪ್ರದೇಶಗಳನ್ನು ಅನುಸೂಚಿತ ಪ್ರದೇಶಗಳೆಂದು ಘೋಷಿಸಬಹುದಾಗಿದೆ.

೪) ಆಯಾ ರಾಜ್ಯಗಳ ರಾಜ್ಯಪಾಲರು ತಮ್ಮ ಪರಮಾಧಿಕಾರವನ್ನು ಉಪಯೋಗಿಸಿ ರಾಜ್ಯದ ಯಾವುದೇ ಭಾಗವನ್ನು ಅನುಸೂಚಿತ ಪ್ರದೇಶ ಎಂದು ಘೋಷಿಸುವ ಅಧಿಕಾರ ಹೊಂದಿರುವುದು.

೫) ಅನುಚ್ಛೇದ ೩೩೯ರ ಪ್ರಕಾರ ಕೇಂದ್ರ ಸರ್ಕಾರದ ನಿರ್ದೇಶನದಂತೆ ರಾಜ್ಯ ಸರ್ಕಾರಗಳು ರಾಜ್ಯದ ಅನುಸೂಚಿತ ಬುಡಕಟ್ಟುಗಳ ಕಲ್ಯಾಣಕ್ಕೆ ಅಗತ್ಯವಾದ ನಿರ್ಧಿಷ್ಟ ಯೋಜನೆಗಳನ್ನು ಕಾರ್ಯಗತಗೊಳಿಸುವಂತೆ ತಿಳಿಸುವುದು.

೬) ಅನುಚ್ಛೇದ ೨೭೫ರ ಪ್ರಕಾರ ಸಂವಿಧಾನದ ಸವಲತ್ತುಗಳನ್ನು ಅನುಷ್ಠಾನಗೊಳಿಸಲು ರಾಜ್ಯ ಸರ್ಕಾರಗಳಿಗೆ ಸಹಾಯವನ್ನು ಒದಗಿಸಲು ಅವಕಾಶ ಮಾಡಿಕೊಟ್ಟಿದೆ.

೭) ಸಂವಿಧಾನದ ೩೩೦, ೩೩೨ ಹಾಗೂ ೩೩೪ನೆ ಕಲಮುಗಳ ಪ್ರಕಾರ ಅನುಸೂಚಿತ ಬುಡಕಟ್ಟುಗಳಿಗೆ ಸಂಸತ್ತು ಹಾಗೂ ವಿಧಾನಸಭೆಗಳಲ್ಲಿ ಮೀಸಲಾತಿ ಒದಗಿಸಲಾಗಿದೆ.

೮) ಸಂವಿಧಾನದ ೩೩೫ನೆ ವಿಧಿಯ ಪ್ರಕಾರ ಅನುಸೂಚಿತ ಬುಡಕಟ್ಟುಗಳಿಗೆ ನಾಗರಿಕ ಸೇವೆಯಲ್ಲಿ ಮೀಸಲಾತಿ ಅವಕಾಶ ಕಲ್ಪಿಸಲಾಗಿದೆ.

೯) ಸಂವಿಧಾನದ ೧೫, ೧೬ ಹಾಗೂ ೧೯ನೆ ಅನುಚ್ಛೇದಗಳು ಬುಡಕಟ್ಟುಗಳ ಹಿತಾಸಕ್ತಿ ಹಾಗೂ ಜೀವನವನ್ನು ಕಾಪಾಡುವ ಉದ್ದೇಶವನ್ನು ಹೊಂದಿವೆ.

೧೦) ಸಂವಿಧಾನದ ೫ನೆ ಪಟ್ಟಿ ಭಾಗ ಬಿ ಪ್ಯಾರಾ ೪ರ ಭಾಗವು ಪ್ರತಿಯೊಂದು ರಾಜ್ಯವು ಕಡ್ಡಾಯವಾಗಿ ಬುಡಕಟ್ಟು ಪ್ರದೇಶ ಇರಲಿ ಅಥವಾ ಇಲ್ಲದಿರಲಿ ಆದರೆ ಅನುಸೂಚಿತ ಬುಡಕಟ್ಟುಗಳನ್ನೊಳಗೊಂಡ ಒಂದು ಬುಡಕಟ್ಟು ಸಲಹಾ ಸಮಿತಿಯನ್ನು ರಚಿಸುವ ಅವಕಾಶ ಒದಗಿಸಲಾಗಿದೆ.

೧೧) ಸಂವಿಧಾನದ ಅನುಚ್ಛೇದ ೩೩೮ರ ಪ್ರಕಾರ ಸಂವಿಧಾನದ ಮುಖ್ಯವಾದ ಸವಲತ್ತುಗಳಲ್ಲಿ ಒಂದಾದ ಬುಡಕಟ್ಟುಗಳ ಅಭಿವೃದ್ಧಿಗೆ ಮತ್ತು ಹಿತಾಸಕ್ತಿಗಳಿಗಾಗಿ ವಿಶೇಷ ಆಯುಕ್ತರನ್ನು ನೇಮಿಸಬಹುದು.

### ೪.೫ ಕೌಟುಂಬಿಕ ಸಮಸ್ಯೆಗಳು[೨೨]

ಅವಿಭಕ್ತ ಕುಟುಂಬ ಮತ್ತು ಜಾತಿ ವ್ಯವಸ್ಥೆ ಭಾರತೀಯ ಸಮಾಜದ ಆಧಾರಸ್ತಂಭಗಳು. ಈ ಹಿಂದೆ ಅವಿಭಕ್ತ ಕುಟುಂಬಗಳು 'ಜೀವವಿಮೆ' (Life Insurance)ಯಾಗಿ ಕುಟುಂಬದಲ್ಲಿ ಕಾರ್ಯನಿರ್ವಹಿಸುತ್ತಿದ್ದವು. ಅವಿಭಕ್ತ ಕುಟುಂಬಗಳು ಸ್ವತಂತ್ರ ಘಟಕವಾಗಿದ್ದವು. ತನ್ನ ಸದಸ್ಯರುಗಳ ಬೇಕು-ಬೇಡಿಕೆಗಳನ್ನು ಪೂರೈಸುವ ತಾಣವಾಗಿ ಕಾರ್ಯನಿರ್ವಹಿಸುತ್ತಿದ್ದವು. ನಗರೀಕರಣ, ಕೈಗಾರೀಕರಣ, ನಗರಾಭಿಮುಖ ವಲಸೆ, ಸ್ತ್ರೀ ಶಿಕ್ಷಣ ಅವಿಭಕ್ತ ಕುಟುಂಬದ ಬೇರನ್ನು, ಏಕತೆಯನ್ನು ಅಲ್ಲಾಡಿಸುತ್ತಿವೆ. ಇಂದಿನ ವೃದ್ಧರು ಮತ್ತು ನವ ಯುವಜನಾಂಗದ ನಡುವಿನ ತಲೆಮಾರಿನ ಅಂತರ, ಹಳೆ ಸಂಸ್ಕೃತಿ ಮತ್ತು ಹೊಸ ಸಂಸ್ಕೃತಿ ನಡುವೆ ಉಂಟಾಗುವ ತಾಕಲಾಟ ಇವೆಲ್ಲದರ ಪರಿಣಾಮ ಅವಿಭಕ್ತ ಕುಟುಂಬಗಳು ತಮ್ಮ ಅಸ್ತಿತ್ವವನ್ನು ಕಳೆದುಕೊಳ್ಳುತ್ತಿವೆ. ತಂದೆ-ತಾಯಿ-ಮಕ್ಕಳ ನಡುವೆ ಅಪಹೊಂದಾಣಿಕೆಯು ಕೌಟುಂಬಿಕ ನೆಮ್ಮದಿ ಹಾಳಾಗಲು ಕಾರಣೀಭೂತವಾಗುತ್ತಿದೆ. ಹಿಂದೆ ಕುಟುಂಬಗಳ ಸಾಮಾಜಿಕ ನಿಯಂತ್ರಣದ ಸಂಸ್ಥೆಗಳಾಗಿ ಕಾರ್ಯಟಿರ್ವಹಿಸುತ್ತಿದ್ದವು. ಈಗ ಕೌಟುಂಬಿಕ ಮೌಲ್ಯಗಳು ನಶಿಸತೊಡಗಿವೆ. ಹಿರಿಯರು ಮತ್ತು ಕಿರಿಯರ ನಡುವೆ ಅಪಹೊಂದಾಣಿಕೆ, ಸಾಮರಸ್ಯದ ಕೊರತೆ, ಅನ್ಯೋನ್ಯತೆಯ ಅಭಾವದಿಂದಾಗಿ ಇಂದು ಕುಟುಂಬಗಳು ವಿಘಟನೆಯತ್ತ ಸಾಗುತ್ತಿವೆ. ಕೌಟುಂಬಿಕ ವಿಘಟನೆಗಳು ಅಪರಾಧ, ಬಾಲಾಪರಾಧ, ಆತ್ಮಹತ್ಯೆ, ಯುವಕರಲ್ಲಿ ಅಶಾಂತಿ, ಅನೈತಿಕತೆ, ವಿವಾಹ ಪೂರ್ವ ಲೈಂಗಿಕ ಸಂಬಂಧಗಳು ಉಂಟಾಗಲು ಕಾರಣೀಭೂತವಾಗುತ್ತಿವೆ. ಕೌಟುಂಬಿಕ ಅಭದ್ರತೆ, ಯುವಜನಾಂಗದಲ್ಲಿ ಅಸ್ಥಿರತೆ ಕಂಡುಬರುತ್ತಿದೆ. ಇವು ಇಂದಿನ ಅಣು ಕುಟುಂಬಗಳು (Nuclear family) ಎದುರಿಸುತ್ತಿರುವ ಕೌಟುಂಬಿಕ ಸಮಸ್ಯೆಗಳಾಗಿವೆ. ಇಂತಹ ಸಮಸ್ಯೆಗಳು ಬೃಹತ್ ನಗರಗಳಲ್ಲಿ ಹಾಸುಹೊಕ್ಕಾಗಿದ್ದರೂ ಇನ್ನೂ ಗ್ರಾಮೀಣ ಸಮಾಜ ಮತ್ತು ಬುಡಕಟ್ಟು ಸಮಾಜದಲ್ಲಿ ಸಮಸ್ಯೆಯ ಗಂಭೀರತೆ ಅಷ್ಟೊಂದು ಕಂಡುಬರುವುದಿಲ್ಲ. ಇತರ ಬುಡಕಟ್ಟುಗಳಂತೆ ಗೌಳಿಗರೂ ಕೂಡಾ ತಮ್ಮ ಜೈವಿಕತೆ ಪ್ರತ್ಯೇಕತೆಯನ್ನು ಕಾಯ್ದುಕೊಂಡು ಬದುಕುತ್ತಿರುವ ಒಂದು ಬುಡಕಟ್ಟು ಸಮುದಾಯ. ಇವರು ನಗರಜೀವನ ಹಾಗೂ ನಾಗರಿಕ ಸಮಾಜದಿಂದ ದೂರವಿರುವಂಥ ಅಡವಿಗಳಲ್ಲಿ ವಸತಿಯನ್ನು ನಿರ್ಮಿಸಿಕೊಂಡು ಪ್ರತ್ಯೇಕವಾಗಿ ಜೀವಿಸುತ್ತಾರೆ. ಇವರ ಸಾಮಾಜಿಕ ಪ್ರತ್ಯೇಕತೆಯಿಂದಾಗಿ ಇವರು ಇತರ ಬುಡಕಟ್ಟು ಸಮೂಹಗಳೊಂದಿಗೆ ಬೆರೆಯಲು ಅವಕಾಶವಿಲ್ಲವಾಗಿದೆ. ಇವರಲ್ಲಿ ರೂಢಿಯಲ್ಲಿರುವ ಒಳಬಾಂಧವ್ಯ ಹಾಗೂ ಬಾಲ್ಯವಿವಾಹ, ವಿಧವಾ ವಿವಾಹ ಪದ್ಧತಿಗಳಿಂದಾಗಿ ಬಾಹ್ಯ ಸಂಪರ್ಕಕ್ಕೆ ಅವಕಾಶ ಇನ್ನೂ ಕಡಿಮೆ ಆಗುತ್ತದೆ. ಇದರಿಂದ ಉಂಟಾಗುವ ವಿವಿಧ ಸಮಸ್ಯೆಗಳ ಕುರಿತು ಕೂಡಾ ಅವರು ಚಿಂತಿಸುವುದಿಲ್ಲ. ಬಹುಪತ್ನಿತ್ವ ಪದ್ಧತಿ ಇವರಲ್ಲಿ ಇಂದಿಗೂ ರೂಢಿಯಲ್ಲಿದೆ. ಒಬ್ಬ ಪತ್ನಿ ಜೀವಿಸಿರುವಾಗಲೇ ಇನ್ನೂ ಒಬ್ಬ ಅಥವಾ ಇಬ್ಬರು ಸ್ತ್ರೀಯರನ್ನು ವಿವಾಹವಾಗಲು ಕೆಲವೇ ಶಿಥಿಲವಾದ ನಿರ್ಬಂಧಗಳಿವೆ. ಇವರು ಮುಗ್ಧರು, ಅನಕ್ಷರಸ್ಥರೂ ಆಗಿರುವುದರಿಂದ ಕೆಲವೊಂದು ಮೂಢನಂಬಿಕೆಗಳನ್ನು ಉಳಿಸಿಕೊಂಡು, ಬೆಳೆಸಿಕೊಂಡು ಬರುತ್ತಾ

ಅಮಾನುಷ ಸಂಪ್ರದಾಯಗಳಿಗೆ ಬಲಿಯಾಗುತ್ತಿದ್ದಾರೆ. ಉದಾ: ಋತುಮತಿ ವೇಳೆ ಬೇರೆ ಗುಡಿಸಲಿನಲ್ಲಿ ವಾಸ, ಗರ್ಭಿಣಿ ಸ್ತ್ರೀ ಹಾಗೂ ಮಗುವನ್ನು ಹೆತ್ತ ಸ್ತ್ರೀಯನ್ನು ಗುಡಿಸಿಲಿನಿಂದ ಬಹುದೂರ ಇನ್ನೊಂದು ಗುಡಿಸಿನಲ್ಲಿ ಒಂಟಿಯಾಗಿ ಬಿಡುವುದು, ಮೈಲಿಗೆ, ಸೂತಕ ಆಚರಿಸುವುದು, ರೋಗ ರುಜಿನಗಳಿಗೆ ಮಾಟ-ಮದ್ದುಗಳಿಂದ ಪರಿಹಾರ ಹುಡುಕುವುದು ಇತ್ಯಾದಿ. ಇದಲ್ಲದೇ ವಧುದಕ್ಷಿಣೆ, ಮಾಟ-ಮಂತ್ರಗಳಲ್ಲಿ ನಂಬಿಕೆ, ಮಹಿಳೆಯರ ಮೇಲೆ ದೌರ್ಜನ್ಯ, ಕೌಟುಂಬಿಕ ವಿಷಯಗಳಲ್ಲಿ ಮಹಿಳೆಯರಿಗೆ ನಿರ್ಧಾರಕ ಪಾತ್ರವಿಲ್ಲದೇ ಇರುವುದು ಇತ್ಯಾದಿ ಗಂಭೀರವಾದ ಸಮಸ್ಯೆಗಳೇ ಆಗಿವೆ.

**ವೃದ್ಧರು**[೨೩]

ವೃದ್ಧರು ಅಂದರೆ ವಯಸ್ಸಾದವರು, ಹಿರಿಯರು, ಹಿರಿಯ ವಯೋಗುಂಪಿನವರು, ಹಿರಿಯ ನಾಗರಿಕರು, ೬೦ ವರ್ಷ ಮತ್ತು ಅದಕ್ಕೂ ಹೆಚ್ಚಿನ ವಯಸ್ಸಿನ ಜನರಿಗೆ ವೃದ್ಧರು ಎನ್ನುವ ಪದ ಅನ್ವಯಿಸುತ್ತದೆ. ಭಾರತದಲ್ಲಿ ವೃದ್ಧರ ಸಂಖ್ಯೆಯು ನಿರಂತರವಾಗಿ ಹೆಚ್ಚುತ್ತಿದೆ. ಸನ್ ೧೯೦೧ರಲ್ಲಿ ೧೨.೦೬ ದಶಲಕ್ಷದಷ್ಟಿದ್ದ ವೃದ್ಧರ ಸಂಖ್ಯೆಯು ಸನ್ ೨೦೦೧ರಲ್ಲಿ ೭೫.೯೩ ದಶಲಕ್ಷಕ್ಕೇರಿದೆ. ಈ ಕೆಳಗೆ ಕಾಣಿಸಿದ ಕೋಷ್ಟಕವು ಸನ್ ೧೯೦೧ ರಿಂದ ೨೦೦೧ರವರೆಗೆ ಭಾರತದ ವಯಸ್ಸಾದ ಜನರ ಸಂಖ್ಯಾ ಬೆಳವಣಿಗೆಯ ಗತಿಯನ್ನು ಸೂಚಿಸುತ್ತದೆ.

**ಕೋಷ್ಟಕ ೪.೮**

**ಭಾರತದಲ್ಲಿ ೬೦ ವರ್ಷ ಮತ್ತು ನಂತರದ ವಯಸ್ಸಾದ ಜನಸಂಖ್ಯೆಯ ಬೆಳವಣಿಗೆ**

| ಸನ್ ೧೯೦೧-೨೦೦೧ | ೬೦+ಜನಸಂಖ್ಯೆ (ದಶಲಕ್ಷಗಳಲ್ಲಿ) | | |
|---|---|---|---|
| ವರ್ಷ | ಜನರು | ಪುರುಷ | ಮಹಿಳೆ |
| ೧೯೦೧ | ೧೨.೦೬ | ೫.೫೦ | ೬.೫೬ |
| ೧೯೧೧ | ೧೩.೧೭ | ೬.೧೮ | ೬.೯೯ |
| ೧೯೨೧ | ೧೩.೪೮ | ೬.೪೮ | ೭.೦೦ |
| ೧೯೩೧ | ೧೪.೨೧ | ೬.೯೪ | ೭.೨೭ |
| ೧೯೪೧ | ೧೮.೦೪ | ೮.೮೯ | ೯.೧೫ |
| ೧೯೫೧ | ೧೯.೬೧ | ೯.೬೭ | ೯.೯೪ |
| ೧೯೬೧ | ೨೪.೭೧ | ೧೨.೩೬ | ೧೨.೩೫ |
| ೧೯೭೧ | ೩೨.೭೦ | ೧೬.೮೭ | ೧೫.೮೩ |
| ೧೯೮೧ | ೪೩.೯೮ | ೨೨.೪೯ | ೨೧.೪೯ |
| ೧೯೯೧ | ೫೫.೩೦ | ೨೮.೨೩ | ೨೭.೦೭ |
| ೨೦೦೧ | ೭೫.೯೩ | ೩೮.೨೨ | ೩೭.೭೧ |

**ಆಧಾರ:** Sharma S.P. & Peter Xenos, Aging in India Demographic Background and Analysis Based on Census Materials, Occational paper No. 2 of 1992, office of the Registrar General & Census Commissioner India, New-Delhi. 3.27

ಮೇಲಿನ ಕೋಷ್ಟಕವನ್ನು ಗಮನಿಸಿದರೆ ವಯಸ್ಸಾದ ಜನರ ಸಂಖ್ಯೆ ಪ್ರಮಾಣವು ನಿರಂತರವಾಗಿ ಹೆಚ್ಚುತ್ತಿದೆ ಎಂಬುದು ಸ್ಪಷ್ಟವಾಗುತ್ತದೆ. ವೃದ್ಧರ ಸಮಸ್ಯೆಯು ಸಾರ್ವತ್ರಿಕವಾದುದು. ದೈಹಿಕವಾಗಿ ಅಷ್ಟೊಂದು ಸಮಸ್ಯೆ ಅನಿಸಲಿಕ್ಕಿಲ್ಲ. ಆದರೆ ವೃದ್ಧಾಪ್ಯದ ಸಹಜವಾದ ದೈಹಿಕ ಕ್ಷೀಣತೆ, ಆರ್ಥಿಕ ದುರ್ಬಲತೆ ಹಲವಾರು ಸಮಸ್ಯೆಗಳನ್ನು ತರಬಹುದು. ವೃದ್ಧರ ಸಮಸ್ಯೆಗಳು ಸ್ಥೂಲವಾಗಿ ಸಾಮಾಜಿಕ, ಆರ್ಥಿಕ, ಮಾನಸಿಕ ಮತ್ತು ಶಾರೀರಕ ಸ್ವರೂಪದವುಗಳಾಗಿವೆ.

ಕೈಗಾರೀಕರಣ, ನಗರೀಕರಣ, ಯಾಂತ್ರೀಕರಣ, ಶಿಕ್ಷಣ, ನಗರದ ಅಕರ್ಷಣೀಯ ಜೀವನ, ಗ್ರಾಮೀಣ ಮತ್ತು ಆದಿವಾಸಿ ಜನರು ನಗರಾಭಿಮುಖ ವಲಸೆ ಹೋಗಲು ಪ್ರೇರೇಪಿಸುತ್ತಿವೆ. ಈ ಪರಿಣಾಮಗಳಿಂದಾಗಿ ಅವಿಭಕ್ತ ಕುಟುಂಬಗಳು ನಶಿಸುತ್ತಿವೆ. ಇವೆಲ್ಲದರ ಪರಿಣಾಮ ಬುಡಕಟ್ಟುಗಳ ಸಾಮಾಜಿಕ, ಕೌಟುಂಬಿಕ ಜೀವನದ ಮೇಲೂ ಉಂಟಾಗುತ್ತಿದೆ. ಅವಿಭಕ್ತ ಕುಟುಂಬಗಳು ಕ್ಷೀಣಿಸತೊಡಗಿದಂತೆ ವೃದ್ಧರ ರಕ್ಷಣೆಗೆ ಧಕ್ಕೆಯಾಗತೊಡಗಿದೆ. ಆಧುನಿಕ ಯುವಕರ/ಯುವತಿಯರ ಹೊಸ ವಿಚಾರಗಳು ವೃದ್ಧರ ಮಾನಸಿಕ ಸ್ಥಿತಿ ಅಸಮತೋಲನಗೊಳ್ಳಲು ಕಾರಣವಾಗುತ್ತವೆ. ತಲೆಮಾರಿನ ಅಂತರದಿಂದಾಗಿ ಇಂದಿನ ಯುವ ಜನತೆಯ ಜೊತೆ ವೃದ್ಧರ ಹೊಂದಾಣಿಕೆಯ ಸಮಸ್ಯೆ ಕಂಡುಬರುತ್ತಿದೆ. ವೃದ್ಧರು ಆರ್ಥಿಕ ಮತ್ತು ಮಾನಸಿಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ವೃದ್ಧರು ಪರಾವಲಂಬಿ ಬದುಕನ್ನು ಹೊಂದುವುದು ಅನಿವಾರ್ಯವಾಗಿದೆ. ವೃದ್ಧರಲ್ಲಿ ಹತಾಶೆ, ಜಿಗುಪ್ಸೆ, ಏಕಾಂಗಿತನ, ತಾತ್ಸಾರ ಇವುಗಳಿಂದ ಬಳಲುವ ಸ್ಥಿತಿ ಅಧಿಕವಾಗಿದೆ. ಆರೋಗ್ಯದ ಸಮಸ್ಯೆಯು ಸಹಜವಾದುದು. ನ್ಯೂಮೋನಿಯಾ, ಮೂತ್ರ ಜನಕಾಂಗ ಕಾಯಿಲೆ, ಸಕ್ಕರೆ ರೋಗ, ರಕ್ತದೊತ್ತಡ, ದೈಹಿಕ ನೋವು, ಅಶಕ್ತತೆ ಇವುಗಳಿಂದ ಬಳಲುವುದು ಕಂಡುಬರುತ್ತದೆ. ವೃದ್ಧರು ಬಿಡುವಿನ ವೇಳೆಯಲ್ಲಿ ಮಾತುಕತೆ ಆಡಲು, ತಮ್ಮ ಭಾವನೆಗಳನ್ನು ಹಂಚಿಕೊಳ್ಳಲು ಇಷ್ಟಪಡುತ್ತಾರೆ. ಆದರೆ ಕುಟುಂಬದ ಯುವ ಜನರು ಮತ್ತು ಮಧ್ಯಮ ವಯಸ್ಸಿನ ಜನರು ಕೆಲಸದಲ್ಲಿ ನಿರತರಾಗಿದ್ದು, ಕುಟುಂಬದ ಸದಸ್ಯರಿಗೆ ವೇಳೆ ಸಿಗುವುದಿಲ್ಲ ಅಥವಾ ವೃದ್ಧರ ಜೊತೆ ಸಮಯ ಕಳೆಯಲು ಇಷ್ಟಪಡುವುದಿಲ್ಲ. ಇಂತಹ ಪರಿಸ್ಥಿತಿಯಿಂದಾಗಿ ವೃದ್ಧರು ಮಾನಸಿಕವಾಗಿ ನೊಂದುಕೊಂಡು 'ನಾವು ಯಾರಿಗೂ ಬೇಡವಾದ ವ್ಯಕ್ತಿಗಳು' ಎಂದು ನೋವನ್ನು ಅನುಭವಿಸುತ್ತಾರೆ.

ಗೌಳಿ ಸಮುದಾಯದಲ್ಲಿ ಅನೇಕ ವೃದ್ಧರನ್ನು ಸಂದರ್ಶಿಸಿದಾಗ ಸಾಮಾಜಿಕ, ಆರ್ಥಿಕ, ಮಾನಸಿಕ ಸಮಸ್ಯೆಗಳಿಗಿಂತ ಹೆಚ್ಚಾಗಿ ವೃದ್ಧರು ಆರೋಗ್ಯ ಸಮಸ್ಯೆಯಿಂದ ಬಳಲುವುದೇ ಹೆಚ್ಚಾಗಿ ಕಂಡುಬಂದಿತು. ವಯೋವೃದ್ಧ ಸಹಜತೆಗೆ ಅನುಗುಣವಾಗಿ ದೈಹಿಕ ದುರ್ಬಲತೆ, ಅನಾರೋಗ್ಯ, ಸಂಧಿವಾತ, ಕೀಲುನೋವು, ಅಧಿಕ ರಕ್ತದ ಒತ್ತಡ, ಅಧಿಕ ಮೂತ್ರ, ಸಕ್ಕರೆ ರೋಗ ಇವುಗಳಿಂದ ಬಳಲುವವರ ಸಂಖ್ಯೆ ಅಧಿಕವಾಗಿ ಕಂಡುಬಂದಿತು. ಕೈಗಾರೀಕರಣ, ನಗರೀಕರಣದ ಪ್ರಭಾವ ಗೌಳಿ ಸಮುದಾಯದ ಮೇಲೆ ಗಾಢವಾದ ಪ್ರಭಾವ ಬೀರದೇ ಇರುವುದರಿಂದ ಅವಿಭಕ್ತ ಕುಟುಂಬದ ಮೇಲೆ ಹೆಚ್ಚಿನ ಪರಿಣಾಮ ಕಂಡುಬಂದಿಲ್ಲ. ನಾನು ಕ್ಷೇತ್ರಕಾರ್ಯ ಕೈಗೊಂಡಾಗ ವೃದ್ಧರು ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆಯೇ ಎಂಬ ಪ್ರಶ್ನೆಗೆ ೧೩೭ ಜನ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ ಎಂಬ ಉತ್ತರ ನೀಡಿದರೆ, ೬೩ ಜನ ಸಮಸ್ಯೆಗಳನ್ನು ಎದುರಿಸುತ್ತಿಲ್ಲ ಎಂದು ಉತ್ತರಿಸಿದ್ದಾರೆ. ಆಧುನಿಕತೆಯ ಪ್ರಭಾವ ಈ ಸಮುದಾಯದ ಮೇಲೆ ಆಗುತ್ತಿದ್ದರೂ

ಕುಟುಂಬ ಮತ್ತು ವಿವಾಹ ಸಂಪೂರ್ಣವಾಗಿ ಪರಿವರ್ತನೆ ಹೊಂದುವಷ್ಟರ ಮಟ್ಟಿಗೆ ಆಗಿಲ್ಲವೆಂದು ನನ್ನ ಕ್ಷೇತ್ರ ಕಾರ್ಯ ಅನುಭವದಿಂದ ಹೇಳಬಹುದು.

ವೃದ್ಧರ ಸಮಸ್ಯೆಗಳನ್ನು ವ್ಯಕ್ತಿ, ಸಮಾಜ, ಸರಕಾರ, ಸರಕಾರೇತರ ಸಂಸ್ಥೆಗಳು (N.G.O) ಅರಿತುಕೊಳ್ಳುವುದು ಅವಶ್ಯ. ವೃದ್ಧರ ಬಗ್ಗೆ ಯುವ ಜನರಿಗೆ ತಿಳುವಳಿಕೆ ಮೂಡಿಸುವ ಕಾರ್ಯಕ್ರಮಗಳ ಅಗತ್ಯತೆಯಿದೆ. ವೃದ್ಧರಿಗೆ ಆರೋಗ್ಯ ತಪಾಸಣಾ ಕೇಂದ್ರ ಸ್ಥಾಪಿಸುವುದು, ಉಚಿತವಾಗಿ ಔಷಧೋಪಚಾರ ಒದಗಿಸುವುದು ಸರಕಾರದ ಆದ್ಯ ಕರ್ತವ್ಯವಾಗಿದೆ. ಬುಡಕಟ್ಟು ಸಮುದಾಯದ ವೃದ್ಧರಿಗೆ ವೃದ್ಧಾಪ್ಯ ವೇತನ ತಲುಪುವ ವ್ಯವಸ್ಥೆ ಹಾಗೂ ಎಲ್ಲ ರೀತಿಯ ನೆರವು ದೊರಕುವಂತೆ ಸರಕಾರದ ಕಾರ್ಯಕ್ರಮಗಳು ಅನುಷ್ಠಾನಗೊಳ್ಳುವಂತೆ ಕ್ರಮ ಕೈಕೊಳ್ಳಬೇಕು.

ವೃದ್ಧರ ಯೋಗಕ್ಷೇಮಕ್ಕಾಗಿ 'ವೃದ್ಧರಿಗಾಗಿ ರಾಷ್ಟ್ರೀಯ ನೀತಿ', 'ವೃದ್ಧರಿಗಾಗಿ ರಾಷ್ಟ್ರೀಯ ಪರಿಷತ್ತು' ಈ ಕಾರ್ಯಯೋಜನೆಯು ಆದಿವಾಸಿ ಪ್ರದೇಶಗಳಲ್ಲೂ ವಿಸ್ತಾರಗೊಳ್ಳಬೇಕು. 'ವೃದ್ಧರ ಕಲ್ಯಾಣ ಯೋಜನೆ' ಸನ್ ೧೯೯೨-೯೩ರಲ್ಲಿ ಜಾರಿಗೆ ಬಂದಿದೆ. ವೃದ್ಧಾಶ್ರಮಗಳು ಮತ್ತು ದಿನಪೋಷಣೆ ಕೇಂದ್ರಗಳು ವೃದ್ಧರಿಗೆ ಒದಗಿಸುವ ಸಂಸ್ಥೆಗಳಿಗೆ ೯೦% ಪ್ರಮಾಣದಲ್ಲಿ (ಬುಡಕಟ್ಟು ಪ್ರದೇಶಗಳಲ್ಲಿ ೯೫%) ಈ ನೆರವನ್ನು ನೀಡಲಾಗುತ್ತದೆ. ಇದರ ಸದುಪಯೋಗವನ್ನು ಬುಡಕಟ್ಟು ಯುವಕರು ತಮ್ಮ ವೃದ್ಧರಿಗೆ ಒದಗಿಸುವುದರಲ್ಲಿ ನೆರವಾಗಬೇಕು.

**೪.೬. ವೈವಾಹಿಕ ಸಮಸ್ಯೆಗಳು**

ವಿವಾಹವು ಜಗತ್ತಿನಾದ್ಯಂತ ಅಸ್ತಿತ್ವದಲ್ಲಿರುವ ಒಂದು ಪ್ರಮುಖವಾದ ಹಾಗೂ ಸಾರ್ವತ್ರಿಕ ಸ್ವರೂಪದ ಸಾಮಾಜಿಕ ಸಂಸ್ಥೆ. ವಿವಾಹವು ಮಾನವ ಸಮಾಜ ವಿಕಸಿಸಿದ ಎಲ್ಲ ಸಮಾಜಿಕ ಸಂಸ್ಥೆಗಳಲ್ಲಿಯೇ ಪ್ರಮುಖವಾದುದು. ಮಾನವನ ಸಂಸ್ಕೃತಿ ಎಷ್ಟು ಪ್ರಾಚೀನವೋ ವಿವಾಹವೂ ಅಷ್ಟೇ ಪ್ರಾಚೀನವಾದುದು. ಪ್ರಬುದ್ಧ ಸ್ತ್ರೀ-ಪುರುಷರನ್ನು ಸುಧೀರ್ಘ ಕಾಲದವರೆಗೆ ಒಟ್ಟಾಗಿ ಬೆಸೆಯುವ ವಿವಾಹ ಮಾನವ ಸಮಾಜದಲ್ಲಿ ತನ್ನದೇ ಆದ ಮಹತ್ವದ ಕಾರ್ಯಗಳನ್ನು ನಿರ್ವಹಿಸುತ್ತದೆ. ಅಂದರೆ ಮಾನವನ ಜೈವಿಕ, ಸಾಮಾಜಿಕ, ಮಾನಸಿಕ ಅಗತ್ಯತೆಯನ್ನು ಪೂರೈಸುತ್ತದೆ. ಬಂಧು-ಬಳಗ ಹಾಗೂ ಹಿರಿಯರ ಸಮ್ಮುಖದಲ್ಲಿ ಧಾರ್ಮಿಕ ಕ್ರಿಯಾವಿಧಿಗಳನ್ನು ಅನುಸರಿಸಿಯಾದ ವಿವಾಹದ ಮೂಲಕ ಸ್ತ್ರೀ-ಪುರುಷ ಸಂಬಂಧಕ್ಕೆ ಸಾಮಾಜಿಕ ಮಾನ್ಯತೆ ದೊರಕುವುದರಿಂದ ವಿವಾಹಕ್ಕೆ ಮಹತ್ವ ಬಂದಿದೆ ಹಾಗೂ ಒಂದು ಸಾಮಾಜಿಕ ಸಂಸ್ಥೆ ಎಂದು ಗುರುತಿಸಲಾಗಿದೆ. 'ಲೈಂಗಿಕ ಬಯಕೆಯ ಪೂರೈಕೆ, ಸಂತಾನೋತ್ಪತ್ತಿ, ಶಿಶುಗಳ ಪಾಲನೆ-ಪೋಷಣೆಗಾಗಿ ಸ್ತ್ರೀ-ಪುರುಷರ ನಡುವೆ ಶಾಶ್ವತ ಸಂಬಂಧ ರೂಪದಲ್ಲಿ ಏರ್ಪಟ್ಟ ಸಾಮಾಜಿಕ ಮಾನ್ಯತೆಯನ್ನು ಪಡೆದ ವ್ಯವಸ್ಥೆಯೇ ವಿವಾಹ'. ವಿವಾಹವು ಕೇವಲ ಲೈಂಗಿಕ ಸಂಬಂಧ, ಸಂತಾನೋತ್ಪತ್ತಿಗೆ ಸೀಮಿತವಾಗಿರದೇ ವಿವಾಹಕ್ಕೆ ತನ್ನದೇ ಆದ ಇತರ ಭಾವನಾತ್ಮಕ, ಸಾಮಾಜಿಕ ಮತ್ತು ಆರ್ಥಿಕ ಜವಾಬ್ದಾರಿಗಳೂ ಇವೆ. ಮಾನವ ಸಮಾಜದ ಮೂಲಭೂತ ಘಟಕವಾದ ಕುಟುಂಬದ ಸ್ಥಾಪನೆಗೆ ವಿವಾಹವೇ ಕಾರಣೀಭೂತವಾದುದು. ಆದ್ದರಿಂದ ಕುಟುಂಬವೆಂಬ ಕಟ್ಟಡಕ್ಕೆ ವಿವಾಹವೇ ಮಹಾದ್ವಾರ.[೨೪]

ಕಾಲ, ದೇಶ ಮತ್ತು ಪರಿಸ್ಥಿತಿಗಳಿಗನುಸಾರವಾಗಿ ವಿವಾಹದ ಪದ್ಧತಿ ಮತ್ತು ಪ್ರಕಾರಗಳಲ್ಲಿ ವೈವಿಧ್ಯತೆ ಕಾಣಬರುವುದು. ಆದಾಗ್ಯೂ ಹಲವಾರು ಅಧ್ಯಯನಗಳ ಹಾಗೂ ಸಮೀಕ್ಷೆಗಳ ಆಧಾರಗಳ ಮೇಲೆ ವಿವಾಹವು ಬಹುವಿವಾಹ (ಬಹುಪತ್ನಿತ್ವ ಅಥವಾ ಬಹುಪತಿತ್ವ), ಏಕಪತ್ನಿತ್ವ ವಿವಾಹ ಹಾಗೂ ಸಮೂಹ ವಿವಾಹ ಎಂಬ ಮೂರು ಮುಖ್ಯ ಪ್ರಕಾರಗಳಲ್ಲಿ ಆಚರಣೆಯಲ್ಲಿದೆಯಾದರೂ ಜಗತ್ತಿನಾದ್ಯಂತ ಏಕಪತ್ನಿತ್ವ ವಿವಾಹಕ್ಕೆ ಅತ್ಯಂತ ಹೆಚ್ಚಿನ ಮನ್ನಣೆ ದೊರತಿದೆ.

ಗೌಳಿ ಸಮುದಾಯದಲ್ಲಿ ವಿವಾಹದ ಬಗ್ಗೆ ಪವಿತ್ರವಾದ ಭಾವನೆ ಇದೆ. ಸ್ವಕುಳಿ ಮತ್ತು ಸೋದರ ಕುಳಿಗಳಲ್ಲಿ ವಿವಾಹ ನಿಷಿದ್ಧ. ವಧುದಕ್ಷಿಣೆ ರೂಢಿಯಲ್ಲಿದೆ. ಗೌಳಿ ಸಮುದಾಯದಲ್ಲಿ ಬಾಲ್ಯವಿವಾಹ, ವಿಧವಾ ವಿವಾಹ ಹಾಗೂ ಬಹುಪತ್ನಿತ್ವ ರೂಢಿಯಲ್ಲಿವೆ. ತೊಟ್ಟಿಲಲ್ಲಿರುವ ಹೆಣ್ಣು ಕೂಸಿಗೆ ವಿವಾಹ ಮಾಡುವ ರೂಢಿ ಇದ್ದ ಬಗ್ಗೆ ಕೆಲವರು ಹೇಳುತ್ತಾರಾದರೂ ಈಗ ಅದು ರೂಢಿಯಲ್ಲಿಲ್ಲ. ಹೆಣ್ಣು ಋತುಮತಿಯಾಗುವ ಪೂರ್ವದಲ್ಲಿಯೇ ಅವಳ ವಿವಾಹ ಮಾಡುವುದು ವಾಡಿಕೆ. ೭ರಿಂದ ೧೪ ವರ್ಷ ಪ್ರಾಯದ ಮಕ್ಕಳಿಗೆ ಬಾಲ್ಯ ವಿವಾಹ ಮಾಡುವುದು ರೂಢಿಯಲ್ಲಿತ್ತು. ವಿಧವೆಯಾದವಳನ್ನು ವಿವಾಹವಾಗುವ ಸೀರುಡಿಕೆ ಪದ್ಧತಿ ರೂಢಿಯಲ್ಲಿದೆ. ಅಕ್ಕ-ತಂಗಿಯರನ್ನು ಒಬ್ಬನೆ ಪುರುಷ ವಿವಾಹವಾಗಬಹುದು. ಒಬ್ಬ ಪುರುಷ ನಾಲ್ಕು ವಿವಾಹವಾಗುವ ಅವಕಾಶವಿದೆ. ನಾಲ್ಕನೇ ವಿವಾಹಕ್ಕೆ 'ಪಾಟ್' ಎಂದು ಕರೆಯುತ್ತಾರೆ. ಪುರುಷ ತನ್ನ ಹೆಂಡತಿ ತೀರಿಕೊಂಡಾಗ ಅವಿವಾಹಿತ ಹೆಣ್ಣನ್ನು ವಿವಾಹವಾಗಬಹುದು. ಇಂಥಹ ಎರಡನೇ ವಿವಾಹವನ್ನು 'ಬಿಪ್ಯೋರ್' ಎಂದು ಕರೆಯುತ್ತಾರೆ. ಗಂಡ ಹೆಂಡತಿ ಬದುಕಿರುವಾಗಲೇ ಗಂಡುಮಗು ಹುಟ್ಟಲಿಲ್ಲ ಅಥವಾ ಮಕ್ಕಳಾಗಲಿಲ್ಲ ಎಂಬ ಕಾರಣಕ್ಕೆ ಎರಡನೆ ಮದುವೆಯಾದರೆ ಅದನ್ನು 'ಗ್ಯಾಟ್' ಎಂದು ಕರೆಯುತ್ತಾರೆ.

ಗೌಳಿಗರಲ್ಲಿ ಬಾಲ್ಯವಿವಾಹ, ಬಹುಪತ್ನಿತ್ವ ವಿವಾಹಗಳು ವೈವಾಹಿಕ ಸಮಸ್ಯೆಗಳಿಗೆ ಕಾರಣೀಭೂತ ವಾಗಿವೆ. ಬಾಲ್ಯ ವಿವಾಹ ವ್ಯವಸ್ಥೆಯಲ್ಲಿ ೭ರಿಂದ ೧೪ ವರ್ಷ ಪ್ರಾಯದ ಮಕ್ಕಳು ವಿವಾಹವೆಂಬ ಬಂಧನದೊಳಗೆ ತಳ್ಳಲ್ಪಟ್ಟು ಜೀವನವಿಡಿ ಅದರ ದುಷ್ಪರಿಣಾಮಗಳನ್ನು ಎದುರಿಸಬೇಕಾಗಿ ಬರುವುದು. ದೈಹಿಕವಾಗಿ, ಬೌದ್ಧಿಕವಾಗಿ ವಿಕಸನ ಹೊಂದದ ಮಕ್ಕಳು ವಿವಾಹವೆಂಬ ಜವಾಬ್ದಾರಿಯನ್ನು ಹೊರಲು ಅಸಮರ್ಥರಾಗಿರುತ್ತಾರಾದ್ದರಿಂದ ಇದರ ಪರಿಣಾಮವಾಗಿ ದೈಹಿಕ ನಿಶ್ಯಕ್ತತೆ, ಮಾನಸಿಕ ದೌರ್ಬಲ್ಯ ಮುಂತಾದ ಸಮಸ್ಯೆಗಳನ್ನು ಎದುರಿಸಬೇಕಾಗುವುದು.

ಇನ್ನು ಚಿಕ್ಕ ವಯಸ್ಸಿನಲ್ಲೇ ಆಡಿ, ಓದಿ ಬೆಳೆಯಬೇಕಾದ ಹೆಣ್ಣುಮಕ್ಕಳನ್ನು ಬಾಲ್ಯವಿವಾಹದ ಮೂಲಕ ಸಂಸಾರವೆಂಬ ಚಕ್ಕಡಿಯ ನೊಗಕ್ಕೆ ಕಟ್ಟಿಹಾಕಿ, ಶಿಕ್ಷಣದಿಂದ ವಂಚಿಸಿ ಅಂಧಃಕಾರದಲ್ಲಿ ನೂಕುವುದರಿಂದ ಅವರು ಜೀವನವಿಡಿ ಅನೇಕ ಸಂಕಷ್ಟಗಳನ್ನು ಅನುಭವಿಸಬೇಕಾಗುತ್ತದೆ. ಅಪ್ರಾಪ್ತ ವಯಸ್ಸಿನಲ್ಲೇ ವಿವಾಹವಾಗುವ ಹೆಣ್ಣುಮಕ್ಕಳು ಎಳೆಯ ವಯಸ್ಸಿನಲ್ಲಿಯೇ ತಾಯಿತನದ ಜವಾಬ್ದಾರಿಯನ್ನು ಪದೇ ಪದೇ ಹೊರಬೇಕಾಗುತ್ತದೆ. ಇದರಿಂದ ಅವರ ಆರೋಗ್ಯದ ಮೇಲೆ ದುಷ್ಪರಿಣಾಮ ಉಂಟಾಗಿ ರಕ್ತಹೀನತೆ, ದೈಹಿಕ ಕ್ಷೀಣತೆ, ಮಾನಸಿಕ ದೌರ್ಬಲ್ಯ ಮುಂತಾದ ತೊಂದರೆಗಳಿಗೆ ಬಲಿಯಾಗಬೇಕಾಗುತ್ತದೆ. ಪದೇ ಪದೇ ಗರ್ಭಧಾರಣೆ, ಮಕ್ಕಳ ಪಾಲನೆ-ಪೋಷಣೆಯ ಜವಾಬ್ದಾರಿ, ಮನೆಯಲ್ಲಿ ಅವಿರತ

ದುಡಿಮೆ–ಇದೊಂದು ವಿಷವರ್ತುಲ. ಈ ವಿಷವರ್ತುಲದೊಳಗೆ ಸಿಲುಕಿದ ಅನೇಕ ಸ್ತ್ರೀಯರು ತಮ್ಮ ಹೆಣ್ಣುಮಕ್ಕಳ ವಿಚಾರದಲ್ಲೂ ಇದೇ ತಪ್ಪನ್ನು ಮರುಕಳಿಸುವುದು ಶೋಚನೀಯ ಸಂಗತಿ. ಬಡ ಕುಟುಂಬಗಳಲ್ಲಂತೂ ದೈಹಿಕ–ಮಾನಸಿಕ ತೊಂದರೆಗಳೊಡನೆ ಅಪೌಷ್ಠಿಕತೆ, ಅನಾರೋಗ್ಯಗಳೂ ಸೇರಿ ಸಮಸ್ಯೆಗಳನ್ನು ಇನ್ನಷ್ಟು ಉಲ್ಬಣಗೊಳಿಸುತ್ತದೆ. ಅಲ್ಲದೇ ಶರವೇಗದಲ್ಲಿ ಏರುತ್ತಿರುವ ಭಾರತದ ಜನಸಂಖ್ಯೆಯ ಹೆಚ್ಚಳಕ್ಕೆ ಇಂತಹ ಬಾಲ್ಯವಿವಾಹಗಳು ಪೂರಕವಾಗುತ್ತಿವೆ. ಬಾಲ್ಯವಿವಾಹಕ್ಕೆ ಬಲಿಯಾದ ಹೆಣ್ಣುಮಕ್ಕಳಿಗೆ ಇಂತಹ ಕ್ರೂರ ಭವಿಷ್ಯವಿದೆ ಎಂಬುದನ್ನು ಇಲ್ಲಿ ಮನಗಾಣಬಹುದು. ಅಪ್ರಾಪ್ತ ವಯಸ್ಸಿನ ಹೆಣ್ಣುಮಕ್ಕಳ ವಿವಾಹಗಳು ಸೃಷ್ಟಿಸುವ ಸಮಸ್ಯೆಗಳು ಇಂದು ದೇಶದಾದ್ಯಂತ ಮಹಿಳಾ ಅಭಿವೃದ್ಧಿಗೆ ಒಂದು ಬೃಹತ್ ಸವಾಲನ್ನೊಡ್ಡಿವೆ.  ಹೀಗೆ ಬಾಲ್ಯವಿವಾಹ ಮಕ್ಕಳ ಆರೋಗ್ಯ ದೃಷ್ಟಿಯಿಂದ ಹಾಗೂ ಸಮುದಾಯದ ಆರೋಗ್ಯ ದೃಷ್ಟಿಯಿಂದ ಹಾನಿಕಾರಕ ಅಂಶವಾಗಿದೆ.[೨೫]

ಆಧುನಿಕತೆಯ ಪ್ರಭಾವದಿಂದ ಬಾಲ್ಯವಿವಾಹ ಈಗ ಗೌಳಿ ಸಮುದಾಯದಲ್ಲಿ ನಿಧಾನವಾಗಿ ಕಡಿಮೆಯಾಗುತ್ತಿದೆ. ಇದು ಪರಿವರ್ತನೆಯ ಸೂಚಕ. ಆದರೆ ಇಂದಿಗೂ ಗೌಳಿ ಸಮುದಾಯದಲ್ಲಿ ಹೆಣ್ಣುಮಕ್ಕಳನ್ನು ಅಪ್ರಾಪ್ತ ವಯಸ್ಸಿನಲ್ಲಿ ವಿವಾಹ ಮಾಡುವ ಪ್ರವೃತ್ತಿಯು ಪೂರ್ತಿಯಾಗಿ ನಶಿಸಿ ಹೋಗಿಲ್ಲ.

ಮೊದಲನೆಯ ಪತ್ನಿಗೆ ಮಕ್ಕಳಾಗಲಿಲ್ಲವೆಂದರೆ ಅಥವಾ ಗಂಡುಮಗು ಜನಿಸದಿದ್ದರೆ ಮೊದಲನೇ ಪತ್ನಿ ಜೀವಂತವಿರುವಾಗಲೇ ಯಾವುದೇ ರೀತಿ ವಿಚಾರ ಮಾಡದೇ ಎರಡನೆ, ಮೂರನೆ ಮದುವೆಯನ್ನು ಮಾಡುವ ಸಂಪ್ರದಾಯ ಗೌಳಿ ಸಮುದಾಯದಲ್ಲಿ ಈಗಲೂ ಚಾಲ್ತಿಯಲ್ಲಿದೆ. ಅಷ್ಟೊಂದು ಆರ್ಥಿಕ ಸ್ಥಿತಿವಂತಿಕೆಯನ್ನು ಹೊಂದಿಲ್ಲವಾದ್ದರಿಂದ ಆರ್ಥಿಕ ಸಮಸ್ಯೆಗಳು ಉದ್ಭವಿಸಲು ಈ ಬಹುಪತ್ನಿತ್ವ ಕಾರಣೀಭೂತವಾಗಿದೆ. ಬಹುಪತ್ನಿತ್ವ ವಿವಾಹದಿಂದ ಕುಟುಂಬ ನಿರ್ವಹಣೆಯು ಆರ್ಥಿಕವಾಗಿ ಬಹಳ ಕಷ್ಟಕರವಾಗುತ್ತದೆ. ಅಲ್ಲದೇ ಜೈವಿಕ, ಲೈಂಗಿಕ, ಮಾನಸಿಕ ಸಮಸ್ಯೆಗಳನ್ನು ಹುಟ್ಟುಹಾಕಬಹುದು. ಲೈಂಗಿಕವಾಗಿ ಒಬ್ಬ ಪುರುಷ ಒಬ್ಬ ಸ್ತ್ರೀಯನ್ನು ಮಾತ್ರ ತೃಪ್ತಿಗೊಳಿಸಬಲ್ಲ. ಹೀಗಾಗಿ ಇನ್ನುಳಿದ ಹೆಂಡಂದಿರು ಅತೃಪ್ತರಾಗಿಯೇ ಉಳಿಯಬೇಕಾಗಬಹುದು. ಈ ಪದ್ಧತಿಯಿಂದಾಗಿ ಸವತಿಯರ ನಡುವೆ ಅಸೂಯೆ, ಮನಸ್ತಾಪ, ಕಚ್ಚಾಟ ಇವುಗಳಿಗೆ ಆಸ್ಪದ ಕೊಟ್ಟಂತಾಗಿ ಮಕ್ಕಳ ಸಂಪೋಷಣೆಗೆ ಧಕ್ಕೆಯಾಗುವ ಸಂಭವವನ್ನು ಅಲ್ಲಗಳೆಯುವಂತಿಲ್ಲ. ಬಹುಪತ್ನಿತ್ವವು ಪುರುಷ ಪ್ರಾಬಲ್ಯದ ಸಂಕೇತ. ಗಂಡನು ಕೆಲವು ಹೆಂಡತಿಯರನ್ನು ನಿಕೃಷ್ಟವಾಗಿ ಕಾಣಬಹುದು. ಈ ಪ್ರವೃತ್ತಿಯಿಂದ ಸ್ತ್ರೀಯರ ಸ್ವಾಭಿಮಾನಕ್ಕೆ, ಸ್ಥಾನಮಾನಕ್ಕೆ ಧಕ್ಕೆಯುಂಟಾಗಬಹುದು. ಇಲ್ಲಿ ಹೆಂಡಂದಿರ ಸಂಖ್ಯೆ ಅಧಿಕವಾಗಿರುವದರಿಂದ 'ಮಲತಾಯಿ ಧೋರಣೆ' ಉಂಟಾಗಿ ಮಕ್ಕಳ ಮಾನಸಿಕತೆ ಹದಗೆಡಲು ಕಾರಣವಾಗಬಹುದು.

ಗೌಳಿಗರಲ್ಲಿ ಇಂದಿಗೂ ತಮ್ಮ ಸಮುದಾಯದಲ್ಲೇ ಅಥವಾ ತಮ್ಮ ಉಪಜಾತಿಗಳಲ್ಲೇ ವಿವಾಹ ಸಂಬಂಧಗಳನ್ನು ಬೆಳೆಸುವುದು ರೂಢಿಯಲ್ಲಿದೆ. ಸಮುದಾಯದಿಂದ ಹೊರಗೆ ವಿವಾಹವಾದವರನ್ನು ಅಂದರೆ ಅಂತರ್‌ಜಾತಿ ವಿವಾಹವಾದವರನ್ನು ಬಹಿಷ್ಕಾರ ಹಾಕುವ ಪದ್ಧತಿ ಗೌಳಿ ಸಮುದಾಯದಲ್ಲಿ ಬೆಳೆದು ಬಂದಿದೆ. ಅಂತರ್‌ಜಾತಿ ಅಥವಾ ಅಂತರ್‌ಧರ್ಮೀಯ ವಿವಾಹವಾದ ತಮ್ಮ ಮಗಳು/ ಮಗನೊಡನೆ ಸಂಬಂಧವನ್ನೇ ಕಡಿದುಕೊಂಡಿರುವ ಉದಾಹರಣೆಗಳಿವೆ.

## ೪.೭. ಆರ್ಥಿಕ ಸಮಸ್ಯೆಗಳು

### ೪.೭.೧ ಭೂಮಿ ಸಮಸ್ಯೆ[೨೬]

ಬುಡಕಟ್ಟುಗಳ ಅತೀ ಮುಖ್ಯ ಸಮಸ್ಯೆ ಎಂದರೆ ಭೂಮಿಯ ಮತ್ತು ನೆಲೆಯ ಸಮಸ್ಯೆ. ಭಾರತದ ಬಹುತೇಕ ಬುಡಕಟ್ಟು ಜನರಿಗೆ ತಮ್ಮದೇ ಆದಂತಹ ಭೂಮಿ ಇಲ್ಲದಿರುವುದು ಕಂಡುಬರುತ್ತದೆ. ಇವರು ಸಾಮಾನ್ಯವಾಗಿ ಅರಣ್ಯಗಳನ್ನೇ ನಂಬಿಕೊಂಡು ವಾಸಿಸುತ್ತಾರೆ. ಬುಡಕಟ್ಟು ಜನರಿಗೆ ಅವರ ಹಿಂದುಳಿದಿರುವಿಕೆಯಿಂದಾಗಿ ಭೂ ಒಡೆತನದ ಕಲ್ಪನೆ ಇರಲಿಲ್ಲ; ಭೂಮಿಯ ದಾಖಲೆಗಳ ಬಗ್ಗೆಯೂ ಗೊತ್ತಿರಲಿಲ್ಲ; ಅಲ್ಲದೇ ಆಗ ಅದರ ಅವಶ್ಯಕತೆಯೂ ಇರಲಿಲ್ಲ. ಬುಡಕಟ್ಟು ಜನರು ತೀರಾ ಮೊದಲಿಗೆ ಆಹಾರ ಸಂಗ್ರಹಣೆ ಮತ್ತು ಬೇಟೆಯಿಂದ ಹೊಟ್ಟೆ ಹೊರೆಕೊಳ್ಳುತ್ತಿದ್ದರು. ಕೃಷಿ ಅನ್ವೇಷಣೆ ನಂತರವೂ ಒಂದೇ ಕಡೆ ನಿಂತು ಭೂಮಿಯನ್ನು ನಂಬಿ ಬದುಕಿದವರಲ್ಲ. ಇವರು 'ಕುಮ್ರಿ' ಬೇಸಾಯ ಮಾಡುತ್ತಾ ಜಾಗದಿಂದ ಜಾಗಕ್ಕೆ ಸ್ಥಳಾಂತರವಾಗುತ್ತಿದ್ದರು. ಅಂದರೆ ಕಾಡೊಳಗಿನ ಒಂದೆರಡು ಎಕರೆಯಷ್ಟು ಭೂಮಿಯನ್ನು ಹಸನು ಮಾಡಿ ಬಿತ್ತನೆ ಮಾಡುವ ಪದ್ಧತಿ. ನಿರ್ದಿಷ್ಟ ಪ್ರದೇಶದಲ್ಲಿ ಮೂರಕ್ಕಿಂತ ಹೆಚ್ಚಿನ ಬಾರಿ ಬೆಳೆ ತೆಗೆಯುತ್ತಿರಲಿಲ್ಲ. ಭೂಮಿಯ ವಿಸ್ತರಣೆಯಾಗಲಿ, ನೇಗಿಲು ಉಪಯೋಗಿಸುವುದಾಗಲಿ ಇರುತ್ತಿರಲಿಲ್ಲ. ಖಾಯಂ ಕೃಷಿಗೆ ಬದಲಾಗಿ 'ಕುಮ್ರಿ ಕೃಷಿ'ಯ ಅವಲಂಬನೆ ಮೂಲಕ ಕಾಡಿಗೆ ಯಾವುದೇ ಅಪಾಯವೂ ಒದಗದಂತೆ ಸಮತೋಲನ ಕಾಪಾಡಿಕೊಂಡು ಬರುತ್ತಿದ್ದರು. ಕಾಡಿನ ಅಸ್ತಿತ್ವಕ್ಕೆ ಧಕ್ಕೆ ಬರದಂತೆ ಬದುಕುತ್ತಿದ್ದರು. ಆದರೆ ವಸಾಹತುಶಾಹಿಗಳ ಪ್ರಭಾವ, ಭೂಮಾಲಿಕರ ಪ್ರಭಾವದಿಂದ ಗಿರಿಜನರ ಸ್ವಚ್ಛಂದ ಜೀವನ ಅಸ್ಥಿರವಾಗತೊಡಗಿತು. ಬುಡಕಟ್ಟು ಜನರ ಈ ಅಸ್ಥಿರತೆಯ ಭೀತಿ ಸತ್ಯವಾಗತೊಡಗಿದ್ದು ಬ್ರಿಟೀಷರ ಅವಧಿಯಲ್ಲಿಯೇ. ಆ ಕಾಲದಲ್ಲಿ ಬ್ರಿಟೀಷ್ ಸರ್ಕಾರ ಭೂಮಿಯನ್ನು ಮತ್ತು ಅರಣ್ಯ ಭೂಮಿಯನ್ನು ಜಮೀನ್ದಾರರಿಗೆ ವರ್ಗಾಯಿಸಿತು. ಕೆಲವು ಕಾಡುಗಳನ್ನು ಚಹಾ, ಕಾಫೀ ತೋಟಗಳನ್ನಾಗಿ ಪರಿವರ್ತಿಸಿತು ಮತ್ತು ಉಳಿದ ಭೂಮಿಯನ್ನೆಲ್ಲ ಅರಣ್ಯ ಭೂಮಿಯೆಂದು ಘೋಷಿಸಿತು. ಇದರಿಂದ ಬುಡಕಟ್ಟು ಜನರಿಗೆ ಭೂ ದಾಖಲೆಗಳನ್ನು ಹೊಂದಿರದ್ದರಿಂದ ಹಲವಾರು ತಲೆಮಾರುಗಳಿಂದ ನೆಲೆಸಿದ್ದರೂ ಕೂಡ ಭೂಮಿಯ ಒಡೆತನ ಇಲ್ಲದಂತಾಯಿತು. ಮೊದಲಿದ್ದ ಬಹುತೇಕ ಅರಣ್ಯ ನೀತಿಗಳು ಅಥವಾ ಕಾನೂನುಗಳು ನಗರ ಮಾರುಕಟ್ಟೆಗಳಿಗೆ, ಅರಣ್ಯ ಉತ್ಪನ್ನಗಳನ್ನು ಒದಗಿಸುವುದಕ್ಕೆ ಸಂಬಂಧಿಸಿದವುಗಳಾಗಿದ್ದವು. ಬುಡಕಟ್ಟುಗಳೂ ಸಹ ಅರಣ್ಯ ಉತ್ಪನ್ನವನ್ನು ಒದಗಿಸುವುದಕ್ಕೆ ತಮಗೆ ಸಮೀಪವಿರುವ ಸ್ಥಳೀಯ ಮಾರುಕಟ್ಟೆಗಳಲ್ಲಿ ಮಾರಾಟ ಮಾಡಿ ಉಪಜೀವಿಸುತ್ತಿದ್ದರು. ಇವರಿಗೆ ಯಾವುದೇ ಅಧಿಕೃತವಾದ ಇವರಿಗೆಂದೇ ಮೀಸಲಿಟ್ಟ ಅರಣ್ಯ ಪ್ರದೇಶಗಳಿರಲಿಲ್ಲ. ಅಲ್ಲದೇ ಬಹುತೇಕ ಬುಡಕಟ್ಟುಗಳು ಅಲೆಮಾರಿಗಳಾಗಿದ್ದರು. ಸನ್ ೧೮೭೮ರ ಭಾರತದ ಅರಣ್ಯ ಕಾಯ್ದೆಗೆ ಸನ್ ೧೮೭೮ರಲ್ಲಿ ತಿದ್ದುಪಡಿ ತಂದು ಅರಣ್ಯಗಳನ್ನು ಕಂದಾಯ ಅರಣ್ಯಗಳು, ಸಂರಕ್ಷಿತ ಅರಣ್ಯಗಳು ಮತ್ತು ಗ್ರಾಮ ಅರಣ್ಯಗಳು ಎಂದು ವಿಭಾಗ ಮಾಡಿ ಪ್ರತಿಯೊಂದಕ್ಕೂ ತನ್ನದೇ ಆದ ನಿಯಮಗಳನ್ನು ರೂಪಿಸಲಾಯಿತು. ಸರ್ಕಾರದ ಈ ನೀತಿಯಿಂದಾಗಿ ಅರಣ್ಯದ ಉತ್ಪನ್ನಗಳನ್ನೇ ತಮ್ಮ ಜೀವಾಳವಾಗಿರಿಸಿ ಕೊಂಡಿದ್ದ ಬುಡಕಟ್ಟುಗಳಿಗೆ ಬರಸಿಡಿಲು ಬಡಿದಂತಾಗಿ ಅರಣ್ಯ ಭೂಮಿಗಳ ಭಾಗವಾಗಿದ್ದ ಇವರು ಇವೆಲ್ಲದರಿಂದ ದೂರವಾದರು ಮತ್ತು ಭೂರಹಿತ ಬುಡಕಟ್ಟುಗಳಾಗಿ ಉಳಿದರು.

ಸನ್ ೧೯೫೦ ರಲ್ಲಿ 'ಸೆಂಟ್ರಲ್ ಬೋರ್ಡ್ ಆಫ್ ಫಾರೆಸ್ಟ್' ಎಂಬ ಕೇಂದ್ರ ಅರಣ್ಯ ಸಮಿತಿಯನ್ನು ಸ್ಥಾಪಿಸಿದೆ. ಸನ್ ೧೯೫೨ ರಲ್ಲಿ ಸರಕಾರವು ಅರಣ್ಯಗಳ ಅಭಿವೃದ್ಧಿ ಮತ್ತು ವೈಜ್ಞಾನಿಕ ಆಡಳಿತೆಗಾಗಿ ಅರಣ್ಯಗಳ ಬಗ್ಗೆ ರಾಷ್ಟ್ರೀಯ ಅರಣ್ಯ ನೀತಿಯನ್ನು ರೂಪಿಸಿದೆ. ಈ ಅರಣ್ಯ ನೀತಿಯು ಈ ಕೆಳಗಿನ ಗುರಿಗಳನ್ನು ಹೊಂದಿದೆ.

೧) ಅರಣ್ಯಗಳ ಅಭಿವೃದ್ಧಿಗಾಗಿ ಕೆಲವು ಪ್ರದೇಶಗಳನ್ನು ಮೀಸಲಿಡುವುದು.

೨) ಪ್ರಗತಿ ಹಾಗೂ ಆಡಳಿತದ ದೃಷ್ಟಿಯಿಂದ ಅರಣ್ಯಗಳನ್ನು ವೈಜ್ಞಾನಿಕವಾಗಿ ನೋಡಿಕೊಳ್ಳುವುದು.

೩) ಭೂ ಸಂರಕ್ಷಣೆ ಮತ್ತು ಹವಾಮಾನವನ್ನು ಉತ್ತಮ ಪಡಿಸುವ ಸಲುವಾಗಿ ಅರಣ್ಯಗಳನ್ನು ಬೆಳೆಸುವುದು.

೪) ಹೆಚ್ಚು ಆದಾಯ ಬರುವ ಗಿಡಮರಗಳನ್ನು ಬೆಳೆಸುವುದು.

೫) ಅರಣ್ಯ ಪ್ರದೇಶವನ್ನು ಶೇ. ೩೩%ಕ್ಕೆ ಹೆಚ್ಚಿಸುವುದು.

೬) ಅರಣ್ಯ ಮೂಲ ಕೈಗಾರಿಕೆಗಳಿಗೆ ಬೇಕಾಗುವ ಕಚ್ಚಾವಸ್ತುಗಳನ್ನು ಹೆಚ್ಚಿಗೆ ಬೆಳೆಸುವುದು.

೭) ವನ್ಯಜೀವಿಗಳ ಸಂರಕ್ಷಣೆ ಮಾಡುವುದು.

೮) ಉರುವಲು ಕಟ್ಟಿಗೆಯ ಕೊರತೆಯನ್ನು ನೀಗಿಸಲು ನದಿ ದಂಡೆಗಳಲ್ಲಿ ಮತ್ತು ವ್ಯವಸಾಯ ನಿರುಪಯುಕ್ತ ಪ್ರದೇಶಗಳಲ್ಲಿ ಸಾಮಾಜಿಕ ಅರಣ್ಯಗಳನ್ನು ಬೆಳೆಸುವುದು.

ಸನ್ ೧೯೮೦ರ ಅರಣ್ಯ ಸಂರಕ್ಷಣಾ ಕಾಯ್ದೆ : ಅರಣ್ಯ ನಾಶವು ಜೀವ ಪರಿಸರಕ್ಕೆ ಅಸಮತೋಲನವನ್ನುಂಟು ಮಾಡುತ್ತದೆ. ಮತ್ತು ಪರಿಸರ ಅವನತಿಗೆ ಕಾರಣವಾಗುತ್ತದೆ ಎಂಬ ಅಂಶವನ್ನೊಳಗೊಂಡು ಸನ್ ೧೯೮೦ರ ಅಕ್ಟೋಬರ್ ೨೫ ರಂದು ರಾಷ್ಟ್ರಪತಿಯವರು ಹೊರಡಿಸಿದ ಆದೇಶದ ಮೇರೆಗೆ ಅರಣ್ಯ ಸಂರಕ್ಷಣಾ ಅದಿನಿಯಮವಾಗಿದೆ. ಈ ಅಧಿನಿಯಮ ಅರಣ್ಯ ಭೂಮಿಯನ್ನು ಅರಣ್ಯೇತರ ಬಳಕೆಗಾಗಿ ಉಪಯೋಗಿಸುವುದರ ವಿರುದ್ಧ ಕಠಿಣ ಕ್ರಮಗಳನ್ನು ಕೈಗೊಳ್ಳುವ ಅವಕಾಶ ಕಲ್ಪಿಸಿದೆಯಲ್ಲದೇ ವ್ಯರ್ಥ ಭೂಮಿ ಅಭಿವೃದ್ಧಿ ಯೋಜನೆಗಳನ್ನು ರೂಪಿಸಿದೆ. ಈ ಅರಣ್ಯ ಕಾಯ್ದೆಯನ್ನು ಉಲ್ಲಂಘಿಸಿದವರಿಗೆ ೧೫ ದಿನಗಳವರೆಗೆ ಸೆರೆಮನೆ ವಾಸ ಮತ್ತು ದಂಡ ವಿಧಿಸುವ ಅಧಿಕಾರವನ್ನು ಒಳಗೊಂಡಿದೆ. ನಮ್ಮ ದೇಶದ ಅರಣ್ಯಜೀವಿ ಸಂರಕ್ಷಣಾ ಕಾಯ್ದೆಯಂತೆ,

೧) ಯಾವುದೇ ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸುವುದನ್ನು ನಿಷೇಧಿಸಲಾಗಿದೆ.

೨) ಈ ಪ್ರದೇಶದಲ್ಲಿ ಯಾರೂ ವಾಸಿಸುವಂತಿಲ್ಲ.

೩) ಜಾನುವಾರುಗಳನ್ನು ಈ ಪ್ರದೇಶದಲ್ಲಿ ಮೇಯಿಸುವುದನ್ನು ನಿಷೇಧಿಸಲಾಗಿದೆ.

ಅರಣ್ಯ ಇಲಾಖೆ ರಕ್ಷಣೆ ನೆಪದಲ್ಲಿ ಈ ಕಾಡಿಗೆ ದಾಳಿ ಇಟ್ಟ ಅವರಿಗೆ ಮೊದಲು ಕಂಡವರು ಅದರ ಗರ್ಭದಲ್ಲಿ ಅಡಗಿ ಜೀವಿಸುತ್ತಿದ್ದ ಬುಡಕಟ್ಟುಗಳು. ಸ್ವಂತ ಆಸ್ತಿಯ ಕಲ್ಪನೆಯಿಲ್ಲದ ಸ್ವತಂತ್ರವಾಗಿ ಜೀವಿಸುತ್ತಿದ್ದ ಬುಡಕಟ್ಟು ಜನಾಂಗಕ್ಕೆ 'ನಿಮ್ಮ ಖಾತೆ ಎಲ್ಲಿ' ? ನಿಮ್ಮ ಹಕ್ಕು ಯಾವುದು ? ಎಂದು ಪ್ರಶ್ನಿಸುವ ಹೊಸ ಬಗೆಯ ಜನರನ್ನು ಕಂಡು ಕಂಗಾಲಾದರು. ಅರಣ್ಯ ಇಲಾಖೆಯು ನೀಡುತ್ತಿದ್ದ

ಶೋಷಣೆಗೆ ಬುಡಕಟ್ಟು ಜನಾಂಗ ದಾರಿ ಕಾಣದೇ ಕಂಗಾಲಾಗಿದ್ದಾರೆ. ಕಾಡಿಗೂ ಬುಡಕಟ್ಟುಗಳಿಗೂ ಇದ್ದ ಅವಿನಾಭಾವ ಸಂಬಂಧ ಈಗ ಕೇವಲ ಕೃತಕವಾಗಿ ದಿಕ್ಕು ತಪ್ಪಿದ ಹಸುಳೆಗಳಾಗಿ ಅತಂತ್ರದ ಸ್ಥಿತಿ ಹೊಂದಿದ್ದಾರೆ. ಸಂರಕ್ಷಿತ ಅರಣ್ಯ ಪ್ರದೇಶ ಗಡಿಯನ್ನು ಗುರುತಿಸುವಾಗ ಅಲ್ಲಿದ್ದ ಆದಿವಾಸಿಗಳ ಹಿತವನ್ನು ಕಾಪಾಡುವಲ್ಲಿ ಸರಕಾರಿ ಅಧಿಕಾರಿಗಳು ವಿಫಲರಾಗಿದ್ದಾರೆ. ಸನ್ ೧೯೮೩ ರಿಂದಲೂ ಆದಿವಾಸಿಗಳನ್ನು ಒಕ್ಕಲೆಬ್ಬಿಸುವ ಪ್ರಯತ್ನಗಳು ನಡೆದಿವೆ. ಆದಿವಾಸಿಗಳ ಪುನರ್ವಸತಿಗೆ ಸಂಬಂಧಿಸಿದ ಪರಿಹಾರ ಕಾರ್ಯಕ್ರಮವನ್ನು ಕರ್ನಾಟಕ ಸರಕಾರವು ಸನ್ ೧೯೯೯ರಲ್ಲಿ ಜಾರಿಗೊಳಿಸಿತು. ಈ ಪರಿಹಾರ ಕಾರ್ಯಕ್ರಮವನ್ನು 'ಫಲಾನುಭವಿ ಕೇಂದ್ರಿತ ಆದಿವಾಸಿಗಳ ಪುನರ್ವಸತಿ ಕಾರ್ಯಕ್ರಮ' ಎಂದು ಕರೆಯಲಾಗಿದೆ. ಜಾಗತಿಕ ಬ್ಯಾಂಕಿನ ಧನ ಸಹಾಯದಿಂದ ಕೈಗೊಂಡ ಭಾರತ ಪರಿಸರ ಅಭಿವೃದ್ಧಿ ಯೋಜನೆಯು ಈ ಪ್ರದೇಶದಲ್ಲಿ ಆದಿವಾಸಿಗಳ ಸ್ಥಿತಿಗತಿಗಳ ಬಗ್ಗೆ ಅಧ್ಯಯನ ನಡೆಸಿದ ವರದಿಗಳ ಆಧಾರದ ಮೇಲೆ ಪರಿಹಾರ ಕಾರ್ಯಕ್ರಮಗಳನ್ನು ರೂಪಿಸಲಾಗಿದೆ.

ಆದಿವಾಸಿಗಳ ಪುನರ್ವಸತಿಗೆ ಸಂಬಂಧಿಸಿದ ಪರಿಹಾರ ಕಾರ್ಯಕ್ರಮದ ಮುಖ್ಯ ಅಂಶಗಳು ಈ ಕೆಳಗಿನಂತಿವೆ.

೧) ಸಂರಕ್ಷಿತ ಅರಣ್ಯದೊಳಗೆ ವಾಸಿಸುತ್ತಿರುವ ಆದಿವಾಸಿಗಳನ್ನು ಸ್ಥಳಾಂತರ ಮಾಡಿ ಅವರಿಗೆ ಪುನರ್ವಸತಿಯನ್ನು ಅರಣ್ಯದ ಹೊರಗೆ ಒದಗಿಸುವುದು.

೨) ಆದಿವಾಸಿಗಳ ಸಾಮಾಜಿಕ, ಆರ್ಥಿಕ ಮಟ್ಟವನ್ನು ಸುಧಾರಿಸುವುದು.

೩) ಆದಿವಾಸಿಗಳು ಸ್ವತಂತ್ರವಾಗಿ ತಮ್ಮ ಸಾಮರ್ಥ್ಯದ ಮೇಲೆ ಜೀವನ ನಿರ್ವಹಣೆ ಮಾಡುವಂತೆ ಅವರನ್ನು ಪ್ರೇರೇಪಿಸುವುದು.

೪) ಕೃಷಿ ಆಧಾರಿತ ಚಟುವಟಿಕೆಗಳಿಗೆ ಸಂಬಂಧಿಸಿದಂತೆ ಅವರಿಗೆ ತಾಂತ್ರಿಕ ಮತ್ತು ಆರ್ಥಿಕ ಸಹಾಯವನ್ನು ಒದಗಿಸುವುದು.

ಆದರೆ ಆದಿವಾಸಿಗಳ ಪುನರ್ವಸತಿಗೆ ಸಂಬಂಧಿಸಿದ ಪರಿಹಾರ ಕಾರ್ಯಕ್ರಮದ ಅನುಷ್ಠಾನ ಸರಿಯಾಗಿ ಆಗಿಲ್ಲವೆಂಬ ಆಪಾದನೆ ಇದೆ. ಮೇಲಿನ ಸಂಗತಿಗಳು ಬುಡಕಟ್ಟು ಜನರ ಭೂಮಿಯ ಸಮಸ್ಯೆಯನ್ನು ಎತ್ತಿ ತೋರಿಸುತ್ತವೆ.

**ಅರಣ್ಯ ಕಾಯ್ದೆ ಹಾಗೂ ಅರಣ್ಯ ಜೊತೆ ಸಮುದಾಯದ ಪಾರಂಪರಿಕ ಸಂಬಂಧಗಳು**

ಸಂದರ್ಶಿಸಿದ ೨೨೫ ಗೌಳಿ ಕುಟುಂಬಗಳು ಅರಣ್ಯ ಕಾಯ್ದೆಯಿಂದ ತಮಗೆ ತೊಂದರೆಯಾಗಿದೆ ಎಂದು ಉಲ್ಲೇಖಿಸಿದ್ದಾರೆ. ಅವುಗಳಲ್ಲಿ ಪ್ರಮುಖ ತೊಂದರೆಗಳೆಂದರೆ, ಅರಣ್ಯ ಅಧಿಕಾರಿಗಳಿಂದ ಮೇಲಿಂದ ಮೇಲೆ ಕಿರಿ-ಕಿರಿ, ದನಕರುಗಳಿಗೆ ಮೇವಿನ ಕೊರತೆ, ಕೃಷಿ ಮಾಡಲು ಭೂಮಿ ಇಲ್ಲದ ಸಮಸ್ಯೆ, ಕಾಡು ಪ್ರಾಣಿಗಳು ದನಕರಗಳನ್ನು ಕೊಂದಾಗ ಸಾಕಷ್ಟು ಪರಿಹಾರ ಸಿಗದೇ ಇರುವುದು ಇತ್ಯಾದಿ ಒಳಗೊಂಡಿವೆ.

೨೨೩ ಕುಟುಂಬಗಳು ಪರಾರಂಪರಿಕವಾಗಿ ತಮ್ಮನ್ನೆ ತಾವು ಅರಣ್ಯ ಅವಲಂಬಿತರೆಂದು ಪರಿಗಣಿಸುತ್ತಾರೆ ಹಾಗೂ ಈಗಲೂ ತಮ್ಮ ಬದುಕಿಗೆ ಅರಣ್ಯ ಅನಿವಾರ್ಯವೆಂದು ನಂಬಿದ್ದಾರೆ. ಕೇವಲ ೨ ಕುಟುಂಬಗಳು ಮಾತ್ರ ಈ ಪ್ರಶ್ನೆಗೆ ಇಲ್ಲವೆಂದು ಉತ್ತರಿಸಿದ್ದಾರೆ. ಗೌಳಿಗರ ಜೀವನ ಸಂಪೂರ್ಣ ಅರಣ್ಯ ಅವಲಂಬಿತವಾಗಿದೆ ಎನ್ನುವದರಲ್ಲಿ ಯಾವುದೇ ಸಂಶಯವಿಲ್ಲ. ಏಕೆಂದರೆ, ಅವರ ಬದುಕು ಅಡವಿಯೊಂದಿಗೆ ಹೊಂದಿಕೊಂಡಿದೆ. ದನಕರಗಳನ್ನು ಸಾಕಲು ಹುಲ್ಲು ಹಾಗೂ ನೀರಿನ ಸೌಲಭ್ಯ ಅವರಿಗೆ ಅಡವಿಗಳಲ್ಲಿಯೇ ದೊರಕುತ್ತದೆ. ಇದಲ್ಲದೇ ಅವರು ನಾಗರಿಕ ಜೀವನದೊಂದಿಗೆ ಹೊಂದಾಣಿಕೆ ಮಾಡಿಕೊಳ್ಳದಿರುವುದು ಅವರಲ್ಲಿ ಬೇರೆ ಸಾಮಾಜಿಕ, ಸಾಂಸ್ಕೃತಿಕ ಸಮಸ್ಯೆಗಳನ್ನು ಹುಟ್ಟಿಸಿದೆ.

ಸಂದರ್ಶಿದ ಒಟ್ಟು ೨೨೫ ಕುಟುಂಬಗಳಲ್ಲಿ ಭೂಮಿಗೆ ಸಂಬಂಧಿಸಿದ ಸಮಸ್ಯೆಗಳು ಈ ಕೆಳಗಿನಂತೆ ಇವೆ.

**ಕೋಷ್ಟಕ ೪.೯**

**ಗೌಳಿಗರ ಭೂಮಿಗೆ ಸಂಬಂಧಿಸಿದ ಸಮಸ್ಯೆಗಳು**

| | | |
|---|---|---|
| ಅಕ್ರಮ ಸಾಗುವಳಿ ಮಾಡಿದ ಕುಟುಂಬಗಳ ಸಂಖ್ಯೆ | ೧೭೮ | ೭೯.೧೧% |
| ಸಕ್ರಮಗೊಳಿಸಿಕೊಂಡ ಕುಟುಂಬಗಳ ಸಂಖ್ಯೆ | ೧೦೮ | ೪೮.% |
| ಸಕ್ರಮಗೊಳಿಸಲಾರದ ಕುಟುಂಬಗಳ ಸಂಖ್ಯೆ | ೭೦ | ೩೧.೧೧% |
| ಭೂಮಿಯ ಒಡೆತನ ಹೊಂದಿದ ಕುಟುಂಬಗಳ ಸಂಖ್ಯೆ | ೬೩ | ೨೮% |
| ಅಕ್ರಮ ಸಾಗುವಳಿಯ ಗಾತ್ರ | ೫೦೦ಎಕರೆ | |
| **ಒಟ್ಟು ಸಂದರ್ಶಿತ ಕುಟುಂಬಗಳು** | **೨೨೫** | |




೧೭೮ ಕುಟುಂಬಗಳು ಅರಣ್ಯ ಭೂಮಿಯನ್ನು ಅಕ್ರಮ ಸಾಗುವಳಿ ಮಾಡಿದ್ದಾರೆ. ಒಟ್ಟು ಅಕ್ರಮ ಸಾಗುವಳಿಯ ಗಾತ್ರ ಅಂದಾಜು ೫೦೦ ಎಕರೆಗಳಷ್ಟಿದೆ. ೧೦೮ ಕುಟುಂಬಗಳ ಸಾಗುವಳಿಯನ್ನು

ಸರಕಾರ ಸಕ್ರಮಗೊಳಿಸಿದರೆ, ೧೧೧ ಕುಟುಂಬಗಳ ಸಾಗುವಳಿಯನ್ನು ಸಕ್ರಮಗೊಳಿಸಿಲ್ಲ. ಸಕ್ರಮಗೊಳಿಸದ ಕುಟುಂಬಗಳಲ್ಲಿ ಅಕ್ರಮ ಸಾಗುವಳಿ ಮಾಡದವರು ಸೇರಿರುತ್ತಾರೆ. ಕೇವಲ ೬೩ ಕುಟುಂಬಗಳಿಗೆ ಭೂಮಿಯ ಒಡೆತನ ದೊರಕಿದ್ದು, ಅವರಿಗೆ ಆ ಭೂಮಿಯನ್ನು ಮಾರಲು ಅಧಿಕಾರವಿದೆ. ಆದರೆ ೧೫೪ ಕುಟುಂಬಗಳಿಗೆ ಇಂತಹ ಅಧಿಕಾರ ದೊರಕಿಲ್ಲ. ಕೆಲವರು ಅಕ್ರಮ ಸಾಗುವಳಿ ಮಾಡಿದರೂ ಕೂಡ, ಅದನ್ನು ಸರಕಾರ ಸಕ್ರಮಗೊಳಿಸಿದ್ದರೂ ಕೂಡ ಅವರಿಗೆ ಮಾರುವ ಅಧಿಕಾರ ಇರುವುದಿಲ್ಲ. ಇದು ಕಂದಾಯ ಇಲಾಖೆಯ ನಿಯಮಾವಳಿಗಳ ವ್ಯಾಪ್ತಿಗೆ ಒಳಪಟ್ಟಿರುತ್ತದೆ.

ಅರಣ್ಯವೇ ತಮ್ಮದೆಂದು ನಂಬಿ ಜೀವಿಸುತ್ತಿದ್ದ ಗೌಳಿಗರು ಅರಣ್ಯ ಕಾಯ್ದೆಗಳಿಂದ ಭೂ ಒಡೆತನವನ್ನು ಕಳೆದುಕೊಂಡಿದ್ದರಿಂದ, ಸ್ವಂತ ಭೂಮಿಯನ್ನು ಹೊಂದಿ ಸ್ವಂತ ಕೃಷಿಯಲ್ಲಿ ತೊಡಗಿದವರು ಅತೀ ವಿರಳ. ಬೇಸಾಯವನ್ನೇ ಅವಲಂಬಿಸಿ ಜೀವಿಸುತ್ತಿದ್ದ ಕೆಲ ಗೌಳಿ ಕುಟುಂಬಗಳು ಅರಣ್ಯ ಕಾಯ್ದೆಗಳಿಂದ ಕುಮ್ರಿ ಬೇಸಾಯ ಭೂಮಿಯನ್ನು ಕಳೆದುಕೊಂಡು ಅತಂತ್ರರಾಗಿ ಗೋವಾಕ್ಕೆ ವಲಸೆ ಹೋಗಬೇಕಾಯಿತು. ಭೂಮಿ ಹೊಂದಿದವರಲ್ಲಿ ಬಹುತೇಕ ಗೌಳಿಗರು (೮೦%) ಅರಣ್ಯ ಭೂಮಿಯ ಅಕ್ರಮ ಸಾಗುವಳಿ ಮಾಡುವವರೇ. ಅದೂ ಕೂಡ ೧/೨ ರಿಂದ ೨ ಎಕರೆ ವರೆಗೆ ಮಾತ್ರ ಭೂಮಿ ಹೊಂದಿದವರೇ ಹೆಚ್ಚು. ರಕ್ಷಿತ ಅರಣ್ಯ, ವನ್ಯ ಜೀವಿ ಅಭಯಾರಣ್ಯ ಪ್ರದೇಶದಲ್ಲಿ ಬರುವ ಅಕ್ರಮ ಸಾಗುವಳಿ ಭೂಮಿಯನ್ನು ಸಕ್ರಮಗೊಳಿಸಲಾಗಿಲ್ಲ. ಉಳಿದ ಪ್ರದೇಶದಲ್ಲಿಯ ಭೂಮಿಯನ್ನು ಮಾತ್ರ ಸಕ್ರಮಗೊಳಿಸಲಾಗಿದೆ. ರಕ್ಷಿತ ಅರಣ್ಯ, ವನ್ಯಜೀವಿ ಅಭಯಾರಣ್ಯ ಪ್ರದೇಶದಲ್ಲಿ ಅಕ್ರಮ ಸಾಗುವಳಿ ಭೂಮಿ ಹೊಂದಿದವರಿಗೆ ಜಾಗ ಖಾಲಿ ಮಾಡಲು ಅರಣ್ಯ ಖಾತೆಯಿಂದ ನೋಟಿಸ್ ಜಾರಿ ಮಾಡಲಾಗಿದೆ. ಆದರೆ ಇನ್ನೂ ಅನುಷ್ಠಾನಗೊಳಿಸಲಾಗಿಲ್ಲ, ೨೦೦೬ರ ಅರಣ್ಯ ವಾಸಿ ಕಾಯ್ದೆ ಪ್ರಕಾರ ಆದಿವಾಸಿಗಳ ಅರಣ್ಯ ಹಕ್ಕಿನನ್ವಯ ಒಕ್ಕಲೆಬ್ಬಿಸುವುದನ್ನು ಸ್ಥಗಿತಗೊಳಿಸಿದ್ದಾರೆ. ಆದರೆ ಸಕ್ರಮವಾಗದ ಅಕ್ರಮ ಸಾಗುವಳಿಯ ಅರಣ್ಯ ಭೂಮಿ ಯಾವಾಗ ತಮ್ಮ ಕೈ ತಪ್ಪುವುದೋ ಎಂಬ ಭಯ, ಆತಂಕ ಗೌಳಿ ಜನರಿಗೆ ಇದ್ದೇ ಇದೆ. ಸರಕಾರ ಇರಲು ಮನೆ ಹಾಗೂ ಒಂದೊಂದು ಕುಟುಂಬಕ್ಕೆ ಎರಡು ಎಕರೆ ಊಳುವ ಭೂಮಿ ಕೊಟ್ಟರೆ, ಒಕ್ಕಲೆಬ್ಬಿಸಿದರೂ ಹೋಗಲು ನೋಟಿಸ್ ಜಾರಿಗೊಳಪಟ್ಟ ಗೌಳಿಗರು ತಯಾರಿದ್ದಾರೆಂದು ಜೊಯಿಡಾ, ಹಳಿಯಾಳ ತಾಲೂಕಗಳಲ್ಲಿ ಕ್ಷೇತ್ರ ಕಾರ್ಯ ಮಾಡುವಾಗ ತಿಳಿದು ಬಂತು.

### ೪.೭.೨. ವೃತ್ತಿ ಸಮಸ್ಯೆ

ಗೌಳಿಗರ ಮೂಲ ಉದ್ಯೋಗ ಹೈನುಗಾರಿಕೆ ಆಗಿತ್ತು. ಇಂದು ಅವರು ತಮ್ಮ ಮೂಲ ಉದ್ಯೋಗವನ್ನು ಅವಲಂಬಿಸಿ ಬದುಕುವಂತಹ ಸ್ಥಿತಿ ಇಲ್ಲ. ಏಕೆಂದರೆ ದನ ಕರುಗಳಿಗೆ ಸಾಕಾಗುವಷ್ಟು ಆಹಾರ ಅಡವಿಗಳಲ್ಲಿ ದೊರಕುವುದಿಲ್ಲ. ಒಂದು ಕಾಲಕ್ಕೆ ಗೌಳಿ ಸಮುದಾಯವು ಸ್ವಾವಲಂಬಿ ಹಾಗೂ ಸ್ವಯಂ ಪರಿಪೂರ್ಣವಾಗಿತ್ತು ಎಂದು ಹೇಳಲಾಗುತ್ತದೆ. ಏಕೆಂದರೆ ಆ ಕಾಲದಲ್ಲಿ ಅವರ ಅವಶ್ಯಕತೆಗಳು ಸೀಮಿತವಾಗಿದ್ದವು ಹಾಗೂ ಎಲ್ಲ ಅವಶ್ಯಕತೆಗಳನ್ನು ತಮ್ಮ ಆದಾಯದಲ್ಲಿಯೇ ಪೂರೈಸಿಕೊಳ್ಳುತ್ತಿದ್ದರು. ಇವರು ತಮ್ಮ ಮೂಲ ಸ್ಥಾನದಲ್ಲಿ ಕುಮ್ರಿ ವ್ಯವಸಾಯ (Shifting Cultivation) ಪದ್ಧತಿ, ಆಹಾರ

ಸಂಗ್ರಹಣೆ, ಬೇಟೆ ಇತ್ಯಾದಿಗಳನ್ನು ಅವಲಂಬಿಸಿದ್ದರು. ಸರ್ಕಾರ ಈಗ ವನ್ಯ ಜೀವಿಗಳ ಸಂರಕ್ಷಣಾ ಕಾನೂನಿಗನುಗುಣವಾಗಿ ಬೇಟೆಯನ್ನು ನಿಷೇಧಿಸಿದೆ. ಸರ್ಕಾರಿ ಅರಣ್ಯ ಭೂಮಿಯಲ್ಲಿ ಕೃಷಿಯನ್ನು ನಿಷೇಧಿಸಲಾಗಿದೆ. ಆದರೂ ಕೂಡ ಕೆಲವು ಗೌಳಿಗರು ಅಕ್ರಮ ಸಾಗುವಳಿ ಮಾಡಿ ಅರಣ್ಯ ಅಧಿಕಾರಿಗಳಿಂದ ತೊಂದರೆಗೆ ಸಿಲುಕಿಕೊಳ್ಳುತ್ತಾರೆ. ಇವರು ಬೆಳೆದ ಬತ್ತದ ಪೈರನ್ನು ಕಾಡಾನೆಗಳು ತುಳಿದು ನಾಶ ಮಾಡಿದರೆ ಇವರಿಗೆ ಪರಿಹಾರ ಸಿಗುವುದೇ ಇಲ್ಲ. ಅನೇಕ ಗೌಳಿಗರ ಮನೆಗಳು ಅಥವಾ ವಾಡೆಗಳು ಕಂದಾಯ ಇಲಾಖೆಯಿಂದ ಮಾನ್ಯತೆ ಪಡೆದಿಲ್ಲ. ಕಾನೂನಿನ ಬಗ್ಗೆ ಅರಿವೇ ಇಲ್ಲದ ಇವರು ಶ್ರೀಮಂತರ ಶೋಷಣೆಗೆ ಗುರಿಯಾಗಿ, ಸಾಲಗಾರರಾಗಿ, ಭೂಹೀನರಾಗಿ ನರಳುತ್ತಿದ್ದಾರೆ. ಹೆಚ್ಚಿನ ಜನರು ಕೃಷಿ ಕೂಲಿಯನ್ನೇ ಅವಲಂಬಿಸಿದ್ದಾರೆ. ಸರ್ಕಾರದ ವಿವಿಧ ಯೋಜನೆಗಳ ಲಾಭ ಇವರಿಗೆ ಸಮಂಜಸವಾಗಿ ತಲುಪುತ್ತಿಲ್ಲ. ಕೆಲವರು ಅನಿವಾರ್ಯ ಕಾರಣಗಳಿಂದಾಗಿ ಪಕ್ಕದ ಗೋವಾ ರಾಜ್ಯಕ್ಕೆ ಹೋಗಿ ಚಿಕ್ಕ ಪುಟ್ಟ ಕೆಲಸ ಮಾಡಿ ದುಡ್ಡು ಸಂಪಾದನೆ ಮಾಡಿಕೊಂಡು ಬರಲು ತಾತ್ಕಾಲಿಕವಾಗಿ ವಲಸೆ (Temporary Migration) ಹೋಗುತ್ತಾರೆ. ಆದರೆ ಇದು ಎಲ್ಲರಿಗೂ ಸಾಧ್ಯವಾಗುವ ಮಾತಲ್ಲ.

ಬುಡಕಟ್ಟುಗಳನ್ನು ಬೆಂಬಿಡದೇ ಕಾಡುತ್ತಿರುವ ಸಮಸ್ಯೆಗಳಲ್ಲಿ ನಿರುದ್ಯೋಗ ಮತ್ತು ಅರೆ ನಿರುದ್ಯೋಗ ಮುಖ್ಯವಾದಂತಹ ಸಮಸ್ಯೆಗಳಾಗಿವೆ. ಇವರು ಪ್ರತ್ಯೇಕವಾಗಿ ತಮ್ಮದೇ ಆದ ನೆಲೆಗಳಲ್ಲಿ ವಾಸಿಸುವುದರಿಂದ ನಗರ ಸಮಾಜದಲ್ಲಿ ದೊರೆಯುವಂತಹ ಉದ್ಯೋಗದ ಅವಕಾಶಗಳು ಬುಡಕಟ್ಟು ಜನರಿಗೆ ದೊರೆಯುವುದಿಲ್ಲ. ಸಾಂಪ್ರದಾಯಿಕ ಕಸುಬುಗಳನ್ನು ಬಿಟ್ಟರೆ ಅಸಂಪ್ರದಾಯಿಕ ಜಾತಿಮುಕ್ತ ಉದ್ಯೋಗದ ಅವಕಾಶಗಳು ಇವರಿಗೆ ದೊರೆಯುವುದಿಲ್ಲ. ಇವರಲ್ಲಿ ಸರಕಾರಿ ಹುದ್ದೆಗಳಲ್ಲಿರುವವರು ತುಂಬಾ ಕಡಿಮೆ (ಶೇ. ೧%ಕ್ಕಿಂತಲೂ ಕಡಿಮೆ). ದಿನನಿತ್ಯದ ಸಣ್ಣ-ಪುಟ್ಟ ಬುಡಕಟ್ಟು ಕುಲಕಸುಬುಗಳಿಂದ ಇವರ ಆರ್ಥಿಕ ಜೀವನಕ್ಕೆ ಸಾಕಾಗುವಷ್ಟು ಆದಾಯ ಬರುವದಿಲ್ಲ.

**ಕೋಷ್ಟಕ ೪.೧೦**

**ಉದ್ಯೋಗ**

| ಉದ್ಯೋಗ | ಒಟ್ಟು ಸಂಖ್ಯೆ (ಕುಟುಂಬಗಳಲ್ಲಿ) | ಶೇಕಡಾವಾರು |
|---|---|---|
| ವ್ಯವಸಾಯ ಕೂಲಿ | ೧೮೦ | ೮೦.೦ |
| ಹೈನುಗಾರಿಕೆ | ೩೫ | ೧೫.೫ |
| ವ್ಯವಸಾಯ | ೧೦ | ೪.೫ |
| ಸರಕಾರಿ ಉದ್ಯೋಗ | – | – |
| ಇತರೆ | – | – |
| ಒಟ್ಟು | ೨೨೫ | ೧೦೦.೦ |




ಉದ್ಯೋಗದ ದೃಷ್ಟಿಯಿಂದ ಸಂದರ್ಶಿಸಿದ ಒಟ್ಟು ಜನರಲ್ಲಿ ೧೮೦ ಕುಟುಂಬಗಳು ಕೃಷಿ ಕಾರ್ಮಿಕರಿದ್ದು, ೩೫ ಕುಟುಂಬಗಳು ಹೈನುಗಾರಿಕೆಯನ್ನು ಅವಲಂಬಿಸಿವೆ ಹಾಗೂ ಇತರ ಹತ್ತು ಕುಟುಂಬಗಳು ಮಾತ್ರ ಕೃಷಿಯಲ್ಲಿ ತೊಡಗಿವೆ. ಇದಕ್ಕೆ ಪ್ರಮುಖ ಕಾರಣವೆಂದರೆ, ಇವರಿಗೆ ಸ್ವಂತ ಭೂಮಿ ಎಂಬುದು ಇಲ್ಲ. ದುಡಿಯುವ ವಯಸ್ಸಿನ ಜನರಲ್ಲಿ ಹೆಚ್ಚಿನವರು ಭೂ ರಹಿತ ಕೃಷಿ ಕಾರ್ಮಿಕರಾಗಿದ್ದಾರೆ. ಇವರಿಗೆ ಪೂರ್ಣ ಕುಟುಂಬವನ್ನು ಸಾಕುವಷ್ಟು ಹೈನುಗಾರಿಕೆ ದನಗಳು ಇಲ್ಲ. ಆದ್ದರಿಂದ ಕೃಷಿ ಕೂಲಿ ಇವರಿಗೆ ಅನಿವಾರ್ಯವಾಗಿದೆ. ಕೇವಲ ೧೦ ಕುಟುಂಬಗಳು ಸ್ವಂತ ಭೂಮಿಯನ್ನು ಹೊಂದಿ ಕೃಷಿಯನ್ನು ಮಾಡುತ್ತಾರೆ. ಉಳಿದ ಕೆಲವರು ಕಾನೂನು ಬಾಹಿರವಾಗಿ ಕೃಷಿ ಮಾಡಿದರೂ ಕೂಡ ಅದು ಶಾಶ್ವತವಲ್ಲ ಹಾಗೂ ಅರಣ್ಯ ಇಲಾಖೆ ಅಧಿಕಾರಿಗಳು ಇವರಿಂದ ಭೂಮಿಯನ್ನು ಯಾವಾಗಲಾದರೂ ಮರಳಿ ಪಡೆಯಬಹುದು.

ಅರಣ್ಯ ನಾಶ ಹಾಗೂ ಅರಣ್ಯದಲ್ಲಿ ದನಕರುಗಳನ್ನು ಮೇಯಿಸುವದರ ಮೇಲೆ ಹೇರಿದ ನಿರ್ಬಂಧಗಳಿಂದ ಸೃಷ್ಟಿಯಾದ ಮೇವು ನೀರಿನ ಅಭಾವದಿಂದ ಸಹಜವಾಗಿ ದನಕರುಗಳು ಕಡಿಮೆಯಾದವು. ಅಲ್ಲದೇ ಹಾಲಿನ ಡೇರಿಗಳು ಬಂದಾಗಿನಿಂದ ಗೌಳಿ ಹಾಲಿನ ಬೇಡಿಕೆಯೂ ಕಡಿಮೆಯಾಯಿತು. ಇವೆಲ್ಲ ಕಾರಣಗಳಿಂದ ಕುಲ-ಕಸುಬಾದ ಹೈನುಗಾರಿಕೆಗೆ ಹಿನ್ನೆಡೆ ಉಂಟಾಯಿತು. ಅಂದರೆ ಆಧುನಿಕತೆಯ ಪ್ರಭಾವದಿಂದ ಹೈನುಗಾರಿಕೆಯ ಮೇಲೆ ವ್ಯತಿರಿಕ್ತ ಪರಿಣಾಮವಾಯಿತಷ್ಟೇ ಅಲ್ಲ, ಆಧುನಿಕತೆಯ ಪ್ರಭಾವಕ್ಕೊಳಗಾದ ಈಗಿನ ಯುವ ಪೀಳಿಗೆಯವರಿಗೆ ಕುಲಕಸುಬಾದ ಹೈನುಗಾರಿಕೆಯ ಮೇಲೆ ಅಭಿಮಾನವಿಲ್ಲವಾಗಿ ಕುಲಕಸುಬನ್ನು ಹೀನಾಯವಾಗಿ ಕಾಣುತ್ತಿದ್ದಾರೆ. ಹೀಗಾಗಿ, ಹೈನುಗಾರಿಕೆ ಉದ್ಯೋಗವು ಅಳಿಯುವ ಹಂತ ತಲುಪಿದೆ. ಕೋಷ್ಟಕದಲ್ಲಿಯ ಅಂಕಿ ಅಂಶಗಳು ಸೂಚಿಸುವಂತೆ ಸ್ವಂತ ಭೂಮಿಯನ್ನು ಹೊಂದಿ ಕೃಷಿಯಲ್ಲಿ ತೊಡಗಿದವರು ಅತಿ ವಿರಳ (೪.೫%). ಅರಣ್ಯವೇ ತಮ್ಮದೆಂದು ನಂಬಿದ ಅವರು ಅರಣ್ಯ ಕಾಯ್ದೆಗಳಿಂದ ಭೂ-ಒಡೆತನವನ್ನು ಕಳೆದುಕೊಳ್ಳಬೇಕಾಯಿತು. ಕುಮ್ರಿ ಬೇಸಾಯದ ಭೂ ಒಡೆತನವನ್ನು ಕಳೆದುಕೊಂಡ ಹಾಗೂ ಆ ಬೇಸಾಯವನ್ನೇ ಅವಲಂಬಿಸಿ ಜೀವನ ಸಾಗಿಸುತ್ತಿದ್ದ ಸುಮಾರು ೪೦ ಗೌಳಿ ಕುಟುಂಬಗಳು ಅತಂತ್ರರಾಗಿ, ಜೀವನ ನಿರ್ವಹಣೆಗೆ ಬೇರೆ ಕೆಲಸವನ್ನು ಅರಸಿಕೊಂಡು ಗೋವಾಕ್ಕೆ ವಲಸೆ ಹೋದರು. ಇನ್ನುಳಿದ ಭೂ ಒಡೆತನ

ಕಳೆದುಕೊಂಡ ಬಹುತೇಕ ಗೌಳಿ ಕುಟುಂಬಗಳು, ಇದ್ದ ಕಿರು ಹೈನುಗಾರಿಕೆಯು ಇಡೀ ಕುಟುಂಬ ನಿರ್ವಹಣೆಗೆ ಸಾಲದೇ, ಸುತ್ತಲ ಗ್ರಾಮೀಣ ಪ್ರದೇಶದಲ್ಲಿ ಜಮೀನ್ದಾರರ ಜಮೀನಿನಲ್ಲಿ ಕೃಷಿಕೂಲಿ ಕೆಲಸಕ್ಕೆ ಹೋಗುವುದು ಅನಿವಾರ್ಯವಾಯಿತು. ತಮ್ಮ ನೆಲೆಯಿಂದ ದೂರ ಹೋಗಲಾರದೇ ಬಹುತೇಕ ಗೌಳಿ ಜನರು (೮೦%) ಅದನ್ನೇ ಪರ್ಯಾಯ ವೃತ್ತಿಯನ್ನಾಗಿ ಮಾಡಿಕೊಂಡಿದ್ದಾರೆ. ಆದರೆ ಕೃಷಿ ಕೂಲಿ ವರ್ಷವಿಡೀ ಸಿಗದ್ದರಿಂದ ಗೈರು ಋತುಮಾನ ಕಾಲದಲ್ಲಿ ಬೇರೆ ವೃತ್ತಿಯನ್ನರಸಿ ಹೋಗುವ ನಗರಾಭಿಮುಖ ವಲಸೆ ತಾತ್ಕಾಲಿಕವಾದರೂ ನಿರಂತರವಾಗಿದೆ. ಸಾಮಾನ್ಯವಾಗಿ ವೃದ್ಧರ ಹಾಗೂ ಮಕ್ಕಳ ಪೋಷಣೆಯ ಜವಾಬ್ದಾರಿ ಇರುವ ಗೌಳಿ ಮಹಿಳೆಯರು ದೂರ ಹೋಗದೆ ಸಮೀಪದ ಊರುಗಳಲ್ಲಿ ಗಾರೆ ಕೆಲಸ ಇಲ್ಲವೆ ಕಟ್ಟಡ ಕಟ್ಟುವಲ್ಲಿ ಮಣ್ಣು, ಕಲ್ಲು, ಸಿಮೆಂಟು, ಖಡಿ ಹೊರುವ ಕೆಲಸಕ್ಕೆ ಹೋಗುತ್ತಾರೆ. ಪುರುಷರು ದೂರದ ಊರಿಗೆ, ನಗರಗಳಿಗೆ ಒಳ್ಳೆ ವರಮಾನದ ಕೆಲಸ ಹುಡುಕಿಕೊಂಡು ಹೋಗುತ್ತಾರೆ. ಆದರೆ ಶಿಕ್ಷಣ ಹಾಗೂ ಕಾರ್ಯ ಕುಶಲತೆಯ ಕೊರತೆಯಿಂದ ಅವರಿಗೆ ಒಳ್ಳೇ ವರಮಾನದ ಕೆಲಸ ಸಿಗುವದು ಕಷ್ಟ. ಇನ್ನು ಸರಕಾರಿ ಉದ್ಯೋಗ ಸಿಗುವದಂತೂ ದೂರದ ಮಾತು. ಆದರೂ ಸ್ವಲ್ಪ ಮಟ್ಟಿಗೆ ಶಿಕ್ಷಣ ಹೊಂದಿದ ಈಗಿನ ಕೆಲ ಗೌಳಿ ಯುವಕರು ಫ್ಯಾಕ್ಟರಿಗಳಲ್ಲಿ ಹಾಗೂ ಅರಣ್ಯ ಖಾತೆಯಲ್ಲಿ ಉದ್ಯೋಗ ಹೊಂದಿದ್ದಾರೆ.

ಕುಟುಂಬ ನಿವೃತ್ತಿ ವೇತನವನ್ನಾಗಲಿ ಅಥವಾ ಸರಕಾರಿ ನಿವೃತ್ತಿ ವೇತನವನ್ನಾಗಲಿ ಹಾಗೂ ಶಿಷ್ಯವೇತವನ್ನಾಗಲಿ ಪಡೆಯುವ ಒಬ್ಬರೂ ಇಲ್ಲಿ ಕಂಡುಬರಲಿಲ್ಲ. ಸರಕಾರದಿಂದ ದೊರಕುವ ವಿವಿಧ ಸೌಲಭ್ಯಗಳ ಬಗ್ಗೆ ಇವರಿಗೆ ಸ್ವಂತ ಮಾಹಿತಿಯೂ ಇಲ್ಲ ಹಾಗೂ ಇವರಿಗೆ ಮಾಹಿತಿ ಒದಗಿಸುವವರು ಇಲ್ಲ. ಆದ್ದರಿಂದಲೇ ಇವರು ಈ ಸೌಲಭ್ಯಗಳಿಂದ ವಂಚಿತರಾಗಿದ್ದಾರೆ. ಕೆಲವು ಜನರು ವೃದ್ಧಾಪ್ಯ ವೇತನ ವಿಧವಾ ವೇತನ ಪಡೆಯುತ್ತಿದ್ದುದರ ಬಗ್ಗೆ ಕೆಲವು ಸುಶಿಕ್ಷಿತ ಯುವಕರು ಸಂದರ್ಶನದಲ್ಲಿ ಹೇಳಿದರೂ ಕೂಡ, ಅದರ ಕುರಿತು ಖಚಿತವಾದ ಮಾಹಿತಿ ದೊರಕಲಿಲ್ಲ. ಏನೇ ಇದ್ದರೂ ಇಂಥವರ ಸಂಖ್ಯೆ ಬಹಳ ಕಡಿಮೆ ಇದೆ ಎಂಬುದು ಖಚಿತ.

ಸಂದರ್ಶಿಸಿದ ಒಟ್ಟು ೨೨೫ ಮನೆಗಳಲ್ಲಿ ಕಂಡು ಬಂದ ಪಶು ಸಂಪತ್ತಿನ ವಿವರಗಳನ್ನು ಕೆಳಗಿನ ಟೇಬಲ್‌ನಲ್ಲಿ ನೋಡಬಹುದು.

**ಕೋಷ್ಟಕ ೪.೧೧**

**ಪಶು ಸಂಪತ್ತು**

| ಪಶುಗಳ ಹೆಸರು | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|
| ಎತ್ತು | ೩೦೦ | ೧೧.೯೪% |
| ಆಕಳು | ೩೨೫ | ೧೨.೯೪% |
| ಕರು | ೧೮೯ | ೭.೫೨% |
| ಎಮ್ಮೆ | ೩೧೫ | ೧೨.೫೪% |
| ಕೋಣ | ೭೧ | ೨.೮೨% |
| ಕುರಿ | ೧೧೬ | ೪.೬೧% |
| ಆಡು | ೧೫೧ | ೬.೦೧% |
| ಕೋಳಿ | ೧೦೪೬ | ೪೧.೬೨% |
| **ಒಟ್ಟು** | **೨೫೧೩** | **೧೦೦%** |




ಮೇಲಿನ ಪಟ್ಟಿಯಲ್ಲಿ ಸೂಚಿಸಿದ ಪ್ರಕಾರ ೨೨೫ ಕುಟುಂಬಗಳಲ್ಲಿ ಒಟ್ಟಾರೆ ೩೦೦ ಎತ್ತುಗಳು ಹಾಗೂ ೧೮೯ ಕರುಗಳು, ೩೧೫ ಎಮ್ಮೆಗಳು ಹಾಗೂ ೭೧ ಕೋಣಗಳು, ೧೧೬ ಕುರಿಗಳು, ೧೫೧ ಆಡುಗಳು ಹಾಗೂ ೧೦೪೬ ಕೋಳಿಗಳು ಕಂಡುಬರುತ್ತವೆ. ಅತಿ ಹೆಚ್ಚಿನ ಸಂಖ್ಯೆಯಲ್ಲಿ ಹೈನು ನೀಡುವ ಎಮ್ಮೆಗಳು ಇರುವುದು ಕಂಡುಬರುತ್ತದೆ. ಅಂದರೆ ಅವರಿನ್ನೂ ಹೈನುಗಾರಿಕೆಯನ್ನು ಕೈಬಿಟ್ಟಿಲ್ಲ. ಆಡು ಹಾಗೂ ಕುರಿಗಳು ಕೂಡ ಹೈನು ಹಾಗೂ ಮಾಂಸ ನೀಡುವ ಪ್ರಾಣಿಗಳಾಗಿವೆ. ೧೦೪೬ ಕೋಳಿಗಳು ತತ್ತಿ ಹಾಗೂ ಮಾಂಸ ಪಡೆಯುವದಕ್ಕಾಗಿ ಸಾಕಲ್ಪಡುತ್ತಿವೆ.

ಅಂಕಿ ಅಂಶಗಳನ್ನು ನೋಡಿದರೆ ಪಶು ಸಂಪತ್ತು ಈಗ ಬಹಳ ಕಡಿಮೆಯಾಗಿದೆ. ಈ ಹಿಂದೆ ಒಂದೊಂದು ಅವಿಭಕ್ತ ಕುಟುಂಬಗಳಲ್ಲಿ ೫೦ ರಿಂದ ೧೦೦ ದನಕರುಗಳು ಇರುತ್ತಿದ್ದು ಪಶು ಸಂಗೋಪನೆ ಮತ್ತು ಹೈನುಗಾರಿಕೆಯೇ ಮೂಲ ಕಸುಬಾಗಿತ್ತು. ಈಗ ವಿಭಕ್ತ ಕುಟುಂಬಗಳೇ ಹೆಚ್ಚಿದ್ದು ಒಂದೊಂದು ಕುಟುಂಬದಲ್ಲಿ ೨ ರಿಂದ ೫ ದನಕರುಗಳು ಮಾತ್ರ ಕಾಣಸಿಗುತ್ತವೆ. ಒಂದೊಂದು ವಿಭಕ್ತ ಕುಟುಂಬಗಳು ದನಕರುಗಳನ್ನೇ ಹೊಂದಿಲ್ಲ. ಲಭಿತ ಅಂಕಿ-ಅಂಶಗಳ ಪ್ರಕಾರ ಒಂದು ಕುಟುಂಬ ಸರಾಸರಿ ೨ಕ್ಕಿಂತ ಕಡಿಮೆ ಎಮ್ಮೆ ಮತ್ತು ಆಕಳು ಹೊಂದಿದಂತಾಯಿತು. ಪಶು ಸಂಪತ್ತು ಇಷ್ಟೊಂದು ಕಡಿಮೆಯಾಗಲು ಕಾರಣಗಳೆಂದರೆ ಅರಣ್ಯ ನಾಶ ಹಾಗೂ ಅರಣ್ಯ ಕಾನೂನಿನ್ವಯ ಅರಣ್ಯದಲ್ಲಿ ದನ-ಕರುಗಳನ್ನು ಮೇಯಿಸುವದರ ಮೇಲೆ ಹೇರಿದ ನಿರ್ಬಂಧಗಳಿಂದ ಸೃಷ್ಟಿಯಾದ ಮೇವು, ನೀರಿನ ಅಭಾವದಿಂದ ದನಕರುಗಳು ಸಹಜವಾಗಿ ಕಡಿಮೆಯಾಗತೊಡಗಿದವು. ಪ್ರತಿ ಕುಟುಂಬದಲ್ಲಿ ಇಡೀ ಕುಟುಂಬವನ್ನು ಸಾಕಿ ಸಲಹುವಷ್ಟು ಹೈನುಗಾರಿಕೆ ದನಗಳು ಇಲ್ಲವಾದವು. ಇದರಿಂದ ಮೂಲ ಕಸುಬಾದ ಪಶು ಸಂಗೋಪನೆ ಹಾಗೂ ಹೈನುಗಾರಿಕೆಯ ಮೇಲೆ ವ್ಯತಿರಿಕ್ತ ಪರಿಣಾಮವಾಗಿದೆ. ಕುಲಕಸುಬಾದ ಹೈನುಗಾರಿಕೆ ಕ್ರಮೇಣ ಮಾಯವಾಗುವ ಹಂತ ತಲುಪಿದೆ. ಗೌಳಿಗರಲ್ಲಿ ಎತ್ತುಗಳಿರುವುದು ಅವರು ಕೃಷಿಯಲ್ಲಿ ತೊಡಗುತ್ತಿರುವುದರ ಸಂಕೇತವಾಗಿವೆ. ಮೇಲ್ಕಾಣಿಸಿದ ಕಾರಣಗಳಿಂದಾಗಿ ಹೈನುಗಾರಿಕೆ ಕಡಿಮೆಯಾಗುತ್ತಿದ್ದಂತೆ ಬರಿ ಹೈನುಗಾರಿಕೆಯೊಂದರಿಂದಲೇ ಜೀವನ ನಿರ್ವಹಿಸುವುದು ಕಷ್ಟವಾಗಿ, ಕೆಲವು ಗೌಳಿ ಅವಿಭಕ್ತ ಕುಟುಂಬಗಳು ಕೃಷಿಯಲ್ಲಿಯೂ ತೊಡಗಿಕೊಳ್ಳಬೇಕಾಯಿತು. ಒಂದು ದೃಷ್ಟಿಯಿಂದ

ನೋಡಿದರೆ ಇಂದಿಗೂ ಕೂಡ ಹೈನುಗಾರಿಕೆಯೇ ಅವರ ಪ್ರಮುಖ ಉದ್ಯೋಗವಾಗಿದ್ದು, ಅದಕ್ಕಿರುವ ತೊಂದರೆಗಳಿಂದಾಗಿ ಹೈನುಗಾರಿಕೆ ಕುಸಿಯತೊಡಗಿದಾಗ ಕೆಲ ಪ್ರಮಾಣದಲ್ಲಿ ಕೃಷಿ ಮಾಡುತ್ತಾರೆಂದು ಹೇಳಬಹುದು. ಆದರೆ ಪ್ರಸ್ತುತ ಪರಿಸ್ಥಿತಿಯಲ್ಲಿ ಹೈನುಗಾರಿಕೆಯು ಅಳಿಯುವ ಹಂತ ತಲುಪಿ, ಭೂ ಒಡೆತನವಿಲ್ಲದೇ, ಇದ್ದ ಅಲ್ಪ ಸ್ವಲ್ಪ ಒತ್ತುವರಿ ಕೃಷಿಯೂ ನೆಚ್ಚದಂತಾಗಿ ಜೀವನ ನಿರ್ವಹಣೆಗೆ ಕೃಷಿ ಕೂಲಿ ಹಾಗೂ ಇತರ ಪರ್ಯಾಯ ವೃತ್ತಿಗಳಲ್ಲಿ ತೊಡಗಿಸಿಕೊಳ್ಳುವುದು ಅನಿವಾರ್ಯವಾಗಿದೆ.

**೪.೭.೩. ವಸತಿ ಸಮಸ್ಯೆಗಳು**

ಗೌಳಿಗರು ವಾಸಿಸುವ ಮನೆಗಳು ಸ್ವರೂಪದಿಂದ ವೈಶಿಷ್ಟ್ಯಪೂರ್ಣವೆನಿಸಿದರೂ ಕೂಡಾ ಅವುಗಳ ರಚನೆಯ ಸ್ವರೂಪದಿಂದಾಗಿ ಸಂರಕ್ಷಣೆ ಹಾಗೂ ಆರೋಗ್ಯ ದೃಷ್ಟಿಯಿಂದ ಅವು ವಾಸಯೋಗ್ಯವಾಗಿಲ್ಲ. ಮುಖ್ಯವಾಗಿ ಇವರ ಮನೆಗಳಿಗೆ ಬಾಗಿಲುಗಳೇ ಇಲ್ಲದಿರುವುದರಿಂದ ಅವು ಸುರಕ್ಷಿತವಲ್ಲ. ದನಕರುಗಳನ್ನು ತಾವು ವಾಸಿಸುವ ಜಾಗದ ಪಕ್ಕದಲ್ಲಿಯೇ ಕಟ್ಟಿಕೊಂಡು ವಾಸಿಸುವುದರಿಂದ ಮನೆಗಳಲ್ಲಿ ಆರೋಗ್ಯಕರ ವಾತಾವರಣ ಇರುವುದಿಲ್ಲ. ಒಂದು ವಾಡೆಯಿಂದ ಇನ್ನೊಂದು ವಾಡೆ ಸಾಮಾನ್ಯವಾಗಿ ಪ್ರತ್ಯೇಕವಾಗಿದ್ದು, ದೂರವೂ ಇರುತ್ತದೆ. ಕೇವಲ ೫-೧೦ ಮನೆಗಳನ್ನು ಹೊಂದಿದ ವಾಡೆಗಳು ಕೂಡ ಕಂಡುಬರುತ್ತವೆ. ವಿವಾಹಿತ ತರುಣ ಪತಿ-ಪತ್ನಿಯರಿಗೆ ಪ್ರತ್ಯೇಕ ವಾಸ ವ್ಯವಸ್ಥೆ ಇರುವುದಿಲ್ಲ. ಮನೆಗಳ ಗೋಡೆಗಳು ಕೂಡಾ ಮರದ ಎಳೆಗಳಿಗೆ ಕಟ್ಟಿದ ಬಿದಿರು ಚಾಪೆಗಳಿಂದ ರಚಿಸಲ್ಪಟ್ಟಿರುತ್ತವೆ. ಹೀಗಾಗಿ ಮನೆಯಲ್ಲಿ ವಾಸಿಸುವ ಜನರಿಗೆ ಆಗಲಿ ಅಥವಾ ದೊಡ್ಡಿಗಳಲ್ಲಿರುವ ದನಗಳಿಗೆ ಆಗಲಿ ಸುರಕ್ಷಿತತೆ ಇರುವುದಿಲ್ಲ.

ಸಂದರ್ಶಿಸಿದ ಒಟ್ಟು ೨೨೫ ಮನೆಗಳಲ್ಲಿ ಬೇರೆ ಬೇರೆ ಪ್ರಕಾರದ ಮನೆಗಳ ವಿವರ ಈ ಕೆಳಗಿನಂತಿದೆ.

**ಕೋಷ್ಟಕ ೪.೧೨**

**ಮನೆಯ ಸ್ವರೂಪ**

| **ಮನೆಯ ಸ್ವರೂಪ** | **ಒಟ್ಟು ಸಂಖ್ಯೆ** | **ಶೇಕಡಾವಾರು** |
|---|---|---|
| ಗುಡಿಸಲು | ೩೩ | ೧೫ |
| ಹಂಚಿನ ಮನೆ | ೧೯೨ | ೮೫ |
| ಇತರೆ | - | - |
| **ಒಟ್ಟು** | **೨೨೫** | **೧೦೦** |

ಒಟ್ಟು ಮನೆಗಳಲ್ಲಿ ೩೩ ಮನೆಗಳು ಗುಡಿಸಲುಗಳಾಗಿದ್ದು, ೧೯೨ ಮನೆಗಳು ಹಂಚಿನ ಮನೆಗಳಾಗಿವೆ. ಇವುಗಳಲ್ಲಿ ಹೆಚ್ಚಿನ ಮನೆಗಳು ಸರಕಾರಿ ಆಶ್ರಯ ಮನೆಗಳಾಗಿದ್ದು, ಆಶ್ರಯ ಮನೆಗಳನ್ನು ಪಡೆಯದವರ ಸ್ವಂತ ಮನೆಗಳಿಗೆ ಹಂಚುಗಳನ್ನು ಸರ್ಕಾರವೇ ಒದಗಿಸಿ ಕೊಟ್ಟಿದೆ. ಆರ್.ಸಿ.ಸಿ. ಪ್ರಕಾರದ ಕಟ್ಟಡಗಳು ಕೇವಲ ಕೆಲವು ಗ್ರಾಮಗಳಲ್ಲಿ ಮಾತ್ರ ಕಂಡು ಬಂದಿವೆ. ಇಂತಹ ಕಟ್ಟಡಗಳನ್ನು ಹೊಂದಿದವರು ಸಾಮಾನ್ಯವಾಗಿ ಸರಕಾರಿ ನೌಕರಿಯಲ್ಲಿ ಇರುವವರು ಅಥವಾ ನಿವೃತ್ತರು ಅಥವಾ ಸೈನ್ಯದಿಂದ ನಿವೃತ್ತಿ

ಪಡೆದವರು ಆಗಿರುತ್ತಾರೆ. ಏನೇ ಆದರೂ ಇಂತಹ ಜನರ ಸಂಖ್ಯೆ ಅತೀ ಕಡಿಮೆಯಾಗಿದೆ ಎಂಬುದು ಖಚಿತ. ಮನೆಗಳ ಒಡೆತನದ ಪ್ರಕಾರ ಈ ಕೆಳಗಿನಂತಿದೆ.

**ಕೋಷ್ಟಕ ೪.೧೩**

**ಮನೆಗಳ ಒಡೆತನದ ಸ್ವರೂಪ**

| **ಒಡೆತನದ ಸ್ವರೂಪ** | **ಮನೆಗಳ ಸಂಖ್ಯೆ** | **ಶೇಕಡಾವಾರು** |
|---|---|---|
| ಸ್ವಂತ | ೧೬೮ | ೭೫ |
| ಆಶ್ರಯ ಮನೆ | ೫೭ | ೨೫ |
| ಬಾಡಿಗೆ ಮನೆ | – | – |
| **ಒಟ್ಟು** | **೨೨೫** | **೧೦೦** |

ಒಟ್ಟು ೨೨೫ ಮನೆಗಳಲ್ಲಿ ೧೬೮ ಮನೆಗಳು ಸ್ವಂತ ಒಡೆತನದವಾಗಿದ್ದು, ಉಳಿದ ೫೭ ಮನೆಗಳು ಸರ್ಕಾರ ಒದಗಿಸಿದ ಆಶ್ರಯ ಮನೆಗಳಾಗಿವೆ. ಅನೇಕ ಮನೆಗಳಿಗೆ ಕಂದಾಯ ಇಲಾಖೆಯಿಂದ ಮಾನ್ಯತೆ ಇಲ್ಲ. ಇದರಿಂದಾಗಿ ಅರಣ್ಯ ಇಲಾಖೆಯವರು ಯಾವಾಗಲಾದರೂ ಈ ಮನೆಗಳನ್ನು ತಮ್ಮ ವಶಕ್ಕೆ ತೆಗೆದುಕೊಳ್ಳಬಹುದು. ಅವುಗಳನ್ನು ಎತ್ತಂಗಡಿ ಮಾಡಬಹುದು. ಗಾಂವಠಾಣ ಎಂದು ಗುರುತಿಸಲ್ಪಟ್ಟ ಜಾಗದಲ್ಲಿ ಇರುವ ಮನೆಗಳಿಗೆ ಕಂದಾಯ ಇಲಾಖೆಯ ಮಾನ್ಯತೆ ಇದೆ.

### ೪.೭.೪. ಬಡತನ

ಗೊಡಾರ್ಡ ಸಮಾಜಶಾಸ್ತ್ರಜ್ಞನ ಪ್ರಕಾರ 'ವ್ಯಕ್ತಿಗೆ ತನ್ನನ್ನು ಸ್ವಾಭಾವಿಕವಾಗಿ ಅವಲಂಬಿಸಿದವರ ಆರೋಗ್ಯ ಹಾಗೂ ಶಕ್ತಿಗಳನ್ನು ಕಾಪಾಡಿಕೊಂಡು ಬರಲು ಜೀವನಕ್ಕೆ ಬೇಕಾಗುವ ಅವಶ್ಯಕ ವಸ್ತುಗಳನ್ನು ಸಮರ್ಪಕವಾಗಿ ಪೂರೈಕೆ ಮಾಡಲು ಸಾಧ್ಯವಾಗದ ಸ್ಥಿತಿಗೆ ಬಡತನ ಎಂದು ವ್ಯಾಖ್ಯಾನಿಸುತ್ತಾನೆ'.[೨೭] 'ಭಾರತದ ಬಹುತೇಕ ಬುಡಕಟ್ಟು ಜನರು ಬಡತನದ ರೇಖೆಯ ಕೆಳಗೆ ಜೀವಿಸುತ್ತಿದ್ದಾರೆ. ತಮ್ಮ ಇಡೀ ಜೀವನವನ್ನೇ ಇವರು ಬಡತನದಲ್ಲಿಯೇ ಕಳೆಯಬೇಕಾಗುವುದು. ಯಾವುದೇ ಬಾಹ್ಯ ಆರ್ಥಿಕ ಸಂಪನ್ಮೂಲಗಳು ಇವರಿಗೆ ಲಭ್ಯವಾಗುವ ಸಾಧ್ಯತೆಯಿಲ್ಲ. ಪ್ರತಿಶತ ೮೫% ಬುಡಕಟ್ಟು ಜನ ಬಡತನದ ರೇಖೆಯ ಕೆಳಗೆ ಜೀವಿಸುತ್ತಾರೆ ಎಂದರೆ ಈ ಸಮಸ್ಯೆಯ ಗಂಭೀರತೆಯ ಅರಿವುಂಟಾಗುವುದು. ಕರ್ನಾಟಕದಲ್ಲಿ ಸಮಾಜ ಕಲ್ಯಾಣ ಇಲಾಖೆಗೆ ಸಲ್ಲಿಸಿದ ಸಾಮಾಜಿಕ, ಆರ್ಥಿಕ ಸಮೀಕ್ಷೆಯ ಪ್ರಕಾರ ಶೇ. ೬೧% ರಷ್ಟು ಗ್ರಾಮೀಣ ಬುಡಕಟ್ಟುಗಳ ಕುಟುಂಬಗಳು ಬಡತನ ರೇಖೆಗಿಂತ ಕೆಳಗಿವೆ'.[೨೮] ಆದಿವಾಸಿಗಳ ಆರ್ಥಿಕ ಸ್ಥಿತಿ ತುಂಬಾ ಚಿಂತಾಜನಕವಾಗಿದೆ. ಬಡತನದಿಂದ ಬಳಲುತ್ತಿದ್ದಾರೆ. ಅರಣ್ಯನೀತಿ ಕಾಯ್ದೆಗಳು ಆದಿವಾಸಿಗಳನ್ನು ಇನ್ನೂ ಕೀಳುಮಟ್ಟದ ಸ್ಥಿತಿಗೆ ತಲುಪಿಸಿವೆ. ಗುತ್ತಿಗೆದಾರರು, ವ್ಯಾಪಾರಸ್ಥರು, ಆದಿವಾಸಿಗಳಿಗೆ ಆಸೆ ತೋರಿಸಿ ಆದಿವಾಸಿಗಳ ಆಸ್ತಿ–ಪಾಸ್ತಿಯನ್ನು ಕಬಳಿಸುತ್ತಿದ್ದಾರೆ. ಮೂಲ ಉದ್ಯೋಗಗಳನ್ನು ಆದಿವಾಸಿಗಳು ಕಳೆದುಕೊಂಡು, ಭೂ ಮಾಲಿಕರ ಭೂಮಿಯಲ್ಲಿ ಜೀತದಾಳುಗಳಾಗಿ ಕೆಲಸ ನಿರ್ವಹಿಸುತ್ತಿದ್ದಾರೆ. ಗುಲಾಮಗಿರಿ ಪರಿಸ್ಥಿತಿ ಬಂದಿದೆ. ಕೆಲವು ಆದಿವಾಸಿಗಳು ನಿರ್ಗತಿಕರಾಗಿ

ಉಳಿದುಕೊಂಡಿದ್ದಾರಲ್ಲದೇ ಬದುಕಿಗಾಗಿ ಹೋರಾಟ ಎನ್ನುವಂತೆ ಉಪಜೀವನಕ್ಕೆ ವಾಮ ಮಾರ್ಗಗಳಾದ ಕಳ್ಳತನ, ಕೊಲೆ, ಸುಲಿಗೆಯಂತಹ ಕ್ರಿಯೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಇನ್ನು ಕೆಲವರು ಉಪಜೀವನಕ್ಕಾಗಿ ತಮ್ಮ ಹೆಣ್ಣುಮಕ್ಕಳನ್ನು ಮಾರಾಟ ಮಾಡಿ ಜೀವನ ಸಾಗಿಸುತ್ತಿದ್ದಾರೆ. ಆದರೆ ಗೌಳಿ ಬುಡಕಟ್ಟು ಜನರು ಇದಕ್ಕೆ ಹೊರತಾಗಿದ್ದಾರೆ.

ಅರಣ್ಯನಾಶ ಹಾಗೂ ಅರಣ್ಯದಲ್ಲಿ ದನಗಳನ್ನು ಮೇಯಿಸುವುದರ ಮೇಲೆ ಹೇರಿದ ನಿರ್ಬಂಧಗಳ ವ್ಯತಿರಿಕ್ತ ಪರಿಣಾಮದಿಂದ ಕುಸಿದ ಹೈನುಗಾರಿಕೆ ಹಾಗೂ ಅರಣ್ಯ ಕಾನೂನುಗಳಿಂದ ಅರಣ್ಯ ಉತ್ಪನ್ನ ಸಂಗ್ರಹಣೆ ಮತ್ತು ಮಾರಾಟಗಳ ಮೇಲಿನ ನಿಷೇಧ ಇವುಗಳಿಂದಾಗಿ ಜೀವನ ನಿರ್ವಹಣೆಗೆ ತೊಂದರೆಯಾಗಿ ಸುತ್ತಲ ಗ್ರಾಮೀಣ ಪ್ರದೇಶಗಳಲ್ಲಿ ಕೃಷಿ ಕೂಲಿ ಕೆಲಸಕ್ಕಾಗಿ ಹೋಗುವುದು ಗೌಳಿ ಜನರಿಗೆ ಅನಿವಾರ್ಯವಾಯಿತು. ವರ್ಷವಿಡಿ ಸಿಗದ ಕೃಷಿ ಕೂಲಿಯಿಂದಾಗಿ ಪರ್ಯಾಯ ವೃತ್ತಿಯನ್ನರಸಿ ಹೋಗುವ ನಗರಾಭಿಮುಖ ವಲಸೆ ತಾತ್ಕಾಲಿಕವಾದರೂ ನಿರಂತರವಾಗಿದೆ. ಹೀಗಾಗಿ ಗೌಳಿಗರ ಆರ್ಥಿಕ ಸ್ಥಿತಿ ಚಿಂತಾಜನಕವಾಗಿದೆ. ಸಮುದಾಯದ ಬಹುತೇಕ ಜನರು ಬಡತನದ ರೇಖೆಗಿಂತ ಕೆಳಗೆ ಜೀವಿಸುತ್ತಿದ್ದಾರೆ.

**೪.೭.೫. ಆರೋಗ್ಯ ಹಾಗೂ ನೈರ್ಮಲ್ಯದ ಸಮಸ್ಯೆಗಳು**

ಬುಡಕಟ್ಟಿನ ಜನರು ಸರ್ವ ಚೇತನವಾದಿಗಳಾದುದರಿಂದ ಅನಾರೋಗ್ಯದ ನಿವಾರಣೆಗೆ ದೇವರಿಗೆ ಮೊರೆ ಹೋಗುತ್ತಾರೆ. ಆದುದರಿಂದ ಇವರು ಅನೇಕ ರೋಗ–ರುಜಿನಗಳಿಂದ ಬಳಲುತ್ತಾರೆ. ಆರೋಗ್ಯಕ್ಕೆ ಸಂಬಂಧಪಟ್ಟ ಅರಿವಿನ ಕೊರತೆಯಿಂದಾಗಿ ಅನಾರೋಗ್ಯ ಸಮಸ್ಯೆ ಇವರಲ್ಲಿ ಗಂಭೀರ ಸಮಸ್ಯೆಯಾಗಿದೆ. ಕೆಲವು ಬುಡಕಟ್ಟುಗಳ ಮಹಿಳೆಯರಲ್ಲಿ ಹೆರಿಗೆಯ ಸಮಯದಲ್ಲಿ ತಾಯಿ ಮತ್ತು ಮಗು ಸಾವನ್ನಪ್ಪುವ ಪ್ರಸಂಗಗಳು ಹೆಚ್ಚಾಗಿವೆ. ಇದಕ್ಕೆ ಇವರಲ್ಲಿನ ಮೂಢನಂಬಿಕೆಗಳೇ ಕಾರಣ. ಅನಾರೋಗ್ಯ ವಾತಾವರಣ ದಿಂದಾಗಿ ಬುಡಕಟ್ಟು ಜನರು ಕ್ಷಯ, ಮಲೇರಿಯಾ, ನೇತ್ರ ರೋಗ, ಮಧುಮೇಹ ಮತ್ತು ಇತರೆ ಗುಹ್ಯ ರೋಗಗಳಿಂದ ಬಳಲುತ್ತಿದ್ದಾರೆ.

ಗೌಳಿಗರು ವಾಸ ಮಾಡುವ ವಾಡೆಗಳು ಅಡವಿಯಲ್ಲಿರುವ ದುರ್ಗಮ ಪ್ರದೇಶಗಳಲ್ಲಿ ಇರುವುದರಿಂದ ಕೂಡಾ ಇವರು ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಅಲ್ಲಿಗೆ ಆರೋಗ್ಯ ಇಲಾಖೆಯ ವಾಹನ ಹೋಗಲಿಕ್ಕೆ ಯೋಗ್ಯವಾದ ಮಾರ್ಗವಿಲ್ಲ. ಕೆಲವಡೆಗೆ ಮಾತ್ರ ಕಚ್ಚಾ ಮಾರ್ಗವಿದ್ದರೂ ಕೂಡ ಮಳೆಗಾಲದಲ್ಲಿ ಅಲ್ಲಿ ಕೆಸರುಂಟಾಗಿ ನಡೆದುಕೊಂಡು ಹೋಗುವುದು ಕೂಡಾ ಕಷ್ಟ ಸಾಧ್ಯವಾಗುತ್ತದೆ. ಇದರಿಂದಾಗಿ ಸರ್ಕಾರಿ ಆರೋಗ್ಯ ವ್ಯವಸ್ಥೆಯ ಲಾಭವನ್ನು ಇವರಾಗಿಯೇ ಪಡೆದುಕೊಳ್ಳುವುದಾಗಲಿ ಅಥವಾ ಇವರಿದ್ದಲ್ಲಿಗೇ ಅದನ್ನು ತಲುಪಿಸುವುದಾಗಲೀ ಅಸಾಧ್ಯವಾಗುವಂತಹ ಸ್ಥಿತಿ ಇದೆ.

ಗೌಳಿಗರು ದೈನಂದಿನ ಆಹಾರವು ಕೂಡ ಪೌಷ್ಟಿಕಾಂಶಗಳನ್ನು ಹೊಂದಿರುವುದಿಲ್ಲ. ಅಕ್ಕಿಯ ರೊಟ್ಟಿ, ಅನ್ನ ಸಾರು ಹಾಗೂ ಹಬ್ಬ–ಹರಿದಿನಗಳ ಆಚರಣೆಗಳಲ್ಲಿ ಮಾತ್ರ ಮಾಂಸದೂಟವಿರುತ್ತದೆ. ಇದರಿಂದ ಅವರಲ್ಲಿ ಜೀವಸತ್ವಗಳ ಕೊರತೆ ವ್ಯಾಪಕವಾಗಿದೆ. ಗಂಭೀರ ಕಾಯಿಲೆಗಳ ವಿರುದ್ಧ ಇವರಿಗೆ ರೋಗನಿರೋಧಕ ಶಕ್ತಿಯ ಕೊರತೆ ಇದೆ. ದನಗಳ ಪಕ್ಕದಲ್ಲಿ ಕೊಳಚೆ ಹಾಗೂ ಜವುಗು ಸ್ಥಳಗಳಲ್ಲಿ

ವಾಸಿಸುವುದರಿಂದ ಇವರು ಅನೇಕ ಪ್ರಕಾರದ ಕಾಯಿಲೆಗಳಿಗೆ ಸುಲಭವಾಗಿಯೇ ತುತ್ತಾಗುವ ಸಾಧ್ಯತೆ ಹೆಚ್ಚು. ದಿನ ನಿತ್ಯವೂ ಸ್ನಾನ ಮಾಡುವ ರೂಢಿ ಇವರಲ್ಲಿ ಇಲ್ಲವಾದ್ದರಿಂದ ಇದರಿಂದಾಗುವ ಶಾರೀರಿಕ ಅನೈರ್ಮಲ್ಯದಿಂದಲೂ ಇವರು ರೋಗಗಳಿಗೆ ಬಲಿಯಾಗುವ ಸಾಧ್ಯತೆ ಹೆಚ್ಚಾಗುವುದು.

ಸ್ವಚ್ಛ ಕುಡಿಯುವ ನೀರಿನ ಪೂರೈಕೆಯ ಕೊರತೆ ಇವರ ಇನ್ನೊಂದು ಗಂಭೀರ ಸಮಸ್ಯೆ ಆಗಿದೆ. ಕೆಲವು ಕಡೆಗೆ ಸರಕಾರ ಕೊಳವೆ ಬಾವಿಗಳನ್ನು ನಿರ್ಮಿಸಿ ಶುದ್ಧ ನೀರನ್ನು ಪೂರೈಸಲು ಪ್ರಯತ್ನಿಸುತ್ತಿದೆ. ಕೆಲವರು ಸರಕಾರಿ ಯೋಜನೆಯಡಿ ಶೌಚಾಲಯ ನಿರ್ಮಾಣಕ್ಕೆ ಸಹಾಯಧನ ಪಡೆದಿದ್ದು, ಶೌಚಾಲಯ ಗಳನ್ನು ನಿರ್ಮಿಸಿಕೊಂಡಿದ್ದರೂ ಅವುಗಳನ್ನು ಬಳಸುವವರು ಅಥವಾ ಸ್ವಚ್ಛವಾಗಿಡುವವರು ವಿರಳ. ಕೆಲವು ವಾಡೆಗಳಲ್ಲಿ ಕೊಳವೆ ನೀರು ಹರಿದು ಹೋಗಲು ಗಟಾರಗಳನ್ನು ನಿರ್ಮಿಸಿದ್ದರೂ ಅವುಗಳನ್ನು ಸ್ವಚ್ಛವಾಗಿಟ್ಟುಕೊಳ್ಳಬೇಕೆನ್ನುವ ಕನಿಷ್ಠ ಆರೋಗ್ಯ ದೃಷ್ಟಿಕೋನ ಅವರಲ್ಲಿ ಇಲ್ಲದಿರುವುದು ಸಮಸ್ಯೆಗಳನ್ನು ಇನ್ನಷ್ಟು ಜಟಿಲಗೊಳಿಸಿದೆ.

### ೪.೭.೬. ನೈಸರ್ಗಿಕ ಸಮಸ್ಯೆಗಳು

ಕಡು ಬಡತನದಲ್ಲಿಯೇ ನಿಸರ್ಗದ ಮಡಿಲಲ್ಲಿ ಬದುಕುತ್ತಿರುವ ಗೌಳಿಗರು ನೈಸರ್ಗಿಕ ಸಮಸ್ಯೆಗಳಿಂದಲೂ ಮುಕ್ತರಾಗಿಲ್ಲ. ಉದಾ: ಭತ್ತದ ಗದ್ದೆಗೆ ನುಗ್ಗಿದ ಕಾಡಾನೆಗಳು ಪೈರನ್ನು ನಾಶ ಮಾಡುವುದು, ಕೂಲಿ ಕೆಲಸಕ್ಕೆ ಹೋದಾಗ ವಿಷಪೂರಿತ ಹಾವುಗಳ ಕಡಿತ, ಅರಣ್ಯದಲ್ಲಿ ಕರಡಿಗಳ ಆಕ್ರಮಣ, ಹುಲಿಗಳಿಂದ ದನಕರುಗಳ ಜೀವಹಾನಿ ಇತ್ಯಾದಿ. ವಿಚಿತ್ರವೆಂದರೆ ೨೧ನೆಯ ಶತಮಾನದಲ್ಲಿಯೂ ಹಲ್ಲು ನೋವಿಗೆ, ಹಾವು ಕಡಿತಕ್ಕೆ, ಜ್ವರಕ್ಕೆ, ನಾಯಿ ಕಡಿತಕ್ಕೆ ಮನೆಯಲ್ಲಿಯೇ ಇರುವ ವನಸ್ಪತಿ ಮದ್ದನ್ನೇ ಉಪಯೋಗಿಸುತ್ತಾರೆ. ಆದರೆ ಗಂಭೀರ ಸ್ಥಿತಿಗಳಲ್ಲಿ ಇದು ಪ್ರಯೋಜನಕಾರಿ ಆಗದು. ಇದಲ್ಲದೇ ಶುದ್ಧ ಆಹಾರದ ಕೊರತೆ, ಕುಡಿಯುವ ನೀರಿನ ಕೊರತೆ, ಅನಾರೋಗ್ಯಕರ ಹವಾಗುಣ, ಅರಣ್ಯ ಬೆಟ್ಟಗುಡ್ಡ ಹಾಗೂ ಕೊರಕಲು ಪ್ರದೇಶದಂತಹ ದುರ್ಗಮ ವಾತಾವರಣ ಇಂತಹ ಹಲವಾರು ರೀತಿಯ ನೈಸರ್ಗಿಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಕೆಲವು ದಟ್ಟವಾದ ಅರಣ್ಯಗಳಲ್ಲಿ ಬಿಸಿಲು, ಗಾಳಿ, ಬೆಳಕಿನ ಕೊರತೆ ಕಂಡು ಬರುತ್ತದೆ. ನೈಸರ್ಗಿಕ ವಿಕೋಪಗಳ ಪರಿಣಾಮವಾಗಿ ಆದಿವಾಸಿಗಳ ಜನಸಂಖ್ಯೆ ಕ್ಷೀಣಿಸುತ್ತಿದೆ.

ಇದಲ್ಲದೇ ಕೆಲವೊಮ್ಮೆ ಕಾಡಿಗೆ ಬೆಂಕಿ ಬಿದ್ದು, ಹುಲ್ಲಿನಿಂದ ನಿರ್ಮಿಸಲ್ಪಟ್ಟ ಗೌಳಿ ಮನೆಗಳು ಸುಟ್ಟು ಬೂದಿ ಆಗುತ್ತಿದ್ದವು. ಈಗ ಹೊಸದಾಗಿ ಮನೆ ಕಟ್ಟುವವರು ಹಂಚು, ಇಟ್ಟಂಗಿಗಳಿಂದ ಕಟ್ಟಲು ಆರಂಭಿಸಿದ್ದಾರೆ.

### ೪.೭.೭. ಆರ್ಥಿಕ ಸೌಲಭ್ಯಗಳು

ಈ ಜನರು ತಮ್ಮ ಮೂಲ ಕಸುಬನ್ನು ಸುಧಾರಿಸಿ ಮುಂದುವರೆಸಿಕೊಂಡು ಹೋಗಲು ಸರ್ಕಾರಿ ಹಾಗೂ ರಾಷ್ಟ್ರೀಕೃತ ಬ್ಯಾಂಕುಗಳ ಮೂಲಕ ಕಡಿಮೆ ಬಡ್ಡಿ ದರದ ಸಾಲ ಯೋಜನೆಗಳನ್ನು ಆರಂಭಿಸಲಾಗಿದೆ. ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳನ್ನು ಗುರುತಿಸಿ ಅವರಿಗೆ ಕೃಷಿಯೋಗ್ಯ ಜಮೀನು

ಹಾಗೂ ರಿಯಾಯತಿ ದರದಲ್ಲಿ ಬೀಜ ಗೊಬ್ಬರಗಳನ್ನು ಒದಗಿಸುವ ಅವಕಾಶ ಕಲ್ಪಿಸಲಾಗಿದೆ. ಪಶುಸಂಗೋಪನೆ ಹಾಗೂ ಹೈನುಗಾರಿಕೆ ಪ್ರೋತ್ಸಾಹ ಅಲ್ಲದೇ ಈ ಸಮುದಾಯದವರೇ ರೂಪಿಸಿಕೊಂಡಂಥ ಸ್ವ-ಸಹಾಯ ಹಾಗೂ ಇತರ ಸಂಘಗಳನ್ನು ಗುರುತಿಸಿ ಅವುಗಳಿಗೆ ಆರ್ಥಿಕ ಸೌಲಭ್ಯಗಳನ್ನು ಒದಗಿಸಿಕೊಡುವ ಮೂಲಕ ಅವುಗಳನ್ನು ಬಲಪಡಿಸಿ ಗೌಳಿಗರ ಆರ್ಥಿಕ ಅಭಿವೃದ್ಧಿಗೆ ಅವಕಾಶ ಕಲ್ಪಿಸಲಾಗಿದೆ.

**೪.೭.೮. ಸರಕಾರಿ ಅಭಿವೃದ್ಧಿ ಯೋಜನೆ/ಕಾರ್ಯಕ್ರಮಗಳಿಂದ ಪ್ರಯೋಜನ**

ಸಂದರ್ಶಿಸಿದ ಎಲ್ಲ ೨೨೫ ಕುಟುಂಬಗಳವರು ಸರ್ಕಾರಿ ಅಭಿವೃದ್ಧಿ ಕಾರ್ಯಕ್ರಮದ ಅಭಿವೃದ್ಧಿಯ ಪ್ರಯೋಜನ ತಮಗೆ ತಲುಪಿದೆ ಎಂದರು.

**ಕೋಷ್ಟಕ ೪.೧೪**

**ಸರಕಾರಿ ಯೋಜನೆಗಳ ಫಲಾನುಭವಿಗಳು**

| ಯೋಜನೆಗಳ ಹೆಸರು | ಪ್ರತಿಕ್ರಿಯಿಸಿದವರ ಸಂಖ್ಯೆ | ಶೇಕಡಾವಾರು |
|---|---|---|
| ಐ.ಆರ್.ಡಿ.ಪಿ. | ೨೧೦ | ೯೩.೩೩% |
| ಡಿ.ಪಿ.ಎ.ಪಿ. | ೧೦ | ೪.೪೪% |
| ಪಿ.ಎಂ.ಆರ್.ವಾಯ್. | ೧ | ೦.೪೪% |
| ಜೆ.ಆರ್.ವಾಯ್. | ೧೦ | ೪.೪೪% |




ಆಯ್.ಆರ್.ಡಿ.ಪಿ. ಕಾರ್ಯಕ್ರಮದಿಂದ ೨೧೦ ಕುಟುಂಬಗಳು ಲಾಭ ಪಡೆದಿದ್ದರೆ, ಡಿ.ಪಿ.ಎ.ಪಿ. ಕಾರ್ಯಕ್ರಮದಿಂದ ೧೦ ಕುಟುಂಬಗಳು, ಪಿ.ಎಂ.ಆರ್.ವಾಯ್. ದಿಂದ ಒಂದು ಕುಟುಂಬ ಹಾಗೂ ಜೆ.ಆರ್.ವಾಯ್. ದಿಂದ ೧೦ ಕುಟುಂಬಗಳು ಲಾಭ ಪಡೆದಿವೆ. ಇವುಗಳಿಂದ ಉದ್ಯೋಗ ಅವಕಾಶ ಹಾಗೂ ಹಣಕಾಸು ಪ್ರಯೋಜನವನ್ನು ಇವರು ಪಡೆದಿದ್ದರೂ ಕೂಡ ಅವುಗಳ ಲಾಭವನ್ನು ಎಷ್ಟರ

ಮಟ್ಟಿಗೆ ಮಾಡಿಕೊಂಡಿದ್ದಾರೆ ಎನ್ನುವ ಬಗ್ಗೆ ಖಚಿತ ಮಾಹಿತಿ ಸಿಗಲಿಲ್ಲ. ಈ ಪ್ರಯೋಜನ ಪಡೆಯುವಲ್ಲಿ ಮಧ್ಯವರ್ತಿಗಳು ತಮ್ಮ ಭಾಗವನ್ನು ಪಡೆಯುತ್ತಿರುವುದು ಕೂಡ ತಿಳಿದು ಬಂದಿರುತ್ತದೆ.

**೪.೭.೯. ಆರೋಗ್ಯ-ವಸತಿ ಸೌಲಭ್ಯಗಳು**

ಇತ್ತೀಚೆಗೆ ಜಿಲ್ಲಾ ಪಂಚಾಯತಿ ವತಿಯಿಂದ ಇವರ ನೆಲೆಗಳಿಗೆ ರಸ್ತೆ ಸಂಪರ್ಕ ಕಲ್ಪಿಸಲಾಗುತ್ತಿದ್ದು, ಆ ಮೂಲಕ ಇವರನ್ನು ನಾಗರಿಕ ಸಮಾಜದ ಮುಖ್ಯ ಪ್ರವಾಹದೊಂದಿಗೆ ಜೋಡಿಸುವ ಒಂದು ಪ್ರಯತ್ನ ನಡೆಯುತ್ತಲಿದೆ.

ಕೆಲವು ಕೇಂದ್ರೀಯ ಸ್ಥಾನಗಳಲ್ಲಿ ಅಥವಾ ಸಮೀಪದ ತಾಲೂಕು ಕೇಂದ್ರದಲ್ಲಿರುವ ಸರ್ಕಾರಿ ಆರೋಗ್ಯ ಘಟಕಗಳು ಇವರಿಗೆ ವಿವಿಧ ಆರೋಗ್ಯ ಸೌಲಭ್ಯಗಳನ್ನು ಒದಗಿಸುತ್ತವೆ. ಸಾಂಕ್ರಾಮಿಕ ರೋಗಗಳಿಗೆ ಚಿಕಿತ್ಸೆ, ಮಕ್ಕಳು ಹಾಗೂ ಗರ್ಭಿಣಿಯರ ಆರೋಗ್ಯ ಇತ್ಯಾದಿ ಸೌಲಭ್ಯಗಳನ್ನು ಒದಗಿಸಲು ವೈದ್ಯಕೀಯ ಸಿಬ್ಬಂದಿ ವಾಡಾಗಳಿಗೆ ಬಂದು ಮಾಹಿತಿ ಹಾಗೂ ಚಿಕಿತ್ಸೆ ಒದಗಿಸುವುದು ಹಾಗೂ ಅಗತ್ಯ ಬಿದ್ದರೆ ಆರೋಗ್ಯ ಕೇಂದ್ರಕ್ಕೆ ಬಂದು ಸೌಲಭ್ಯಗಳ ಲಾಭ ಪಡೆಯಲು ಪ್ರೇರೇಪಿಸುತ್ತಿದ್ದಾರೆ.

ಆರೋಗ್ಯ ದೃಷ್ಟಿಯಿಂದ ಶುದ್ಧ ಕುಡಿಯುವ ನೀರಿನ ಸೌಲಭ್ಯ ಒದಗಿಸಿ ಸಾಂಕ್ರಾಮಿಕ ರೋಗಗಳನ್ನು ದೂರವಿಡುವ ಪ್ರಯತ್ನ ಮಾಡಲಾಗುತ್ತಿದೆ. ಅನೇಕ ವಾಡಾಗಳಲ್ಲಿ ಬೋರವೆಲ್ ಬಾವಿಗಳ ಸೌಲಭ್ಯಗಳನ್ನು ಕಲ್ಪಿಸಲು ಜಿಲ್ಲಾ ಪರಿಷತ್ತು ಹಾಗೂ ಮಂಡಲ ಪಂಚಾಯತಿಗಳು ಪ್ರಯತ್ನಿಸುತ್ತಿವೆ.

ದೊಡ್ಡಿಗಳಲ್ಲಿ ನೈರ್ಮಲ್ಯ ಕಾಪಾಡಿಕೊಳ್ಳುವುದರ ಕುರಿತು ಅರಿವನ್ನು ಮೂಡಿಸಲಾಗುತ್ತಿದೆ. ವಸತಿಗಳಿಲ್ಲದವರಿಗೆ 'ಆಶ್ರಯ' ವಸತಿ ಯೋಜನೆಯಡಿ ವಸತಿಗಳನ್ನು ಕೂಡ ಒದಗಿಸಲಾಗುತ್ತಿದೆ. ಕೆಲವು ವೈಜ್ಞಾನಿಕ ಸಂಘ-ಸಂಸ್ಥೆಗಳು ವಿಜ್ಞಾನ ಜಾಥಾ ನಡೆಸುವುದರ ಮೂಲಕ ಇವರನ್ನು ಮೂಢ ನಂಬಿಕೆಗಳಿಂದ ಮುಕ್ತರಾಗಿಸಲು ಪ್ರಯತ್ನಗಳು ನಡೆಯುತ್ತಲಿವೆ.

**೪.೮. ಶೈಕ್ಷಣಿಕ ಸಮಸ್ಯೆಗಳು**

ಭಾರತದ (ಮಿಜೋರಾಮ್, ನಾಗಾಲ್ಯಾಂಡ್, ಅರುಣಾಚಲಪ್ರದೇಶ, ಮೇಘಾಲಯ ರಾಜ್ಯಗಳನ್ನು ಹೊರತುಪಡಿಸಿ) ಬುಡಕಟ್ಟುಗಳಲ್ಲಿ ಅನಕ್ಷರತೆಯ ಪ್ರಮಾಣ ಅಧಿಕ ಇದೆ. ಸನ್ ೨೦೦೧ರ ಜನಗಣತಿಯ ಪ್ರಕಾರ ಬುಡಕಟ್ಟು ಸಾಕ್ಷರತೆ ಶೇ. ೨೯.೩೦% ರಷ್ಟಿದೆ. ಒಟ್ಟಾರೆ ದೇಶದ ಸಾಕ್ಷರತೆ ಶೇ. ೬೭.೧೦% ರಷ್ಟಿದೆ.

ಅನಕ್ಷರತೆಯೇ ಬುಡಕಟ್ಟು ಜನರ ಎಲ್ಲಾ ಸಮಸ್ಯೆಗಳಿಗೆ ಮೂಲ ಎಂದರೆ ತಪ್ಪಾಗಲಾರದು. ಇದರಿಂದ ಅಜ್ಞಾನ, ಮೂಢನಂಬಿಕೆ, ದೌರ್ಜನ್ಯಕ್ಕೆ ಒಳಗಾಗುವುದು ಹೆಚ್ಚಾಗುತ್ತದೆ. ಸಾಕ್ಷರತೆಯ ಪ್ರಮಾಣ ಬುಡಕಟ್ಟುಗಳಲ್ಲಿ ನಿಧಾನ ಗತಿಯಲ್ಲಿ ಹೆಚ್ಚುತ್ತಿದ್ದು, ಇದೊಂದರಿಂದಲೇ ಅಭಿವೃದ್ಧಿಯನ್ನು ಸಾಧಿಸಲು ಸಾಧ್ಯವಾಗುತ್ತಿಲ್ಲ. ಸನ್ ೨೦೦೧ರ ಜನಗಣತಿಯ ಪ್ರಕಾರ ಬುಡಕಟ್ಟು ಸಾಕ್ಷರತೆ ದೇಶದ ಸರಾಸರಿ ಸಾಕ್ಷರತೆಯ ಪ್ರತಿಶತ ೧೦ಕ್ಕಿಂತಲೂ ಕಡಿಮೆಯಿದೆ. ಬಹುಸಂಖ್ಯಾತ ಆದಿವಾಸಿಗಳು ನಿರಕ್ಷರಿ ಕುಕ್ಷಿಗಳಾಗಿದ್ದಾರೆ. ಸುಮಾರು ೭೨% ಹೆಚ್ಚು ಆದಿವಾಸಿಗಳು ನಿರಕ್ಷರಿಯಾಗಿದ್ದಾರೆ. ಬಹುಸಂಖ್ಯಾತ

ಆದಿವಾಸಿಗಳಿಗೆ ತಮ್ಮದೇ ಆದ ಲಿಪಿಯಿಲ್ಲ. ನೆರೆಯೊರೆಯವರ ಭಾಷೆ ಸಂಪೂರ್ಣವಾಗಿ ಬರುವುದಿಲ್ಲ, ಅವರ ಮಾತೃಭಾಷೆಯಲ್ಲಿ ಶಿಕ್ಷಣಕೊಡಿಸುವುದು ದೂರದ ಮಾತು. ಪ್ರಾದೇಶಿಕ ಭಾಷೆಯಲ್ಲಿ ಶಿಕ್ಷಣ ನೀಡಬೇಕು. ನಗರದಿಂದ ಶಿಕ್ಷಕರು ಕಾಡಿಗೆ ಹೋಗಿ ಶಿಕ್ಷಣ ನೀಡುವುದು. ನಗರವಾಸಿಗಳಿಗೆ ತೊಂದರೆಯ ವಿಷಯ. ಆದಿವಾಸಿಗಳಿಗೆ ಶಿಕ್ಷಣದ ಮಹತ್ವ ಅರಿಯದೇ ಇರುವುದರಿಂದ ಶಿಕ್ಷಣ ನೀಡುವುದು ಬಹಳ ತೊಂದರೆದಾಯಕ ಸಂಗತಿಯಾಗಿದೆ.

ನನ್ನ ಅಧ್ಯಯನದ ಪ್ರಕಾರ ಉತ್ತರ ಕನ್ನಡದ ಗೌಳಿಗರಲ್ಲಿ ಸಾಕ್ಷರತೆ ಪ್ರಮಾಣ ೪೦.೮% ಇದ್ದು ೫೯.೨% ನಿರಕ್ಷರಿಗಳಾಗಿದ್ದಾರೆ. ಇವರು ಮಾತನಾಡುವ ಭಾಷೆ ಮಿಶ್ರ ಮರಾಠಿ ಆಗಿದ್ದು, ಆ ಭಾಷೆಗೆ ಸ್ವತಂತ್ರವಾದ ಲಿಪಿ ಇಲ್ಲ. ಇದರಿಂದ ಇವರಿಗೆ ಶಿಕ್ಷಣ ನೀಡಲು ಸಮರ್ಪಕ ಮಾಧ್ಯಮ ಭಾಷೆಯ ಕೊರತೆಯಿರುವುದು ಸ್ಪಷ್ಟ. ತಮಗಾಗಲಿ, ತಮ್ಮ ಮಕ್ಕಳಿಗೆ ಆಗಲಿ ವಿದ್ಯೆ ಅಗತ್ಯವಿದೆಯೆಂದು ಇವರು ಭಾವಿಸುವುದೇ ಇಲ್ಲ. ಚಿಕ್ಕ ವಯಸ್ಸಿನಲ್ಲೇ, ತಮ್ಮ ಮಕ್ಕಳನ್ನು ಅವರ ಇಚ್ಛೆಯ ವಿರುದ್ಧವಾಗಿ ದುಡಿಮೆಯಲ್ಲಿ ತೊಡಗಿಸಿ ತಮ್ಮ ಕುಲದ ಉದ್ಯೋಗವನ್ನೇ ಮುಂದುವರೆಸಿಕೊಂಡು ಹೋಗುವ ಅನಿವಾರ್ಯತೆಯನ್ನು ಉಂಟು ಮಾಡಿಕೊಂಡಿದ್ದಾರೆ.

ಇವರ ಭೌಗೋಲಿಕ ಪ್ರತ್ಯೇಕತೆಯಿಂದಾಗಿ ಔಪಚಾರಿಕ ಶಿಕ್ಷಣ ನೀಡುವಂತಹ ಸಂಸ್ಥೆಗಳನ್ನು ಸ್ಥಾಪಿಸಲು ಸಾಧ್ಯವಾಗದಂತಹ ಪರಿಸ್ಥಿತಿ ಇದೆ. ಇತ್ತೀಚೆಗೆ ಕರ್ನಾಟಕ ಸರ್ಕಾರ ಕೆಲವು ಕೇಂದ್ರೀಯ ಸ್ಥಾನಗಳಲ್ಲಿ ೫ನೆಯ ವರ್ಗ ಹಾಗೂ ೭ನೆಯ ವರ್ಗದವರೆಗೆ ಶಿಕ್ಷಣ ನೀಡಲು ಶಾಲೆಯನ್ನು ಒದಗಿಸಿಕೊಟ್ಟಿದೆ. ಹೀಗಿದ್ದರೂ ಶಿಕ್ಷಕರೆ ಮನೆ ಮನೆಗೆ ಹೋಗಿ ಮಕ್ಕಳನ್ನು ಶಾಲೆಗಳಿಗೆ ಕಳಿಸಲು ಒತ್ತಾಯ ಮಾಡಬೇಕಾಗುತ್ತದೆ. ಕೆಲವು ವಾಡೆಗಳಲ್ಲಿ ಅಂಗನವಾಡಿಗಳನ್ನು ಆರಂಭಿಸಲಾಗಿದೆ. ಹೆಣ್ಣುಮಕ್ಕಳನ್ನು ಹೈಸ್ಕೂಲು ಅಥವಾ ಕಾಲೇಜ ಶಿಕ್ಷಣ ಒದಗಿಸಲು ನಗರಗಳಿಗೆ ಅಥವಾ ಬೇರೆ ಪ್ರದೇಶಗಳಿಗೆ ಕಳಿಸುವುದು ಬಹಳೇ ಕಡಿಮೆ. ಗಂಡು ಮಕ್ಕಳು ಕೂಡ ಒಂದು ನಿಶ್ಚಿತ ಹಂತದವರೆಗೂ ಓದದೇ ನಡುವೆಯೇ ಶಾಲೆ ಬಿಡುವುದು ಕಂಡು ಬರುತ್ತದೆ. ಉನ್ನತ ಶಿಕ್ಷಣ ಎಂದರೆ ಪದವಿ, ಸ್ನಾತಕೋತ್ತರ ಅಧ್ಯಯನ ಮಾಡುವವರ ಸಂಖ್ಯೆ ಬೆರಳೆಣಿಕೆಯಷ್ಟಿದೆ ಎಂದರೆ ಈ ಸಮಸ್ಯೆಯ ಗಂಭೀರತೆಯ ಅರಿವು ಉಂಟಾಗುವುದು.

ಅನಕ್ಷರತೆಯೇ ಇವರ ಎಲ್ಲ ಸಮಸ್ಯೆಗಳ ಮೂಲ ಕಾರಣವಾಗಿದೆ ಎನ್ನಬಹುದು. ಅಜ್ಞಾನ, ಮೂಢನಂಬಿಕೆ, ದೌರ್ಜನ್ಯವನ್ನು ವಿರೋಧಿಸದೇ ಇರುವುದು, ಶೋಷಣೆಗೆ ಒಳಗಾಗುವುದು ಇವೆಲ್ಲಕ್ಕೂ ನಿರಕ್ಷರತೆಯೇ ಕಾರಣ. ಸರ್ಕಾರ ಅನೇಕ ಕ್ರಮಗಳನ್ನು ಕೈಗೊಂಡಿದ್ದರೂ, ಇವರಲ್ಲಿ ಸಾಕ್ಷರತೆಯ ಪ್ರಮಾಣ ಅತಿ ನಿಧಾನಗತಿಯಲ್ಲಿ ಹೆಚ್ಚಳವಾಗುತ್ತಿದ್ದು, ಅವರ ಅಭಿವೃದ್ಧಿಯಲ್ಲಿ ಇದು ಕೂಡಾ ಒಂದು ಸಮಸ್ಯೆ ಆಗಿದೆ.

**ಕೋಷ್ಟಕ ೪.೧೫**

**ಗೌಳಿಗರ ಶೈಕ್ಷಣಿಕ ಮಟ್ಟ**

| ಶೈಕ್ಷಣಿಕ ಮಟ್ಟ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|
| ೭ನೇ ತರಗತಿ ವರೆಗೆ | ೫೦೯ | ೩೫.೦ |
| ಎಸ್.ಎಸ್.ಎಲ್.ಸಿ. | ೪೫ | ३.೧ |
| ಪಿ.ಯು.ಸಿ | ೨೩ | ೧.೬ |
| ಡಿಗ್ರಿ | ೯ | ೦.೬ |
| ಇತರೆ | ೭ | ೦.೫ |
| ಅನಕ್ಷರಸ್ತರು | ೮೬೧ | ೫೯.೨ |
| **ಒಟ್ಟು** | **೧೪೫೪** | **೧೦೦.೦೦** |




ಸಂದರ್ಶಿಸಿದ ಒಟ್ಟಾರೆ ೨೨೫ ಕುಟುಂಬಗಳಲ್ಲಿ ಕಂಡುಬಂದ ಶೈಕ್ಷಣಿಕ ಮಟ್ಟದ ವಿವರಗಳ ಪಟ್ಟಿಯನ್ನು ಮೇಲೆ ಒದಗಿಸಲಾಗಿದೆ. ೭ನೇ ವರ್ಗದ ವರೆಗೆ ೫೦೯ ಜನ, ಎಸ್.ಎಸ್.ಎಲ್.ಸಿ. ೪೫ ಜನ, ಪಿ.ಯು.ಸಿ. ೨೩ ಜನ, ಪದವಿ ೯ ಜನ ಹಾಗೂ ಇತರ ಶಿಕ್ಷಣ ಪಡೆದವರು ಕೇವಲ ೭ ಜನರಿದ್ದಾರೆ. ಅಂದರೆ ನಮ್ಮ ಸರ್ವೇಕ್ಷಣೆಯಲ್ಲಿ ಉತ್ತರ ಕನ್ನಡ ಜಿಲ್ಲೆಯ ಗೌಳಿಗ ಸಮುದಾಯದ ಶಿಕ್ಷಣ ಮಟ್ಟ ಅವಲೋಕಿಸಿದಾಗ ಅನಕ್ಷರಸ್ಥರೆ (೫೯.೨%) ಹೆಚ್ಚು. ಅಕ್ಷರಸ್ಥರು ೪೦.೮%. ಪ್ರಾಥಮಿಕ ಮಟ್ಟದ (೭ನೇ ತರಗತಿಯವರೆಗೆ ಅಥವಾ ಅದಕ್ಕಿಂತಲೂ ಕಡಿಮೆ) ಶಿಕ್ಷಣ ಹೊಂದಿದವರು ೩೫.೫%. ಎಸ್.ಎಸ್.ಎಲ್.ಸಿವರೆಗೆ ಓದಿದವರು ೩.೧%. ಪಿಯುಸಿವರೆಗೆ ಓದಿದವರು ೧.೬%. ಪದವಿವರೆಗೆ ಓದಿದವರು ೦.೬%. ಈ ಸ್ಥಿತಿಗೆ ೭ನೇ ವರ್ಗದ ನಂತರ ಶಾಲೆಗೆ ಹೋಗುವವರ ಸಂಖ್ಯೆ ಕ್ರಮೇಣವಾಗಿ ಇಳಿಮುಖವಾಗುವುದು ಕಾರಣವಾಗಿದೆ. ಇತ್ತೀಚಿಗೆ ಸಾಮಾನ್ಯವಾಗಿ ಬಹುತೇಕ ಎಲ್ಲ ವಾಡೆಗಳಲ್ಲಿ

ಅಂಗನವಾಡಿ ಹಾಗೂ ಕಿರಿಯ ಪ್ರಾಥಮಿಕ ಶಾಲೆಗಳು (೮೦%) ಇರುವುದರಿಂದ ಮತ್ತು ೨-೩ ಕಿ.ಮೀ ಅಂತರದಲ್ಲಿ ಹಿರಿಯ ಪ್ರಾಥಮಿಕ ಶಾಲೆಗಳನ್ನು ಹೊಂದಿರುವುದರಿಂದ ಪ್ರಾಥಮಿಕ ಶಿಕ್ಷಣಮಟ್ಟ ೩೫% ರವರೆಗೆ ಏರಿದೆಯನ್ನಬಹುದು. ಯಾವ ವಾಡೆಗಳಲ್ಲಿಯೂ ಮಾಧ್ಯಮಿಕ ಶಾಲೆಗಳು ಇರುವುದಿಲ್ಲವಾದ್ದರಿಂದ ೭ನೇ ವರ್ಗದವರೆಗೆ ಮಾತ್ರ ಮಕ್ಕಳನ್ನು ಶಾಲೆಗೆ ಕಳುಹಿಸುತ್ತಾರೆ. ಆದರೆ ಆ ನಂತರ ಹೈಸ್ಕೂಲ ಶಿಕ್ಷಣಕ್ಕೆ ದೂರದ ಊರುಗಳಿಗೆ ಕಳುಹಿಸಲು ಇಷ್ಟ ಪಡುವುದಿಲ್ಲ. ಯಾಕೆಂದರೆ ಮಾಧ್ಯಮಿಕ ಶಿಕ್ಷಣದ ಸಲುವಾಗಿ ವಾಡೆಯಿಂದ ದೂರ ಕಳುಹಿಸಲು ಸಾಂಪ್ರದಾಯಿಕ ಕಟ್ಟಳೆಗಳು ಅಡ್ಡಿ ಬರುತ್ತವೆ. ಪ್ರೌಢಾವಸ್ಥೆಯಲ್ಲಿ ಹೆಣ್ಣು ಪ್ರಕೃತಿದತ್ತವಾಗಿ ಋತುಮತಿಯಾದ ದಿನದಿಂದ ಲೈಂಗಿಕ ದೌರ್ಜನ್ಯದ ಭಯದಿಂದ ಶಾಲೆಗೆ ಹೋಗುವುದನ್ನು ಬಿಡಿಸಿ ಮದುವೆ ಮಾಡಲು ಅಣಿಯಾಗುತ್ತಾರೆ. ಗಂಡು ಮಕ್ಕಳು ಸಹಿತ ತಮ್ಮ ವಾಡೆಯಲ್ಲಿದ್ದ ಪ್ರಾಥಮಿಕ ಶಿಕ್ಷಣದ ನಂತರ ಹೈಸ್ಕೂಲ ಶಿಕ್ಷಣಕ್ಕೆ ಬೇರೆ ಊರಿಗೆ ಹೋಗುವ ಬದಲು ಪಾಲಕರ ಜೊತೆಗೆ ಕೂಲಿಗೆ ಹೋಗುವುದೇ ಹೆಚ್ಚು. ಪ್ರಾಥಮಿಕ ಶಾಲಾ ಶಿಕ್ಷಣದ ಹಂತದಲ್ಲಿ ಸಿಗುವ ಸರಕಾರಿ ಬೆಂಬಲ, ಪ್ರೋತ್ಸಾಹ ಪ್ರೌಢಶಾಲೆ, ಕಾಲೇಜು ಹಂತದಲ್ಲಿ ಗೌಳಿ ಮಕ್ಕಳಿಗೆ ಪ್ರತ್ಯೇಕವಾಗಿ ಸಿಗದೆಯಿರುವುದರಿಂದ ಆ ಹಂತದಲ್ಲಿ ಶಾಲೆ ಬಿಡುವವರ ಸಂಖ್ಯೆ ಹೆಚ್ಚಾಗಲೂ ಒಂದು ಕಾರಣ. ಆದರೂ 'ವನವಾಸಿ ಕಲ್ಯಾಣ ಕೇಂದ್ರ' ದಿಂದ ಕೇವಲ ಗೌಳಿ ಮಕ್ಕಳಿಗಾಗಿ ಮಾತ್ರ ಅಂಬಿಕಾನಗರದಲ್ಲಿ ಸ್ಥಾಪಿತವಾದ ವನವಾಸಿ ವಿದ್ಯಾರ್ಥಿ ನಿಲಯಕ್ಕೆ ಎಷ್ಟೋ ಗೌಳಿ ವಿದ್ಯಾರ್ಥಿಗಳು ಮಾಧ್ಯಮಿಕ ಶಿಕ್ಷಣದ ಸಲುವಾಗಿ ಹೋಗುತ್ತಾರೆ. ಕಾಲೇಜು ಶಿಕ್ಷಣಕ್ಕೆ ಹೋಗುವವರು ಅತಿ ವಿರಳ ಎನ್ನಬಹುದು. ಇತರ ಡಿಪ್ಲೋಮಾ, ಡಿ.ಎಡ್., ಬಿ.ಎಡ್., ಮುಂತಾದ ಅಧ್ಯಯನಕ್ಕೆ ಹೋಗುವವರು ಇನ್ನು ಕಡಿಮೆ. ಏಕೆಂದರೆ ಇವರಿಗೆ ಆ ಕುರಿತು ಮಾಹಿತಿ ಹಾಗೂ ಮಾರ್ಗದರ್ಶನದ ಕೊರತೆಯಿರುತ್ತದೆ. ಉಚ್ಛ ಹಾಗೂ ತಾಂತ್ರಿಕ ಶಿಕ್ಷಣದತ್ತ ಇನ್ನೂ ಒಲವು ಹೆಚ್ಚಿಲ್ಲ. ಏಕೆಂದರೆ ಆರ್ಥಿಕ ತೊಂದರೆ ಒಂದು ಕಡೆಯಾದರೆ, ಕೆಲವು ಯುವಕರು ಪದವಿವರೆಗೆ ಶಿಕ್ಷಣ ಪಡೆದರೂ ಅವರಿಗೆ ಯೋಗ್ಯ ಆದಾಯ ನೀಡುವ ಉದ್ಯೋಗ ದೊರಕಿಲ್ಲವೆಂಬುದು ಇನ್ನೊಂದು ಕಾರಣ. ಅವರು ಹೇಳುವ ಪ್ರಕಾರ ಧನಗರ್ ಗೌಳಿ ಸಮುದಾಯವು ಪರಿಶಿಷ್ಟ ಪಂಗಡಕ್ಕೆ ಸೇರಬೇಕಾದರೂ ಸರಕಾರವು ಹಿಂದುಳಿದ ಜಾತಿ ಪ್ರವರ್ಗ-೧ ಗುಂಪಿಗೆ ಸೇರಿಸಿದೆಯಾದ್ದರಿಂದ ಯಾವುದೇ ರಿತಿಯ ಸಹಾಯ ಸೌಲಭ್ಯ ದೊರಕುತ್ತಿಲ್ಲ. ಹೀಗಾಗಿ ಮಕ್ಕಳನ್ನು ಓದಿಸಲು ಅನುಕೂಲವಾಗಿಲ್ಲ.

ಅವರದು ಮರಾಠಿ ಮಾತೃಭಾಷೆಯಾಗಿದ್ದರಿಂದ ಗೌಳಿ ಮಕ್ಕಳಿಗೆ ಕನ್ನಡ ಮಾಧ್ಯಮ ಶಿಕ್ಷಣಕ್ಕೆ ಹೊಂದಿಕೊಳ್ಳಲು ವಿಳಂಬವಾಗುತ್ತಿದೆ ಆದರೆ ಅನಿವಾರ್ಯ. ವಿಶೇಷವಾಗಿ ಹೆಚ್ಚು ಹೆಚ್ಚು ಆಶ್ರಮ ಶಾಲೆ/ ವಸತಿ ಶಾಲೆ ಪ್ರಾರಂಭಿಸಿ ಅವರ ಭಾಷೆ ಗೊತ್ತಿರುವ ಸ್ವಯಂ ಸೇವಕ ಶಿಕ್ಷಕರನ್ನು ನೇಮಿಸಿಕೊಂಡರೆ, ವಸತಿ ಶಾಲೆಗಳಲ್ಲಿ ಅವರು ಮಕ್ಕಳ ಜೊತೆಗೆ ಹೆಚ್ಚಿನ ಸಮಯ ಕಳೆಯುವುದಲ್ಲದೆ ಒಳಾಂಗಣ, ಹೊರಾಂಗಣ ಚಟುವಟಿಕೆಗಳ ಮೂಲಕ ಮಕ್ಕಳಲ್ಲಿ ಹೆಚ್ಚಿನ ಆಸಕ್ತಿಯನ್ನು ಮೂಡಿಸಬಹುದು. ಇದು ಆಶ್ರಮ ಶಾಲೆಗಳಿಂದ ಮಾತ್ರ ಸಾಧ್ಯ. ಅನೌಪಚಾರಿಕ ಮಾಧ್ಯಮಗಳ ಮುಖಾಂತರ ಓದು ಬರಹದ ಅವಶ್ಯಕತೆ ಎಷ್ಟು ಅಗತ್ಯ ಎಂಬುದನ್ನು ಮನವರಿಕೆ ಮಾಡಿಕೊಟ್ಟರೆ ಸಾಕ್ಷರತೆ ಪ್ರಮಾಣವು ಇನ್ನು ಹೆಚ್ಚಾಗಬಹುದು.

**೪.೮.೧. ಪಂಚವಾರ್ಷಿಕ ಯೋಜನೆಯಲ್ಲಿ ಶಿಕ್ಷಣ ಯೋಜನೆಗಳು**

ಭಾರತ ಸರಕಾರದ ಪ್ರಥಮ ಪಂಚವಾರ್ಷಿಕ ಯೋಜನೆಯಲ್ಲಿಯೇ ಬುಡಕಟ್ಟು ನೆಲೆಗಳಲ್ಲಿ ಪ್ರಾಥಮಿಕ ಶಾಲೆಗಳನ್ನು ತೆರೆಯಲಾಗಿದೆ. ಆದರೂ ಕೂಡ ದಟ್ಟಡವಿಗಳಲ್ಲಿ ಬದುಕುತ್ತಿರುವ ಇವರು ಈ ಸೌಲಭ್ಯಗಳ ಪೂರ್ಣ ಪ್ರಯೋಜನ ಪಡೆಯಲು ಸಾಧ್ಯವಾಗಿಲ್ಲ.

ಜಿಲ್ಲೆಯು ಬೆರಳೆಣಿಕೆಯಷ್ಟು ಮಾತ್ರ 'ಆಶ್ರಮ' ಮಾದರಿಯ ವಸತಿ ಶಾಲೆಗಳನ್ನು ಹೊಂದಿದೆ. ಈ ಸಮುದಾಯಕ್ಕೆ ಸೇರಿದ ಉನ್ನತ ಶಿಕ್ಷಣ ಬಯಸುವ ವಿದ್ಯಾರ್ಥಿಗಳಿಗೆ ಶಿಕ್ಷಣ ಶುಲ್ಕ ಹಾಗೂ ಪರೀಕ್ಷಾ ಶುಲ್ಕಗಳಲ್ಲಿ ವಿನಾಯಿತಿ ನೀಡುವುದಲ್ಲದೇ, ವಿದ್ಯಾರ್ಥಿ ವೇತನ, ಪುಸ್ತಕ ವಿತರಣೆ ಹಾಗೂ ವಿದ್ಯಾರ್ಥಿ ನಿಲಯಗಳ ಸೌಲಭ್ಯ ಒದಗಿಸಲಾಗಿದೆ. ಸ್ಪರ್ಧಾತ್ಮಕ ಪರೀಕ್ಷೆಗೆ ಕುಳಿತುಕೊಳ್ಳ ಬಯಸುವ ಅಭ್ಯರ್ಥಿಗಳಿಗೆ ಉಚಿತ ಪಾಠ-ಪ್ರವಚನ ವ್ಯವಸ್ಥೆಯಿದೆ. ಅಲ್ಪಸಂಖ್ಯಾತ ಹಾಗೂ ಹಿಂದುಳಿದ ವರ್ಗಗಳ ಇಲಾಖೆಗಳ ಮೂಲಕ ಉಚಿತ ವಿದ್ಯಾರ್ಥಿ ನಿಲಯಗಳ ವ್ಯವಸ್ಥೆಯನ್ನು ಸರ್ಕಾರ ನೋಡಿಕೊಳ್ಳುವುದು. ರಾಜ್ಯ ವಯಸ್ಕರ ಶಿಕ್ಷಣ ಸಮಿತಿ, ರಾಷ್ಟ್ರೀಯ ಸಾಕ್ಷರತಾ ಆಂದೋಲನ ಸಮಿತಿ ಇವುಗಳ ಮೂಲಕ ಇವರ ಸಾಕ್ಷರತೆ ಹಾಗೂ ಶೈಕ್ಷಣಿಕ ಮಟ್ಟವನ್ನು ಎತ್ತರಿಸಲು ಪ್ರಯತ್ನ ಮಾಡಲಾಗುತ್ತಲಿದೆ.

**೪.೯. ರಾಜಕೀಯ ಸಮಸ್ಯೆಗಳು**

ಬುಡಕಟ್ಟು ಜನರ ರಾಜಕೀಯ ನಾಯಕತ್ವದ ಕೊರತೆಯಿಂದಲೋ ಅಥವಾ ಸರ್ಕಾರ ಬುಡಕಟ್ಟು ಜನರು ಯಾರು ಎಂದು ಗುರುತಿಸಲು ಸಾಧ್ಯವಾಗದೇ ಇರುವುದರಿಂದಲೋ ಅಥವಾ ಬುಡಕಟ್ಟು ಜನರು ತಮ್ಮ ಸಮಸ್ಯೆಗಳನ್ನು ಸರಿಯಾಗಿ ಪ್ರತಿನಿಧಿಸಲು ನಾಯಕತ್ವ ಹಾಗೂ ವೇದಿಕೆಯ ಕೊರತೆಯಿಂದಲೋ ಅನೇಕ ಬುಡಕಟ್ಟುಗಳು ಸರ್ಕಾರದಿಂದ ಅಧಿಕೃತ ಸ್ಥಾನಮಾನ ಪಡೆಯುವುದೇ ಇಲ್ಲ. ಭಾರತದಾದ್ಯಂತ ಇಂತಹ ಅನೇಕ ಉದಾಹರಣೆಗಳನ್ನು ಕಾಣಬಹುದು. ಮೀಸಲಾತಿ ನೀತಿ ರೂಪಿಸುವ ಸಂದರ್ಭದಲ್ಲಿ ಜಾತಿ ವ್ಯವಸ್ಥೆಯಿಂದ ಬೇರೆಯಾಗಿ ಉಳಿದ ಬುಡಕಟ್ಟು ಯಾವುದು ಎಂಬ ವ್ಯತ್ಯಾಸದ ಅರಿವಿನ ಕೊರತೆಯಿಂದಾಗಿ ಮೀಸಲಾತಿ ನೀತಿ ಮತ್ತು ಆಯೋಗಗಳ ಶಿಫಾರಸ್ಸುಗಳ ಅನುಷ್ಠಾನ ಸಾಧ್ಯವಾಗುವುದಿಲ್ಲ. ಇಂಥ ಸಂದರ್ಭದಲ್ಲಿ ಆರ್ಥಿಕವಾಗಿ ಸಬಲವಾಗಿರುವ ಹಾಗೂ ರಾಜಕೀಯ ನಾಯಕತ್ವ ಹೊಂದಿರುವ ಜಾತಿಗಳು ಅಥವಾ ಬುಡಕಟ್ಟುಗಳೇ 'ಬುಡಕಟ್ಟು' ಎಂದು ಸರ್ಕಾರದಿಂದ ಮಾನ್ಯತೆ ಪಡೆದು ಸಂಬಂಧಿಸಿದ ಸೌಲಭ್ಯಗಳನ್ನು ಪಡೆಯುತ್ತಿವೆ. ನಿಜವಾಗಿಯೂ 'ಬುಡಕಟ್ಟು'ಗಳಾಗಿದ್ದು ಜಾತಿ ವ್ಯವಸ್ಥೆಯಿಂದ ದೂರವಿರುವ ಎಷ್ಟೋ ಬುಡಕಟ್ಟುಗಳು ಇಂದಿಗೂ ಬುಡಕಟ್ಟು ಸ್ಥಾನಮಾನ ಪಡೆಯದೇ ಸರ್ಕಾರದ ಎಲ್ಲ ಅವಕಾಶಗಳಿಂದ ವಂಚಿತವಾಗಿವೆ ಎಂದರೆ ತಪ್ಪಿಲ್ಲ. ಉದಾ: ಕರ್ನಾಟಕದ ಕಾಡು ಗೊಲ್ಲರು ದಕ್ಷಿಣ ಕನ್ನಡ ಜಿಲ್ಲೆಯ ಕುಡಬಿಗಳು, ಉತ್ತರ ಕನ್ನಡ ಜಿಲ್ಲೆಯ ಧನಗರ ಗೌಳಿಗರು ಮತ್ತು ಉತ್ತರ ಕರ್ನಾಟಕದ ಕೆಲವು ಸಮುದಾಯಗಳು ಬುಡಕಟ್ಟುಗಳಾಗಿದ್ದರೂ ಕೂಡ ಸರ್ಕಾರದ ಮೀಸಲಾತಿ ನೀತಿಯಡಿ ಇವುಗಳನ್ನು ಹಿಂದುಳಿದ ವರ್ಗಗಳೆಂದು ಪರಿಗಣಿಸಲಾಗಿದೆ.

ಭಾರತದಲ್ಲಿ ೫೨೯ ವಿಧಾನಸಭಾ ಮತ್ತು ೪೬ ಲೋಕಸಭಾ ಕ್ಷೇತ್ರಗಳನ್ನು ಬುಡಕಟ್ಟಿನವರಿಗಾಗಿ ಮೀಸಲಿರಿಸಲಾಗಿದೆ. ಕರ್ನಾಟಕದಲ್ಲಿ ಕೇವಲ ೨ ಲೋಕಸಭಾ ಹಾಗೂ ೧೫ ವಿಧಾನಸಭಾ ಕ್ಷೇತ್ರಗಳನ್ನು

ಬುಡಕಟ್ಟಿನವರಿಗಾಗಿ ಮೀಸಲಿರಿಸಲಾಗಿದೆ. ಜನಸಂಖ್ಯಾ ಆಧಾರದ ಮೇಲೆ ಕನಿಷ್ಠ ೨೨ ವಿಧಾನಸಭಾ ಕ್ಷೇತ್ರಗಳನ್ನಾದರೂ ಬುಡಕಟ್ಟಿನವರಿಗಾಗಿ ಮೀಸಲಿರಿಸಬೇಕಾಗುವುದು. ಇತ್ತೀಚೆಗೆ ಗ್ರಾಮ ಪಂಚಾಯತ್, ಮಂಡಲ್ ಪಂಚಾಯತ್, ತಾಲೂಕ ಪಂಚಾಯತ್, ಜಿಲ್ಲಾ ಪಂಚಾಯತ್‌ಗಳಲ್ಲಿ ಜನಸಂಖ್ಯೆಗನುಗುಣವಾಗಿ ಮೀಸಲಾತಿಯನ್ನು ಬುಡಕಟ್ಟಿನವರಿಗಾಗಿ ಕಲ್ಪಿಸಿರುವುದು ಸ್ವಾಗತಾರ್ಹ.

ಕರ್ನಾಟಕದ ಗೌಳಿ (ಧನಗರ ಗೌಳಿ) ಸಮುದಾಯವು ಕೂಡ ಈ ಮೇಲಿನ ಸಂಗತಿಗಳಿಗೆ ಅಪವಾದವಾಗಿಲ್ಲ. ಈ ಗೌಳಿಗರಿಗೆ ಹೆಚ್ಚು ಕಡಿಮೆ ರಾಜಕೀಯ ಅಸ್ತಿತ್ವವೇ ಇಲ್ಲವೆಂದು ಹೇಳಬಹುದು. ಇತ್ತೀಚೆಗೆ ಒಬ್ಬಿಬ್ಬರು ಮಂಡಳ ಪಂಚಾಯತಿ ಹಾಗೂ ತಾಲೂಕು ಪಂಚಾಯತಿಗಳ ಸದಸ್ಯರಾಗಿದ್ದಾರೆ ಎಂದರೂ ಕೂಡಾ ಇದರಿಂದ ಇವರ ರಾಜಕೀಯ ಸ್ಥಾನಮಾನದಲ್ಲಿ ಯಾವುದೇ ವ್ಯತ್ಯಾಸವಾಗಿಲ್ಲ. ಸರ್ಕಾರವು ಇವರನ್ನು ಪರಿಶಿಷ್ಠ ಬುಡಕಟ್ಟು (Scheduled Tribe) ಎಂದು ಗುರುತಿಸಬೇಕೆಂದು ಇತ್ತೀಚೆಗೆ ಈ ಸಮುದಾಯದ ಕೆಲವು ಸುಶಿಕ್ಷಿತ ಯುವಕರು ಪ್ರಾಮಾಣಿಕವಾಗಿ ಪ್ರಯತ್ನಿಸುತ್ತಿದ್ದರೂ ಕೂಡ ಆ ಪ್ರಯತ್ನ ಇನ್ನೂ ಫಲ ನೀಡಿಲ್ಲ. ಏಕೆಂದರೆ ರಾಜಕೀಯ ವಲಯದ ಮೇಲ್ಪದರಗಳಲ್ಲಿ ಇವರನ್ನು ಪ್ರತಿನಿಧಿಸುವವರು ಯಾರೂ ಇಲ್ಲ. ಮುಂದುವರೆದ ಜಾತಿಗೆ ಸೇರಿದ ಕೆಲವರು ಇವರ ಬಗ್ಗೆ ಸಾಂತ್ವನ ವ್ಯಕ್ತ ಪಡಿಸಿ ಆ ಮೂಲಕ ತಾವು ರಾಜಕೀಯ ಲಾಭ ಪಡೆದುಕೊಂಡ ಉದಾಹರಣೆಗಳಿವೆ. ಅಂಥವರ ಉದ್ದೇಶ ಗೌಳಿಗರ ಕಲ್ಯಾಣದ ಕುರಿತು ಇರುವುದಿಲ್ಲ. ಇದರಿಂದಾಗಿ ಗೌಳಿಗರು ಕೂಡ ರಾಜಕೀಯವಾಗಿ ಹಿಂದೆ ಉಳಿದಿದ್ದಾರೆ. ರಾಜಕೀಯದಲ್ಲಿ ಪ್ರಭಾವಿ ಸ್ಥಾನಮಾನ ಪಡೆಯಲು ಈ ಸಮುದಾಯವು ಇನ್ನೂ ದೀರ್ಘ ಹಾಗೂ ಕಠಿಣ ಮಾರ್ಗ ಕ್ರಮಿಸಬೇಕಾಗಿದೆ.

ಈ ರೀತಿಯಲ್ಲಿ ಸರಕಾರವು ತನ್ನ ಜವಾಬ್ದಾರಿ ನಿರ್ವಹಣೆ ದೃಷ್ಟಿಯಿಂದ ಅನೇಕ ಸೌಲಭ್ಯಗಳನ್ನು ಒದಗಿಸಿ ಇವರ ಸ್ಥಿತಿಗತಿಗಳನ್ನು ಸುಧಾರಿಸಲು ಪ್ರಯತ್ನಿಸುತ್ತಿದ್ದರೂ ಕೂಡಾ ಈ ಜನರ ಬದುಕು ನಿರೀಕ್ಷಿತ ಪ್ರಮಾಣದಲ್ಲಿ ಬದಲಾಗಿಲ್ಲ ಎಂಬುದು ವಿಷಾದನೀಯ ಸಂಗತಿ ಆಗಿದೆ. ಇದರ ಒಂದು ಪ್ರಮುಖ ಕಾರಣವೆಂದರೆ ಈ ಸಮುದಾಯದ ಜನರಿಗೆ ಬದಲಾವಣೆಯಾಗಲಿ ಅಥವಾ ಸುಧಾರಣೆಯಾಗಲಿ ಬೇಕಾಗಿಲ್ಲ. ಇವರಿಗೆ ನಾಗರಿಕ ಸಂಪರ್ಕ ಅತಿ ಕಡಿಮೆ ಇರುವುದರಿಂದ ರಾಷ್ಟ್ರೀಯ ಮುಖ್ಯ ಪ್ರವಾಹದಲ್ಲಿ ಸೇರಿಕೊಳ್ಳಬೇಕೆಂಬ ಮನೋಭಾವನೆ ಇವರಲ್ಲಿ ಬೆಳೆಯುವುದೇ ಅಸಾಧ್ಯವಾಗಿದೆ. ಇದರೊಂದಿಗೆ ಸರ್ಕಾರಿ ಅಧಿಕಾರಿಗಳ ನಿರ್ಲಕ್ಷ್ಯ, ಲಂಚಕೋರತನ, ರಾಜಕೀಯ ನಾಯಕರ ಪೊಳ್ಳು ಆಶ್ವಾಸನೆಗಳು ಅಲ್ಲದೇ ಬುಡಕಟ್ಟುಗಳ ಕುರಿತು ವಸ್ತುನಿಷ್ಠ ಅಧ್ಯಯನಗಳ ಕೊರತೆ ಇವೆಲ್ಲ ಈ ಜನರ ಪ್ರಗತಿಗೆ ಪ್ರಮುಖ ಅಡೆತಡೆಗಳಾಗಿವೆ.

ದೇಶ ಸ್ವತಂತ್ರವಾಗಿ ಆರು ದಶಕಗಳೇ ಕಳೆದರೂ ಈ ಬುಡಕಟ್ಟು ಜನ ಇನ್ನೂ ಕಾಡುಗಳಲ್ಲೇ ವಾಸಿಸುತ್ತಿರುವುದು ನಾಗರಿಕ ಸಮಾಜಕ್ಕೆ ಒಂದು ಅವಮಾನಕರ ಸಂಗತಿಯಾಗಿದೆ. ಇವರ ಜೀವನ ಕ್ರಮದಲ್ಲಿ ಬದಲಾವಣೆ ತರಲು ಇನ್ನೂ ಹೆಚ್ಚು ಪರಿಣಾಮಕಾರಿಯಾದ ಕ್ರಮಗಳನ್ನು ಪ್ರಾಮಾಣಿಕವಾಗಿ ಜಾರಿಗೊಳಿಸುವುದು ಇಂದಿನ ತುರ್ತು ಅಗತ್ಯವಾಗಿದೆ. ಇದು ಕೇವಲ ಸರ್ಕಾರದಿಂದ ಆಗುವ ಕಾರ್ಯವಲ್ಲ.

ಸ್ವಯಂ ಸೇವಾ ಸಂಸ್ಥೆಗಳು, ನಿಸ್ವಾರ್ಥ ಸ್ವಯಂ ಸೇವಕರು ಹಾಗೂ ಇದೇ ಸಮುದಾಯಕ್ಕೆ ಸೇರಿದ ಕೆಲವು ಜವಾಬ್ದಾರಿಯುತ ಸುಶಿಕ್ಷಿತ ಜನರು ಒಟ್ಟುಗೂಡಿ ಇವರಿಗೆ ಸರ್ಕಾರದ ಎಲ್ಲ ಸೌಲಭ್ಯಗಳು ದೊರಕುವಂತೆ ಪ್ರಯತ್ನಿಸಿದಾಗ ಮಾತ್ರ ಇವರ 'ಮಾನವ ಹಕ್ಕುಗಳ ಜಾರಿ' ಸಾಧ್ಯವೆಂದು ಹೇಳಬಹುದು.

**ಅಡಿಟಿಪ್ಪಣಿಗಳು**

೧) ಎಸ್. ಬಿ. ಬಿರಾದಾರ – 'ಭಾರತದ ಸಾಮಾಜಿಕ ಸಮಸ್ಯೆಗಳು ಹಾಗೂ ಸಾಮಾಜಿಕ ಕಲ್ಯಾಣ', ಭಾರತ ಬುಕ್ ಡಿಪೊ ಮತ್ತು ಪ್ರಕಾಶನ, ಧಾರವಾಡ – ೧೯೯೭ ಪು. ೧.

೨) ಎಸ್. ರಾಜಶೇಖರ – 'ಸಾಮಾಜಿಕ ಸಮಸ್ಯೆಗಳು', ಭ್ರಮರ ಪ್ರಕಾಶನ, ಶಿವಮೊಗ್ಗ – ೨೦೦೦ – ಪುಟ ೪, ೫.

೩) ಅದೇ ಪು. ೭

೪) ಮ. ಶ್ರೀ. ಮುರಳೀಕೃಷ್ಣ – 'ಆದಿವಾಸಿ ಭಾರತದಲ್ಲಿ ಒಂದು ಸುತ್ತು', – ಸಮಾಜಶಾಸ್ತ್ರಜ್ಞೆ ಅಮಿತ್ ಬಾವಿಸ್ಕರ್ ಅವರ 'ಟ್ರೈಬಲ್ ಏಡೆನ್ಸ್' ಆಧಾರಿತ ಲೇಖನ, 'ಕಸ್ತೂರಿ' ಕನ್ನಡ ಮಾಸ ಪತ್ರಿಕೆ, ಹುಬ್ಬಳ್ಳಿ – ಜೂನ್ ೨೦೧೧ – ಪುಟ ೯೮.

೫) ಅದೇ ಪು. ೯೯–೧೦೦

೬) ಎ.ಎಸ್. ಪ್ರಭಾಕರ – 'ಬುಡಕಟ್ಟು ಅಭಿವೃದ್ಧಿ ಮಿಮಾಂಸೆ', ಪ್ರಸಾರಾಂಗ, ಕ.ವಿ.ವಿ. ಹಂಪಿ. 'ಜಾಗತೀಕರಣದ ಸಂದರ್ಭದಲ್ಲಿ ಬುಡಕಟ್ಟು ಅಭಿವೃದ್ಧಿ' – ಎಮ್. ಚಂದ್ರ ಪೂಜಾರಿ. ಪು. ೩೦, ೩೧

೭) ಮ. ಶ್ರೀ. ಮುರಳೀಕೃಷ್ಣ – ಆದಿವಾಸಿ ಭಾರತದಲ್ಲಿ ಒಂದು ಸುತ್ತು ಸಮಾಜಶಾಸ್ತ್ರಜ್ಞೆ ಅಮಿತ್ ಬಾವಿಸರ್ ಅವರ 'ಟೈಬಲ್ ಏಡೆನ್ಸ್' ಆಧಾರಿತ ಲೇಖನ, 'ಕಸ್ತೂರಿ' ಕನ್ನಡ ಮಾಸ ಪತ್ರಿಕೆ. ಹುಬ್ಬಳ್ಳಿ – ಜೂನ – ೨೦೧೧ – ಪುಟ – ೧೦೦, ೧೦೧.

೮) ಅದೇ ಪು. ೧೦೧.

೯) ಎ.ಎಸ್. ಪ್ರಭಾಕರ – ಬುಡಕಟ್ಟು ಅಭಿವೃದ್ಧಿ ಮಿಮಾಂಸೆ. ಪು – ೩೧.

೧೦) ಅದೇ ಪು. ೩೧, ೩೨.

೧೧) ಅದೇ ಪು. ೩೫.

೧೨) ಅದೇ ಪು. ೪೦–೪೪ (ಜಾಗತೀಕರಣದ ಸಂದರ್ಭದಲ್ಲಿ ಬುಡಕಟ್ಟು ಅಭಿವೃದ್ಧಿ ಎಮ್ ಚಂದ್ರ ಪೂಜಾರಿ).

೧೩) ಅದೇ ಪು. ೮೨–೮೫. ಬುಡಕಟ್ಟು ಅಭಿವೃದ್ಧಿ : ಒಂದು ಪರಿಕಲ್ಪನೆ ಎ.ವಿ. ನಾವಡ.

೧೪) 'ಕಸ್ತೂರಿ' ಕನ್ನಡ ಮಾಸ ಪತ್ರಿಕೆ, ಜೂನ ೨೦೧೧, ಪು ೧೦೧, ೧೦೨.

೧೫) ಅದೇ ಪುಟ ೧೦೨, ೧೦೩, ೧೦೪.

೧೬) ಅದೇ ಪುಟ ೧೦೪, ೧೦೫.

೧೭) ಕ್ಷೇತ್ರ ಕಾರ್ಯ ಮಾಹಿತಿ.

೧೮) ಕ್ಷೇತ್ರ ಕಾರ್ಯ ಮಾಹಿತಿ.

೧೯) ಕ್ಷೇತ್ರ ಕಾರ್ಯ ಮಾಹಿತಿ.

೨೦) ಕ್ಷೇತ್ರ ಕಾರ್ಯ ಮಾಹಿತಿ.

೨೧) ಕ್ಷೇತ್ರ ಕಾರ್ಯ ಮಾಹಿತಿ.

೨೨) ಎಸ್. ಜಿ. ಹಿರೇಮಠ – 'ಭಾರತೀಯ ಸಮಾಜದ ಅಧ್ಯಯನ' – ವಿದ್ಯಾನಿಧಿ ಪ್ರಕಾಶನ, ಗದಗ ೨೦೦೨–೨೦೦೩, ಪು. ೧೨೪.

೨೩) ಎಸ್. ರಾಜಶೇಖರ – 'ಸಾಮಾಜಿಕ ಸಮಸ್ಯೆಗಳು', ಭ್ರಮರ ಪ್ರಕಾಶನ, ಶಿವಮೊಗ್ಗ, ೨೦೦೦, ಪು. – ೩೭೪, ೩೮೦, ೩೮೪, ೩೯೬, ೩೯೮.

೨೪) ಡಾ. ಐ.ಸಿ. ಮುಳಗುಂದ – 'ಭಾರತೀಯ ಸಮಾಜದ ಅಧ್ಯಯನ', ಸೃಷ್ಟಿ ಪ್ರಕಾಶನ, ಧಾರವಾಡ, ೨೦೦೯, ಪುಟ ೪೫, ೯೨.

೨೫) ಶಾಂತಲಾ ಹೆಗಡೆ – 'ಗೌಳಿಗ ಮಹಿಳೆಯರ ಸ್ಥಿತ್ಯಂತರಗಳು', ಅಪ್ರಕಟಿತ ಪ್ರಬಂಧ ಪು. ೬೧.

೨೬) ಅದೇ ಭೂಮಿ ಸಮಸ್ಯೆ ಪು. ೨೦೫.

೨೭) ಎಸ್. ಬಿ. ಬಿರಾದಾರ – 'ಭಾರತದ ಸಾಮಾಜಿಕ ಸಮಸ್ಯೆಗಳು ಹಾಗೂ ಸಾಮಾಜಿಕ ಕಲ್ಯಾಣ' ಭಾರತ ಬುಕ್ ಡಿಪೋ ಮತ್ತು ಪ್ರಕಾಶನ ೧೯೯೭, ಪು. ೬೯.

೨೮) ಡಾ. ಎಮ್. ಗುರುಲಿಂಗಯ್ಯ – 'ಬುಡಕಟ್ಟು ಸಮಸ್ಯೆ ಮತ್ತು ಅಭಿವೃದ್ಧಿ : ಸಮಾಜಶಾಸ್ತ್ರೀಯ ದೃಷ್ಟಿಕೋನ' ಪು. ೧೮ – ಬುಡಕಟ್ಟು ಅಧ್ಯಯನ ಸಂ. ೩, ಸಂಚಿಕೆ–೧ ಜನೇವರಿ – ಜೂನ ೨೦೦೬ ಸಂ॥ ಕೆ.ಎಮ್. ಮೇತ್ರಿ, ಡಾ॥ ಚಲುವರಾಜು, ಪ್ರಸಾರಾಂಗ, ಕ.ವಿ.ವಿ. ಹಂಪಿ.



# ಅಧ್ಯಾಯ ೫

# ಗೌಳಿ ಸಮುದಾಯದ ಪರಿವರ್ತನೆ ಮತ್ತು ಪರಿಣಾಮಗಳು

೫.೧ ಕೌಟುಂಬಿಕ ಪರಿವರ್ತನೆ

೫.೨ ವೈವಾಹಿಕ ಪರಿವರ್ತನೆ

೫.೩ ವೃತ್ತಿ ಪರಿವರ್ತನೆ

೫.೪ ಶೈಕ್ಷಣಿಕ ಪರಿವರ್ತನೆ

೫.೫ ರಾಜಕೀಯ ಪರಿವರ್ತನೆ

೫.೬ ಸಾಂಸ್ಕೃತಿಕ ಪರಿವರ್ತನೆ

೫.೭ ಪ್ರಭಾವ ಮತ್ತು ಪರಿಣಾಮಗಳು

ಅಧ್ಯಾಯ ೫

# ಗೌಳಿ ಸಮುದಾಯದ ಪರಿವರ್ತನೆ ಮತ್ತು ಪರಿಣಾಮಗಳು

'ಗೌಳಿ ಸಮುದಾಯದ ಸಾಮಾಜಿಕ ಪರಿವರ್ತನೆಗಳು' ಇದು ಈ ಅಧ್ಯಯನದ ಮುಖ್ಯ ಧ್ಯೇಯವಾದ್ದರಿಂದ ಇಲ್ಲಿ ಮೊದಲಿಗೆ ಸಾಮಾಜಿಕ ಪರಿವರ್ತನೆ ಎಂದರೆ ಏನು ಎಂಬುದರ ಬಗ್ಗೆ ಸ್ಪಷ್ಟ ಕಲ್ಪನೆಯ ಅಗತ್ಯವಿದೆ ಎಂದುಕೊಂಡಿದ್ದೇನೆ.

**ಸಾಮಾಜಿಕ ಪರಿವರ್ತನೆ**[1]

ಪರಿವರ್ತನೆಯು ಸರ್ವವ್ಯಾಪಕವಾದ ಮತ್ತು ಸಾರ್ವತ್ರಿಕವಾದ ಮತ್ತು ನಿರಂತರವಾದ ಒಂದು ಪ್ರಕ್ರಿಯೆಯಾಗಿದೆ. ಈ ಪ್ರಕ್ರಿಯೆಯು ಜಗತ್ತಿನ ಎಲ್ಲಾ ರಂಗಗಳಲ್ಲೂ ಕಂಡು ಬರುತ್ತದೆ. ಪರಿವರ್ತನೆಯು ನಿಸರ್ಗ ನಿಯಮ. ಮಾನವ ಸಮಾಜವೂ ಈ ನಿಯಮಕ್ಕೆ ಹೊರತಾಗಿಲ್ಲ. ಮಾನವ ಸಮಾಜವು ನಿತ್ಯ ಪರಿವರ್ತನಾಶೀಲವುಳ್ಳದ್ದು. ಯಾವುದೇ ಸಮಾಜವಾದರೂ ಕೂಡ ಪರಿವರ್ತನೆಗೆ ಒಳಪಡದೆ ಜಡವಾಗಿರಲು ಸಾಧ್ಯವಿಲ್ಲ. ವ್ಯಕ್ತಿಯು ಜೀವನದಲ್ಲಿ ರಕ್ಷಣೆ ಮತ್ತು ಭದ್ರತೆಗಾಗಿ ಚಡಪಡಿಸುವಂತೆ ಸಮಾಜವೂ ಶಾಶ್ವತವಾದ ಸ್ಥಿರತೆಯನ್ನು ಬಯಸುವುದು. ತನ್ನ ವಿವಿಧ ನಿಯಂತ್ರಣ ಸಾಧನಗಳ ಮೂಲಕ ಸಮಾಜವು ತನ್ನ ಸ್ಥಿರತೆಯನ್ನು ಉಳಿಸಿಕೊಳ್ಳಲು ಹೋರಾಡುವುದು. ಹೀಗಿದ್ದರೂ ಮಾನವ ಸಮಾಜ ಎಂದಿಗೂ ಸ್ಥಿರವಾಗಿರಲು ಸಾಧ್ಯವಿಲ್ಲ. ಸಮಾಜವು ಜೈವಿಕ ಸಂಸ್ಥೆಯಾದ ಕಾರಣ ಅದರಲ್ಲಿ ಬದಲಾವಣೆಗಳು ಕಾಣಿಸಿಕೊಳ್ಳುವುದು ಸಹಜ. ಹಳೆಯ ಪದ್ಧತಿಗಳನ್ನು ಕಳಚಿಕೊಂಡು ಅಥವಾ ಅವುಗಳನ್ನು ಮುಂದುವರೆಸಿಕೊಂಡು ಹೊಸ ಪದ್ಧತಿಗಳನ್ನು ರೂಪಿಸಿಕೊಂಡು ಸಮಾಜ ಬೆಳೆದು ಹೊಸ ರೂಪವನ್ನು ತಾಳುತ್ತದೆ. ವ್ಯಕ್ತಿಗಳ ಸಂಬಂಧ ಮತ್ತು ಒಡನಾಟಗಳಿಂದ ಬದಲಾವಣೆಗಳು ಉಗಮವಾಗುತ್ತವೆ. ಕಾಲಗತಿಯಲ್ಲಿ ಜನರ ವರ್ತನೆಯಲ್ಲಿ ಆಗುವ ವ್ಯತ್ಯಾಸಗಳು ಹಾಗೂ ಹಳೆಯದಕ್ಕೆ ಪ್ರತಿಯಾಗಿ ಸ್ಥಾಪಿತವಾಗುವ ಹೊಸ ಜೀವನ ವಿಧಾನಗಳು ಬದಲಾವಣೆಗೆ ನಿದರ್ಶನಗಳಾಗಿವೆ.

ಹಿಂದೆ ಇದ್ದಂತಹ ನಮ್ಮ ಜೀವನ ಕ್ರಮ, ಜೀವನ ಶೈಲಿ, ಸಂಘ-ಸಂಸ್ಥೆಗಳು, ಆಚಾರ-ವಿಚಾರಗಳು, ನೀತಿ ನಿಯಮಗಳು, ವ್ಯವಸ್ಥೆಗಳು, ಕಾರ್ಯಗಳು ಇಂದು ಬದಲಾಗಿವೆ. ಮಾನವ ಜೀವನದ ಎಲ್ಲ ಕ್ಷೇತ್ರಗಳಲ್ಲೂ ಬದಲಾವಣೆಗಳು ಉಂಟಾಗುತ್ತಲೇ ಇವೆ. ಅಂದರೆ ಬದಲಾವಣೆ ನಿರಂತರವಾದುದು. ಸಾಮಾಜಿಕ ನಮೂನೆ, ಸಾಮಾಜಿಕ ರಚನೆಯಲ್ಲಿ ಉಂಟಾಗುವ ಮಾರ್ಪಾಟು, ಸಾಮಾಜಿಕ ವ್ಯವಸ್ಥೆ, ಉಪ-ವ್ಯವಸ್ಥೆ ಅಥವಾ ಸಂಸ್ಥೆಗಳಲ್ಲಿ ಉಂಟಾಗುವ ಬದಲಾವಣೆ ಹಾಗೂ ಸಾಮಾಜಿಕ ಕಾರ್ಯ, ಪ್ರಕ್ರಿಯೆ, ಅಂತಃಕ್ರಿಯೆ ಮತ್ತು ಆಂತರಿಕ ಸಂಬಂಧಗಳಲ್ಲಿ ಉಂಟಾಗುವ ಬದಲಾವಣೆಯು ಸಾಮಾಜಿಕ ಪರಿವರ್ತನೆ ಎಂದೆನಿಸಿಕೊಳ್ಳುತ್ತದೆ. ಉದಾಹರಣೆಗೆ ಅವಿಭಕ್ತ ಕುಟುಂಬವು ಆಧುನಿಕ ವಿಭಕ್ತ ಕುಟಂಬವಾಗಿ ಪರಿವರ್ತನೆಗೊಳ್ಳುತ್ತಿರುವುದು. ಸ್ತ್ರೀಯರ ಸ್ಥಾನಮಾನದಲ್ಲಿ ಬದಲಾವಣೆ, ಸಾಂಸ್ಕೃತಿಕ, ಧಾರ್ಮಿಕ, ವೈವಾಹಿಕ, ಸಾಂಪ್ರದಾಯಿಕ ಆಚರಣೆ, ವಿಧಿ-ವಿಧಾನಗಳಲ್ಲಿ ಬದಲಾವಣೆ ಇವೇ ಮೊದಲಾದ ಬದಲಾವಣೆಗಳು ಸಾಮಾಜಿಕ ಪರಿವರ್ತನೆಗೆ ನಿದರ್ಶನಗಳಾಗಿವೆ.

ಸಾಮಾಜಿಕ ಪರಿವರ್ತನೆಗಳು ೧) ಭೌಗೋಳಿಕ ಅಥವಾ ಭೌತಿಕ ೨) ಜೈವಿಕ ೩) ಸಾಂಸ್ಕೃತಿಕ ೪) ವೈಜ್ಞಾನಿಕ ಅಥವಾ ತಾಂತ್ರಿಕ ಕಾರಣಗಳಿಂದ (ಅಂಶಗಳಿಂದ) ಆಗುತ್ತವೆ. ಭೂಕಂಪ, ಪ್ರವಾಹ, ಅತಿವೃಷ್ಟಿ, ಕಾಡ್ಗಿಚ್ಚು ಇಂಥ ಘಟನೆಗಳೆಲ್ಲವೂ ಭೌತಿಕವಾಗಿ ಬದಲಾವಣೆಗಳನ್ನು ತರುತ್ತವೆ. ಜನಸಂಖ್ಯೆಯಲ್ಲಿ ಹೆಚ್ಚಳ ಅಥವಾ ಇಳಿಕೆ, ಯುದ್ಧದಿಂದ ಪ್ರಾಣ ಹಾಗೂ ಆಸ್ತಿಗೆ ನಷ್ಟ, ಮುಷ್ಕರಗಳಿಂದ ಅಂಗಡಿಗಳ ವಾಹನಗಳ ನಷ್ಟ ಮೊದಲಾದವು ಮಾನವನ ಕ್ರಿಯೆಯಿಂದ ಆಗುವ ಘಟನೆಗಳು. ಇವು ಜೈವಿಕ ಬದಲಾವಣೆಗೆ ನಿದರ್ಶನಗಳಾಗಿವೆ. ಯಂತ್ರಗಳ ಸೃಷ್ಟಿ, ಕೈಗಾರಿಕೆಗಳ ಅಭಿವೃದ್ಧಿ, ಕಾರ್ಖಾನೆಗಳಲ್ಲಿ ವಸ್ತುಗಳ ತ್ವರಿತ ಉತ್ಪನ್ನ ಇವೇ ಮೊದಲಾದವು ವೈಜ್ಞಾನಿಕ, ತಾಂತ್ರಿಕ ಬದಲಾವಣೆಗೆ ಉದಾಹರಣೆಗಳು. ಹೊರಗಿನ ಸಂಸ್ಕೃತಿಗಳ ಸಂಪರ್ಕದಿಂದ ಇಲ್ಲವೇ ಸಮಾಜ ಸುಧಾರಣೆಗಳಿಂದ ಜನರ ಆದರ್ಶ, ಧಾರ್ಮಿಕ ಭಾವನೆಗಳು, ನೈತಿಕ ಕಲ್ಪನೆಗಳು, ಮೊದಲಾದವುಗಳಲ್ಲಿ ಉಂಟಾಗುವ ವ್ಯತ್ಯಾಸಗಳು ಸಾಂಸ್ಕೃತಿಕ ಬದಲಾವಣೆಗಳು. ಹೀಗೆ ಹಲವಾರು ಕಾರಣಗಳಿಂದ ಸಮಾಜದಲ್ಲಿ ಬದಲಾವಣೆಗಳು ಆಗುತ್ತಿರುತ್ತವೆ. ಇಂತಹ ಬದಲಾವಣೆಗಳು ಸಾಮಾಜಿಕ ಪರಿವರ್ತನೆ ಎಂದೆನಿಸಿಕೊಳ್ಳುವುವು.

ಸಾಮಾಜಿಕ ಪರಿವರ್ತನೆಯ ಪ್ರಕ್ರಿಯೆ ಒಮ್ಮೆ ಪ್ರಾರಂಭವಾಗಿ ನಿರಂತರವಾಗಿ ಸಾಗುತ್ತದೆ. ಸಾಮಾಜಿಕ ರಚನೆಯ ಒಂದು ಕ್ಷೇತ್ರದಲ್ಲಿ ಉಂಟಾದ ಬದಲಾವಣೆಯು ಇತರ ಕ್ಷೇತ್ರಗಳಿಗೂ ವ್ಯಾಪಿಸಿ ಕೊನೆಗೆ ಇಡೀ ಸಮಾಜಕ್ಕೆ ವ್ಯಾಪಿಸುತ್ತದೆ.

ಮಾನವ ಮತ್ತು ಸಮಾಜ ನಿರಂತರ ಬದಲಾವಣಾ ಪ್ರಕ್ರಿಯೆಗೊಳಪಟ್ಟಿವೆ. ಇತಿಹಾಸದುದ್ದಕ್ಕೂ ಮಾನವನ ಜೀವನವು ಅವ್ಯಾಹತ ಬದಲಾವಣೆಗಳನ್ನು ಕಂಡಿದೆ. ಪ್ರಾಚೀನ ಸಮಾಜದಲ್ಲಿ ಪರಿವರ್ತನೆಯು ನಿಧಾನವಾಗಿದ್ದರಿಂದ ಮತ್ತು ಅತ್ಯಲ್ಪ ಪ್ರಮಾಣವಾದ್ದರಿಂದ ಆ ಸಮಾಜವು ಸ್ಥಗಿತ ಹಾಗೂ ಜಟಿಲವಾಗಿತ್ತು. ಹೊರನೋಟಕ್ಕೆ ಸಮಾಜವು ಸ್ಥಿರವಾಗಿ ಕಂಡರೂ ಯಾವುದೇ ಸಮಾಜವು ಯಾವ ಕಾಲದಲ್ಲೂ ಬದಲಾಗದೇ ಉಳಿದಿಲ್ಲ. ಬದಲಾವಣೆರಹಿತ ಸಮಾಜದ ಅಸ್ತಿತ್ವವನ್ನು ಊಹಿಸುವುದು ಕಷ್ಟ. ಸಾಂಪ್ರದಾಯಿಕವೆಂದು ಕರೆಯಲ್ಪಡುವ ಸಮಾಜಗಳು ಮತ್ತು ಸಂಸ್ಕೃತಿಗಳೂ ಕೂಡ ಪರಿವರ್ತನೆಯ

ಪ್ರಕ್ರಿಯೆಗೆ ಒಳಪಟ್ಟಿವೆ. ಪರಿವರ್ತನಶೀಲತೆಯು ಸಮಾಜದ ಒಂದು ಆಂತರಿಕ ಗುಣ. ಅವ್ಯಾಹತವಾಗಿ ಈ ಪರಿವರ್ತನೆ ಸಂಭವಿಸುತ್ತಿದ್ದುದರಿಂದಲೇ ಮಾನವನು ಇಂದು ಅನಾಗರಿಕ ಸ್ಥಿತಿಯಿಂದ ನಾಗರಿಕ ಸ್ಥಿತಿಗೆ ಬರಲು ಮತ್ತು ಇನ್ನೂ ಹೆಚ್ಚಿನ ಪರಿಪೂರ್ಣತೆಯ ಸ್ಥಿತಿಗೆ ಸಾಗಲು ಸಾಧ್ಯವಾಗಿದೆ. ಇಂದಿನದು ನಿನ್ನೆಯಂತಿಲ್ಲ, ಹಾಗೆಯೇ ನಾಳೆಯದು ಇಂದಿನಂತಿರಬೇಕಾಗಿಲ್ಲ. ಪ್ರಾಚೀನ ಕಾಲದಲ್ಲಿದ್ದಂತೆ ಪರಿವರ್ತನೆಯು ಮಂದಗತಿಯಲ್ಲಿರಬಹುದು ಅಥವಾ ಆಧುನಿಕ ಸಮಾಜದಲ್ಲಿನಂತೆ ಪರಿವರ್ತನೆಯು ತೀವ್ರಗತಿಯಲ್ಲಿರಬಹುದು. ೧೯ನೇ ಹಾಗೂ ವಿಶೇಷವಾಗಿ ೨೦ನೇ ಶತಮಾನದಲ್ಲಿ ಸಮಾಜಗಳು ತೀವ್ರಗತಿಯಲ್ಲಿ ಪರಿವರ್ತನೆಯಾಗುತ್ತಿರುವುದನ್ನು ಸಮಾಜಶಾಸ್ತ್ರಜ್ಞರು ವಿಶ್ಲೇಷಿಸಿದ್ದಾರೆ. ಹಲವು ದಶಕಗಳ ಹಿಂದಿನ ಭಾರತಕ್ಕೂ ಇಂದಿನ ಭಾರತಕ್ಕೂ ವ್ಯತ್ಯಾಸವಿದೆ. ನಾಳೆ ಭಾರತದ ಸ್ಥಿತಿ ಹೇಗಿದ್ದೀತು ಎಂದು ಹೇಳುವುದು ಸುಲಭವಲ್ಲ. ಹಲವಾರು ದಶಕಗಳಲ್ಲಿಯೇ ಕ್ರಾಂತಿಕಾರಕ ಪರಿವರ್ತನೆಗಳು ಸಂಭವಿಸಬಹುದು. ಪರಿವರ್ತನೆಯ ಅಗಾಧತೆಯನ್ನು ಊಹಿಸುವುದು ಬಹಳ ಕಷ್ಟದ ಕೆಲಸವಾಗಿದೆ. ಪರಿವರ್ತನೆ ಯಾವ ಮಟ್ಟದಲ್ಲಿ ಎಷ್ಟು ಪ್ರಮಾಣದಲ್ಲಿ ಸಂಭವಿಸುವುದು ಎಂಬುದನ್ನು ಹೇಳುವುದು, ಅಳೆಯುವುದು ಅಷ್ಟೇ ಕಷ್ಟದ ಕೆಲಸವಾಗಿದೆ. ಆದರೂ ಬದಲಾವಣೆ ನಿರಂತರವಾಗಿ ನಡೆಯುತ್ತಲೇ ಇರುತ್ತದೆ. ಈ ವಿಷಯವಾಗಿ ಸಮಾಜಶಾಸ್ತ್ರಜ್ಞರು 'ಸಮಾಜವು ತನ್ನ ಅಸ್ತಿತ್ವದ ಉಳಿವಿಗಾಗಿ ನಿರಂತರವಾಗಿ ಬದಲಾವಣೆಯ ಪ್ರಕ್ರಿಯೆಗೆ ಒಳಪಡುತ್ತದೆ' ಎಂದಿದ್ದಾರೆ. ಇದಕ್ಕೆ ಪೂರಕವಾಗಿ ಕಿಂಗ್ಸಲೇ ಡೇವಿಸ್ ಅವರ ಪ್ರಕಾರ 'ಜಗತ್ತಿನ ಇತರ ಎಲ್ಲಾ ಅಂಶಗಳಂತೆ ಸಮಾಜವೂ ಕೂಡ ಬದಲಾವಣೆಯ ಪ್ರಕ್ರಿಯೆಗೆ ಒಳಗೊಳ್ಳುವುದನ್ನು ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ'.

ನಮ್ಮ ಹಿರಿಯರ ಜೀವನ ಶೈಲಿ, ಸಂಸ್ಕೃತಿ, ಆಚಾರ-ವಿಚಾರ, ನೀತಿ-ನಿಯಮ, ಸಂಘ-ಸಂಸ್ಥೆ ಮುಂತಾದವುಗಳಲ್ಲಿ ಹಲವಾರು ಸಂಕೀರ್ಣವಾದ ಪರಿವರ್ತನೆಗಳು ಉಂಟಾಗಿವೆ. ಇಂತಹ ಬದಲಾವಣೆಗಳು ಕೆಲವೊಂದು ಉದ್ದೇಶಗಳನ್ನು ಈಡೇರಿಸಿಕೊಳ್ಳಲು ನಡೆಸಿದ ಉದ್ದೇಶಿತ ಪ್ರಕ್ರಿಯೆಯಾಗಿರಬಹುದು ಅಥವಾ ಯಾವುದೇ ನಿರ್ದಿಷ್ಟ ಉದ್ದೇಶವಿರದೆ ತನ್ನಷ್ಟಕ್ಕೆ ತಾನೇ ಸಂಭವಿಸಿದ ಸಹಜ ಪ್ರಕ್ರಿಯೆಯಾಗಿರಬಹುದು. ಸಾಮಾನ್ಯವಾಗಿ ಇಂತಹ ಬದಲಾಣೆಗೆ ಸಮಾಜವೊಂದರ ಆಂತರಿಕ ಅಥವಾ ಬಾಹ್ಯ ಶಕ್ತಿಗಳು ಕಾರಣವಾಗಿರಬಹುದು. ಈ ವಿಷಯವಾಗಿ ಕೊರ್ನ್‌ಬ್ಲಮ್ (Kornblum) ಹೇಳುವಂತೆ ಸಾಮಾನ್ಯವಾಗಿ ಸಾಮಾಜಿಕ ಬದಲಾವಣೆಗೆ ಎರಡು ಪ್ರಮುಖ ಕಾರಣಗಳನ್ನು ಗುರುತಿಸಬಹುದಾಗಿದೆ. ಮೊದಲನೆಯದಾಗಿ ಬೆಳೆಯುತ್ತಿರುವ ಜನಸಂಖ್ಯೆಯ ಬೇಡಿಕೆಯನ್ನು ಪೂರೈಸುವ ದೃಷ್ಟಿಯಿಂದ ಸಾಮಾಜಿಕ ಸಂಘಟನೆ ಮತ್ತು ಸಂಸ್ಕೃತಿಯಲ್ಲುಂಟಾಗುವ ಬದಲಾವಣೆಗಳನ್ನು ಆಂತರಿಕ ಬದಲಾವಣೆ ಎಂದಿದ್ದಾರೆ. ಎರಡನೆಯದಾಗಿ ಸಮಾಜವೊಂದರ ಮೇಲೆ ಪ್ರಭಾವ ಬೀರುವ ಬಾಹ್ಯ ಶಕ್ತಿಗಳು ಸಾಮಾಜಿಕ ಬದಲಾವಣೆಗೆ ಕಾರಣವಾಗಿರಬಹುದಾಗಿದೆ. ವಾಸುದೇವ ಅವರ ಪ್ರಕಾರ 'ಹೊಸ ಬದುಕಿನ ಆಶಯ ಹಾಗೂ ತಿಳುವಳಿಕೆ, ಸಾರಿಗೆ-ಸಂಪರ್ಕ, ವಿಜ್ಞಾನ ಮತ್ತು ತಂತ್ರಜ್ಞಾನ, ಆಧುನಿಕ ಶಿಕ್ಷಣ, ಇತರ ಸಮಾಜದೊಂದಿಗಿನ ಭೌತ ಮತ್ತು ಅಭೌತ ಸಂಸ್ಕೃತಿಗಳ ವಿನಿಮಯ, ಪರಿಣಾಮಕಾರಿ ಮುಖಂಡತ್ವ ಇತ್ಯಾದಿಗಳು ಸಾಮಾಜಿಕ ಬದಲಾವಣೆಗೆ ಪೂರಕ ಶಕ್ತಿಯಾಗಿ ಕೆಲಸ ಮಾಡುತ್ತವೆ'.

**ಸಾಮಾಜಿಕ ಪರಿವರ್ತನೆಯು ಸಂಕೀರ್ಣವಾದುದು**

ಮಾನವನ ಸಾಮಾಜಿಕ ಚಿಂತನೆಯಲ್ಲಿ ಸಾಮಾಜಿಕ ಪರಿವರ್ತನೆಗೆ ಬಹಳ ಮಹತ್ವವಿದೆ. ಬಹುಕಾಲದಿಂದಲೂ ಸಾಮಾಜಿಕ ಪರಿವರ್ತನೆಗೆ ಸಂಬಂಧಿಸಿದ ಪ್ರಶ್ನೆಗಳು ತತ್ವಜ್ಞಾನಿಗಳನ್ನು ಮತ್ತು ಚಿಂತನಕಾರರನ್ನು ಗೊಂದಲಕ್ಕೀಡುಮಾಡಿವೆ. ಸಾಮಾಜಿಕ ಪರಿವರ್ತನೆಗೆ ಕಾರಣಗಳಾವುವು? ಅದರ ಗುರಿ-ಗಂತವ್ಯ ಯಾವುದು? ಯಾವ ದಿಶೆಯಲ್ಲಿ ಹೇಗೆ ಅದು ಸಾಗಬೇಕು? ಎಂಬ ಪ್ರಶ್ನೆಗಳಂತೂ ತತ್ವಜ್ಞಾನಿಗಳಿಗೆ ಇಂದಿಗೂ ಅಪರಿಹಾರ್ಯವಾದ ಸವಾಲುಗಳೇ ಆಗಿವೆ. ಆದರೆ ಸಂಕೀರ್ಣವಾದುದು. ಈ ಪ್ರಕ್ರಿಯೆಯ ಒಳಹೊರಗನ್ನು, ಆದಿ-ಅಂತ್ಯವನ್ನು ಸಂಪೂರ್ಣವಾಗಿ ಅರಿತುಕೊಳ್ಳುವುದು ಸುಲಭ ಸಾಧ್ಯವಾದುದಲ್ಲ. ಅದು ವಿವಿಧ ರೂಪಗಳಲ್ಲಿ ವಿವಿಧ ಕಾರಣಗಳಿಂದಾಗಿ ವಿವಿಧ ವಿಧಾನಗಳಲ್ಲಿ ಸಂಭವಿಸಬಹುದು, ಸಾಮಾಜಿಕ ಪರಿವರ್ತನೆಯು ಪ್ರಗತಿಶೀಲವಾಗಿರುವಂತೆ ಪ್ರತಿಗಾಮಿಯೂ ಆಗಿರಬಹುದು; ಶಾಶ್ವತ ಸ್ವರೂಪದ್ದಾಗಿರುವಂತೆ ಅಲ್ಪಕಾಲಿಕವಾಗಿರಬಹುದು; ನಿಯೋಜಿತವಿದ್ದಂತೆ ಅನಾಯೋಜಿತವಾಗಿರಬಹುದು. ಏಕದಿಶಾನುವರ್ತಿ ಆಗಿರುವಂತೆ ಬಹುದಿಶಾನುವರ್ತಿ ಕೂಡ ಆಗಿರಬಹುದು; ಹಿತಕಾರಕವಾಗಿರುವಂತೆ ಹಾನಿಕಾರಕವಾಗಿಯೂ ಇರಬಹುದು.[೨]

**ಸಾಮಾಜಿಕ ಪರಿವರ್ತನೆಯ ಸ್ವರೂಪ ಲಕ್ಷಣಗಳು[೩]**

೧) ಸಾಮಾಜಿಕ ಪರಿವರ್ತನೆಯು ನಿರಂತರವಾದುದು.

೨) ಸಾಮಾಜಿಕ ಪರಿವರ್ತನೆಯು ಸಾರ್ವತ್ರಿಕವಾದುದು

೩) ಸಾಮಾಜಿಕ ಪರಿವರ್ತನೆಯು ಸಾಮಯಿಕವಾದುದು

೪) ಸಾಮಾಜಿಕ ಪರಿವರ್ತನೆಯು ಪರಿಸರವನ್ನು ಅವಲಂಬಿಸಿದೆ

೫) ಸಾಮಾಜಿಕ ಪರಿವರ್ತನೆಯೆಂದರೆ ಮಾನವ ಪರಿವರ್ತನೆ

೬) ಸಾಮಾಜಿಕ ಪರಿವರ್ತನೆಯ ರೂಪ ಮತ್ತು ಗತಿ ಒಂದೇ ರೀತಿಯಲ್ಲಿರುವುದಿಲ್ಲ.

೭) ಸಾಮಾಜಿಕ ಪರಿವರ್ತನೆಯ ಬಗ್ಗೆ ಭವಿಷ್ಯ ನುಡಿಯುವುದು ಸಾಧ್ಯವಿಲ್ಲ.

೮) ಸಾಮಾಜಿಕ ಪರಿವರ್ತನೆಯು ಪ್ರತಿಕ್ರಿಯೆಗಳ ಸರಮಾಲೆಯನ್ನು ಸೃಷ್ಟಿಸಬಹುದು.

೯) ಸಾಮಾಜಿಕ ಪರಿವರ್ತನೆಯು ಒಂದು ಗುರಿಯನ್ನು ಅಥವಾ ದಿಕ್ಕನ್ನು ಹೊಂದಿದೆ.

೧೦) ಸಾಮಾಜಿಕ ಪರಿವರ್ತನೆಯು ನಿಯೋಜಿತ ಇಲ್ಲವೇ ಅನಿಯೋಜಿತ ಆಗಿರಬಹುದು.

೧೧) ಸಾಮಾಜಿಕ ಪರಿವರ್ತನೆಯು ಒಂದು ವಸ್ತುನಿಷ್ಠ ಕಲ್ಪನೆಯಾಗಿದೆ.

೧೨) ಸಾಮಾಜಿಕ ಪರಿವರ್ತನೆಯು ದೀರ್ಘಾವಧಿ ಹಾಗೂ ಪುನರಾವರ್ತಿತವಾಗಬಹುದು.

ಸಮಾಜದಲ್ಲಿ ಬದಲಾವಣೆಯ ವಿವಿದ ಹಂತಗಳಲ್ಲಿ ಸಂಭವಿಸುವುದನ್ನು ಕಾಣಬಹುದು. ವ್ಯಕ್ತಿಯೊಬ್ಬನ ನಡೆ-ನುಡಿ, ಆಚಾರ-ವಿಚಾರ, ರೀತಿ-ನೀತಿ ಮುಂತಾದವುಗಳಲ್ಲಾದ ಬದಲಾವಣೆಯು ವ್ಯಕ್ತಿಗತ ಬದಲಾವಣೆಯಾದರೆ, ಅದು ಸಾಮೂಹಿಕವಾದಾಗ ಅದನ್ನು ಸಮಾಜದ ಬದಲಾವಣೆ ಎನ್ನಬಹುದು. ಸಾಮಾಜಿಕ ಹಾಗೂ ಸಾಂಸ್ಕೃತಿಕ ಬದಲಾವಣೆಗಳು ಸಾರ್ವತ್ರಿಕವಾದುದಾದರೂ ಅವುಗಳ

ಬದಲಾವಣೆಯ ಗತಿ ಅಥವಾ ಪ್ರಮಾಣ ಏಕಪ್ರಕಾರವಾಗಿರದೆ ಸಮಾಜದಿಂದ ಸಮಾಜಕ್ಕೆ ಭಿನ್ನವಾಗಿರಬಹುದು, ಕೆಲವೊಂದು ಸಮಾಜಗಳು ಪ್ರಕ್ರಿಯೆಗೆ ಬಹಳ ಬೇಗನೆ ಒಳಗಾಗಬಹುದು. ಇನ್ನು ಕೆಲವು ಸಮಾಜಗಳು ಬದಲಾವಣೆಯನ್ನು ಒಪ್ಪಿಕೊಳ್ಳದೆ ಇರಬಹುದು. ಜಡತ್ವ, ಹೊಸತನದ ಭಯ, ಅಜ್ಞಾನ, ಸಾಂಪ್ರದಾಯಕತೆ, ವಿಚಾರಹೀನತೆ, ಪಟ್ಟಭದ್ರ ಹಿತಾಸಕ್ತಿ ಮುಂತಾದವುಗಳು ಸಾಮಾಜಿಕ ಬದಲಾವಣೆಯ ವಿರುದ್ಧ ಪ್ರತಿರೋಧಕ್ಕೆ ಕಾರಣವಾಗಬಹುದಾಗಿದೆ. ಆದ್ದರಿಂದ ಸಾಮಾಜಿಕ ಪರಿವರ್ತನೆಯು ಸರ್ವವ್ಯಾಪಿಯಾದ ಹಾಗೂ ಸಾರ್ವತ್ರಿಕವಾದ ಪ್ರಕ್ರಿಯೆಯಾಗಿದ್ದರೂ ಅದಕ್ಕೆ ಪ್ರತಿರೋಧವಿಲ್ಲವೆಂದಲ್ಲ. ಅದಕ್ಕೆ ತಡೆ ಎಂಬುದು ಇದ್ದೇ ಇರುತ್ತದೆ. ಎಲ್ಲಾ ಬದಲಾವಣೆಗಳನ್ನೂ ಎಲ್ಲಾ ಸಂದರ್ಭಗಳಲ್ಲೂ ಎಲ್ಲರೂ ಸ್ವಾಗತಿಸುತ್ತಾರೆ ಎಂದೇನಿಲ್ಲ. ಪರಿವರ್ತನೆಯನ್ನು ಕೆಲವೊಮ್ಮೆ ಜನರು ಒಪ್ಪಿಕೊಳ್ಳಬಹುದಾದರೂ ಮತ್ತೆ ಕೆಲವರು ವಿರೋಧಿಸಲೂಬಹುದು. ಆದರೂ ಈ ಎಲ್ಲಾ ಅಡೆ-ತಡೆಗಳ ಮಧ್ಯೆಯೂ ಬದಲಾವಣೆಯು ಕೆಲವೊಮ್ಮೆ ವೇಗವಾಗಿ, ಕೆಲವೊಮ್ಮೆ ನಿಧಾನಗತಿಯಲ್ಲಿ ನಿರಂತರವಾಗಿ ಸಂಭವಿಸುತ್ತಲೆ ಇರುತ್ತದೆಂದು ಹೇಳಬಹುದು.

ಭೌತ ಸಂಸ್ಕೃತಿ (ನಾಗರಿಕತೆ) ಬಹಳ ವೇಗವಾಗಿ ಮಾರ್ಪಾಡಾಗುವುದು. ಆದರೆ ಅಭೌತ ಸಂಸ್ಕೃತಿ(ಸಂಸ್ಕೃತಿ) ಅಷ್ಟೇ ವೇಗದಿಂದ ಮಾರ್ಪಾಡಾಗುವುದಿಲ್ಲ. ಈ ಹಿಂಬೀಳಿಕೆಗೆ ಸಾಂಸ್ಕೃತಿಕ ಹಿಂಬೀಳಿಕೆ ಎನ್ನುವರು. ಇದರಿಂದ ಕೆಲವೊಮ್ಮೆ ಸಾಮಾಜಿಕ ಸಮಸ್ಯೆಗಳು ಹಾಗೂ ಸಂಘರ್ಷಗಳು ಉಂಟಾಗುತ್ತವೆ. ಕಾರಣ ಭೌತಿಕ ಸಂಸ್ಕೃತಿಯ ಮಾರ್ಪಾಡಿಗನುಗುಣವಾಗಿ (ಅಭೌತ) ಸಂಸ್ಕೃತಿಯೂ ಮಾರ್ಪಾಡುಗೊಳ್ಳುವುದು ಅಥವಾ ಹೊಂದಿಕೊಳ್ಳುವುದು ಅನಿವಾರ್ಯ.[೪]

ಸಮಾಜಶಾಸ್ತ್ರಜ್ಞರು, ಮಾನವಶಾಸ್ತ್ರಜ್ಞರುಗಳು ಸಾಮಾಜಿಕ ಪರಿವರ್ತನೆಯ ಗತಿ ಹಾಗೂ ವೇಗವನ್ನು ಅಧ್ಯಯನ ಮಾಡಿ ಸಿದ್ಧಾಂತಗಳ ರೂಪದಲ್ಲಿ ನಿರೂಪಿಸಿದ್ದಾರೆ. ಸಮಾಜಿಕ ಬದಲಾವಣೆಗೆ ಸಂಬಂಧಿಸಿದ ಹಾಗೆ ಹಲವು ಸಿದ್ಧಾಂತಗಳು ಪ್ರತಿಪಾದಿಸಲ್ಪಟ್ಟಿದ್ದು, ಇವುಗಳಲ್ಲಿ ಒಮ್ಮತದ ಅಭಿಪ್ರಾಯಗಳು ಕಂಡು ಬರುವುದಿಲ್ಲ. ಈ ನಿಟ್ಟಿನಲ್ಲಿ ಯೋಗೇಂದ್ರ ಸಿಂಗ್ ಅವರು 'ಸಾಮಾಜಿಕ ಬದಲಾವಣೆಯ ವಿಚಾರಗಳು ಸಾರ್ವತ್ರಿಕವಾಗಿ ಚರ್ಚೆಗೆ ಒಳಗಾಗಿದ್ದರೂ ಒಮ್ಮತವಾದ ಸೈದ್ಧಾಂತಿಕ ವಿಚಾರಗಳನ್ನು ಹೊಂದಲು ಸಾಧ್ಯವಾಗಿಲ್ಲ' ಎಂದು ಅಭಿಪ್ರಾಯಪಟ್ಟಿದ್ದಾರೆ. ಕಿಂಗ್ಸಲೇ ಡೇವಿಸ್ ಅವರ ಅಭಿಪ್ರಾಯದ ಪ್ರಕಾರ ಸಾಮಾನ್ಯವಾಗಿ ಸಾಮಾಜಿಕ ಬದಲಾವಣೆಯ ಸಿದ್ಧಾಂತಗಳು ಬದಲಾವಣೆಯ ದಿಕ್ಕು ಮತ್ತು ರೀತಿಗಳನ್ನು ವಿವರಿಸಲು ಹೆಚ್ಚು ಆಸಕ್ತಿ ಹೊಂದಿದಂತೆ ಕಾಣುತ್ತಿದ್ದು, ಕೆಲವೊಂದು ಸಿದ್ಧಾಂತಗಳಲ್ಲಿ ಪರಸ್ಪರ ವಿರುದ್ಧ ದಿಕ್ಕಿನಲ್ಲಿ ಚಿಂತನೆಗಳು ಸಾಗುವುದನ್ನು ಕಾಣಬಹುದು. ಸಾಮಾಜಿಕ ಬದಲಾವಣೆಯ ಸಿದ್ಧಾಂತಗಳಲ್ಲಿ ಪ್ರಮುಖವಾದವುಗಳು ಈ ಕೆಳಗಿನಂತಿವೆ.[೫]

೧. ವಿಕಾಸವಾದಿ ಸಿದ್ಧಾಂತ

೨. ಚಕ್ರೀಯ ಸಿದ್ಧಾಂತ

೩. ಕಾರ್ಯಾತ್ಮಕ ಸಿದ್ಧಾಂತ

೪. ಸಂಘರ್ಷ ಸಿದ್ಧಾಂತ

ವಿಕಾಸವಾದಿ ಸಿದ್ಧಾಂತವು ಡಾರ್ವಿನ್‌ನ ಜೈವಿಕ ವಿಕಾಸವಾದ ಸಿದ್ಧಾಂತದಿಂದ ಪ್ರಭಾವಿತರಾದ ಸ್ಪೆನ್ಸರ್, ವೈಟ್, ಲಿಂಟನ್ ಮುಂತಾದವರಿಂದ ಪ್ರತಿಪಾದಿಸಲ್ಪಟ್ಟಿದೆ. ಇವರುಗಳ ಪ್ರಕಾರ ಬದಲಾವಣೆಯು ಒಂದು ನಿರಂತರ ಕ್ರಿಯೆಯಾಗಿದ್ದು ನಿರ್ದಿಷ್ಟ ದಿಕ್ಕಿನೆಡೆಗೆ ಸಾಗುತ್ತದೆ ಮತ್ತು ಅದು ಎಂದಿಗೂ ಪುನರಾವರ್ತನೆಗೊಳ್ಳುವುದಿಲ್ಲ. ಹೆಚ್ಚು ಕಡಿಮೆ ವಿಕಾಸವಾದಿ ಸಿದ್ಧಾಂತದ ವಿರುದ್ಧವಾಗಿ ಚಕ್ರೀಯ ಸಿದ್ಧಾಂತವು ಪ್ರತಿಪಾದಿಸಲ್ಪಟ್ಟಿದೆ. ಈ ಸಿದ್ಧಾಂತವನ್ನು ಸೊರೋಕಿನ, ಅರ್ನಾಲ್ಡ್ ಟೈನಬಿ, ಸ್ಪೆಂಗ್ಲರ್ ಮುಂತಾದವರು ಪ್ರತಿಪಾದಿಸಿದ್ದಾರೆ. ಇವರ ಪ್ರಕಾರ ಸಾಮಾಜಿಕ ಬದಲಾವಣೆಗಳ ವಿವಿಧ ಹಂತಗಳು ಸದಾ ಪುನರಾವರ್ತನೆ ಆಗುತ್ತಿರುತ್ತವೆ. ಕಾರ್ಯಾತ್ಮಕ ಸಿದ್ಧಾಂತವನ್ನು ಮರ್ಟನ್, ಪಾರ್ಸನ್, ಮುಂತಾದವರು ಪ್ರತಿಪಾದಿಸಿದ್ದಾರೆ. ಇವರುಗಳು ಸಮಾಜದ ವಿವಿಧ ಭಾಗಗಳು ಪರಸ್ಪರ ಅವಲಂಬಿಯಾಗಿದ್ದು, ಸಮಾಜದ ಆರೋಗ್ಯ ಮತ್ತು ಸಮಷ್ಟಿಯನ್ನು ಕಾಯ್ದುಕೊಳ್ಳುವ ದಿಸೆಯಲ್ಲಿ ಸಾಮಾಜಿಕ ಬದಲಾವಣೆಗಳು ಅನಿವಾರ್ಯ ಎಂದಿದ್ದಾರೆ. ಸಂಘರ್ಷ ಸಿದ್ಧಾಂತವು ಕಾರ್ಲಮಾರ್ಕ್ಸ್, ಜಾರ್ಜ ಸಿಮ್ಮೆಲ್, ರಾಲ್ಫ ಡೆಹರೆನ್ ಡೋರ್ಫ್ ಮುಂತಾದವರಿಂದ ಪ್ರತಿಪಾದಿಸಲ್ಪಟ್ಟಿದ್ದು, ಸಂಘರ್ಷವು ಸಾಮಾಜಿಕ ಬದಲಾವಣೆಯ ಮೂಲ ಶಕ್ತಿಯಾಗಿ ಕೆಲಸ ಮಾಡುವುದಲ್ಲದೆ, ಸಂಘರ್ಷವು ನಿರ್ಣಾಯಕ ಮತ್ತು ರಚನಾತ್ಮಕ ಪರಿಣಾಮವನ್ನು ಬೀರಬಲ್ಲದ್ದಾಗಿದೆ ಎಂದಿದ್ದಾರೆ.

ಭಾರತೀಯ ಸಮಾಜದ ಬದಲಾವಣೆಗೆ ಸಂಬಂಧಿಸಿದಂತೆ ಭಾರತೀಯ ಸಾಮಾಜಿಕ ಚಿಂತಕರಲ್ಲಿ ಅಧ್ಯಯನಕ್ಕೆ ಅಳವಡಿಸಿಕೊಳ್ಳಬಹುದಾದ ಸಾಮಾನ್ಯ ಸಿದ್ಧಾಂತದ ಬಗ್ಗೆ ಒಂದೇ ಅಭಿಪ್ರಾಯ ಕಂಡು ಬರುವುದಿಲ್ಲ. ಯೋಗೇಂದ್ರಸಿಂಗ್ ಅವರು ಭಾರತೀಯ ಸಮಾಜದ ಅಧ್ಯಯನಕ್ಕೆ ಸಂಬಂಧಿಸಿದಂತೆ ತಮ್ಮ ಅಧ್ಯಯನದಲ್ಲಿ ೩ ಬಗೆಯ ದೃಷ್ಟಿಕೋನಗಳು ಪ್ರಮುಖವಾದವುಗಳು ಎಂದಿದ್ದಾರೆ. ಅವುಗಳೆಂದರೆ ವಿಕಾಸವಾದಿ ದೃಷ್ಟಿಕೋನ, ಸಾಂಸ್ಕೃತಿಕ ದೃಷ್ಟಿಕೋನ ಮತ್ತು ರಚನಾತ್ಮಕ ದೃಷ್ಟಿಕೋನ. ವಿಕಾಸವಾದಿ ದೃಷ್ಟಿಕೋನದ ಪ್ರಮುಖ ಪ್ರತಿಪಾದಕರೆಂದರೆ ಚಾರ್ಲ್ಸ್, ಮೆಟಕಾಲ್ಫ, ಸರ್ ಹೇನ್ರಿಮನ್, ಬೊಡೆನ್ ಪಾವೆಲ್ ಮುಂತಾದವರು. ವಿಕಾಸವಾದಿ ಅಧ್ಯಯನವು ಭಾರತೀಯ ಗ್ರಾಮೀಣ ಸಮಾಜ, ಜಾತಿ ಮತ್ತು ಕುಟುಂಬ ಈ ಮೂರು ಅಂಶಗಳಿಗೆ ಪ್ರಾಧ್ಯಾನತೆ ನೀಡಿದ್ದು ಇವುಗಳ ಹುಟ್ಟು ಬೆಳವಣಿಗೆ ಮುಂತಾದವುಗಳ ಬಗ್ಗೆ ಗಮನ ಹರಿಸಿರುವುದು ಕಂಡು ಬರುತ್ತದೆ.

ಸಾಂಸ್ಕೃತಿಕ ದೃಷ್ಟಿಕೋನದ ಪ್ರಮುಖ ಪ್ರತಿಪಾದಕರೆಂದರೆ ಎಮ್.ಎನ್. ಶ್ರೀನಿವಾಸ. ಇವರು ಸಮಾಜದಲ್ಲಿನ ಬದಲಾವಣೆಯು ಆಂತರಿಕ, ಬಾಹ್ಯ ಒತ್ತಡಗಳಿಂದ ಉಂಟಾದುದು ಎಂದಿದ್ದಾರೆ. ಅಲ್ಲದೇ ಇವುಗಳನ್ನು ಸಾಂಸ್ಕೃತೀಕರಣ ಮತ್ತು ಪಾಶ್ಚಾತ್ಯೀಕರಣಗಳ ಸಿದ್ಧಾಂತಗಳಲ್ಲಿ ಪ್ರತಿಪಾದಿಸಿದ್ದಾರೆ. ಬಹುಶಃ ಶ್ರೀನಿವಾಸರ ಅಧ್ಯಯನವು ಭಾರತೀಯ ಸಮಾಜದ ಬದಲಾವಣೆಗೆ ಸಂಬಂಧಿಸಿದ ಹಾಗೇ ನಡೆದ ಒಂದು ವ್ಯವಸ್ಥಿತ ಅಧ್ಯಯನ ಎನ್ನಬಹುದು. ಸಾಂಸ್ಕೃತೀಕರಣಕ್ಕೆ ಸಂಬಂಧಿಸಿದ ಹಾಗೇ ಎಮ್. ಎನ್. ಶ್ರೀನಿವಾಸರವರು ಕೆಳಸ್ತರದ ಹಿಂದೂ ಜಾತಿ ಅಥವಾ ಆದಿವಾಸಿ ಅಥವಾ ಇತರ ಸಮೂಹವು ತನ್ನ ಪದ್ಧತಿಗಳನ್ನು ಹಾಗೂ ಕ್ರಿಯಾವಿಧಿ, ತತ್ವಾದರ್ಶ ಮತ್ತು ಜೀವನ ವಿಧಾನಗಳ

ಮೇಲೆ ಜಾತಿಯ ಅದರಲ್ಲೂ ಮುಖ್ಯವಾಗಿ, ದ್ವಿಜಾತಿಯ ರೀತಿ–ನೀತಿಗಳ ಅನುಸಾರವಾಗಿ ಮಾರ್ಪಡಿಸಿಕೊಳ್ಳುವ ಪ್ರಕ್ರಿಯೆಯನ್ನು ಸಾಂಸ್ಕೃತೀಕರಣ ಎನ್ನಬಹುದು ಎಂದಿದ್ದಾರೆ.

ಎಮ್. ಎನ್. ಶ್ರೀನಿವಾಸರವರ ಇನ್ನೊಂದು ಪ್ರಮುಖ ಸಿದ್ಧಾಂತವೆಂದರೆ ಪಾಶ್ಚಾತ್ಯೀಕರಣ. ಸುಮಾರು ೧೫೦ ವರ್ಷಗಳ ದೀರ್ಘ ಕಾಲದ ಬ್ರಿಟಿಷರ ಆಡಳಿತ ಮತ್ತು ಪಾಶ್ಚಾತ್ಯ ಸಮಾಜದೊಡನೆ ಸ್ವಾತಂತ್ರ್ಯ ನಂತರವೂ ಮುಂದುವರೆದ ಸಂಪರ್ಕ ಭಾರತೀಯರನ್ನು ಪಾಶ್ಚಿಮಾತ್ಯರ ಸಂಸ್ಕೃತಿ, ಜೀವನ ಶೈಲಿ ಮುಂತಾದವುಗಳನ್ನು ಅನುಕರಿಸುವಂತೆ ಮಾಡಿದೆ ಎಂದು ಯೋಗೇಂದ್ರ ಸಿಂಗ್ ಅಭಿಪ್ರಾಯ ಪಡುತ್ತಾರೆ. ಎಮ್. ಎನ್. ಶ್ರೀನಿವಾಸರ ಪ್ರಕಾರ ಪಾಶ್ಚಾತ್ಯೀಕರಣದ ಪ್ರಕ್ರಿಯೆಯು 'ಪಶ್ಚಿಮದ ಸಮಾಜವೊಂದರ ಜೊತೆ ಬಹು ದೀರ್ಘವಾದ ಸಾಂಸ್ಕೃತಿಕ ಸಂಪರ್ಕವನ್ನು ಹೊಂದಿದ್ದರ ಫಲವಾಗಿ ಪಾಶ್ಚಿಮಾತ್ಯೇತರ ಸಮಾಜದ ತಾಂತ್ರಿಕತೆ, ಸಂಸ್ಥೆಗಳು, ತತ್ವಾದರ್ಶ ಹಾಗೂ ಮೌಲ್ಯಗಳಲ್ಲಿ ಉಂಟಾಗಬಹುದಾದ ಪರಿವರ್ತನೆಗಳನ್ನು ಸಂಕೇತಿಸುತ್ತದೆ.'

ಭಾರತೀಯ ಸಮಾಜದ ಬದಲಾವಣೆಗೆ ಸಂಬಂಧಿಸಿದ ಮತ್ತೊಂದು ಪ್ರಮುಖ ದೃಷ್ಟಿಕೋನವೆಂದರೆ ರಚನಾತ್ಮಕ ದೃಷ್ಟಿಕೋನ. ಆರ್.ಕೆ.ಮುಖರ್ಜಿ, ಐ.ಪಿ. ದೇಸಾಯಿ, ಕೆ.ಎಂ.ಕಪಾಡಿಯಾ, ಟಿ.ಎನ್.ಮದನ, ಪಿ.ಎಂ.ಕೋಲೆಂಡ್ ಮುಂತಾದವರು ರಚನಾತ್ಮಕ ದೃಷ್ಟಿಕೋನ ಹೊಂದಿದ ಪ್ರಮುಖರಾಗಿದ್ದಾರೆ. ಇವರ ನಿಲುವುಗಳನ್ನು ಯೋಗೇಂದ್ರಸಿಂಗರವರು 'ರಚನಾತ್ಮಕ ಸಿದ್ಧಾಂತವಾದಿಗಳಿಗೆ ಸಾಮಾಜಿಕ ಬದಲಾವಣೆ ಎಂದರೆ, ಅವಲಂಬಿತ ಪರಿವರ್ತಕಗಳಲ್ಲಾದ ಮಾರ್ಪಾಡಿನ ಜೊತೆಗೆ ಸ್ವತಂತ್ರ ಪರಿವರ್ತಕಗಳ ಮಧ್ಯೆ ಸಂಬಂಧ ಕಲ್ಪಿಸುವುದು ಆಗಿದೆ' ಎಂದು ತಿಳಿಸುತ್ತಾರೆ.

**ಬುಡಕಟ್ಟುಗಳಲ್ಲಿ ಸಾಮಾಜಿಕ ಪರಿವರ್ತನೆ**

ಬುಡಕಟ್ಟು ಸಮುದಾಯಗಳು ಪ್ರಸ್ತುತ ಆಧುನೀಕರಣ, ಜಾಗತೀಕರಣದಿಂದ ಬದಲಾಗುತ್ತಿವೆ. ನಗರೀಕರಣ ಪ್ರಕ್ರಿಯೆಯು ಆಧುನಿಕತೆಯ ಒಳಗಡೆಯೇ ಇರುವ ಕಾರ್ಯ. ಲಾಭದಾಯಕತೆ ಜನವಿರೋಧಿ ಧೋರಣೆಯ ವಿರುದ್ಧ ತನ್ನ ಸಂಸ್ಕೃತಿಯ ಬೇರುಗಳನ್ನು ನಾಶಪಡಿಸಿಕೊಳ್ಳುವತ್ತ ಸಾಗಿದೆ. ಸರಕಾರ ಅನೇಕ ಸೌಲಭ್ಯ ಸಹಕಾರವನ್ನು ಒದಗಿಸುವುದರ ಮೂಲಕ ಮುಖ್ಯವಾಹಿನಿಗೆ ತರಲು ಪ್ರಯತ್ನಿಸುತ್ತಿದೆ. ಇವೆಲ್ಲವುಗಳ ಹಿನ್ನೆಲೆಯಲ್ಲಿ ಅವರ ಬದುಕು ಹಲವಾರು ರೂಪಾಂತರಗಳನ್ನು ಕಂಡಿದೆ. ಬುಡಕಟ್ಟುಗಳಲ್ಲಿ ಈ ಬದಲಾವಣೆಗಳನ್ನು ಕಾಣಬಹುದು.

ಬುಡಕಟ್ಟುತನ ಎನ್ನುವುದು ಆಧುನಿಕತೆಯ ಪೂರ್ವಸ್ಥಿತಿ. ಬುಡಕಟ್ಟುಗಳು ತಮ್ಮ ಆಧುನಿಕತೆಯ ಪೂರ್ವಸ್ಥಿತಿಯಿಂದ ಆಧುನಿಕ ಸ್ಥಿತಿಗೆ ಬದಲಾವಣೆ ಹೊಂದಲೇಬೇಕಾಗುತ್ತವೆ. ಇದನ್ನು ವಿಕಾಸದ ಹಿನ್ನೆಲೆಯಲ್ಲಿ ಪರಿಭಾವಿಸಿಕೊಳ್ಳಬಹುದಾಗಿದೆ. ಇಲ್ಲಿ ಬುಡಕಟ್ಟುತನವೆನ್ನುವುದು ವಿಕಾಸದಲ್ಲಿಯ ಒಂದು ಹಂತವೆಂದು ಗ್ರಹಿಸಬಹುದು. ಬುಡಕಟ್ಟುಗಳ ಅಧ್ಯಯನದ ಮೊದಲ ಹಂತ ಪ್ರಾರಂಭವಾದದ್ದು ಪಾಶ್ಚಾತ್ಯ ವಿದ್ವಾಂಸರಿಂದ. ಆಸಕ್ತ ವಿದ್ವಾಂಸರು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಅಂಥ ಜನಾಂಗಗಳ ಕುರಿತು ಗಂಭೀರ ಅಧ್ಯಯನವನ್ನು ನಡೆಸಿದ್ದಾರೆ. ಅಂಥವರಲ್ಲಿ ವೆರಿಯರ್ ಎಲ್ವಿನ್,

ಲಿಮ್‌ಸ್ಪರ್, ಕರ್ನಾಟಕದ ಎಚ್.ವ್ಹಿ. ನಂಜುಡಯ್ಯ ಮತ್ತು ಎಲ್.ಕೆ. ಅನಂತಕೃಷ್ಣ ಅಯ್ಯರ ಪ್ರಮುಖರಾಗಿದ್ದಾರೆ.

ಬುಡಕಟ್ಟುಗಳು ತಮ್ಮ ಜಾಣ್ಮೆಯಿಂದ ಸಂಪ್ರದಾಯಗಳನ್ನು ಕಾಪಾಡಿಕೊಂಡು ಬರುವಲ್ಲಿ ಪ್ರಯತ್ನಿಸುತ್ತವೆ. ಇತಿಹಾಸವನ್ನು ತೆರೆದು ನೋಡಿದಾಗ ಅವು ತಮ್ಮ ಹುಟ್ಟುವಿಕೆಯಿಂದ ಹಿಡಿದು ಪ್ರಸ್ತುತ ಕಾಲದವರೆಗೂ ಒಂದಲ್ಲ ಒಂದು ರೀತಿಯಿಂದ ಬದಲಾವಣೆಗೆ ಒಳಗಾಗಿವೆ. ಸಂಪ್ರದಾಯ, ನಂಬಿಕೆಗಳು ನಾಗರಿಕತೆ ಹಾಗೂ ಆಧುನಿಕತೆಗಳ ಪ್ರಭಾವಕ್ಕೆ ಒಳಗಾದ ಪರಿಣಾಮವಾಗಿ ಬುಡಕಟ್ಟುಗಳು ತಮ್ಮ ಆಧುನಿಕ ಪೂರ್ವ ಸ್ಥಿತಿಯಿಂದ ಪ್ರಸ್ತುತತೆಗೆ ಸ್ಪಂದಿಸುವ ರೀತಿಯನ್ನು ನಾವು ಬದಲಾವಣೆಯೆಂದು ಗ್ರಹಿಸಬಹುದು. ಈ ಬದಲಾವಣೆಗೆ ಆಧುನಿಕ ಸೌಲಭ್ಯಗಳು, ಮನೋಧರ್ಮಗಳ ಬದಲಾವಣೆ, ನಗರೀಕರಣದ ಆಕರ್ಷಕ ಜೀವನ ಪ್ರಮುಖ ಕಾರಣವಾಗಿವೆ.

ಇಂದಿನ ಆಧುನಿಕ ಯುಗದಲ್ಲಿ ಎಷ್ಟೋ ಬುಡಕಟ್ಟುಗಳು ಆರ್ಥಿಕವಾಗಿ, ಸಾಮಾಜಿಕವಾಗಿ ಶೈಕ್ಷಣಿಕವಾಗಿ ಮತ್ತು ರಾಜಕೀಯವಾಗಿ ತಮ್ಮನ್ನು ಮುನ್ನೆಡೆಗೆ ತಂದುಕೊಳ್ಳಲು ಪರದಾಡುತ್ತಿವೆ. ಬುಡಕಟ್ಟುಗಳ ವೇಷಭೂಷಣ, ವಸತಿ ಹಾಗೂ ಗೃಹೋಪಯೋಗಿ ಸಾಮಗ್ರಿ, ಆಹಾರ ಪದ್ಧತಿ, ಜೀವನ ಶೈಲಿ, ಮದುವೆ ಸಂಪ್ರದಾಯ, ವ್ಯವಸಾಯ ಉಪಕರಣ ಮುಂತಾದವುಗಳಲ್ಲಿ ಹಲವಾರು ಬದಲಾವಣೆಗಳು ನಡೆಯುತ್ತಾ ಬಂದಿವೆ. ಬುಡಕಟ್ಟುಗಳು ವಾಸಿಸುವ ಪ್ರದೇಶಗಳಲ್ಲಿ (ಗುಡ್ಡಗಾಡು) ಬದಲಾವಣೆಯ ಗಾಳಿ ಬೀಸಿ ಅಂತರಂಗದಲ್ಲಿ, ಆಲೋಚನೆಗಳಲ್ಲಿ, ನೀತಿ ಪ್ರಜ್ಞೆಯಲ್ಲಿ ಬದಲಾವಣೆಗಳು ಆಗುತ್ತಿವೆ. ವಯೋವೃದ್ಧರಿಗಿಂತ ಯುವ ಪೀಳಿಗೆಯಲ್ಲಿ ಹೆಚ್ಚಿನ ಬದಲಾವಣೆ ಕಂಡು ಬರುತ್ತಿದೆ. ಈ ಬದಲಾವಣೆಗಳಿಗೆ ಬಹುಮುಖ್ಯ ಕಾರಣ ಆಧುನಿಕತೆ, ನಗರೀಕರಣದ ಆಕರ್ಷಕ ಜೀವನ ಹಾಗೂ ಮನೋಧರ್ಮಗಳ ಬದಲಾವಣೆ ಎನ್ನಬಹುದು. ಬುಡಕಟ್ಟುಗಳು ಬಾಹ್ಯವಾಗಿ ಎಷ್ಟೇ ಬದಲಾವಣೆಗಳನ್ನು ಹೊಂದಿದರೂ ಆಂತರಿಕವಾಗಿ ತಮ್ಮ ಪರಂಪರೆಯನ್ನು ಉಳಿಸಿಕೊಂಡು ಬಂದಿವೆ.

ಬುಡಕಟ್ಟು ಸಮುದಾಯಗಳು ಆಧುನಿಕ ಜಗತ್ತಿನ ಇಂಥ ಸಂದರ್ಭದಲ್ಲಿ ತಮ್ಮ ಮೂಲ ಸಂಸ್ಕೃತಿಯನ್ನು ಕಾಪಾಡಿಕೊಂಡು ಆಧುನಿಕ ಜೀವನವನ್ನು ತಮ್ಮಲ್ಲಿ ರೂಢಿಸಿಕೊಳ್ಳಬೇಕಾದ ಅನಿವಾರ್ಯತೆಯಿದೆ. ಮಾತೃಭೂಮಿ, ಮಾತೃ ಭಾಷೆ, ತಮ್ಮದೇ ಆದ ವಿಶಿಷ್ಟ ಸಂಸ್ಕೃತಿ ಬಗ್ಗೆ ಎಷ್ಟೇ ಅಭಿಮಾನ ಹೊಂದಿದ್ದರೂ, ತಮ್ಮ ನೆರೆಹೊರೆಯಲ್ಲಿ ವಾಸಿಸುವ ನಾಗರಿಕ ಸಮಾಜದ ಭಾಷೆ, ಆಚಾರ–ವಿಚಾರ, ಸಂಸ್ಕೃತಿ, ಜೀವನ ಶೈಲಿಯನ್ನು ಅರ್ಥಮಾಡಿಕೊಂಡು ಅವರೊಡನೆ ಸಮಧುರವಾದ ಬಾಂಧವ್ಯವನ್ನು ಹೊಂದಬೇಕಾದ ಅವಶ್ಯಕತೆ ಇಂದು ಹೆಚ್ಚಾಗಿದೆ.

ಪ್ರತಿಯೊಂದು ಬುಡಕಟ್ಟು ಸಮುದಾಯವು ತನ್ನದೇ ಆದ ಸಾಂಸ್ಕೃತಿಕ ಪರಂಪರೆಯನ್ನು ಕಟ್ಟಿಕೊಂಡಿರುತ್ತದೆ. ಇಂತಹ ಸಾಂಸ್ಕೃತಿಕ ಪರಂಪರೆಯು ನಿರಂತರವಾಗಿ ಚಾಲನೆಯಲ್ಲಿರುವುದು ವಾಸ್ತವದ ಸಂಗತಿಯಾಗಿದೆ. ಬದುಕಿನ ಎಲ್ಲ ವ್ಯವಸ್ಥೆಯ ಆಧಾರಗಳಾದ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ, ರಾಜಕೀಯ ಮುಂತಾದ ಕ್ಷೇತ್ರಗಳಲ್ಲಿ ಪರಿವರ್ತನೆಯನ್ನು ಕಾಣಬಹುದು. ಹೀಗೇ ಬುಡಕಟ್ಟು ಸಮುದಾಯಗಳು ಆಧುನಿಕತೆಯ ಕಡೆಗೆ ತೀವ್ರಗತಿಯಲ್ಲಿ ಬದಲಾಗುತ್ತಿರುವುದನ್ನು ಗಮನಿಸಬಹುದಾಗಿದೆ.

ಆಧುನಿಕತೆ, ಔದ್ಯೋಗೀಕರಣ, ಆಣೆಕಟ್ಟು ನಿರ್ಮಾಣ, ನಗರೀಕರಣದ ದಿಶೆಯಿಂದ ಅರಣ್ಯಗಳು, ನಾಶವಾಗುತ್ತಿರುವುದರಿಂದ, ಅರಣ್ಯ ಖಾತೆಯವರಿಂದ ಕಿರಿಕಿರಿ, ತಮ್ಮದೇ ಆದ ಭೂಮಿಯನ್ನು ಹೊಂದದ ಬುಡಕಟ್ಟು ಕುಟುಂಬಗಳನ್ನು ಅರಣ್ಯ ಕಾಯ್ದೆಯಡಿ ಒಕ್ಕಲೆಬ್ಬಿಸುವ ಕಾರ್ಯ ಮುಂತಾದ ಕಾರಣಗಳಿಂದ ತಮ್ಮ ಜೀವನ ಕ್ರಮವನ್ನು ಪರಿವರ್ತನೆ ಮಾಡಿಕೊಳ್ಳುವುದು ಅನಿವಾರ್ಯವಾಗಿ, ನಾಗರಿಕತೆ ಕಡೆಗೆ ವಾಲುತ್ತಿರುವುದನ್ನು ಕಾಣುತ್ತೇವೆ.

ವಿಶಿಷ್ಟವಾದ ಸಂಸ್ಕೃತಿ ಪರಂಪರೆಯುಳ್ಳ ಬುಡಕಟ್ಟು ಸಮುದಾಯಗಳು ಇತ್ತೀಚಿಗೆ ಸಾಮಾಜಿಕ, ಸಾಂಸ್ಕೃತಿಕ, ಶೈಕ್ಷಣಿಕ ಹಾಗೂ ಆರ್ಥಿಕವಾಗಿ ಕ್ರಮೇಣ ಪರಿವರ್ತನೆಗೊಳ್ಳುತ್ತಿದ್ದು, ಅರ್ಥಹೀನವಾಗಿರುವಂತಹ ಅನಿಷ್ಟಪದ್ಧತಿಗಳ ಆಚರಣೆ, ರೂಢಿ, ಸಂಪ್ರದಾಯಗಳ ಮೂಢನಂಬಿಕೆಗಳನ್ನು ಬಿಟ್ಟು, ಇದರ ಜೊತೆಗೆ ಕಾಡಿನ ಸಂಸ್ಕೃತಿಯನ್ನು ತೊರೆದು ನಾಡಿನ ಸಂಸ್ಕೃತಿಯ ಕಡೆಗೆ ಪಯಣಿಸುತ್ತಿರುವುದು ಗಮನಾರ್ಹ ಸಂಗತಿ.

ಜೀವನದ ಮೌಲ್ಯಗಳು ಭರದಿಂದ ಬದಲಾಗುತ್ತಿರುವ ಇಂದಿನ ದಿನಗಳಲ್ಲಿ ಗೌಳಿ ಜನಾಂಗಕ್ಕೂ ತಮ್ಮ ಸ್ವಂತಿಕೆಯನ್ನು ಉಳಿಸಿಕೊಳ್ಳುವುದು ತೀರ ಕಷ್ಟದ್ದಾಗಿದೆ. ಕ್ಷೀರಸಾಗರ ಅಥವಾ ಶ್ವೇತ ಕ್ರಾಂತಿಯ ಕನಸು ಕಾಣುತ್ತಿರುವ ಕರ್ನಾಟಕದ ಹಾಲು ಹೈನು ಸರಬರಾಜು ಸಂಸ್ಥೆಯವರು ಈ ದಿಶೆಯಲ್ಲಿ ಗೌಳಿಗರ ನೆರವನ್ನು ಹೆಚ್ಚು ಹೆಚ್ಚಾಗಿ ಕೋರುತ್ತಿದ್ದಾರೆ. ಅಂತೆಯೇ ಮುಂಡಗೋಡ ತಾಲೂಕಿನ ಹಲವಡೆಗಳಲ್ಲಿ ಗೌಳಿಗರ ಸಂಘಗಳು ತಲೆಯೆತ್ತಿ ಹಳ್ಳಿಗಳಿಂದ ಹಾಲು ಸಂಗ್ರಹಿಸಿ ದೂರದ ಹುಬ್ಬಳ್ಳಿ-ಧಾರವಾಡ ಡೈರಿಗೆ ಕಳಿಸಿಕೊಡಲಾರಂಭಿಸಿವೆ. ಇದರಿಂದ ಅವರ ಜೀವನದಲ್ಲಿ ಮಹತ್ತರ ಬದಲಾವಣೆಗಳಾಗುತ್ತಿವೆ.

ಸಾಮಾಜಿಕ ಪರಿವರ್ತನೆಗೆ ಸಂಬಂಧಿಸಿದಂತೆ ಯಾವುದೇ ಒಂದು ಸಿದ್ಧಾಂತವನ್ನು ಪರಿಪೂರ್ಣವಾದ ಸಿದ್ಧಾಂತವೆಂದು ಒಪ್ಪಿ ಅಳವಡಿಸಿಕೊಳ್ಳಲು ಸಾಧ್ಯವಿಲ್ಲವಾದುದರಿಂದ ಸಂದರ್ಭಕ್ಕೆ ಅನುಗುಣವಾಗಿ ಈ ಅಧ್ಯಯನದಲ್ಲಿ ಬೇರೆ ಬೇರೆ ಸಿದ್ಧಾಂತಗಳನ್ನು ಅಳವಡಿಸಿಕೊಳ್ಳಲಾಗಿದೆ. ಕ್ಷೇತ್ರ ಕಾರ್ಯದ ಜೊತೆಗೆ ಹಲವಾರು ಚಿಂತಕರು, ಗೌಳಿಸಮಾಜದ ಹಿರಿಯರೊಂದಿಗೆ ಚರ್ಚೆ, ಗೌಳಿ ಸಮುದಾಯದ ಬಗ್ಗೆ ಇರುವ ಸಾಹಿತ್ಯಗಳ ಅಧ್ಯಯನ ಮಾಡುವುದರ ಮೂಲಕ ಗೌಳಿಗರ ನೈಜವಾದ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದಲಾವಣೆಗಳನ್ನು ಗುರುತಿಸಿ ಈ ಅಧ್ಯಯನದಲ್ಲಿ ಅವನ್ನು ಪ್ರಸ್ತುತಪಡಿಸುವ ಪ್ರಯತ್ನ ಮಾಡಲಾಗಿದೆ.

**೫.೧ ಕೌಟುಂಬಿಕ ಪರಿವರ್ತನೆ**

ಕುಟುಂಬವು ವಿವಾಹದಂತೆ ಒಂದು ಮೂಲಭೂತವಾದ ಮತ್ತು ಸಾರ್ವತ್ರಿಕವಾದ ಸಾಮಾಜಿಕ ಸಂಸ್ಥೆಯಾಗಿದೆ. ಕುಟುಂಬವು ಒಂದು ಪ್ರಾಥಮಿಕ ಸಮೂಹವಾಗಿದೆ. ಕುಟುಂಬಗಳ ಅಸ್ತಿತ್ವವನ್ನು ಹೊಂದದ ಸಮಾಜಗಳು ಇಲ್ಲ. ಮಾನವನ ಮೂಲಭೂತ ಬೇಡಿಕೆಗಳನ್ನು ಪೂರೈಸುವ ಹೊಣೆಗಾರಿಕೆ ಕುಟುಂಬದ್ದಾಗಿದೆ.

ಕುಟುಂಬವು ಮಗುವಿಗೆ ಸಾಮಾಜೀಕರಣ ಪ್ರಕ್ರಿಯೆ ನಡೆಯುವುದಕ್ಕೆ ಸಹಕಾರಿಯಾಗಿದೆ. ಕುಟುಂಬವಿಲ್ಲದ ಸಮಾಜ ಕೇವಲ ಕಾಲ್ಪನಿಕವಾದುದು. ಮಕ್ಕಳಿಗೆ ಒಂದು ಸ್ಥಾನಮಾನವನ್ನು ಒದಗಿಸಿ ಅದರ ಮೂಲಕ ಅವರನ್ನು ಸಮಾಜದ ಮುಖ್ಯವಾಹಿನಿಗೆ ಸೇರಿಸುತ್ತದೆ.

ಭಾರತದಲ್ಲಿ ಅವಿಭಕ್ತ ಕುಟುಂಬ ವ್ಯವಸ್ಥೆ ತನ್ನದೇ ಆದ ಪುರಾತನ ಹಿನ್ನೆಲೆಯನ್ನು ಹೊಂದಿದೆ. ಕೃಷಿ ಆಧಾರಿತ ಆರ್ಥಿಕ ವ್ಯವಸ್ಥೆಗೆ ಪೂರಕವಾಗಿ ಅವಿಭಕ್ತ ಕುಟುಂಬಗಳು ಕಾರ್ಯನಿರ್ವಹಿಸುತ್ತಿದ್ದವು. ಕುಟುಂಬದಲ್ಲಿ ಎರಡು ರೂಪಗಳನ್ನು ಕಾಣಬಹುದು. ೧. ಪಿತೃ ಪ್ರಧಾನ ಕುಟುಂಬ ೨. ಮಾತೃ ಪ್ರಧಾನ ಕುಟುಂಬ.

**೫.೧.೧. ಬದಲಾವಣೆ ಸುಳಿಯಲ್ಲಿ ಭಾರತೀಯ ಕುಟುಂಬಗಳು[೭]**

ಸಾಮಾಜಿಕ ಸಂಸ್ಥೆಗಳು ಜಡ ಸ್ವರೂಪವನ್ನು ಹೊಂದಿರುವುದಿಲ್ಲ. ಅವುಗಳು ಪರಿವರ್ತನಾಶೀಲವಾಗಿರುತ್ತವೆ. ವಿವಾಹ ಮತ್ತು ಕುಟುಂಬಗಳು ಪರಸ್ಪರ ಸಂಬಂಧಿಸಿದ ಸಂಸ್ಥೆಗಳು. ವಿವಾಹದಲ್ಲಿ ಮತ್ತು ವಿವಾಹ ವಿಚ್ಛೇದನ ಪ್ರಮಾಣದಲ್ಲಿ ಉಂಟಾಗುವ ಪರಿವರ್ತನೆಗಳೆಲ್ಲ ಕುಟುಂಬ ರಚನೆಯನ್ನು ಪ್ರಭಾವಿಸಬಲ್ಲವು. ಕೈಗಾರಿಕೀರಣ, ನಗರೀಕರಣ, ಮಹಿಳೆಯರ ಆರ್ಥಿಕ ಬಂಧ ವಿಮೋಚನೆ, ನಗರಾಭಿಮುಖ ವಲಸೆ, ಹತ್ತು ಹಲವಾರು ಶಾಸನಗಳು ಕುಟುಂಬ ಎಂಬ ಸಂಸ್ಥೆಯನ್ನು ಪ್ರಭಾವಿಸಿವೆ. ಕಳೆದೆರಡು ಶತಮಾನದಲ್ಲಿ ಉಂಟಾದ ಸ್ಥಿತ್ಯಂತರಗಳು ಕುಟುಂಬ ಸಂಸ್ಥೆಯನ್ನು ಪ್ರಭಾವಿಸಿವೆ ಎಂದು ಸಮಾಜಶಾಸ್ತ್ರಜ್ಞರ ಅಭಿಪ್ರಾಯವಾಗಿದೆ. ನೂರಾರು ಜನರು ಒಂದೇ ಸೂರಿನಡಿನಲ್ಲಿ ವಾಸಮಾಡುತ್ತಿದ್ದರು. ಅಷ್ಟೆಲ್ಲ ಸದಸ್ಯರು ಸುಖ-ದುಃಖಗಳನ್ನು ಹಂಚಿಕೊಂಡು ಬದುಕುತ್ತಿದ್ದರು. ಆದರೆ ಈಗ ಬೃಹತ್ ಕುಟುಂಬಗಳು ವಿರಳವಾಗಿವೆ. ನಗರಾಭಿಮುಖ ವಲಸೆ, ಕೃಷಿಯೇತರ ಉದ್ಯೋಗಗಳನ್ನು ಅರಸಿ ಜನರು ವಲಸೆ ಹೋಗುತ್ತಿರುವುದು, ಸಂತಾನ ನಿಯಂತ್ರಣಗಳ ಸಾಧನಗಳ ಬಳಕೆ, ಪಾಶ್ಚಾತ್ಯ ಶಿಕ್ಷಣ, ವ್ಯಕ್ತಿವಾದದ ಬೆಳವಣಿಗೆ ಕುಟುಂಬದ ಪರಿವರ್ತನೆಗೆ ಕಾರಣೀಭೂತವಾಗಿವೆ. ಕೈಗಾರಿಕಾ ಕ್ರಾಂತಿಯ ನಂತರದ ದಿನಗಳಲ್ಲಿ ಮಹಿಳೆ ಶಿಕ್ಷಣ ಮತ್ತು ತರಬೇತಿಯನ್ನು ಪಡೆದುಕೊಂಡಳು. ಆದಾಯ ಸಂಪಾದನೆಗೆಂದು ಮೊದಲಬಾರಿಗೆ ಮನೆಯಿಂದ ಹೊರಗೆ ಕಾಲಿರಿಸಿದಳು. ಹೊಲಕ್ಕೆ ಹೋಗುವ ಮಹಿಳೆ ಶಿಕ್ಷಣದ ಬಲದಿಂದ ಕಛೇರಿಗಳಿಗೆ ಮತ್ತು ಕಾರ್ಖಾನೆಗಳಿಗೆ ಹೋಗುವಂತಾಯಿತು. ಆಹಾರ ಸಂಪಾದಿಸುವ ಹೊಸ ಸದಸ್ಯಳಾಗಿ ಹೊರಹೊಮ್ಮಿದಳು. ಇದರಿಂದಾಗಿ ಸಹಜವಾಗಿ ಅವಳ ಸ್ಥಾನಮಾನ ಸಮಾಜದಲ್ಲಿ ಮಾತ್ರವಲ್ಲ ಕುಟುಂಬದಲ್ಲಿಯೂ ಎತ್ತರಿಸಲ್ಪಟ್ಟಿತು. ಈ ಅಂಶಗಳು ಕೌಟುಂಬಿಕ ಪರಿವರ್ತನೆಗೆ ನಾಂದಿ ಹಾಡಿದವು.

ಕೌಟುಂಬಿಕ ಸಂಬಂಧಗಳಲ್ಲಿ ಉಂಟಾದ ಪರಿವರ್ತನೆಗಳು ಅಗಾಧವಾಗಿವೆ. ದುಡಿಯುವ ಹೆಣ್ಣಿನಿಂದಾಗಿ ಮನೆಯೊಳಗಿನ ಅತ್ತೆ-ಮಾವ, ಗಂಡ ಇವರ ನಡುವಿನ ಸಂಬಂಧಗಳು ಪರಿವರ್ತನೆಯಾಗಿವೆ. ಇಂದು ವಿವಾಹ ವಿಷಯದಲ್ಲೂ ಹೆಣ್ಣು ಸ್ವತಂತ್ರವಾದ ನಿರ್ಣಯ ತೆಗೆದುಕೊಳ್ಳುತ್ತಿದ್ದಾಳೆ. ಇದರಿಂದಾಗಿ ಕುಟುಂಬದೊಳಗಿನ ಸಂಬಂಧಗಳು ಸಾಕಷ್ಟು ಬದಲಾಗಿವೆ. ತಂದೆ-ತಾಯಿ ಮತ್ತು ಮಕ್ಕಳ ನಡುವಿನ ಸಂಬಂಧಗಳು ಸಾಕಷ್ಟು ಬದಲಾವಣೆಗೊಳಪಟ್ಟಿವೆ. ಈ

ಹಿಂದೆ ಅವಿಭಕ್ತ ಕುಟುಂಬಗಳು ಮನರಂಜನೆಯ ತಾಣವಾಗಿದ್ದವು. ಈಗ ಅವುಗಳ ಸ್ಥಾನವನ್ನು ಸಿನಿಮಾಗೃಹಗಳು, ನಾಟಕಮಂದಿರಗಳು, ಕ್ಲಬ್, ಪಬ್, ವಿವಿಧ ಬಣ್ಣದ ಆಟಗಳು, ಟಿ.ವ್ಹಿ. ಮಾಧ್ಯಮಗಳು ವಹಿಸಿಕೊಂಡಿವೆ. ಇವು ಕುಟುಂಬದಲ್ಲಿ ಆದ ಪರಿವರ್ತನೆಗಳು.

**೫.೧.೨ ಅವಿಭಕ್ತ ಕುಟುಂಬಗಳ ಗಾತ್ರ ಸಣ್ಣದಾಗುತ್ತಿರುವುದು**

ದಿನದಿನದಿಂದ ದಿನಕ್ಕೆ ಕುಟುಂಬಗಳ ಗಾತ್ರ ಚಿಕ್ಕದಾಗುತ್ತ ನಡೆದಿದೆ. ಇದೊಂದು ಜಾಗತಿಕ ವಿದ್ಯಮಾನ. ನಗರಾಭಿಮುಖ ವಲಸೆ, ಕೃಷಿಯೇತರ ಉದ್ಯೋಗಗಳನ್ನು ಅರಸಿ ಜನರು ವಲಸೆ ಹೋಗುತ್ತಿರುವುದು, ವಿಳಂಬಿತ ವಿವಾಹಗಳು, ಸಂತಾನ ನಿಯಂತ್ರಣಗಳ ಸಾಧನಗಳ ವಿಸ್ತ್ರುತ ಬಳಕೆ, ಕೃಷಿಯಲ್ಲಿ ಯಂತ್ರೋಪಕರಣಗಳ ಬಳಕೆ, ಪಾಶ್ಚಾತ್ಯ ಶಿಕ್ಷಣ, ವ್ಯಕ್ತಿವಾದದ ಬೆಳವಣಿಗೆ ಮತ್ತು ಅವಿಭಕ್ತ ಕುಟುಂಬಗಳ ವಿಘಟನೆ ಕುಟುಂಬದ ಗಾತ್ರವನ್ನು ಕುಗ್ಗಿಸುವಲ್ಲಿ ಮಹತ್ವದ ಪಾತ್ರವಹಿಸುತ್ತವೆ.[೮]

**೫.೧.೩ ಅವಿಭಕ್ತ ಮತ್ತು ವಿಸ್ತೃತ ಕುಟುಂಬಗಳ ಸ್ಥಾನದಲ್ಲಿ ಅಣು ಕುಟುಂಬಗಳು ಕಾಣಿಸಿಕೊಳ್ಳತೊಡಗಿವೆ**

ಹಿಂದಿನ ಕಾಲದಲ್ಲಿ ಕೃಷಿಯು ಜನರ ಜೀವನೋಪಾಯಕ್ಕೆ ಮುಖ್ಯ ಆಧಾರವಾಗಿತ್ತು. ಸಾಂಪ್ರದಾಯಿಕ ಉಪಕರಣಗಳ ಬಳಕೆಯಿಂದಾಗಿ ಕೃಷಿ ಚಟುವಟಿಕೆಗೆ ಅತ್ಯಧಿಕ ಮಾನವಶಕ್ತಿ ಮತ್ತು ಪಶುಶಕ್ತಿ ಬೇಕಾಗುತ್ತಿತ್ತು. ಕೃಷಿಗೆ ಬೇಕಾದ ಮಾನವ ಶ್ರಮ ಶಕ್ತಿಯನ್ನು ಅಂದು ಅಸ್ತಿತ್ವದಲ್ಲಿದ್ದ ಅವಿಭಕ್ತ ಕುಟುಂಬಗಳು ನೀಡುತ್ತಿದ್ದವು. ಆದರೆ ಈಗ ಯಾಂತ್ರೀಕರಣದ ಅಭಿವೃದ್ಧಿಯಿಂದ ಸುಗ್ಗಿ ಮಾಡುವ ಯಂತ್ರಗಳು, ಬಿತ್ತನೆ ಮಾಡುವ, ಕಳೆತೆಗೆಯುವ ಯಂತ್ರಗಳು, ಟ್ರ್ಯಾಕ್ಟರ್ ಮುಂತಾದವುಗಳು ಮಾನವ ಶ್ರಮದ ಬಳಕೆಯನ್ನು ಸಾಕಷ್ಟು ತಗ್ಗಿಸಿವೆ. ಇದರಿಂದ ಅವಿಭಕ್ತ ಕುಟುಂಬಗಳು ತಮ್ಮ ಮೊದಲಿನ ಮಹತ್ವವನ್ನು ಕಳೆದುಕೊಂಡಿವೆ. ಅಲ್ಲದೇ ನಗರಾಭಿಮುಖ ವಲಸೆ, ಕೈಗಾರಿಕೀಕರಣ, ನಗರೀಕರಣ, ವ್ಯಕ್ತಿವಾದದ ಬೆಳವಣಿಗೆ, ಸಾಮಾಜಿಕ ಶಾಸನಗಳು ಇವೇ ಮುಂತಾದ ಕಾರಣಗಳಿಂದ ಅಣು ಕುಟುಂಬಗಳು ಗ್ರಾಮಗಳಲ್ಲಿ ತಲೆಎತ್ತಿಕೊಂಡಿವೆ.[೯]

**೫.೧.೪ ಪಿತೃ ಪ್ರಧಾನ ಅವಿಭಕ್ತ ಕುಟುಂಬಗಳ ಸ್ಥಾನದಲ್ಲಿ ಲಿಂಗ ಸಮಾನತೆ ಹೊಂದಿದ ಕುಟುಂಬಗಳು ಕಾಣಿಸಿಕೊಳ್ಳುತ್ತಿವೆ[೧೦]**

ಕುಟುಂಬದಲ್ಲಿನ ಶಕ್ತಿ ಮತ್ತು ಅಧಿಕಾರದ ಹಂಚಿಕೆಯನ್ನು ಆಧರಿಸಿ ಕುಟುಂಬಗಳನ್ನು ಪಿತೃ ಪ್ರಧಾನ, ಮಾತೃಪ್ರಧಾನ, ಸಮಾನಾಧಿಕಾರವುಳ್ಳ ಕುಟುಂಬಗಳು ಎಂದು ವರ್ಗೀಕರಿಸಲಾಗುತ್ತದೆ.

ಕೈಗಾರಿಕಾ ಕ್ರಾಂತಿಯ ನಂತರದ ದಿನಗಳಲ್ಲಿ ಮಹಿಳೆ ಶಿಕ್ಷಣ ಮತ್ತು ತರಬೇತಿಯನ್ನು ಪಡೆದುಕೊಂಡಳು. ಆದಾಯ ಸಂಪಾದನೆಗೆಂದು ಮೊದಲ ಬಾರಿಗೆ ಮನೆಯಿಂದ ಹೊರಗೆ ಕಾಲಿರಿಸಿದಳು. ಹೊಲಕ್ಕೆ ಹೋಗುವ ಮಹಿಳೆ ಶಿಕ್ಷಣ ಬಲದಿಂದ ಕಛೇರಿಗಳಿಗೆ ಹಾಗೂ ಕಾರ್ಖಾನೆಗಳಿಗೆ ಹೋಗುವಂತಾಯಿತು. ಇದರಿಂದ ಸಹಜವಾಗಿ ಅವಳ ಸ್ಥಾನಮಾನ ಸಮಾಜದಲ್ಲಿ ಮಾತ್ರವಲ್ಲ ಕುಟುಂಬದಲ್ಲಿಯೂ ಎತ್ತರಿಸಲ್ಪಟ್ಟಿತು. ಇದರಿಂದ ಪಿತೃ ಪ್ರಧಾನ ಕುಟುಂಬದ ಸ್ಥಾನದಲ್ಲಿ ಸಮಾನಾಧಿಕಾರವುಳ್ಳ ಕುಟುಂಬಗಳು ತಲೆಯೆತ್ತತೊಡಗಿದವು. ಇದು ಅವಿಭಕ್ತ ಕುಟುಂಬದ ರಚನೆಯಲ್ಲಿ ಉಂಟಾದ ಅತೀ ಪ್ರಮುಖ ಪರಿವರ್ತನೆ.

**೫.೧.೫ ಕುಟುಂಬದ ಸಂಬಂಧಗಳಲ್ಲಿ ಉಂಟಾದ ಪರಿವರ್ತನೆಗಳು**

ಇಂದಿನ ದಿನಮಾನಗಳಲ್ಲಿ ಈಗಾಗಲೇ ತಿಳಿಸಿದಂತೆ ಹೆಣ್ಣು ಮಕ್ಕಳು ಶಿಕ್ಷಣದ ಬಲದಿಂದ ಆಹಾರ ಸಂಪಾದಿಸುವ ಹೊಸ ಸದಸ್ಯಳಾಗಿ ಹೊರಹೊಮ್ಮಿದರು. ಶಿಕ್ಷಣ ಪಡೆಯುವಿಕೆ, ಆರ್ಥಿಕ ಬಂಧ ವಿಮೋಚನೆ, ಸ್ತ್ರೀ ಸಬಲೀಕರಣ, ಉದ್ಯೋಗಗಳಲ್ಲಿ ಮತ್ತು ಶಿಕ್ಷಣದಲ್ಲಿ ಮಹಿಳಾ ಮೀಸಲಾತಿ ಇವೇ ಮುಂತಾದ ಬೆಳವಣಿಗೆಯಿಂದ ಸ್ತ್ರೀಯರ ಸ್ಥಾನಮಾನ ಇಂದು ಸಾಕಷ್ಟು ಎತ್ತರಿಸಲ್ಪಟ್ಟಿದೆ. ಅತ್ತೆ-ಮಾವ, ಗಂಡ ಇವರ ನಡುವಿನ ಸಂಬಂಧಗಳು ಪರಿವರ್ತನೆಯಾಗಿವೆ. ಶಿಕ್ಷಣ ಹೊಂದಿದ ಹುಡುಗ ಹುಡಗಿಯರು ಶಿಕ್ಷಣ, ಉದ್ಯೋಗ, ವಿವಾಹದ ವಿಷಯದಲ್ಲಿ ಸ್ವತಂತ್ರ ತೀರ್ಮಾನ ಕೈಕೊಳ್ಳುತ್ತಿದ್ದಾರೆ. ಇದರಿಂದ ಕುಟುಂಬದೊಳಗಿನ ಸಂಬಂಧಗಳು ಸಾಕಷ್ಟು ಬದಲಾಗಿವೆ.[೧೧]

**೫.೧.೬ ಗೌಳಿಗರಲ್ಲಿ ಕೌಟುಂಬಿಕ ಪರಿವರ್ತನೆ**

ಧನಗರ ಗೌಳಿ ಸಮುದಾಯವು ಪಿತೃ ಪ್ರಧಾನ ಕುಟುಂಬ ವ್ಯವಸ್ಥೆಯನ್ನು ಹೊಂದಿದೆ. ಹಿರಿಯ ಪುರುಷನೇ ಕುಟುಂಬದ ಮುಖ್ಯಸ್ಥನಾಗಿರುತ್ತಾನೆ. ಕೌಟುಂಬಿಕ ಎಲ್ಲ ವಿಷಯಗಳಲ್ಲಿ ಮುಖ್ಯಸ್ಥನದೇ ಅಂತಿಮ ತೀರ್ಮಾನ. ಆರ್ಥಿಕ, ರಾಜಕೀಯ, ಧಾರ್ಮಿಕ ಕ್ಷೇತ್ರಗಳಲ್ಲಿ ಆತನಿಗೇ ಅಧಿಕಾರವಿರುತ್ತದೆ. ಎಲ್ಲ ಕೌಟುಂಬಿಕ ಆಗು ಹೋಗುಗಳ ಹೊಣೆಯು ಪುರುಷನದೇ ಆಗಿರುತ್ತದೆ. ಪುರುಷರ ಸ್ಥಾನಮಾನಗಳು ಸ್ತ್ರೀಯರಿಗಿಂತ ಗೌರವಯುತವಾಗಿರುತ್ತವೆ. ತಂದೆಯ ಕಡೆಯ ಸಂಬಂಧಗಳಿಗೆ ಗೌರವಾದರಗಳು ಹೆಚ್ಚು. ತಾಯಿಯ ಕಡೆಯಲ್ಲಿ ಸೋದರಮಾವನಿಗೆ ಹೆಚ್ಚು ಗೌರವ ಇರುತ್ತದೆ. ಗೌಳಿಗರದ್ದು ಪಿತೃಪ್ರಧಾನ ಕುಟುಂಬವಾಗಿದ್ದರಿಂದ ಮಕ್ಕಳು ತಂದೆಯ ವಂಶಕ್ಕೆ ಸೇರುತ್ತಾರೆ. ಕುಟುಂಬದ ಆಸ್ತಿಯಲ್ಲಿ ಗಂಡು ಮಕ್ಕಳಿಗೆ ಪಾಲು ಪಡೆಯುವ ಹಕ್ಕಿರುತ್ತದೆ. ಅನುವಂಶೀಯ ಅಧಿಕಾರ ಮತ್ತು ಸ್ಥಾನಮಾನಗಳು ಗಂಡು ಸಂತತಿಗಾಗಿ ಮೀಸಲಾಗಿರುತ್ತವೆ. ವಿವಾಹವಾಗಿ ಹೋದ ಹೆಣ್ಣು ಮಕ್ಕಳಿಗೆ ಅವಳ ತವರಿನಲ್ಲಿ ಅಧಿಕಾರ ಮತ್ತು ಜವಾಬ್ದಾರಿಗಳು ಕಡಿಮೆ ಇರುತ್ತವೆ. ಅಂದರೆ ಮದುವೆಯಾಗಿ ಗಂಡನ ಮನೆ ಸೇರುವ ಹೆಣ್ಣು ತನ್ನ ಗಂಡನ ಮೂಲಕ ಗುರುತಿಸಿಕೊಳ್ಳುತ್ತಾಳೆ. ಈಗಾದರೂ ಇದೇ ವ್ಯವಸ್ಥೆ ಮುಂದುವರೆದಿದೆ. ಇದರಲ್ಲಿ ಏನೂ ಬದಲಾವಣೆಯಿಲ್ಲ. ಆದರೆ ಆಧುನಿಕತೆಯ ಹಾಗೂ ನಾಗರೀಕತೆಯ ಪ್ರಭಾವದಿಂದ ಬದಲಾವಣೆಯ ಈ ಸಂದಿಗ್ಧ ಕಾಲದಲ್ಲಿ, ಹಲವು ತಲೆಮಾರಿನ ರಕ್ತ ಸಂಬಂಧಿಗಳು ಒಟ್ಟಿಗೆ ವಾಸಿಸುತ್ತಿದ್ದ ಗೌಳಿಗರ ಅವಿಭಕ್ತ ಕುಟುಂಬಗಳು ಅನೇಕ ಸಮಕಾಲೀನ ಸವಾಲುಗಳನ್ನು ಹಾಗೂ ಬದಲಾವಣೆಗಳನ್ನು ಎದುರಿಸಿವೆ. ಇದರ ರಚನೆ ಹಾಗೂ ಕಾರ್ಯಗಳಲ್ಲಿ ಅನೇಕ ಬದಲಾವಣೆಗಳಾಗಿವೆ. ಸ್ವತಂತ್ರ ಜೀವನದ ಬಯಕೆ, ಅವಿಭಕ್ತ ಕುಟುಂಬದ ಯಜಮಾನನ ಸ್ವಾಮ್ಯತ್ವದ ಹಿಡಿತದಿಂದ ವಿಮೋಚನೆ, ಗಳಿಕೆಯನ್ನು ತನ್ನ ಹೆಂಡತಿ ಮಕ್ಕಳಿಗಷ್ಟೇ ಖರ್ಚು ಮಾಡಬೇಕೆನ್ನುವ ಸ್ವಾರ್ಥ, ಪರಿವಾರದ ಸದಸ್ಯರಲ್ಲಿನ ಭಾವನಾತ್ಮಕ ಸಂಬಂಧದ ಕೊರತೆ ಇವುಗಳೆಲ್ಲವೂ ಅವಿಭಕ್ತ ಕುಟುಂಬದ ಶಿಥಿಲತೆಗೆ ಮತ್ತು ವಿಭಕ್ತ ಕುಟುಂಬದ ಉಗಮಕ್ಕೆ ಕಾರಣವಾಗಿವೆ. ಇತ್ತೀಚಿಗೆ ಪ್ರಮುಖ ನಿರ್ಣಯಗಳನ್ನು ಕೈಗೊಳ್ಳುವಾಗ ಹಿರಿಯ ಮಹಿಳೆಯರೊಂದಿಗೆ ಚರ್ಚಿಸಿ ನಿರ್ಣಯ ಕೈಗೊಳ್ಳಲಾಗುತ್ತದೆ ಎಂದು ಕಂಡುಬರುತ್ತದೆ. ಚಿಕ್ಕ ವಯಸ್ಸಿನ ಮಹಿಳೆಯರಿಗೆ ಇಂತಹ ನಿರ್ಣಾಯಕ ಪಾತ್ರವಿಲ್ಲ.

ಗೌಳಿ ದಂಪತಿಗಳು ಪರಸ್ಪರರ ಹೆಸರು ಹೇಳುವಲ್ಲಿ ಸಂಕೋಚದಿಂದ ವರ್ತಿಸುತ್ತಿದ್ದರು. ಹೆಸರು ಹೇಳುವದರಿಂದ ಆಯುಷ್ಯ ಕ್ಷೀಣಿಸುವುದು, ಇಲ್ಲವೇ ಬೇಗನೇ ವೃದ್ಧ್ಯಾಪ್ಯ ಬರುತ್ತದೆಂಬ ನಂಬಿಕೆಯೇ ಇದಕ್ಕೆ ಕಾರಣ. ಆದರೆ ಇತ್ತೀಚೆಗೆ ಓದಿದ ಯುವಕ ಯುವತಿಯರು ಅಷ್ಟೊಂದು ಸಂಕೋಚ ಪಡುವುದಿಲ್ಲ. ನೇರವಾಗಿ ಪರಸ್ಪರರ ಹೆಸರು ಹೇಳುತ್ತಾರೆ. ಇನ್ನೊಂದು ಗಮನಾರ್ಹ ಸಂಗತಿಯೆಂದರೆ ಈ ಮೊದಲು ಸಾಮಾನ್ಯವಾಗಿ ಅವಿಭಕ್ತ ಕುಟುಂಬದಲ್ಲಿ ವಿವಾಹ ನಂತರವೂ ದಂಪತಿಗಳು ಅನೇಕ ವರ್ಷಗಳವರೆಗೆ ಸ್ವಚ್ಛಂದವಾಗಿ ಸ್ವತಂತ್ರವಾಗಿ ಬದುಕಲು ಅವಕಾಶವಿರುತ್ತಿದ್ದಿಲ್ಲ. ಒಂದೆಡೆ ನಿಂತು ಮಾತನಾಡುವುದು, ಮನೆಯ ಹಿರಿಯರ ಎದುರಿನಲ್ಲಿ ಒಂದೆಡೆ ಕೂಡಿ ಇರುವುದು, ಒಬ್ಬರನ್ನೊಬ್ಬರು ಅನುಸರಿಸಿ ಹೋಗುವುದು ಈ ಸಮಾಜದವರ ದೃಷ್ಟಿಯಲ್ಲಿ ಅಗೌರವ ಹಾಗೂ ಅನುಚಿತವಾಗಿತ್ತು. ಆದರೆ ಈಗ ವಿಭಕ್ತ ಕುಟುಂಬಗಳು ಹೆಚ್ಚಾಗುತ್ತಿದ್ದಂತೆ ಹಾಗೂ ಶಿಕ್ಷಣದ ಪ್ರಭಾವದಿಂದ ಈ ರೂಢಿ ಬಹಳ ಕಡಿಮೆಯಾಗಿದೆ, ಇಲ್ಲ ಎಂದರೂ ಅಡ್ಡಿಯಿಲ್ಲ. ಧನಗಳ ಗೌಳಿ ಸಮುದಾಯದಲ್ಲಿ ಅವಿಭಕ್ತ ಕುಟುಂಬ ವ್ಯವಸ್ಥೆ ಪ್ರಮುಖವಾಗಿತ್ತು. ಗೌಳಿಗರ ಪರಂಪರಾಗತ ಕುಲ ಕಸುಬಾದ ಪಶು ಸಾಕಾಣಿಕೆ ಹಾಗೂ ಕೃಷಿ ಆಧಾರಿತ ಆರ್ಥಿಕ ವ್ಯವಸ್ಥೆಗೆ ಯೋಜನೆಗಳಿಂದುಂಟಾದ ಅರಣ್ಯ ನಾಶ, ರಾಷ್ಟ್ರೀಯ ಅರಣ್ಯ-ನೀತಿ, ಅರಣ್ಯಾಧಿಕಾರಿಗಳ ಕಿರಿಕಿರಿಗಳಿಂದ ವ್ಯತಿರಿಕ್ತ ಪರಿಣಾಮವಾಗಿ ದನ-ಕರುಗಳಿಗೆ ಉಂಟಾದ ಆಹಾರ, ನೀರಿನ ಕೊರತೆಯಿಂದ ಕುಲ ಕಸುಬಾದ ಹೈನುಗಾರಿಕೆ ಕೈ ತಪ್ಪಿ ಕೆಲವರು ಉದ್ಯೋಗ ಅರಸಿ ನಗರಗಳಿಗೆ, ಬೇರೆ ಊರುಗಳಿಗೆ ವಲಸೆ ಹೋಗುವಂತಾಯಿತು. ಇವೆಲ್ಲ ಕಾರಣಗಳಿಂದಾಗಿ ಕ್ರಮೇಣ, ಅವಿಭಕ್ತ ಕುಟುಂಬ ವ್ಯವಸ್ಥೆ ಕುಸಿಯತೊಡಗಿ ವಿಘಟನೆಹೊಂದಿ ವಿಭಕ್ತ ಕುಟುಂಬಗಳು ಹೆಚ್ಚಾಗತೊಡಗಿದವು. ಈ ರೀತಿ ಅವಿಭಕ್ತ ಕುಟುಂಬಗಳು ವಿಭಕ್ತ ಕುಟುಂಬಗಳಾಗಿ ಪರಿವರ್ತನೆಗೊಳ್ಳತೊಡಗಿದವು. ಇತ್ತೀಚೆಗೆ ಆಧುನಿಕ ನಾಗರಿಕತೆಯ ಪ್ರಭಾವದಿಂದ ಯುವಕರು ಮದುವೆಯಾಗುವವರೆಗೆ ತಂದೆ-ತಾಯಿಗಳೊಡನೆ ಜೀವಿಸಿ, ಮದುವೆಯಾದ ನಂತರ ಪ್ರತ್ಯೇಕವಾಗಿ ವಾಸಿಸುವುದೇ ಹೆಚ್ಚು. ತಂದೆ-ತಾಯಿಯರು ಮದುವೆಯಾಗದ ಮಕ್ಕಳೊಂದಿಗೆ ವಾಸಿಸುತ್ತಿದ್ದರು. ಹೀಗಾಗಿ ಅವಿಭಕ್ತ ಕುಟುಂಬಗಳು ಕುಗ್ಗುತ್ತ ಹೋದವು. ದೊಡ್ಡ ಮಕ್ಕಳು ಮದುವೆಯಾದಂತೆ ವಿಭಕ್ತ ಕುಟುಂಬಗಳು ಹೆಚ್ಚುತ್ತ ಹೋದವು. ಸಾಮಾನ್ಯವಾಗಿ ಮುದುಕ ತಂದೆ-ತಾಯಿಯರು ಚಿಕ್ಕ ಮಗನೊಂದಿಗೆ ವಾಸಿಸುವುದೇ ಹೆಚ್ಚು. ಈಗ ೩೦% ಅವಿಭಕ್ತ ಕುಟುಂಬಗಳಿವೆಯೆಂದು ಹೇಳಬಹುದು.

ಕುಟುಂಬದ ಎಲ್ಲ ಸದಸ್ಯರು ಮುಖ್ಯಸ್ಥನಿಗೆ ಗೌರವ ಕೊಡುತ್ತಿದ್ದರು. ಆದರೆ ಈಗ ಹೈಸ್ಕೂಲ, ಕಾಲೇಜಿನಲ್ಲಿ ಓದುವ ಹಾಗೂ ಹೊರಗೆ ಹೋಗಿ ದುಡಿಯುವ ಯುವಕರು ಹೊರಗಿನ ವಾತಾವರಣದ ಹಾಗೂ ನಾಗರೀಕರಣದ ಪ್ರಭಾವದಿಂದ ಹಿರಿಯರ ಮಾತಿಗೆ ಮನ್ನಣೆ ಕೊಡುವುದಿಲ್ಲ ಹಾಗೂ ಸಾಂಪ್ರದಾಯಿಕ ಪದ್ಧತಿಗಳನ್ನು ಕಟ್ಟುನಿಟ್ಟಾಗಿ ಅನುಸರಿಸುವುದಿಲ್ಲ. ಇದರಿಂದ ಹಿರಿಯರಿಗೆ, ವೃದ್ಧರಿಗೆ ನೋವು, ಆಘಾತ ಉಂಟಾಗುತ್ತವೆ. ಹೀಗಾಗಿ ವೃದ್ಧರು ಹೇಳುತ್ತಾರೆ-'ಮೊದಲು ಮನುಷ್ಯನಿಗೆ, ಮನುಷ್ಯನ ಮಾತಿಗೆ ಬೆಲೆ ಇತ್ತು; ಈಗ ದುಡ್ಡಿಗೆ ಬೆಲೆ ಇದೆ' ಎಂದು.

ಗೌಳಿಗರಲ್ಲಿ ಏಕಪತ್ನಿತ್ವ, ಏಕಪತಿತ್ವ ಕುಟುಂಬಗಳೇ ಹೆಚ್ಚು. ಬಹುಪತ್ನಿತ್ವ ಕುಟುಂಬ ಪದ್ಧತಿಯೂ ಅಸ್ತಿತ್ವದಲ್ಲಿದೆ. ಹೆಂಡತಿ ಬಂಜೆ ಎಂದು ಸ್ಥಾಪಿತವಾದಲ್ಲಿ ಅಥವಾ ಆಕೆಗೆ ಗಂಡು ಸಂತಾನ ಇಲ್ಲದಿದ್ದಲ್ಲಿ

ವ್ಯಕ್ತಿಯೊಬ್ಬ ಒಂದಕ್ಕಿಂತ ಹೆಚ್ಚು ಸ್ತ್ರೀಯರನ್ನು ವಿವಾಹವಾಗಬಹುದು. ಹಿರಿಯ ಅಂದರೆ ಮೊದಲ ಹೆಂಡತಿಗೆ ಅಧಿಕಾರವಿರುತ್ತದೆ. ಎರಡನೇ ಹೆಂಡತಿಗೆ ಅಧಿಕಾರವಿರುವುದಿಲ್ಲ. ಎರಡನೇ ಹೆಂಡತಿ ಕಲಿತವಳಿದ್ದು ಅಧಿಕಾರಕ್ಕೆ ಆಸೆಪಟ್ಟರೆ ಸವತಿಯರಲ್ಲಿಯ ನಿತ್ಯ ಕಲಹದಿಂದ ಕುಟುಂಬ ವಿಘಟನೆಯಾಗಿ ಕೌಟುಂಬಿಕ ಬದಲಾವಣೆಗೆ ದಾರಿ ಮಾಡಿಕೊಟ್ಟಂತಾಗುತ್ತದೆ.

ಇತ್ತೀಚಿನ ದಿನಗಳಲ್ಲಿ ಶೈಕ್ಷಣಿಕ ಪ್ರಗತಿಯಿಂದ ಮಗನು ಹೈಸ್ಕೂಲ-ಕಾಲೇಜು ಶಿಕ್ಷಣ ಹೊಂದಿದವನಾಗಿದ್ದು, ಉದ್ಯೋಗ ಹೊಂದಿ ಹಣ ಸಂಪಾದಿಸುತ್ತಿದ್ದರೆ ಕುಟುಂಬದಲ್ಲಿ ಅವನಿಗೆ ಹೆಚ್ಚಿನ ಗೌರವವಿದೆ. ಹಿರಿಯರು ಕೌಟುಂಬಿಕ ವಿಷಯಗಳ ಬಗ್ಗೆ ತೀರ್ಮಾನ ತೆಗೆದುಕೊಳ್ಳುವದಿದ್ದರೆ ಅವನ ಸಲಹೆ ಕೇಳಿಯೇ ತೀರ್ಮಾನ ತೆಗೆದುಕೊಳ್ಳುತ್ತಾರೆ. ಇದು ಇತ್ತೀಚಿನ ಕೌಟುಂಬಿಕ ಬದಲಾವಣೆ.

ನಗರ ಜೀವನದಿಂದ ಪ್ರಭಾವಿತರಾದ ಗೌಳಿ ಯುವಕರು ತಮ್ಮ ಹಟ್ಟಿಯ ಸಂಸ್ಕೃತಿ ಬಗೆಗೆ ಒಲವಿಲ್ಲದಿದ್ದರೂ ಅದನ್ನು ಹೀಗಳೆಯುವ ಸಾಹಸ ಮಾಡುತ್ತಿಲ್ಲ. ಶಿಕ್ಷಣ ಅರ್ಧಕ್ಕೆ ಬಿಟ್ಟು ಹಟ್ಟಿ ಸೇರಿದ ಕೆಲಯುವಕರು ನಗರ ವಾತಾವರಣ ಹಾಗೂ ಆಧುನಿಕತೆಯ ಪ್ರಭಾವಕ್ಕೆ ಒಳಗಾಗಿ ಒಂದಿಲ್ಲೊಂದು ರೀತಿಯಲ್ಲಿ ತಮ್ಮ ಅರೆಬೆಂದ ವಿಚಾರಗಳನ್ನು ಯಥಾವತ್ತಾಗಿ ಕುಟುಂಬದ ಮೇಲೆ ಹೇರಲು ಆರಂಭಿಸಿದ್ದಾರೆ. ಇವತ್ತಿನ ಗೌಳಿ ಯುವಕ ಯುವತಿಯರಲ್ಲಿ ಗೌಳಿ ಸಮಾಜದ ಸಾಂಪ್ರದಾಯಿಕ ಪರಂಪರೆ ಬಗ್ಗೆ ವಿಚಾರಿಸಿದರೆ ಉದಾಸೀನದ ಮಾತು ಕೇಳಿಬರುತ್ತವೆ. ಅಂದರೆ ಆಧುನಿಕತೆಯ ಪ್ರಭಾವ ಯುವ ಪೀಳಿಗೆಯಲ್ಲೇ ಹೆಚ್ಚು ಕಂಡುಬರುತ್ತದೆ. ಕೂಲಿಯಲ್ಲಿ ತೊಡಗಿಕೊಂಡಿರುವವರ ಕುಟುಂಬಗಳು ಸುತ್ತಲ ನಾಗರಿಕ ಸಮುದಾಯಗಳ ಕುಟುಂಬಗಳ ಜೊತೆಗೆ ಬೆರೆತು ಸ್ನೇಹ-ಸೌಹಾರ್ದತೆ ಬೆಳೆಯುವಂತೆ ಮಾಡಿವೆ. ಸುತ್ತಲಿನ ನಾಗರಿಕ ಸಮುದಾಯಗಳ ಪ್ರಭಾವದಿಂದ ಗೌಳಿಗರ ರೀತಿ-ನೀತಿ ಜೀವನ ಶೈಲಿಗಳಲ್ಲಿ ಕ್ರಮೇಣ ಬದಲಾವಣೆಗಳು ಕಂಡುಬರುತ್ತಿವೆ.

ಕುಟುಂಬದಲ್ಲಿ ಹೆಣ್ಣಿಗೆ ಕೆಳಮಟ್ಟದ ಎರಡನೇ ಸ್ಥಾನ. ಹೆಂಡತಿಯಾದವಳು ಗಂಡನಿಗೆ ಗೌರವ ಕೊಡಲೇಬೇಕು. ಕುಟುಂಬ ನಿರ್ವಹಣೆಯಲ್ಲಿ ಹೆಣ್ಣಿನ ಪಾತ್ರ ಮುಖ್ಯವಾದುದು. ಕುಟುಂಬ ನಿರ್ವಹಣೆಗೆ ಸಂಬಂಧಿಸಿದಂತೆ ಪುರುಷನಿಗಿಂತ ಹೆಣ್ಣಿನ ದುಡಿಮೆಯೇ ಹೆಚ್ಚು. ಕುಲಕಸುಬು ಹೈನುಗಾರಿಕೆ, ಪಶುಪಾಲನೆಯಲ್ಲದೇ ಕೃಷಿ ಇಲ್ಲವೆ ಕೃಷಿ ಕೂಲಿಯನ್ನೂ ಮಾಡುವಳು. ಶಿಶು ಹಾಗೂ ಮಕ್ಕಳ ಹಾಗೂ ವೃದ್ಧರ ಪಾಲನೆಯೂ ಹೆಣ್ಣಿನ ಪಾಲಿಗೆ. ಹೀಗೆ ಹೆಣ್ಣಿನ ಪಾಲಿನ ಕುಟುಂಬ ಜವಾಬ್ದಾರಿ ಕೆಲಸ ಪುರುಸೊತ್ತಿಲ್ಲದ ಕೆಲಸ. ಆದರೂ ಕೆಲ ಪುರುಷರು ಕುಡಿದು ಬಂದು ಹೆಂಡತಿಗೆ ಹೊಡೆಯುವುದು/ ಶೋಷಣೆ ಮಾಡುವುದು ಕೇಳಿ ಬರುತ್ತಿದೆ. ಇತ್ತೀಚಿಗೆ ಇದು ಕಡಿಮೆಯಾಗಿದೆ. ಆಧುನೀಕರಣದ ಪ್ರಭಾವದಿಂದ ಕ್ರಮೇಣವಾಗಿ ಮಹಿಳೆಯರ ಮೇಲೆ ಒತ್ತಡ ಕಡಿಮೆಯಾಗುತ್ತಿದೆ ಎಂದು ಹೇಳಬಹುದು. ಇತ್ತೀಚಿಗೆ ಕೆಲವು ಓದಿದ ಮಹಿಳೆಯರು ಅಂಗನವಾಡಿಯ ಶಿಕ್ಷಕಿ/ಸಹಾಯಕಿಯರಾಗಿ ಕೆಲಸ ಮಾಡುತ್ತಿದ್ದಾರೆ. ಆದರೆ ಅವರು ಸಂಬಳವನ್ನು ಗಂಡನಿಗೆ ತಂದು ಕೊಡಬೇಕು. ತಮ್ಮ ದಿನ-ಖರ್ಚಿಗೆ ಮತ್ತೆ ಗಂಡನಿಗೆ ಕೈಯೊಡ್ಡಬೇಕು. ಅಂದರೆ ದುಡಿದು ಸಂಬಳ ತರುವ ಹೆಣ್ಣಿಗೂ ವಿತ್ತ ಸ್ವಾತಂತ್ರ್ಯವಿಲ್ಲ. 'ದುಡಿಮೆ ಮಹಿಳೆಯ ಪಾಲಿಗೆ, ಸಂಬಳ ಪುರುಷನ ಪಾಲಿಗೆ'. ಆದರೆ ಇತ್ತೀಚಿಗೆ ಶಾಲೆಗಳಲ್ಲಿ ಅಧ್ಯಯನ

ಮಾಡುತ್ತಿರುವ ಹೆಣ್ಣು ಮಕ್ಕಳ ಸಂಖ್ಯೆ ಕ್ರಮೇಣ ಹೆಚ್ಚುತ್ತಿರುವುದು ಭವಿಷ್ಯದಲ್ಲಿ ಮಹಿಳೆಯರ ಸ್ಥಾನಮಾನದಲ್ಲಿ ರಚನಾತ್ಮಕ ಬದಲಾವಣೆಯಾಗುವ ಸಾಧ್ಯತೆಯನ್ನು ಸೂಚಿಸುತ್ತದೆ.

ಅಭಿವೃದ್ಧಿ /ಆಧುನಿಕರಣದ ಪರಿಣಾಮವಾಗಿ ಹೆಚ್ಚಿದ ಅವಕಾಶಗಳಿಂದ ಕೆಲವು ಕುಟುಂಬಗಳು ಲಾಭ ಪಡೆದುಕೊಂಡು ತಮ್ಮ ಕೌಟುಂಬಿಕ ಆದಾಯದಲ್ಲಿ ಹೆಚ್ಚಳ ಮಾಡಿಕೊಂಡಿವೆ. ಆದರೆ ಸಾಮಾನ್ಯವಾಗಿ ಅಶಿಕ್ಷಿತರಾದ ಗೌಳಿಗರು ಇಂತಹ ಲಾಭ ಪಡೆಯಲು ಸಾಧ್ಯವಾಗದೇ ಹೆಚ್ಚಿನ ಕುಟುಂಬಗಳ ಆದಾಯದಲ್ಲಿ ಹೆಚ್ಚಳ ಕಂಡುಬಂದಿಲ್ಲ.

**ಕೋಷ್ಟಕ ೫.೧**

**ಕುಟುಂಬದ ಮೇಲೆ ಆಧುನಿಕತೆಯ ಪರಿಣಾಮ**[೧೨]

| ಆಧುನಿಕರಣದಿಂದ ಗೌಳಿ ಕುಟುಂಬದ ಮೇಲೆ | ಪ್ರತಿಕ್ರಿಯಿಸಿದವರ ಸಂಖ್ಯೆ | ಶೇಕಡಾವಾರು |
|---|---|---|
| ರಚನಾತ್ಮಕ ಪರಿಣಾಮ ಆಗಿದೆ | ೬ | ೨.೭ |
| ಅನಾನುಕೂಲ ಆಗಿದೆ | ೩೧ | ೧೩.೮ |
| ಪ್ರತಿಕ್ರಿಯೆ ನೀಡಿಲ್ಲ | ೧೮೮ | ೮೩.೫ |
| ಒಟ್ಟು | ೨೨೫ | ೧೦೦.೦ |




ಆರು ಜನರು ಆಧುನೀರಕಣದಿಂದ ಗೌಳಿ ಕುಟುಂಬದ ಮೇಲೆ ರಚನಾತ್ಮಕ ಪರಿಣಾಮ ಉಂಟಾಗಿದೆ ಎಂದರೆ ೩೧ ಜನರು ಅದರಿಂದ ಅನಾನುಕೂಲವಾಗಿದೆ ಎಂದು ಉತ್ತರಿಸಿದ್ದಾರೆ. ಆದರೆ ೧೮೮ ಜನರು ಇದರ ಬಗ್ಗೆ ಯಾವುದೇ ಪ್ರತಿಕ್ರಿಯೆ ನೀಡಿಲ್ಲ. ಒಟ್ಟಾರೆ ಹೇಳುವದಾದರೆ ಆಧುನೀಕರಣದಿಂದ ಗೌಳಿ ಕುಟುಂಬಗಳ ಮೇಲೆ ರಚನಾತ್ಮಕ ಪರಿಣಾಮ ಉಂಟಾಗಿದೆ ಎಂಬ ಭಾವನೆ ಅವರಲ್ಲಿ ಇಲ್ಲ.

**ಕೋಷ್ಟಕ ೫.೨**

**ಗೌಳಿ ಕುಟುಂಬ ಸ್ವರೂಪ**[೨]

| ಕುಟುಂಬ ಸ್ವರೂಪ | ಪ್ರತಿಕ್ರಿಯಿಸಿದವರ ಸಂಖ್ಯೆ | ಶೇಕಡಾವಾರು |
|---|---|---|
| ಪಿತೃ ಪ್ರಧಾನ ಕುಟುಂಬ | ೨೨೫ | ೧೦೦% |
| ಮಾತೃ ಪ್ರಧಾನ ಕುಟುಂಬ | – | – |
| ಸ್ತ್ರೀಯರಿಗೆ ಮಹತ್ವದ ಕೌಟುಂಬಿಕ ನಿರ್ಣಯದಲ್ಲಿ ಪಾತ್ರ ಇದೆ. | ೧೭೫ | ೭೭.೭೮% |
| ಇಲ್ಲ | ೫೦ | ೨೨.೨೨% |

ಎಲ್ಲ ೨೨೫ ಕುಟುಂಬದವರು ತಮ್ಮ ಕುಟುಂಬ ಪಿತೃ ಪ್ರಧಾನವೆಂದು ಹೇಳಿದ್ದಾರೆ. ಆದರೆ ೧೭೫ ಕುಟುಂಬದವರು ಕುಟುಂಬದ ಕುರಿತು ಮಹತ್ವದ ನಿರ್ಣಯ ಕೈಗೊಳ್ಳುವಾಗ ಕುಟುಂಬದ ಮಹಿಳೆಯರಿಗೆ ನಿರ್ಧಾರದಲ್ಲಿ ಪಾತ್ರವಿದೆ ಎಂದು ಹೇಳಿದರೆ ೫೦ ಕುಟುಂಬದವರು ಮಹಿಳೆಗೆ ನಿರ್ಧಾರಕ ಪಾತ್ರವಿಲ್ಲ ಎಂದು ಹೇಳಿದ್ದಾರೆ. ಅಂದರೆ ಮನೆಯಲ್ಲಿ ಹಿರಿಯ ಮಹಿಳೆಯರಿದ್ದಾಗ ಸಾಮಾನ್ಯವಾಗಿ ಅವರೊಂದಿಗೆ ಚರ್ಚಿಸಿ ನಿರ್ಣಯ ಕೈಗೊಳ್ಳುವುದು ಕಂಡು ಬರುತ್ತದೆ. ಆದರೆ ಚಿಕ್ಕ ವಯಸ್ಸಿನಲ್ಲಿ ಮಹಿಳೆಯರಿಗೆ ಇಂತಹ ನಿರ್ಣಾಯಕ ಪಾತ್ರವಿಲ್ಲ.

### ೫.೨ ವೈವಾಹಿಕ ಪರಿವರ್ತನೆ

#### ೫.೨.೧ ವಿವಾಹ[೨]

ವಿವಾಹವು ಒಂದು ಪ್ರಮುಖವಾದ ಹಾಗೂ ಸಾರ್ವತ್ರಿಕ ಸ್ವರೂಪದ ಸಾಮಾಜಿಕ ಸಂಸ್ಥೆ. ಮಾನವನ ಲೈಂಗಿಕ ಜೀವನವನ್ನು ಹಾಗೂ ಲೈಂಗಿಕ ಸಂಬಂಧಗಳನ್ನು ನಿಯಂತ್ರಿಸುವುದಕ್ಕಾಗಿ ಸ್ಥಾಪಿತವಾದ ಸಂಸ್ಥೆಯದು. ವಿವಾಹದ ಬಗ್ಗೆ ಅಧ್ಯಾತ್ಮಿಕ ದೃಷ್ಟಿಯನ್ನು ಹೊಂದಿರುವ ಹಿಂದೂಗಳು ಅದನ್ನು ಒಂದು 'ಪವಿತ್ರವಾದ ಧಾರ್ಮಿಕ ವಿಧಿ' ಎಂದೇ ಪರಿಗಣಿಸುತ್ತಾರೆ. ವಿವಾಹವು ಜೈವಿಕವಾಗಿ, ಸಾಮಾಜಿಕವಾಗಿ, ಮಾನಸಿಕವಾಗಿ ಮಹತ್ವ ಪಡೆದುಕೊಂಡಿದೆ. ವಿವಾಹವು ಇಂದು ನಿನ್ನೆಯದಲ್ಲ, ಅದಕ್ಕೆ ದೀರ್ಘವಾದ ಇತಿಹಾಸವೊಂದಿದೆ. ಮಾನವ ಸಂಸ್ಕೃತಿ ಎಷ್ಟು ಪ್ರಾಚೀನವೋ ವಿವಾಹವು ಅಷ್ಟೇ ಪ್ರಾಚೀನವಾದುದು. ಈ ನಂಬಿಕೆಗೆ ಪುಷ್ಟಿ ನೀಡುವಂತೆ ಉತ್ತರ ಆಸ್ಟ್ರೇಲಿಯಾದ 'ತಿವಿ' ಎಂಬ ಅತ್ಯಂತ ಸರಳವಾದ ಅದರೆ ಅಷ್ಟೇ ಸದೃಡವಾದ ಬುಡಕಟ್ಟು ಸಮುದಾಯದಲ್ಲಿ ವಿಶಿಷ್ಠ ಮಾದರಿಯ ವೈವಾಹಿಕ ಪದ್ಧತಿಗಳು ಸುಮಾರು ೨೦,೦೦೦ ವರ್ಷಗಳಿಂದಲೂ ಆಚರಣೆಯಲ್ಲಿವೆ ಎಂದು ಸಮಾಜ ವಿಜ್ಞಾನಿಗಳು ಅಭಿಪ್ರಾಯ ಪಡುತ್ತಾರೆ.

ಅತ್ಯಂತ ಪ್ರಾಚೀನವೆನ್ನಬಹುದಾದ 'ತಿವಿ' ಸಮುದಾಯದ ವೈವಾಹಿಕ ಆಚರಣೆಗಳಿಗೂ ಅತ್ಯಾಧುನಿಕವೆನ್ನಬಹುದಾದ ಅಮೆರಿಕನ್ ವೈವಾಹಿಕ ಮಾದರಿಗಳಿಗೂ ಬಹಳಷ್ಟು ಅಂತರವಿದೆ. ಅಂದು ಇದ್ದಂತೆ ವಿವಾಹದ ರೂಪ– ಸ್ವರೂಪಗಳು ಇಂದು ಇಲ್ಲ. ಕಾಲಾನುಕ್ರಮದಲ್ಲಿ ವಿವಾಹದ ಪದ್ಧತಿಯಲ್ಲಿ

ಬಹಳಷ್ಟು ಬದಲಾವಣೆಗಳಾಗಿವೆ. ವಿವಾಹ ವಿಧಿ-ವಿಧಾನಗಳು, ರೀತಿ-ನೀತಿಗಳು ಹಾಗೂ ನಿರ್ಬಂಧ ಪ್ರಕಾರಗಳು ಸಮೂಹದಿಂದ ಸಮೂಹಕ್ಕೆ ಭಿನ್ನವಾಗುತ್ತವೆ. ವಿವಾಹದ ಉದ್ದೇಶ ಮತ್ತು ಕಾರ್ಯಗಳ ಬಗ್ಗೆಯೂ ಬೇರೆ ಬೇರೆ ಸಮೂಹಗಳಲ್ಲಿ ಬೇರೆ ಬೇರೆ ವಿಚಾರಗಳೇ ಇವೆ. ಆದಾಗ್ಯೂ ವಿವಾಹದ ವ್ಯವಸ್ಥೆಯಿಲ್ಲದ ಸಮಾಜವೇ ಇಲ್ಲವೆನ್ನಬಹುದು.

**೫.೨.೨ ವಿವಾಹದ ಉದ್ದೇಶಗಳು[೧೪]**

ವಿವಾಹ ಸಂಸ್ಥೆ ಸಾರ್ವತ್ರಿಕವಾಗಿರಲೂ ಅದರ ಉದ್ದೇಶಗಳು ಹಾಗೂ ಕಾರ್ಯಗಳೇ ಕಾರಣ. ವಿವಾಹದ ಉದ್ದೇಶಗಳ ಕುರಿತಾದ ಜನರ ವ್ಯಕ್ತಿಗತ ಅಭಿಪ್ರಾಯವೇನೆಂಬುದು ಇಲ್ಲಿ ಮುಖ್ಯವಲ್ಲ. ಈ ಬಗ್ಗೆ ಅವರಲ್ಲಿ ಸಹಮತವಿರುವುದೂ ಸಾಧ್ಯವಿಲ್ಲ. ಇಡೀ ಸಾಮಾಜಿಕ ವ್ಯವಸ್ಥೆಯ ದೃಷ್ಟಿಯಿಂದ ವಿವಾಹದ ಕಾರ್ಯೋದ್ದೇಶಗಳನ್ನು ಹಾಗೂ ಪ್ರಾಮುಖ್ಯತೆಯನ್ನು ಈ ರೀತಿಯಾಗಿ ಹೇಳಬಹುದು.

೧) ಲೈಂಗಿಕ ಜೀವನ ಹಾಗೂ ಲೈಂಗಿಕ ಸಂಬಂಧಗಳ ನಿಯಂತ್ರಣ

೨) ಲೈಂಗಿಕ ತೃಷೆಯ ತೃಪ್ತಿ, ಸಂತಾನೋತ್ಪತ್ತಿ ಹಾಗೂ ಶಿಶುಗಳ ಪಾಲನೆ ಪೋಷಣೆ

೩) ಕುಟುಂಬದ ಸ್ಥಾಪನೆಗೆ ನಾಂದಿ,

೪) ಆರ್ಥಿಕ ಸಹಕಾರಕ್ಕೆ ಅನುವು.

೫) ಸಂಗಾತಿಗಳ ನಡುವೆ ಪರಸ್ಪರ ಭಾವನಾತ್ಮಕ ಹಾಗೂ ಬೌದ್ಧಿಕ ಪ್ರಚೋದನೆಗೆ ಅವಕಾಶ.

೬) ಸಮೂಹಗಳ ಐಕಮತ್ಯ ಮತ್ತು ಏಕತೆಗೆ ಸಹಕಾರಿ.

ಮಾನವನಿಗೆ ಸಮುದಾಯದ ಕಲ್ಪನೆ ಮೂಡಿದಂದಿನಿಂದ ಅವನು ಕುಟುಂಬದ ಅಗತ್ಯವನ್ನು ಅರಿತುಕೊಂಡು, ಈ ಕುಟುಂಬದ ದೃಢತೆಗಾಗಿ ವಿವಾಹವನ್ನು ಅನಿವಾರ್ಯವನ್ನಾಗಿ ಮಾಡಿಕೊಂಡು ಬಂದಿದ್ದಾನೆ. ವಿವಾಹ ಎನ್ನುವುದೊಂದು ಸಾರ್ವತ್ರಿಕ ಸಾಮಾಜಿಕ ಸಂಸ್ಥೆಯಾಗಿದ್ದರೂ, ಹಿಂದುಗಳೆಲ್ಲರೂ ಒಂದೇ ರೀತಿಯ ವಿಧಿ ವಿಧಾನಗಳನ್ನು ಹೊಂದಿಲ್ಲ. ಭಾರತದಲ್ಲಿನ ವೈವಿಧ್ಯಮಯ ಸಮುದಾಯಗಳು, ಬುಡಕಟ್ಟುಗಳು, ಪಂಗಡಗಳು, ಜಾತಿಗಳು ತಮ್ಮದೇ ಆದ ರೀತಿಯಲ್ಲಿ ವಿವಾಹದ ವಿಧಿ-ವಿಧಾನಗಳನ್ನು ಹೊಂದಿವೆ. ಇತ್ತೀಚಿನ ದಿನಗಳಲ್ಲಿ ಸಾಂಸ್ಕೃತೀಕರಣದ ಫಲವಾಗಿ ಕೆಳಜಾತಿ ಜನ ಮೇಲ್ವರ್ಗದವರನ್ನು ಅನುಕರಣೆ ಮಾಡುತ್ತಿರುವುದು ಕಂಡು ಬರುತ್ತಿದ್ದರೂ ತಮ್ಮ ಮೂಲ ಸಂಪ್ರದಾಯವನ್ನು ಸಂಪೂರ್ಣವಾಗಿ ಬಿಟ್ಟುಕೊಟ್ಟಿಲ್ಲ. ಈ ನಿಟ್ಟಿನಲ್ಲಿ ಸಾಂಪ್ರದಾಯಿಕವಾದ ವಿವಾಹದ ಕ್ರಮಗಳನ್ನು ತಿಳಿದುಕೊಂಡು ಇತ್ತೀಚಿನ ಬದಲಾವಣೆ ಯಾವ ರೀತಿ ಆಗಿದೆ ಎಂಬುದನ್ನು ತಿಳಿಯುವುದು ಸೂಕ್ತ.

**೫.೨.೩ ವಿವಾಹದಲ್ಲಿನ ಇತ್ತೀಚಿನ ಪರಿವರ್ತನೆಗಳು[೧೫]**

ಸಾಮಾಜಿಕ ಸಂಸ್ಥೆಗಳು ಜಡ ಸ್ವರೂಪವನ್ನು ಹೊಂದಿರುವುದಿಲ್ಲ. ಅವು ಸತತ ಪರಿವರ್ತನಶೀಲವಾಗಿವೆ. ಸಮಾಜದ ಇತರ ಘಟಕಾಂಶಗಳಲ್ಲಿ ಪರಿವರ್ತನೆಯಾದಂತೆ ಅದರ ಸಂಸ್ಥೆಗಳಲ್ಲಿ ಪರಿವರ್ತನೆ ಸಹಜವಾಗಿ ಸಂಭವಿಸುತ್ತವೆ. ವಿವಾಹವು ಬಹುದಿನಗಳಿಂದಲೂ ಅಸಂಖ್ಯಾತ ಪರಿವರ್ತನೆಗಳಿಗೆ ತನ್ನನ್ನು ತಾನೇ ಒಡ್ಡಿಕೊಂಡಿದೆ. ಕೈಗಾರಿಕೀಕರಣ, ನಗರೀಕರಣ, ಸ್ತ್ರೀಯ ಆರ್ಥಿಕ ಬಂಧ ವಿಮೋಚನೆ, ಪಾಶ್ಚಾತ್ಯ ಶಿಕ್ಷಣ ಮತ್ತು ವ್ಯಕ್ತಿವಾದದ ಬೆಳವಣಿಗೆ, ಮಹಿಳೆಯರು ಶಿಕ್ಷಣ

ಪಡೆಯಲು ಪ್ರಾರಂಭಿಸಿದ್ದು ಮತ್ತು ಆಹಾರ ಸಂಪಾದಿಸುವ ಹೊಸ ಸದಸ್ಯರಾಗಿ ಹೊರಹೊಮ್ಮಿದ್ದು, ಬ್ರಿಟಿಷರ ಆಡಳಿತಾವಧಿಯಲ್ಲಿ ಮತ್ತು ಸ್ವಾತಂತ್ರ್ಯೋತ್ತರ ಅವಧಿಯಲ್ಲಿ ರೂಪಿಸಲ್ಪಟ್ಟ ಅನೇಕ ಶಾಸನಗಳು ವಿವಾಹ ಸಂಸ್ಥೆಗಳಲ್ಲಿ ದೂರಗಾಮಿ ಪರಿವರ್ತನೆಗಳನ್ನು ತಂದಿವೆ. ಭಾರತದಲ್ಲಿ ಮಾತ್ರವಲ್ಲ, ಜಗತ್ತಿನ ಎಲ್ಲೆಡೆ ವಿವಾಹವು ಪರಿವರ್ತನೆಗೆ ಒಳಗಾಗಿದೆ. ವಿವಾಹ ಪರಿವರ್ತನೆಗೆ ಅನೇಕ ಅಂಶಗಳು ಕಾರಣೀಭೂತವಾಗಿವೆ.

**ವಿವಾಹ ಪ್ರಕಾರಗಳಲ್ಲಿ ಉಂಟಾದ ಪರಿವರ್ತನೆ**

ಕೆಲವು ಆದಿವಾಸಿ ಜನಾಂಗಗಳಲ್ಲಿ ಇಬ್ಬರು ಅಥವಾ ಇಬ್ಬರಿಗಿಂತಲೂ ಹೆಚ್ಚಿನ ಸಂಖ್ಯೆಯಲ್ಲಿನ ಪುರುಷರು ಒಂದು ನಿರ್ದಿಷ್ಟ ಪಡಿಸಿದ ಸಮಯದಲ್ಲಿ ಹೆಚ್ಚಿನ ಸಂಖ್ಯೆಯ ಸ್ತ್ರೀಯರನ್ನು ವಿವಾಹವಾಗುವ ಸಮೂಹ ವಿವಾಹ ರೂಢಿಯಲ್ಲಿತ್ತು. ಜನಪ್ರಿಯತೆಯ ದೃಷ್ಟಿಯಿಂದ ಬಹುಪತ್ನಿತ್ವ ಮೊದಲನೇ ಸ್ಥಾನದಲ್ಲಿತ್ತು. ನಂತರದ ಸ್ಥಾನ ಏಕಪತ್ನಿತ್ವಕ್ಕೆ, ಬಹುಪತಿತ್ವ ಕೊನೆಯ ಸ್ಥಾನದಲ್ಲಿತ್ತು.

೧೯೫೫ ರ ಹಿಂದೂ ವಿವಾಹ ಕಾಯ್ದೆಯ ಪ್ರಕಾರ ವಿವಾಹ ವಿಚ್ಛೇದನ ಪಡೆಯದೆ ಮೊದಲಿನ ಸಂಗಾತಿ ಬದುಕಿರುವಾಗ ಮತ್ತೊಬ್ಬಳೊಂದಿಗೆ ವಿವಾಹವಾಗುವಂತಿಲ್ಲ. ಈ ಕಾಯ್ದೆಯು ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಜೈನ, ಸಿಖ್, ಹಿಂದೂಗಳಿಗೆ ಅನ್ವಯವಾಗುತ್ತದೆ. ಹಿಂದೂ ವಿವಾಹದ ಪರಿವರ್ತನೆಗೆ ಈ ಕಾಯ್ದೆ ಸಹಾಯಕವಾಗಿದೆ.

**ವಿವಾಹದ ಧ್ಯೇಯೋದ್ದೇಶಗಳನ್ನು ಕುರಿತಂತೆ ಜನರ ಮನೋಭಾವನೆಯಲ್ಲಿ ಉಂಟಾದ ಪರಿವರ್ತನೆಗಳು**

ಹಿಂದೂ ವಿವಾಹದಲ್ಲಿನ ಧರ್ಮ, ಅರ್ಥ, ಕಾಮ ಇವುಗಳಲ್ಲಿ ಈಗ ಅಲ್ಪ ಸ್ವಲ್ಪ ಪರಿವರ್ತನೆ ಕಂಡು ಬರುತ್ತಿದೆ. ಕಾಲಗತಿಯಲ್ಲಿ ವಿವಾಹದ ಉದ್ದೇಶಗಳು ಹಾಗೆಯೇ ಉಳಿದಿವೆ. ಆದರೇ ವಿವಾಹದ ಉದ್ದೇಶಗಳಿಗೆ ಜನರು ಕೊಟ್ಟಿದ್ದ ಪ್ರಾಶಸ್ತ್ಯ ಮಾತ್ರ ಅಲ್ಪಸ್ವಲ್ಪ ಪರಿವರ್ತನೆಯಾಗಿವೆ. ಈಗ ಯಾವುದೇ ಹಿಂದೂ ವ್ಯಕ್ತಿಗೆ ಏಕೆ ವಿವಾಹವಾಗುತ್ತಿದ್ದಿಯಾ ಎಂದು ಪ್ರಶ್ನಿಸಿದರೆ ಧರ್ಮ ಪರಿಪಾಲನೆಗಾಗಿ ಅಥವಾ ಗಂಡು ಸಂತಾನವನ್ನು ಪಡೆದು ಪಿತೃ ಋಣವನ್ನು ತೀರಿಸುವ ಸಲುವಾಗಿ ಎಂದು ಬಹುಶಃ ಅವನು ಉತ್ತರಿಸಲಿಕ್ಕಿಲ್ಲ. ಬಹಳಷ್ಟು ಜನರು ಕುಟುಂಬವನ್ನು ಮುಂದುವರೆಸುವುದಕ್ಕೆ ಒಬ್ಬ ಬಾಳ ಸಂಗಾತಿ ಬೇಕಲ್ಲ ಎನ್ನಬಹುದು. ಜನರ ಮನೋಭಾವನೆಯಲ್ಲಿ ಸಾಕಷ್ಟು ಪರಿವರ್ತನೆಯಾಗಿದೆ.

**ಬಾಲ್ಯವಿವಾಹಗಳ ಜನಪ್ರಿಯತೆ ಕುಂದುತ್ತಿರುವುದು**

ಈ ಮೊದಲು ಬ್ರಿಟಿಷರು ಬರುವುದಕ್ಕಿಂತಲೂ ಮುಂಚೆ ಹಾಗೂ ಬಂದ ನಂತರವೂ ಭಾರತದಲ್ಲಿ ಬಾಲ್ಯ ವಿವಾಹಗಳು ಮತ್ತು ಋತುಮತಿ ಪೂರ್ವ ವಿವಾಹಗಳು ಜನಪ್ರಿಯವಾಗಿದ್ದವು. ಅದರಲ್ಲಿಯೂ ಗ್ರಾಮೀಣ ಪ್ರದೇಶಗಳಲ್ಲಿಯಂತೂ ಬಹುಸಂಖ್ಯಾತ ಜನರು ಹಲವಾರು ಕಾರಣಗಳಿಂದ ವಯಸ್ಸಿಗೆ ಬಾರದ ಮತ್ತು ವಿವಾಹವೆಂದರೇನು ಎಂದು ಗೊತ್ತಿರದ ತಮ್ಮ ಎಳೆಯ ಮಕ್ಕಳನ್ನು ವಿವಾಹ ಬಂಧನಕ್ಕೆ ಒಳಪಡಿಸುತ್ತಿದ್ದರು. ಇದರಿಂದಾಗಿ ಹೆಣ್ಣುಮಕ್ಕಳು ಸಣ್ಣ ವಯಸ್ಸಿನಲ್ಲಿ ವೈವಾಹಿಕ ಜೀವನದಲ್ಲಿ ಕಾಲಿಡುತ್ತಿದ್ದರು. ಸಣ್ಣ ವಯಸ್ಸಿನಲ್ಲಿಯೇ ತಾಯಂದಿರಾಗುತ್ತಿದ್ದರು. ಅದಕ್ಕೆ 'ಆಡುವ ಕೂಸಿಗೆ ಕಾಡುವ ಕೂಸು' ಎಂಬ ಮಾತು ಗ್ರಾಮೀಣ ಪ್ರದೇಶಗಳಲ್ಲಿ ರೂಢಿಯಲ್ಲಿತ್ತು. ೧೯೨೧ ರಲ್ಲಿ 'ಬಾಲ್ಯವಿವಾಹ ನಿಷೇಧ' ಕಾಯ್ದೆ

ಬಂದಿತು. ಇದನ್ನು 'ಶಾರದಾ ಕಾಯ್ದೆ' ಎಂದು ಕರೆಯಲಾಗಿದೆ. ಈ ವಿವಾಹದ ಕಾಯ್ದೆಯಲ್ಲಿ ಪುರುಷರಿಗೆ ೧೮ ವರ್ಷಕ್ಕೆ, ಮಹಿಳೆಯರಿಗೆ ೧೪ ವರ್ಷಕ್ಕೆ ಏರಿಸಲಾಯಿತು. ೧೯೭೮ ರಲ್ಲಿ ಈ ಕಾಯ್ದೆ ತಿದ್ದುಪಡಿ ಮಾಡಲಾಗಿ ವಿವಾಹದ ವಯಸ್ಸನ್ನು ಪುರುಷರಿಗೆ ೨೧, ಮಹಿಳೆಯರಿಗೆ ೧೮ ಎಂದು ನಿರ್ಧರಿಸಲಾಯಿತು. ಭಾರತದಲ್ಲಿನ ನಗರೀಕರಣ ಮತ್ತು ಸ್ತ್ರೀ ಶಿಕ್ಷಣದಿಂದಾಗಿ ವಿವಾಹದ ವಯಸ್ಸು ಏರುತ್ತಾ ಹೋಗಿ ವಿಳಂಬಿತ ವಿವಾಹಗಳು ನಡೆಯುತ್ತಿವೆ. ಬಾಲ್ಯವಿವಾಹಗಳು ಇಂದು ಅಪರೂಪವಾಗುತ್ತಿವೆ. ಪಾಲಕರು ಇಂದು ಹೆಣ್ಣುಮಕ್ಕಳ ಶಿಕ್ಷಣಕ್ಕೆ ಗಮನ ಕೊಡುತ್ತಿದ್ದಾರೆ. ಗೌಳಿಗರ ಸಮುದಾಯದಲ್ಲಿ ಈಗ ಬಾಲ್ಯವಿವಾಹಗಳು ಕಡಿಮೆಯಾಗುತ್ತಿವೆ. ಈಗ ಹೆಣ್ಣು ಮಕ್ಕಳ ಶಿಕ್ಷಣದ ಬಗ್ಗೆ ಅರಿವು ಮೂಡುತ್ತಿದೆ.

ಭಾರತದ ಎಲ್ಲ ರಾಜ್ಯಗಳಲ್ಲಿ ವಿವಾಹದ ವಯಸ್ಸಿನ ಏರಿಕೆಯು ಒಂದೇ ಪ್ರಕಾರವಾಗಿ ಇಲ್ಲ. ಬಿಹಾರ, ರಾಜಸ್ಥಾನ, ಮಧ್ಯಪ್ರದೇಶಗಳಲ್ಲಿ ವಿವಾಹದ ಸರಾಸರಿ ವಯಸ್ಸು ರಾಷ್ಟ್ರೀಯ ಸರಾಸರಿಗಿಂತ ಕಡಿಮೆಯಿದೆ. ಕರ್ನಾಟಕ, ಕೇರಳ, ಪಂಜಾಬಗಳಲ್ಲಿ ವಿವಾಹದ ಸರಾಸರಿ ವಯಸ್ಸು ರಾಷ್ಟ್ರೀಯ ಸರಾಸರಿಗಿಂತ ಹೆಚ್ಚಿದೆ. ಗ್ರಾಮೀಣ ಪ್ರದೇಶಗಳಲ್ಲಿ ಮತ್ತು ಆದಿವಾಸಿ ಸಮುದಾಯಗಳಲ್ಲಿ ಬಾಲ್ಯ ವಿವಾಹವು ಇನ್ನೂ ಅಸ್ತಿತ್ವದಲ್ಲಿದೆ.

**ಸಂಗಾತಿಗಳ ಆಯ್ಕೆಯ ಪ್ರಕ್ರಿಯೆಯಲ್ಲಿ ಉಂಟಾದ ಪರಿವರ್ತನೆಗಳು**

ಹಿಂದಿನ ಕಾಲದಲ್ಲಿ ಪ್ರತಿಯೊಬ್ಬರು ತಮ್ಮ ಜಾತಿ ಮತ್ತು ಉಪಜಾತಿಯೊಳಗಡೆ ವಿವಾಹವನ್ನು ಮಾಡಿಕೊಳ್ಳುತ್ತಿದ್ದರು. ಸಮೀಪದ ಬಂಧುಗಳಲ್ಲಿ ವಿವಾಹ ಮಾಡಿಕೊಳ್ಳುತ್ತಿದ್ದರು. ಗ್ರಾಮೀಣ ಪ್ರದೇಶಗಳಲ್ಲಿ ಜಾತಿ ಪಂಚಾಯತಿಗಳು ಅಂತರಜಾತಿ ಮತ್ತು ಅಂತರ ಧರ್ಮದ ನಡುವೆ ವಿವಾಹವಾಗದಂತೆ ತಡೆಯುತ್ತಿದ್ದವು. ಆದರೆ ಇಂದು ಯುವಕ, ಯುವತಿಯರು ತಮ್ಮ ಜೀವನ ಸಂಗಾತಿಯನ್ನು ಆರಿಸಿಕೊಳ್ಳಲು ಜಾತಿ ಗಡಿ ರೇಖೆಗಳನ್ನು ದಾಟಿ ಹೋಗುತ್ತಿದ್ದಾರೆ. ಈಗ ಪ್ರೇಮವಿವಾಹಗಳು, ಅಂತರಜಾತಿಯ ವಿವಾಹಗಳು ಹೆಚ್ಚಾಗಿ ಜರುಗುತ್ತಿವೆ.

**ಹೆಚ್ಚುತ್ತಿರುವ ಪ್ರೇಮವಿವಾಹಗಳು; ಕಡಿಮೆಯಾಗುತ್ತಿರುವ ಹಿರಿಯರಿಂದ ಗೊತ್ತುಪಡಿಸಲ್ಪಟ್ಟ ವಿವಾಹಗಳು**

ಇಂದಿನ ದಿನಮಾನಗಳಲ್ಲಿ ಮಹಿಳೆಯರು ಕೈಗಾರಿಕೆಗಳಲ್ಲಿ ಮತ್ತು ಸರಕಾರಿ ಕಚೇರಿಗಳಲ್ಲಿ ಪುರುಷರಿಗೆ ಸರಿ ಸಮಾನರಾಗಿ ದುಡಿಯುತ್ತಿದ್ದಾರೆ. ಸಹಶಿಕ್ಷಣ ಮತ್ತು ಪುರುಷರೊಂದಿಗೆ ಕೂಡಿ ದುಡಿಯುವುದು ಮುಂತಾದ ಅಂಶಗಳು, ಸ್ತ್ರೀ-ಪುರುಷರ ನಡುವಿನ ಅಂತರವನ್ನು ಈಗ ಸಾಕಷ್ಟು ತಗ್ಗಿಸಿವೆ. ಇಂದಿನ ಹಿರಿಯರೂ ಕೂಡಾ ವಿವಾಹ ಮಾಡುವ ಸಂದರ್ಭದಲ್ಲಿ ತಮ್ಮ ಮಗಳಿಗೆ, ಮಗನಿಗೆ, 'ಯಾರನ್ನಾದರೂ ನೀನೆ ನೋಡಿಕೊಂಡಿದ್ದೀಯಾ' ಎಂದು ಕೇಳುವುದು ಉಂಟು. ಇದರಿಂದ ಇಂದಿನ ಕಾಲದಲ್ಲಿ ಪ್ರೇಮವಿವಾಹಗಳು, ಅಂತರಜಾತಿ ವಿವಾಹಗಳು ಮೊದಲಿಗಿಂತ ಹೆಚ್ಚು ಜರುಗತ್ತಲಿವೆ.

**ಜೀವನ ಸಂಗಾತಿಗಳನ್ನು ಆರಿಸಿಕೊಳ್ಳುವ ತಂತ್ರಗಳಲ್ಲಿ ಉಂಟಾದ ಪರಿವರ್ತನೆಗಳು**

ಪ್ರಾಚೀನ ಕಾಲದಲ್ಲಿ ತಂದೆ-ತಾಯಿಗಳು, ಹಿರಿಯರು ತಮ್ಮ ಗ್ರಾಮದಲ್ಲಿಯೇ ಅಥವಾ ನೆರೆಹೊರೆ ಗ್ರಾಮಗಳಲ್ಲಿಯೋ ತಮ್ಮ ಮಕ್ಕಳಿಗೆ ಗಂಡು-ಹೆಣ್ಣು ಹುಡುಕುತ್ತಿದ್ದರು. ಸಂಬಂಧಿಕರು, ಸ್ನೇಹಿತರು,

ಗಂಡು-ಹೆಣ್ಣುಗಳನ್ನು ಹುಡುಕುವುದರಲ್ಲಿ ಸಹಾಯ ಮಾಡುತ್ತಿದ್ದರು. ಆದರೆ ಕಾಲ ಬದಲಾಗಿದೆ. ಇಂದು ನಗರ ಪ್ರದೇಶಗಳಲ್ಲಿ ಜೀವನ ಸಂಗಾತಿಗಳನ್ನು ಹುಡುಕುವುದು ಕಷ್ಟದ ಸಂಗತಿಯಾಗಿದೆ. ವಧು-ವರರ ಅನ್ವೇಷಣಾ ಕೇಂದ್ರಗಳು ಜೀವನ ಸಂಗಾತಿಗಳನ್ನು ಆಯ್ಕೆ ಮಾಡಲು ಸಹಾಯ ಸಹಕಾರ ಮಾಡುತ್ತಿವೆ. ಇಂಟರನೆಟ್, ಶಾದಿಡಾಟಕಾಮ್, Marriage.com ಜೀವನ ಸಂಗಾತಿಗಳನ್ನು ಹುಡುಕುವುದಕ್ಕೆ ಸಹಕರಿಸುತ್ತಿವೆ. ಹೀಗೆ ಜೀವನ ಸಂಗಾತಿಗಳನ್ನು ಹುಡುಕುವ ತಂತ್ರಗಳು ಬದಲಾಗುತ್ತಿವೆ.

**ವಿವಾಹ ಕ್ರಿಯಾವಿಧಿಗಳ ಅನುಸರಣೆಯಲ್ಲಿ ಉಂಟಾದ ಪರಿವರ್ತನೆಗಳು**

ಪ್ರಾಚೀನ ಸಮಾಜದಲ್ಲಿ ವಿವಾಹಕ್ಕೆ ಸಂಬಂಧಿಸಿದ ಎಲ್ಲ ಕ್ರಿಯಾವಿಧಿಗಳು ಅಂದರೆ ಪಾಣಿಗ್ರಹಣ, ಕನ್ಯಾದಾನ, ಲಾಜಹೋಮ, ಸಪ್ತಪದಿ ಮುಂತಾದವುಗಳನ್ನು ಸಮಾಜದಲ್ಲಿನ ಮೇಲ್ಜಾತಿಯವರು ತಪ್ಪದೇ ಅನುಸರಿಸುತ್ತಿದ್ದರು. ಈಗ ವಿವಾಹಗಳು ಧಾರ್ಮಿಕ ಸಮಾರಂಭ ಎಂಬ ಅರ್ಥವನ್ನು ಕಳೆದುಕೊಳ್ಳುತ್ತಿವೆ. ವಿವಾಹಕ್ಕೆ ಸಂಬಂಧಿಸಿದ ಧಾರ್ಮಿಕ ಕ್ರಿಯಾವಿಧಿಗಳನ್ನು ಮೊಟಕುಗೊಳಿಸಲಾಗಿದೆ. ಅವನ್ನು ಕೇವಲ ಯಾಂತ್ರಿಕವಾಗಿ ನಡೆಸಿಕೊಂಡು ಹೋಗಲಾಗುತ್ತಿದೆ. ಈಗ ವಿವಾಹ ಕೆಲವೇ ಘಂಟೆಗಳಲ್ಲಿ ಮುಗಿದು ಹೋಗುತ್ತಿದೆ.

**ವಿವಾಹ ವಿಚ್ಛೇದನಗಳ ಸಂಖ್ಯೆ ಹೆಚ್ಚುತ್ತ ನಡೆದಿರುವುದು: ವಿವಾಹದ ಸ್ಥಿರತೆಕಡಿಮೆಯಾಗುತ್ತಲಿರುವುದು**

ಹಿಂದೂ ವಿವಾಹವು ಒಂದು ಧಾರ್ಮಿಕ ಪವಿತ್ರ ಸಂಸ್ಕಾರವಾಗಿತ್ತು. ಗಂಡನನ್ನು ಬಿಡಲು, ವಿಚ್ಛೇದನ ಪಡೆಯಲು ಹೆಂಡತಿಗೆ ಅವಕಾಶವಿರಲಿಲ್ಲ. ಅದೊಂದು ಅವಮಾನಕರ ಸಂಗತಿಯಾಗಿತ್ತು. ಮನೆತನದ ಮರ್ಯಾದೆ ಪ್ರಶ್ನೆ ಆಗಿತ್ತು. ಈಗ ಈ ಭಾವನೆಗಳು ಕಡಿಮೆಯಾಗಿವೆ. ಈಗ ಕಾಲ ಬದಲಾವಣೆ ಆಗಿದೆ. '೧೯೫೫ ರ ಹಿಂದೂ ವಿವಾಹ ಕಾಯ್ದೆ'ಗೆ ಅನುಗುಣವಾಗಿ ಗಂಡನಿಂದ ಕಿರುಕುಳ, ಹಿಂಸೆ ಇದ್ದರೆ, ಅದರಿಂದ ಮುಕ್ತವಾಗಿ ಸ್ವತಂತ್ರವಾಗಿ ಜೀವನ ಹೊಂದಿ ಮರುಮದುವೆಯಾಗಲು ಅವಕಾಶ ಕಲ್ಪಿಸಲಾಗಿದೆ. ಈ ರೀತಿ ವ್ಯಕ್ತಿವಾದದ ಬೆಳವಣಿಗೆ, ಪಾಶ್ಚಾತ್ಯ ಶಿಕ್ಷಣ, ಸ್ತ್ರೀಯ ಬಂಧವಿಮೋಚನೆ, ಶಾಸನಗಳಲ್ಲಿರುವ ಅವಕಾಶಗಳು ಮುಂತಾದ ಕಾರಣಗಳಿಂದ ವಿವಾಹ ವಿಚ್ಛೇದನಗಳ ಸಂಖ್ಯೆ ದಿನದಿಂದ ದಿನಕ್ಕೆ ಏರುತ್ತಾ ನಡೆದಿದೆ. ಇದರಿಂದಾಗಿ ಸಹಜವಾಗಿ ವಿವಾಹ ಸಂಬಂಧಗಳ ಸ್ಥಿರತೆ ಕಡಿಮೆಯಾಗುತ್ತಲಿದೆ.

**ವಿಧವಾ ವಿವಾಹಗಳ ಸಂಖ್ಯೆ ಹೆಚ್ಚುತ್ತ ನಡೆದಿರುವುದು**

ಬ್ರಿಟಿಷರು ಆಗಮಿಸುವುದಕ್ಕಿಂತ ಮುಂಚೆ ವಿಧವಾ ವಿವಾಹಕ್ಕೆ ಭಾರತದಲ್ಲಿ ಅವಕಾಶಗಳಿರಲಿಲ್ಲ. ಬಾಲ್ಯ ವಿಧವೆಯರು, ವಿಧವೆಯರು ಗಂಡನನ್ನು ಕಳೆದುಕೊಂಡು ಅವರು ಮರಣ ಹೊಂದುವವರೆಗೂ ಹಾಗೆಯೇ ಬದುಕಬೇಕಾಗುತ್ತಿತ್ತು. ಭಾರತೀಯ ಪರಂಪರೆಯಲ್ಲಿ ವಿಧುರನಿಗೆ ಮರುವಿವಾಹವಾಗುವುದಕ್ಕೆ ಅವಕಾಶವಿತ್ತು. ಆದರೆ ವಿಧವೆಗೆ ಈ ಅವಕಾಶವಿರಲಿಲ್ಲ.

ಬ್ರಿಟಿಷರು 'ಹಿಂದೂ ವಿಧವಾ ಪುನರ್‌ವಿವಾಹ' ಕಾಯ್ದೆಯನ್ನು ಜಾರಿಗೆ ತಂದರು. ಕಾನೂನಿನ ಬೆಂಬಲದಿಂದ ಕೆಲವರು ಮರುವಿವಾಹ ಮಾಡಿಕೊಳ್ಳಲು ಪ್ರಾರಂಭಿಸಿದರು. ಆದರೆ ವಾಸ್ತವಿಕ ಜಗತ್ತಿನಲ್ಲಿ ವಿಧವಾ ವಿವಾಹಕ್ಕೆ ಅಡೆತಡೆಗಳು ಯಾವಾಗಲೂ ಇರುತ್ತವೆ. ಏನೇ ಆದರೂ ಈ ವಿಧವಾ ವಿವಾಹಗಳು ಈಗ ಮೊದಲಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ನಡೆಯುತ್ತಲಿವೆ.

**ವಿವಾಹ ಬಂಧನ ಈಗ ಪವಿತ್ರ ಬಂಧನವಾಗಿ ಉಳಿದಿಲ್ಲ**

ವಿವಾಹದ ಚೌಕಟ್ಟಿನಲ್ಲಿಯೇ ವೈವಿಧ್ಯತೆಯ ಅಭಿಲಾಷೆಯನ್ನು ಈಡೇರಿಸಿಕೊಳ್ಳಬೇಕೆನ್ನುವ ಸ್ತ್ರೀ–ಪುರುಷರ ಹಂಬಲದ ಕಾರಣದಿಂದ ವಿಚಿತ್ರ ರೀತಿಯ ಹವ್ಯಾಸ ಬೆಳದುಬಂದಿತು. ಸಾವಿರಾರು ಅಮೇರಿಕನ್‌ರು ತಮ್ಮ ಪತ್ನಿಯರನ್ನು ಬದಲಾಯಿಸಿಕೊಳ್ಳುವ ಪ್ರಕ್ರಿಯೆಯಲ್ಲಿ ನಿರತರಾಗಿದ್ದಾರೆ. ವೈವಾಹಿಕ ಸಂಬಂಧಗಳು ಸುಭದ್ರವಾಗಿ ನಿಂತಿರುವುದೇ ಪತಿ–ಪತ್ನಿಯರ ನಡುವಿನ ಲೈಂಗಿಕ ನಿಷ್ಠೆಯ ಮೇಲೆ. ಈ ರೀತಿ ಹೆಂಡಂದಿರನ್ನು ಬದಲಿಸಿಕೊಳ್ಳುವುದು ವಿವಾಹ ಬಂಧನದ ಪಾವಿತ್ರ್ಯತೆಗೆ ಭಂಗ ತರುತ್ತದೆ. ವಿವಾಹ ಬಂಧನ ಈಗ ಪವಿತ್ರ ಬಂಧನವಾಗಿ ಉಳಿದಿಲ್ಲ.

**೫.೨.೪ ಗೌಳಿ ಸಮುದಾಯದಲ್ಲಿ ವೈವಾಹಿಕ ಪರಿವರ್ತನೆ[೧]**

ಗೌಳಿ ಸಮುದಾಯದ ವಿವಾಹ ವಿಧಿ–ನಿಯಮಗಳು ವಿಶಿಷ್ಟ ಬುಡಕಟ್ಟಿಗೆ ಅನ್ವಯಿಸುತ್ತವೆ. ಒಂದೇ ಕುಳಿಯಲ್ಲಿ ಅಥವಾ ಸೋದರ ಕುಳಿಗಳಲ್ಲಿ ವಿವಾಹ ನಿಷೇಧಿಸಲ್ಪಟ್ಟಿದ್ದು, ಇದರಿಂದ ರಕ್ತ ಸಂಕರವಾಗದಂತೆ ನೋಡಿಕೊಳ್ಳಲಾಗುತ್ತದೆ. ವರನು ತನ್ನ ತಂದೆಯ ತಂಗಿಯ ಮಗಳನ್ನು ಅಥವಾ ತಾಯಿಯ ಅಣ್ಣ ಅಥವಾ ತಮ್ಮನ ಮಗಳನ್ನು ವಿವಾಹ ಆಗಬಹುದು. ಆದರೆ ಇತರ ಕೆಲವು ಜಾತಿಗಳಲ್ಲಿರುವಂತೆ ಅಕ್ಕನ ಮಗಳನ್ನು ವಿವಾಹ ಆಗುವಂತಿಲ್ಲ.

**ಕೋಷ್ಟಕ ೫.೩**

**ಗೌಳಿಗರಲ್ಲಿ ವೈವಾಹಿಕ ಪದ್ಧತಿ**

| ವಿವಾಹ ಪದ್ಧತಿ | ಪ್ರತಿಕ್ರಿಯಿಸಿದವರ ಸಂಖ್ಯೆ | ಶೇಕಡಾವಾರು |
|---|---|---|
| ಒಳವಿವಾಹ | ೧೫೨ | ೬೭.೫೫ |
| ಹೊರ ವಿವಾಹ | ೭೩ | ೩೨.೪೫ |
| **ಒಟ್ಟು** | **೨೨೫** | **೧೦೦** |

೧೫೨ ಜನರು ತಮ್ಮಲ್ಲಿ ಒಳವಿವಾಹ ಪದ್ಧತಿ ಇದೆ ಎಂದರೆ ೭೩ ಜನರು ತಮ್ಮಲ್ಲಿ ಹೊರವಿವಾಹ ಪದ್ಧತಿ ಇದೆ ಎಂದು ಹೇಳಿದ್ದಾರೆ. ಆದರೆ ಇದರ ಬಗ್ಗೆ ಯಾವುದೇ ಪ್ರಕಾರದ ತಪ್ಪು ಕಲ್ಪನೆ ಮಾಡುವ ಅಗತ್ಯ ಇಲ್ಲ. ಇವರು ತಮ್ಮದೇ ಸಮುದಾಯದೊಳಗೆ ವಿವಾಹ ಆಗುವುದರಿಂದ ಇದು ಒಳವಿವಾಹ ಪದ್ಧತಿಯಾಗಿದೆ. ಆದರೆ ಒಂದೇ ಕುಳಿಗೆ ಅಥವಾ ಸೋದರ ಕುಳಿಗಳಿಗೆ ಸೇರಿದ ವಧು–ವರರು ವಿವಾಹವಾಗುವಂತಿಲ್ಲ ಎಂಬ ದೃಷ್ಟಿಯಿಂದ ಇದು ಹೊರ–ವಿವಾಹ ಪದ್ಧತಿಯಾಗಿದೆ.

ಬಹು–ಪತ್ನಿತ್ವ ಪದ್ಧತಿ ಇವರಲ್ಲಿ ಇಂದಿಗೂ ರೂಢಿಯಲ್ಲಿದೆ. ಒಬ್ಬ ಪುರುಷ ನಾಲ್ಕು ವಿವಾಹವಾಗುವ ಅವಕಾಶವಿದೆ. ನಾಲ್ಕನೇ ವಿವಾಹಕ್ಕೆ 'ಪಾಟ್' ಎಂದು ಕರೆಯುತ್ತಾರೆ. ಒಬ್ಬ ಪತ್ನಿ ಜೀವಿಸಿರುವಾಗಲೇ ಇನ್ನೂ ಒಬ್ಬ ಅಥವಾ ಇಬ್ಬರು ಸ್ತ್ರೀಯರನ್ನು ವಿವಾಹವಾಗಲು ಕೆಲವೇ ಶಿಥಿಲವಾದ ನಿರ್ಬಂಧಗಳಿವೆ. ಹೆಂಡತಿಯ ತಂಗಿಯನ್ನು ವಿವಾಹವಾಗಬಹುದು. ಮೊದಲ ಹೆಂಡತಿ ತೀರಿಕೊಂಡಾಗ, ಅವಿವಾಹಿತ ಹೆಣ್ಣನ್ನು ವಿವಾಹವಾಗಬಹುದು. ಈ ಎರಡನೇ ಮದುವೆಗೆ 'ಬಿಪ್ಯೋರ್' ಎಂದು

ಕರೆಯುತ್ತಾರೆ. ಮೊದಲ ಹೆಂಡತಿ ಬಂಜೆ ಎಂದಾಗ ಇಲ್ಲವೇ ಅವಳಿಗೆ ಗಂಡು ಮಗುವು ಆಗದಿದ್ದಾಗ ಮೊದಲ ಹೆಂಡತಿ ಬದುಕಿರುವಾಗಲೇ ಎರಡನೇ ಮದುವೆಯಾದರೆ ಅದನ್ನು 'ಗ್ಯಾಟ್' ಎಂದು ಕರೆಯುತ್ತಾರೆ. ಈ ಸಮುದಾಯದಲ್ಲಿ ವಧುದಕ್ಷಿಣೆ ಕೊಡುವ ಪದ್ಧತಿಯಿದೆ. ೫೦೦೦ ರಿಂದ ೨೦,೦೦೦ ರೂಪಾಯಿಗಳ ವರೆಗೆ ಹೆಣ್ಣಿಗೆ, ತಂದೆ-ತಾಯಿಗೆ ವಧು ದಕ್ಷಿಣೆ ಕೊಡಬೇಕಾಗುವುದು.

ಆಧುನೀಕರಣದಿಂದ ಕ್ರಮೇಣವಾಗಿ ವಧು-ವರರ ಆಯ್ಕೆಯನ್ನೊಳಗೊಂಡು ಸಾಂಪ್ರದಾಯಿಕ ವಿವಾಹ ವಿಧಿ-ವಿಧಾನಗಳು ಬದಲಾಗುತ್ತಲಿವೆ. ಆದರೂ ಕೂಡ ಅವುಗಳ ಮೂಲ ಸ್ವರೂಪದಲ್ಲಿ ಗಮನಾರ್ಹ ಬದಲಾವಣೆ ಕಂಡು ಬರುವುದಿಲ್ಲ.

ತೊಟ್ಟಿಲಲ್ಲಿರುವ ಹೆಣ್ಣಮಗುವಿಗೆ ವಿವಾಹ ಮಾಡುವ ರೂಢಿಯಿದ್ದ ಬಗ್ಗೆ ಕೆಲವು ಗೌಳಿಗರು ಹೇಳುತ್ತಾರೆ. ಆದರೆ ಇದು ಈಗ ರೂಢಿಯಲ್ಲಿ ಇಲ್ಲ. ಹುಡುಗಿ ಋತುಮತಿಯಾಗುವ ಮೊದಲೇ ವಿವಾಹ ಮಾಡುವ ಪದ್ಧತಿಯಿತ್ತು. ಬಾಲ್ಯ ವಿವಾಹ ರೂಢಿಯಲ್ಲಿತ್ತು. ಆಧುನಿಕತೆಯ ಪ್ರಭಾವದಿಂದ ಇದು ಈಗ ಕಡಿಮೆಯಾಗಿದೆ.

**ಕೋಷ್ಟಕ ೫.೪**

**ಗೌಳಿಗರಲ್ಲಿ ಬಾಲ್ಯವಿಹಾಹ ಪದ್ಧತಿ**

| ಬಾಲ್ಯ ವಿವಾಹ ಪದ್ಧತಿ | ಪ್ರತಿಕ್ರಿಯಿಸಿದವರ ಸಂಖ್ಯೆ | ಶೇಕಡಾವಾರು |
|---|---|---|
| ಇದೆ | ೫೮ | ೨೫.೭೮ |
| ಇಲ್ಲ | ೧೬೭ | ೭೪.೨೨ |
| **ಒಟ್ಟು** | **೨೨೫** | ೧೦೦.೦ |




೫೮ ಜನರು ತಮ್ಮಲ್ಲಿ ಬಾಲ್ಯವಿವಾಹ ಪದ್ಧತಿ ಇದೆ ಎಂದರೆ ೧೬೭ ಜನರು ತಮ್ಮಲ್ಲಿ ಬಾಲ್ಯ ವಿವಾಹ ಪದ್ಧತಿ ಈಗಿಲ್ಲವೆಂದು ಹೇಳಿದ್ದಾರೆ. ಅಂದರೆ ಒಂದು ಕಾಲಕ್ಕೆ ಬಾಲ್ಯ ವಿವಾಹ ಪದ್ಧತಿ ರೂಢಿಯಲ್ಲಿದ್ದಂತಹ ಈ ಸಮುದಾಯದಲ್ಲಿ ಕ್ರಮೇಣವಾಗಿ ಈ ಪದ್ಧತಿ ಕಡಿಮೆಯಾಗುತ್ತ ವಧು-ವರರು ವಯಸ್ಕರಾದಾಗ ವಿವಾಹ ಮಾಡುವ ಪದ್ಧತಿ ರೂಢಿಯಾಗುತ್ತಿದೆ.

**ಕೋಷ್ಟಕ ೫.೫**

**ಹೆಣ್ಣಿನ ವಿವಾಹ ಪ್ರಾಯದ ಹಂತಗಳು**

| ಹೆಣ್ಣಿನ ವಿವಾಹ ಪ್ರಾಯದ ಹಂತ | ಶೇಕಡಾವಾರು |
|---|---|
| ಋತುಮತಿಯಾಗುವ ಮೊದಲು | ೨೨.೯% |
| ಋತುಮತಿಯಾದ ತಕ್ಷಣ | ೭.೧% |
| ಋತುಮತಿಯಾದ ಎರಡು ವರ್ಷದೊಳಗೆ | ೩೭.೧% |
| ಋತುಮತಿಯಾದ ಎರಡು ವರ್ಷದ ನಂತರ | ೩೨.೯% |

ಮೇಲಿನ ಕೋಷ್ಟಕದಿಂದ, ಗೌಳಿ ಸಮುದಾಯದಲ್ಲಿ ಬಾಲ್ಯವಿವಾಹ ಪದ್ಧತಿಯು ಪೂರ್ತಿಯಾಗಿ ನಿಂತಿಲ್ಲ; ಇನ್ನೂ ರೂಢಿಯಲ್ಲಿ ಉಳಿದಿದೆ. ೨೨.೪% ಹುಡುಗಿಯರು ಋತುಮತಿಯಾಗುವ ಮೊದಲು ಮದುವೆಯಾದರೆ, ಋತುಮತಿಯಾದ ತಕ್ಷಣ ಮದುವೆಯಾಗುವವರು ೭.೧% ಎಂದು ತಿಳಿದು ಬರುತ್ತದೆ. ಋತುಮತಿಯರಾದ ನಂತರ ಮದುವೆಯಾಗುವವರು ೭೦%. ಅದರಲ್ಲಿ ೩೭.೧% ಋತುಮತಿಯಾದ ನಂತರ ಎರಡು ವರ್ಷದೊಳಗೆ ಮತ್ತು ೩೨.೯% ಋತುಮತಿಯಾಗಿ ಎರಡು ವರ್ಷಗಳ ನಂತರ ಮದುವೆಯಾದವರು.

ವಿಧವಾ ವಿವಾಹ ಇವರಲ್ಲಿ ಸಾಂಪ್ರದಾಯಿಕವಾಗಿಯೇ ರೂಢಿಯಲ್ಲಿದೆ. ಅಷ್ಟೇ ಅಲ್ಲ, ವಿಧವೆಗೆ ಕೊಡಬೇಕಾದ ವಧುದಕ್ಷಿಣೆ ಹೆಚ್ಚಿನ ಪ್ರಮಾಣದಲ್ಲಿರುತ್ತದೆ. ಯಾಕೆಂದರೆ ವಿಚ್ಛೇದಿತ ಅಥವಾ ವಿಧವೆ ಹೆಣ್ಣು ಮದುವೆಗೆ ದೊರಕುವುದು ದುರ್ಲಭ.

**ಕೋಷ್ಟಕ ೫.೬**

**ಗೌಳಿಗರಲ್ಲಿ ವಿವಾಹ ಪದ್ಧತಿ ಆಚರಣೆ**

| ವಿಧವಾ ವಿವಾಹ ಪದ್ಧತಿ | ಪ್ರತಿಕ್ರಿಯಿಸಿದವರ ಸಂಖ್ಯೆ | ಶೇಕಡಾವಾರು |
|---|---|---|
| ಇದೆ | ೧೯೫ | ೮೬.೬೬ |
| ಇಲ್ಲ | ೩೦ | ೧೩.೩೪ |
| **ಒಟ್ಟು** | ೨೨೫ | ೧೦೦.೦ |



೧೯೫ ಜನರು ತಮ್ಮಲ್ಲಿ ವಿಧವಾ ವಿವಾಹ ಇದೆ ಎಂದರೆ ೩೦ ಜನರು ಈ ಪದ್ಧತಿ ಇಲ್ಲವೆಂದಿದ್ದಾರೆ. ಆದರೆ ಸರ್ವೇಕ್ಷಣೆಯಲ್ಲಿ ಕಂಡುಕೊಂಡ ಪ್ರಕಾರ ವಿಧವಾ ವಿವಾಹ ಇವರಲ್ಲಿ ಸಾಂಪ್ರದಾಯಿಕವಾಗಿಯೇ ರೂಢಿಯಲ್ಲಿದೆ. ಆಧುನೀಕರಣವು ಈ ಸಂಪ್ರದಾಯವನ್ನು ಇನ್ನಷ್ಟು ಬಲಗೊಳಿಸಿದೆ ಎಂದು ಹೇಳಬಹುದು.

**ಕೋಷ್ಟಕ ೫.೭**

**ಗೌಳಿಗರಲ್ಲಿ ಪ್ರೇಮ ವಿವಾಹ**

| **ಪ್ರೇಮ ವಿವಾಹ** | **ಪ್ರತಿಕ್ರಿಯಿಸಿದವರ ಸಂಖ್ಯೆ** | **ಶೇಕಡಾವಾರು** |
|---|---|---|
| ಹಿರಿಯರು ಒಪ್ಪಿಕೊಳ್ಳುತ್ತಾರೆ | ೧೮೨ | ೮೦.೮೯ |
| ಹಿರಿಯರು ವಿರೋಧಿಸುತ್ತಾರೆ | ೪೩ | ೧೯.೧೧ |
| **ಒಟ್ಟು** | **೨೨೫** | ೧೦೦ |

೧೮೨ ಜನ ಹಿರಿಯರು ಪ್ರೇಮ ವಿವಾಹವನ್ನು ಒಪ್ಪಿಕೊಳ್ಳುತ್ತಾರೆ ಎಂದರೆ ೪೩ ಜನ ಹಿರಿಯರು ವಿರೋಧಿಸುತ್ತಾರೆ ಎಂದು ಹೇಳಿದ್ದಾರೆ. ಆದರೆ ಸಾಮಾನ್ಯವಾಗಿ ಪ್ರೇಮ ವಿವಾಹಗಳಾದಾಗ ಸಮುದಾಯದ ಹಿರಿಯರು ಅಥವಾ ಎರಡೂ ವಾಡೆಗಳ ಹಿರಿಯರು ಒಟ್ಟುಗೂಡಿ ಅದಕ್ಕೆ ಒಪ್ಪಿಗೆ ನೀಡುತ್ತಾರೆ.

**ಕೋಷ್ಟಕ ೫.೮**

**ವಿವಾಹದ ಮೇಲೆ ಆಧುನಿಕರಣದ ಪ್ರಭಾವ**

| **ವಿವಾಹದ ಮೇಲೆ ಆಧುನಿಕರಣದ ಪ್ರಭಾವ** | **ಪ್ರತಿಕ್ರಿಯಿಸಿದವರ ಸಂಖ್ಯೆ** | **ಶೇಕಡಾವಾರು** |
|---|---|---|
| ಆಗಿದೆ | ೧೪೪ | ೬೪.೦೦% |
| ಆಗಿಲ್ಲ | ೮೧ | ೩೬.೦೦% |
| **ಒಟ್ಟು** | **೨೨೫** | ೧೦೦.೦% |

ವಿವಾಹವ ಮೇಲೆ ಆಧುನೀಕರಣದ ಪ್ರಭಾವ ಉಂಟಾಗಿದೆ ಎಂದು ೧೪೪ ಜನರು ಹೇಳಿದರೆ, ೮೧ ಜನರು ಅಂತಹ ಪ್ರಭಾವ ಆಗಿಲ್ಲವೆಂದು ಪ್ರತಿಕ್ರಿಯಿಸಿದ್ದಾರೆ. ಅಂದರೆ ವಿವಾಹ ಪದ್ಧತಿಯಲ್ಲಿ ಆಧುನಿಕತೆಯ ಪ್ರಭಾವ ಕಂಡುಬರುತ್ತದೆ ಎಂದು ಹೇಳಬಹುದು.

**ಕೋಷ್ಟಕ ೫.೯**

**ಆಧುನಿಕರಣದಿಂದ ವೈವಾಹಿಕ ವಿಧಿ-ವಿಧಾನಗಳಲ್ಲಿ ಬದಲಾವಣೆ**

| **ವೈವಾಹಿಕ ಬದಲಾವಣೆ** | **ಪ್ರತಿಕ್ರಿಯಿಸಿದವರ ಸಂಖ್ಯೆ** | **ಶೇಕಡಾವಾರು** |
|---|---|---|
| ಆಗಿದೆ | ೧೫೦ | ೬೬.೬% |
| ಆಗಿಲ್ಲ | ೭೫ | ೩೩.೩೩% |
| **ಒಟ್ಟು** | **೨೨೫** | ೧೦೦.೦% |




ಆಧುನೀಕರಣದಿಂದ ವೈವಾಹಿಕ ವಿಧಿ ವಿಧಾನಗಳಲ್ಲಿ ಬದಲಾವಣೆಯಾಗಿದೆ ಎಂದು ೧೫೦ ಜನರು ಹೇಳಿದರೆ ಇಂತಹ ಬದಲಾವಣೆಯಾಗಿಲ್ಲವೆಂದು ೭೫ ಜನರು ಹೇಳಿದ್ದಾರೆ. ಅಂದರೆ ಆಧುನೀಕರಣದಿಂದ ಸಾಂಪ್ರದಾಯಿಕ ವಿವಾಹ ವಿಧಿ-ವಿಧಾನಗಳು ಕ್ರಮೇಣವಾಗಿ ಬದಲಾಗುತ್ತಿವೆ.

**೫.೨.೫ ರೂಢಿಯಲ್ಲಿರುವ ವಿವಾಹ ವಿಧಾನ**[೧೭]

ತಂದೆ-ತಾಯಿ ಮತ್ತು ಊರ ಹಿರಿಯರು ಹೆಣ್ಣಿನ ಮನೆಗೆ ಹೋಗಿ ಹೆಣ್ಣು ನೋಡಿ ಗಟ್ಟಿ ಮಾಡಿದ ನಂತರ ನಿಶ್ಚಯ ಕಾರಣ (ಸಾಖರಸಾಡೆ) ಆದ ಮೇಲೆ ಯಡಿಗ್ಯನು ಮದುವೆಯ ದಿನ ಗೊತ್ತು ಮಾಡಿದ ನಂತರ ಗಂಡು ಹೆಣ್ಣಿನವರು ಪ್ರತ್ಯೇಕವಾಗಿ ನಗರಕ್ಕೆ ಹೋಗಿ ಮದುವೆಗೆ ಬೇಕಾದ ಜವಳಿ ತೆಗೆಸುತ್ತಾರೆ. ಗಂಡಿನವರು ಹೆಣ್ಣಿಗೆ ತಾಳಿ, ಕಾಲುಂಗರ, ನತ್ತು, ಬುಗುಡಿ, ಹಾಲ್ಗಡಗ ಕೊಳ್ಳುವರು.

ವಿವಾಹ ಕಾರ್ಯಗಳು ಸಾಮಾನ್ಯವಾಗಿ ಹೆಣ್ಣಿನ ಮನೆಯಲ್ಲಿಯೇ ನಡೆಯುವುದು ವಾಡಿಕೆ, ಯಾವುದೇ ಮದುವೆ ಇರಲಿ, ಊರಿನ ಹಿರಿಯರು ಅಥವಾ 'ಜಾಂತ್ಯಾಲೋಕ್' ಮತ್ತು ಪೂಜಾರಿ (ಯಡಿಗ್ಯ ಕುಳಿಗೆ ಸೇರಿದ ವ್ಯಕ್ತಿ)ಗಳು ಇರಲೇಬೇಕು. ಧಾರೆಗೆ ದಿಬ್ಬಣ ವಧುವಿನ ಮನೆಗೆ ಹೊರಟಾಗ ವರನ ತಾಯಿ ಎಲ್ಲರನ್ನು ಕಳುಹಿಸಿ ಅವಳೊಬ್ಬಳೇ ಮನೆಯಲ್ಲಿ ಉಳಿದು ಸೊಸೆಯನ್ನು ಸ್ವಾಗತಿಸುವ ತಯಾರಿಯ ಹೊಣೆಯನ್ನು ನಿರ್ವಹಿಸುವುದು ಸಂಪ್ರದಾಯ. ಗಂಡಿನ ಕಡೆಯವರು ದಿಬ್ಬಣದೊಂದಿಗೆ ವಧುವಿನ ಮನೆಗೆ ಹೋಗುತ್ತಾರೆ. ಆಭರಣಗಳನ್ನು ಹಾಗೂ ವಧುದಕ್ಷಿಣೆಯನ್ನು ಕೊಟ್ಟೇ ಒಳಗೆ ಬರಬೇಕೆಂಬ ನಿಯಮವಿದೆ. ಮದುವೆಯ ಗಂಡು ಹೊಸ ಚಾಪೆಯ ಮೇಲೆ ಕೂಡ್ರುತ್ತಾನೆ. (ಧಾರೆಯಾದ ನಂತರ ಹೆಂಡತಿಯನ್ನು ಕರೆದುಕೊಂಡು ಹೋಗುವಾಗ ಆ ಹೊಸ ಚಾಪೆಯನ್ನು ತೆಗೆದುಕೊಂಡು ಹೋಗಬೇಕೆಂಬ ನಿಯಮವಿದೆ. ಆ ಚಾಪೆಯನ್ನು ಗಂಗೆ ಪೂಜೆಗೆ ತೆಗೆದುಕೊಂಡು ಹೋಗಿ ಅದನ್ನು ನೀರಿನಲ್ಲಿ ಮುಳುಗಿಸಿ ಮೀನು ಹಿಡಿದರೆ ಅದು ಫಲವಂತಿಕೆಯ ಸಂಕೇತವೆನ್ನುತ್ತಾರೆ). ವಧು ವರರನ್ನು ದೇವರ ಎದುರಿಗೆ ಕುಳ್ಳಿರಿಸಿ ಅರಿಷಿಣ ಹಚ್ಚಿ, ಸ್ನಾನ ಮಾಡಿಸುತ್ತಾರೆ. ಈ ಆಚರಣೆಗೆ 'ಹುಂಬೋರ್' ಎನ್ನುವರು. ಸ್ನಾನದ ನಂತರ ಫಲವಂತಿಕೆಯ ಸಂಕೇತವಾದ ಅತ್ತಿ ಮರಕ್ಕೆ ವಧು-ವರರು ಪ್ರದಕ್ಷಿಣೆ ಹಾಕುತ್ತ 'ಹುಂಬರಬಾಯಿ ತಲಕಾಯಿಮನ ತಲಕಾಯಿಸ' ಎಂದು ಭಕ್ತಿಯಿಂದ ಹಾಡುತ್ತಾರೆ. ನಂತರ ವಧು-ವರರನ್ನು ಸಿಂಗರಿಸಿ, ಬಾಸಿಂಗ್ ಕಟ್ಟಿ, ಮುಸುಕು ಹಾಕಿ, ಕಂಬಳಿಯ ಮೇಲೆ ನಿಲ್ಲಿಸಿ ಆರತಿ

ಬೆಳಗುತ್ತಾರೆ. ನಂತರ ಪೂಜಾರಿ ಯಡಿಗ್ಯ ಕೊಟ್ಟ ತಾಳಿಯನ್ನು ವರನು ವಧುವಿಗೆ ಕಟ್ಟಿ ಅವರು ಪತಿ-ಪತ್ನಿ ಆಗುತ್ತಾರೆ. ತಾಳಿ ಕಟ್ಟುವಾಗ ಯಡಿಗ್ಯನು ಮರಾಠಿ-ಸಂಸ್ಕೃತ ಮಿಶ್ರಿತ ಮಂತ್ರಗಳನ್ನು ಹೇಳುವನು. ಎಲ್ಲರೂ ವಧು-ವರರಿಗೆ ಅಕ್ಕಿ ಕಾಳು ಹಾಕುವರು. ವರನು ಹಿರಿಯರ ಸಮ್ಮುಖದಲ್ಲಿ ತನ್ನ ಹೆಂಡತಿಯನ್ನು ಯಾವ ತೊಂದರೆಯಿಲ್ಲದೇ ಕಾಪಾಡುತ್ತಾನೆಂದು, ವಧುವು ತಾನು ತನ್ನ ಗಂಡನ ಜೊತೆಗೆ ಸದಾ ಸಹಕರಿಸಿಕೊಂಡು ಒಂದಾಗಿ ನಡೆಯುತ್ತೇನೆ ಎಂದು ಪ್ರಮಾಣ ಮಾಡುತ್ತಾಳೆ. ನಂತರ ವಧು ವರರು ಎದುರು-ಬದರು ಕುಳಿತುಕೊಂಡು ಓಕುಳಿ ತುಂಬಿದ ಪಾತ್ರೆಯಲ್ಲಿ ಅಡಿಕೆ, ಉಂಗುರ, ನಾಣ್ಯ ಹಾಕಿ ವರ ಒಂದು ಕೈಯಿಂದ, ವಧು ಎರಡೂ ಕೈಯಿಂದ ಹುಡುಕುತ್ತಾರೆ. ಯಾರ ಕೈಗೆ ಮೊದಲು ಸಿಗುವುದೋ ಅವರು ಗೆದ್ದಂತೆ. ಇದಕ್ಕೆ 'ಕಳಕೋನಿ' ಆಟ ಎನ್ನುವರು. ನಂತರ ವಧುವರರನ್ನು ಬಿಸಿ ನೀರಿನಿಂದ ಸ್ನಾನ ಮಾಡಿಸಿ ಹೊಸ ಬಟ್ಟೆ ಧರಿಸಿ ಅವರವರ ಸೋದರಮಾವರು ಹೆಗಲ ಮೇಲೆ ಹೊತ್ತುಕೊಂಡು ವಾಡಾದಲ್ಲಿ ಮೆರವಣಿಗೆ ಮಾಡುವರು. ನಂತರ ಎಲ್ಲರಿಗೂ ಮಾಂಸದೂಟ ಮಾಡಿಸಲಾಗುವುದು. ದೈವದವರಿಗೆ ಪಾಗೋಟಿ, ತೆಂಗಿನಕಾಯಿ ಹಾಗೂ ಹಣವನ್ನು ಉಡುಗೊರೆಯಾಗಿ ಕೊಡುತ್ತಾರೆ. ಕೊನೆಗೆ ನವದಂಪತಿಗಳು ಒಂದೇ ತಟ್ಟೆಯಲ್ಲಿ ಅನ್ನದ ಹುಗ್ಗಿಯನ್ನು ಊಟ ಮಾಡುತ್ತಾರೆ. ಇಲ್ಲಿಗೆ ವಿವಾಹ ಶಾಸ್ತ್ರ ಮುಕ್ತಾಯವಾಗುತ್ತದೆ. ವಧು ಮೈನೆರೆದಿದ್ದರೆ ಮದುವೆಯಾದ ದಿನವೇ ಗಂಡನ ಮನೆಗೆ ಕಳಿಸುತ್ತಾರೆ. ಗಂಡನ ಮನೆಯಲ್ಲಿ ನವವಧು ಮನೆಯನ್ನು ಪ್ರವೇಶಿಸುವಾಗ ಹೊಸ್ತಿನಲ್ಲಿಟ್ಟ ಅಕ್ಕಿ ಅಥವಾ ಭತ್ತವನ್ನು ಬಲಗಾಲಿನಿಂದ ಒದ್ದು ಒಳಗೆ ಪ್ರವೇಶಿಸುವಳು. ಅತ್ತೆಯು ಅವಳನ್ನು ಸ್ವಾಗತಿಸುವಳು. ಇಬ್ಬರೂ ದೇವರ ಮುಂದೆ ಕುಳಿತುಕೊಳ್ಳುವರು. ರಾತ್ರಿ ದೈವ ಪೂಜೆಯ ನಂತರ ಎಲ್ಲರಿಗೂ ಕಳ್ಳು ಮತ್ತು ಮಾಂಸದೂಟವನ್ನು ಬಡಿಸುತ್ತಾರೆ. ಗಂಡನ ಮನೆಗೆ ಬಂದ ೫ ನೇ ದಿನಕ್ಕೆ ಹೆಣ್ಣು ವಾಡಾದ ಇತರ ಸುಮಂಗಲೆಯರೊಂದಿಗೆ ಗಂಗೆ ಪೂಜೆ ಮಾಡಿ ಭೂಮಿಯ ಮೇಲೆ ಭತ್ತ, ಬಿತ್ತಿ ನೀರು ಹೊಯ್ಯುತ್ತಾಳೆ. ಇದು ಫಲವಂತಿಕೆಯ ಆಚರಣೆ. ಅಂದೇ ಶೋಭನ ಕಾರ್ಯ ನಡೆಯುತ್ತದೆ. ಗಂಡ-ಹೆಂಡತಿಯರನ್ನಷ್ಟೇ ಗುಡಿಸಲಲ್ಲಿ ಬಿಟ್ಟು ಮನೆಯ ಇತರರು ಪಕ್ಕದ ಗುಡಿಸಲುಗಳಲ್ಲಿ ಮಲಗುತ್ತಾರೆ. ೫-೧೦ ದಿನಗಳ ನಂತರ ಹೆಣ್ಣಿನ ಕಡೆಯ ಪಂಚರು ಬಂದು ಅವಳನ್ನು ಕರೆದೊಯ್ಯುತ್ತಾರೆ. ಕೆಲ ದಿನಗಳ ನಂತರ ಹೆಣ್ಣು ತನ್ನ ಗಂಡನ ಮನೆಗೆ ಬಂದು ಹೊಸ ಸಂಸಾರವನ್ನು ಆರಂಭಿಸುತ್ತಾಳೆ.

ಮೇಲೆ ತಿಳಿಸಿದ ಎಲ್ಲ ಆಚರಣೆಗಳು (ವಿಧಿ-ವಿಧಾನಗಳು) ಇನ್ನೂ ರೂಢಿಯಲ್ಲಿವೆ. ಬದಲಾವಣೆಯಾದ ಆಚರಣೆಗಳು ಕೆಳಗಿನಂತಿವೆ.

**೫.೨.೬ ಆಧುನಿಕತೆಯ ಪ್ರಭಾವದಿಂದ ಗೌಳಿ ಸಮುದಾಯಲ್ಲಾದ ವೈವಾಹಿಕ ಪರಿವರ್ತನೆಗಳು**

೧) ವಧು ದಕ್ಷಿಣೆ ಕೊಡುವ ಪದ್ಧತಿ ಪ್ರಚಲಿತವಿದ್ದು ಈಗ ವಧು ದಕ್ಷಿಣೆಯ ಮೊತ್ತ ಹೆಚ್ಚಾಗಿದೆ. ಹಿಂದೆ ೧೦೦ ರಿಂದ ೧೫೦ ರೂಪಾಯಿ ಇತ್ತು. ಈಗ ೫೦೦ ರಿಂದ ೫೦೦೦ ಅಥವಾ ೨೦,೦೦೦ ರೂಪಾಯಿ ವರೆಗೆ ಪ್ರಚಲಿತವಿದೆ.

೨) ಈ ಮೊದಲು ಮದುವೆಯ ಮನೆಯ ಮುಂದೆ ನೇರಲ ಹಣ್ಣಿನ ಗಿಡದ ಚಪ್ಪರ ಹಾಕಿ, ಮಾವಿನ ಎಲೆಯ ತೋರಣ ಕಟ್ಟಿ ಸಿಂಗರಿಸುತ್ತಿದ್ದರು. ಈಗ ಬಣ್ಣ ಬಣ್ಣದ ಶಾಮಿಯಾನ ಹಾಕಿ ಸಿಂಗರಿಸುವರು.

೩) ಇತ್ತೀಚಿಗೆ ಮೊದಲಿಲ್ಲದ ಬ್ಯಾಂಡಬಾಜಾ ಬಾರಿಸುವುದು ಪ್ರಚಲಿತವಾಗುತ್ತಿದೆ.

೪) ಫೋಟೋ ತೆಗೆಯಲು ಈಗ ಕ್ಯಾಮೆರಾ (೬೦%), ವಿಡಿಯೋ ಕ್ಯಾಮೆರಾ (೨೦%) ಬಳಸುತ್ತಾರೆ.

೫) ಈ ಮೊದಲು ಕನ್ಯೆಯನ್ನು ನೋಡಲು ತಂದೆ-ತಾಯಿ ಮತ್ತು ಹಿರಿಯರು ಅಷ್ಟೇ ಹೋಗಿ ವಧುವನ್ನು ಗೊತ್ತುಮಾಡಿಕೊಂಡು ಬರುತ್ತಿದ್ದರು. ವರನು ಹೋಗಿ ಕನ್ಯೆಯನ್ನು ನೋಡುವ ಪದ್ಧತಿ ಇರಲಿಲ್ಲ. ಇತ್ತೀಚಿಗೆ ತಂದೆ-ತಾಯಿ ಹಿರಿಯರ ಜೊತೆ ವರನೂ ಕನ್ಯೆಯನ್ನು ನೋಡಲು ಹೋಗುವ ರೂಢಿಯಾಗಿದೆ. ವಧು, ವರರು ಪರಸ್ಪರ ನೋಡಿ ಒಪ್ಪುವ ರೂಢಿಯಿದೆ.

೬) ಈ ಮೊದಲು ಹೆಣ್ಣಿನ ಮನೆಯಲ್ಲೇ ಮದುವೆಯ ಮಾತುಕತೆ ಮುಗಿಸುವ ವಾಡಿಕೆಯಿತ್ತು. ಈಗೀಗ ಗಂಡಿನ ಮನೆಯಲ್ಲೂ ಮಾತುಕತೆಗಳು ನಡೆಯುತ್ತವೆ.

೭) ಈ ಮೊದಲು ಮುಹೂರ್ತ ನೋಡುವ ಪದ್ಧತಿ ಇದ್ದಿಲ್ಲ. ಈಗ ಮುಹೂರ್ತ ನೋಡುವ ಪರಿಪಾಠ ಸುರುವಾಗಿದೆ. ಮುಹೂರ್ತ ನೋಡಲು ಬ್ರಾಹ್ಮಣರ ಕಡೆಗೆ ಹೋಗುತ್ತಾರೆ. ಎಲ್ಲೋ ಒಬ್ಬರು ಮಾತ್ರ ಮದುವೆಗೆ ಬ್ರಾಹ್ಮಣ ಪುರೋಹಿತರನ್ನು ಕರೆಸುತ್ತಾರೆ.

೮) ಈ ಹಿಂದೆ ಲಗ್ನಪತ್ರಿಕೆ ಪ್ರಿಂಟ್ ಮಾಡಿಸುವ ಪದ್ಧತಿ ಇರಲಿಲ್ಲ. ಈಗೀಗ ಲಗ್ನಪತ್ರಿಕೆ ಪ್ರಿಂಟ್ ಮಾಡಿಸಿ ಹಂಚುವ ಪದ್ಧತಿ ರೂಢಿಯಾಗಿದೆ.

೯) ಇತ್ತೀಚಿಗೆ ಆರ್ಥಿಕ ತೊಂದರೆಯಾಗದಿರಲು, ಅನವಶ್ಯಕ ವೆಚ್ಚವನ್ನು ನಿವಾರಿಸಲು ಅಥವಾ ಮಿತವ್ಯಯದ ಕಾರಣವಾಗಿ, ದೇವರ(ವಿಠ್ಠಲ್)ಮಂದಿರಿಗಳಲ್ಲಿ ಒಂದೇ ಗ್ರಾಮದ ಅಥವಾ ಸುತ್ತಮುತ್ತಲಿನ ಗ್ರಾಮದ ವಧು-ವರರ ಸಾಮೂಹಿಕ ವಿವಾಹ ನಡೆಯುವುದು ಪ್ರಾರಂಭವಾಗಿದೆ. ಸಾಮೂಹಿಕ ವಿವಾಹವಿದ್ದಾಗ ಎಷ್ಟು ಮದುವೆಗಳು ನಡೆಯುವುವೋ ಅವರೆಲ್ಲರೂ ಸಮವಾಗಿ ಖರ್ಚನ್ನು ಹಂಚಿಕೊಳ್ಳುತ್ತಾರೆ.

೧೦) ಬಾಲ್ಯವಿವಾಹ ಪದ್ಧತಿ ರೂಢಿಯಲ್ಲಿತ್ತು. ಇತ್ತೀಚಿಗೆ ಬಾಲ್ಯ ವಿವಾಹ ಪದ್ಧತಿ ಸಾಕಷ್ಟು ಕಡಿಮೆಯಾಗಿ, ತಕ್ಕ ವಯಸ್ಸಿಗೆ ಮದುವೆ ಮಾಡುವ ಪದ್ಧತಿ ರೂಢಿಯಾಗಿದೆ. ಬಾಲ್ಯ ವಿವಾಹ ಪದ್ಧತಿಯು ಸಂಪೂರ್ಣವಾಗಿ ನಿಂತಿಲ್ಲ. ಕೆಲವರು ಹೆಣ್ಣು ಋತುಮತಿಯಾಗುವ ಮುನ್ನ ಮದುವೆ ಮಾಡಲು ಇಚ್ಛಿಸುತ್ತಾರೆ.

೧೧) ಬಹುಪತ್ನಿತ್ವ ವಿವಾಹಗಳೂ ಕಡಿಮೆಯಾಗಿವೆ. ಮೊದಲನೆ ಹೆಂಡತಿ ಬಂಜೆಯಾಗಿದ್ದರೆ ಅಥವಾ ಮೊದಲನೆ ಹೆಂಡತಿಗೆ ಗಂಡು ಮಗು ಆಗಿರದಿದ್ದರೆ ಮಾತ್ರ ಎರಡನೇ ಮದುವೆಯಾಗುತ್ತಾರೆ.

## ೫.೩. ವೃತ್ತಿ ಪರಿವರ್ತನೆ

ಮಾನವ ಸಮಾಜ ಅಲೆಮಾರಿ ಹಂತದಲ್ಲಿದ್ದಾಗ ಜನರು ಕಾಡುಗಳನ್ನು ಸವರಿ ಸುಡುತ್ತಿದ್ದರು. ಈ ರೀತಿ ಕಾಡುಗಳನ್ನು ಇಲ್ಲವಾಗಿಸಿ ಬಿದ್ದ ಬೂದಿಯ ಮೇಲೆ ಸಾಗುವಳಿ ಮಾಡುತ್ತಿದ್ದರು. ಅಂದರೆ ಒಂದು ನಿರ್ಧಿಷ್ಟ ಪ್ರದೇಶದಲ್ಲಿ ಅವರು ನೆಲೆ ನಿಂತಿರುತ್ತಿರಲಿಲ್ಲ. ಭೂ ಫಲವತ್ತತೆ ಕಡಿಮೆಯಾಗುವವರೆಗೂ ಅವರು ಒಂದು ಪ್ರದೇಶದಲ್ಲಿ ನೆಲೆ ನಿಲ್ಲುತ್ತಿದ್ದರು. ನಂತರ ಮತ್ತೊಂದು ಪ್ರದೇಶಕ್ಕೆ ಹೋಗಿ ಅವರು ಮತ್ತೆ ಕೃಷಿಯಲ್ಲಿ ತೊಡಗುತ್ತಿದ್ದರು. ಇಂಥ ಒಂದು ಹಂತದಲ್ಲಿ ಅವರ ವಸತಿ ವ್ಯವಸ್ಥೆ ಶಾಶ್ವತ ಸ್ವರೂಪ ಹೊಂದಿರಲಿಲ್ಲ. ಈ ರೀತಿ ಅಲೆಮಾರಿ ಹಂತದಲ್ಲಿ ಮತ್ತು ಬೂದಿ ಸಾಗುವಳಿ ಹಂತದಲ್ಲಿ ಜನರ ವಸತಿ ಮಾದರಿ ಅಶಾಶ್ವತ ಸ್ವರೂಪ ಹೊಂದಿತ್ತು. ಬುಡಕಟ್ಟು ಸಮುದಾಯದ ಜನರು ಅರಣ್ಯದಲ್ಲಿ ವಾಸಿಸುವಂತಹ ಸಂದರ್ಭದಲ್ಲಿ ತಮ್ಮ ಅಗತ್ಯಕ್ಕೆ ಅನುಸಾರವಾಗಿ ಪರವಸ್ತುಗಳಿಗೆ ತೊಂದರೆಯಾಗದಂತೆ ಜೀವನ ನಡೆಸುತ್ತಿದ್ದರು. ಜೊತೆಗೆ ಹಸಿವನ್ನು ಈಡೇರಿಸಿಕೊಳ್ಳಲು ಋತುಮಾನಕ್ಕೆ ಅನುಗುಣವಾಗಿ ಲಭಿಸುವಂತಹ ಗಡ್ಡೆ ಗೆಣಸು, ಹಣ್ಣು ಹಂಪಲು ಹಾಗೂ ಕಾಡಿನಲ್ಲಿರುವ ಪ್ರಾಣಿ ಪಕ್ಷಿಗಳನ್ನು ಶೋಧ ಮಾಡುವುದೇ ಅವರ ಪ್ರಮುಖ ಕಾಯಕ ಆಗಿತ್ತು. ಈ ತತ್ವದ ಮೇಲೆ ಜೀವನ ರೂಪಿಸಿಕೊಂಡಿದ್ದನ್ನು ಹಲವು ಅಧ್ಯಯನಗಳು ಸ್ಪಷ್ಟಪಡಿಸುತ್ತವೆ.

### ೫.೩.೧ ಕರ್ನಾಟಕ ಬುಡಕಟ್ಟುಗಳಲ್ಲಿ ವೃತ್ತಿ ಪರಿವರ್ತನೆ

ಕರ್ನಾಟಕದಲ್ಲಿ ವಾಸವಾಗಿರುವ ಬುಡಕಟ್ಟು ಸಮುದಾಯಗಳು ಪಾರಂಪರಿಕ ಕುಲಕಸಬು ಹೊಂದಿವೆ. ಉದಾ: ಕಾಡಿನಲ್ಲಿ ಆಹಾರ ಸಂಗ್ರಹಣೆ, ಬೇಟೆಗಾರಿಕೆ, ಪಶುಸಂಗೋಪನೆ, ಕೃಷಿ, ಕೃಷಿಕೂಲಿ, ಹುಲ್ಲು ಸಂಗ್ರಹ ಮಾಡುವುದು, ಕಟ್ಟಿಗೆ ಕಡಿದು ಮಾರುವುದು, ಜೇನು ಸಂಗ್ರಹಣೆ, ಗಿಡಮೂಲಿಕೆಗಳ ಸಂಗ್ರಹ, ಅಪರೂಪದ ಅರಣ್ಯ ವಸ್ತುಗಳಾದ ಕಸ್ತೂರಿ, ಗೋರಂಜನ, ನವಿಲು ತುಪ್ಪ, ಉಡದ ತುಪ್ಪ, ಹುಲಿಯುಗುರು ಮುಂತಾದವುಗಳ ಮಾರಾಟ, ಬಿದಿರು-ಈಚಲಿನಿಂದ ಬುಟ್ಟಿ, ಚಾಪೆ, ಬೀಸಣಿಕೆಗಳ ತಯಾರಿಕೆ, ಹಗ್ಗ ತಯಾರಿಕೆ ಇತ್ಯಾದಿ. ಹೀಗೆ ಹತ್ತು ಹಲವಾರು ಪರಂಪರಾಗತ ಕಸಬುಗಳನ್ನು ನಿರ್ವಹಿಸುತ್ತಿದ್ದರು. ಆದರೆ ಎಂದು ಅರಣ್ಯ ಸಂಪತ್ತಿನ ಮೇಲೆ ಆಧುನೀಕರಣದ ಕರಿ ನೆರಳು ಬಿತ್ತೋ ಅಂದಿನಿಂದ ಬುಡಕಟ್ಟು ಸಂಘ ಜೀವನಕ್ಕೆ ಅತಂತ್ರ ಸ್ಥಿತಿಯು ಬಂದು ಅಪ್ಪಳಿಸಿತು. ತೀವ್ರಗತಿಯ ಆಧುನೀಕರಣ, ಕೈಗಾರಿಕೀಕರಣ, ಗಣಿಗಾರಿಕೆ ಮತ್ತು ಆಣೆಕಟ್ಟುಗಳಂತಹ ಅಭಿವೃದ್ಧಿಯ ಯೋಜನೆಗಳು ಅರಣ್ಯ ಪ್ರದೇಶವನ್ನು ಕಿರಿದುಗೊಳಿಸಿ ಬುಡಕಟ್ಟು ಜನರ ಜೀವನೋಪಾಯಕ್ಕೆ ಪ್ರತಿಕೂಲವಾದವು. ಈ ಸಮುದಾಯಗಳು ಈಗ ಬದಲಾಗುತ್ತಿರುವ ಆಧುನಿಕ ವಿಜ್ಞಾನ, ತಂತ್ರಜ್ಞಾನದ ಭರಾಟೆಯಲ್ಲಿ ದಿಕ್ಕು ಕಾಣದೆ ಕಂಗಾಲಾಗುತ್ತಿರುವುದು ಕಂಡುಬರುತ್ತಿದೆ.

ಆಧುನಿಕ ಕೈಗಾರಿಕೆಗಳು ಬುಡಕಟ್ಟು ಸಮುದಾಯಗಳ ಮೂಲ ಕಸುಬಿನ ಮೇಲೆ ಬೇರೆ ಬೇರೆ ಪರಿಣಾಮಗಳನ್ನು ಬೀರಿವೆ. ಬೃಹತ ಕೈಗಾರಿಕೆಗಳು ಆರ್ಥಿಕ ಪ್ರಗತಿಗೆ ಕಾರಣವಾಗಿರುವಂತೆ ಬುಡಕಟ್ಟು ಸಮುದಾಯಗಳ ಹಿಂದುಳಿದಿರುವಿಕೆಗೂ ಕಾರಣವಾಗಿವೆ. ಆಧುನಿಕ ಬೃಹತ ಕೈಗಾರಿಕೆಗಳಿಗೆ ಲಾಭ-ನಷ್ಟವೇ ಪ್ರಮುಖವಾದುದು. ಆದರೆ ಬುಡಕಟ್ಟು ಸಮುದಾಯಗಳಿಗೆ ವ್ಯವಹಾರದ ಹೊರತಾಗಿಯೂ

ಸಾಂಸ್ಕೃತಿಕ ಬದುಕು ಮುಖ್ಯವಾಗಿರುತ್ತದೆ. ಈ ದೇಶದಲ್ಲಿ ಬುದ್ಧಿಶಕ್ತಿಗೆ ಪ್ರಾಮುಖ್ಯತೆ ನೀಡಿದಷ್ಟು, ದೈಹಿಕ ಶಕ್ತಿಗೆ ನೀಡಿಲ್ಲ. ಸಾಮಾಜಿಕ ಚರಿತ್ರೆಯನ್ನು ಗಮನಿಸಿದರೆ ಯಾವ ವ್ಯಕ್ತಿ ಯಾವ ಕಸುಬನ್ನು ಮಾಡುತ್ತಾನೊ ಆ ಕಸುಬಿಗೆ ಸಮಾಜದಲ್ಲಿ ಯಾವ ಮಾನ್ಯತೆ ಇದೆ ಎಂಬುದರ ಮೇಲೆಯೇ ಸಾಮಾಜಿಕ ಮನ್ನಣೆಗಳು ದೊರೆಯುತ್ತವೆ.

ನಾಗರಿಕ ಸರಕಾರಗಳ ಧೋರಣೆಯಿಂದ ಅತ್ತ ಕಾಡೂ ಇಲ್ಲದೆ ಇತ್ತ ನಾಡಾಡಿಗಳೊಂದಿಗೆ ಅನನ್ಯತೆಯಿಲ್ಲದೆ ಬುಡಕಟ್ಟು ಸಮುದಾಯಗಳು ತೀವ್ರ ಸಂಕಷ್ಟಕ್ಕೆ ಒಳಗಾದವು. ಅದೆಷ್ಟೋ ಸಮುದಾಯಗಳು ತಮ್ಮ ಮೂಲ ಪಾರಂಪರಿಕ ಕಸಬುಗಳನ್ನು ಕಳೆದುಕೊಂಡವು. ಅರಣ್ಯದಿಂದ ಅರಣ್ಯ ಉತ್ಪಾದನೆಗಳನ್ನು ಸಂಗ್ರಹಿಸಲು ತಡೆಯನ್ನುಂಟುಮಾಡಲಾಯಿತು. ದಟ್ಟ ಅರಣ್ಯ ಪ್ರದೇಶಗಳು ಬೃಹತ ಕೈಗಾರಿಕೆ, ಆಣೆಕಟ್ಟುಗಳಿಂದಾಗಿ ಮಾಯವಾದವು. ಬೇಟೆಗಾರಿಕೆಯನ್ನು ಕಾನೂನು ಮೂಲಕ ನಿಯಂತ್ರಿಸಲಾಯಿತು. ಪಶುಸಂಗೋಪನೆಗೆ ಅವಕಾಶವಿದ್ದರೂ ಸಹ ಪಶುಗಳಿಗೆ ಬೇಕಾಗುವ ಹುಲ್ಲು ಮೇಯಿಸಲು ಕಾದಿಟ್ಟ ಅರಣ್ಯದಲ್ಲಿ ಅವಕಾಶ ನೀಡಲಿಲ್ಲ. ಜಾಗತೀಕರಣದ ಪ್ರಭಾವಕ್ಕೆ ಒಳಗಾಗಿ ಕೃಷಿಯು ಅವಸಾನದ ಅಂಚಿಗೆ ಸರಿಯುತ್ತಿದೆ. ಬುಡಕಟ್ಟು ಸಮುದಾಯಗಳ ಗಿಡಮೂಲಿಕೆಗಳು ಇಂಗ್ಲೀಷ ಔಷಧಿಗಳಿಂದ ಮೂಲೆಗುಂಪಾಗಿವೆ. ಬುಟ್ಟಿ, ಚಾಪೆ ಇತ್ಯಾದಿಗಳ ಜಾಗದಲ್ಲಿ ಪ್ಲಾಸ್ಟಿಕ ವಸ್ತುಗಳು ಬಂದಿವೆ. ಕಲಾತ್ಮಕ ವಸ್ತುಗಳ ಬದಲಿಯಾಗಿ ಕಾರ್ಖಾನೆಗಳು ತಯಾರಿಸಿದ ವಸ್ತುಗಳ ಬೇಡಿಕೆ ಹೆಚ್ಚಾಗಿದೆ. ನಾರಿನಿಂದ ತಯಾರಿಸುವ ಹಗ್ಗಗಳ ಬೇಡಿಕೆ ಇಳಿದಿದೆ. ಬದಲು ಕಾರ್ಖಾನೆಯಲ್ಲಿ ತಯಾರಾಗುವ ನೈಲಾನ್ ವಾಯರ್ ಹಗ್ಗಗಳಿಗೆ ಬೇಡಿಕೆ ಹೆಚ್ಚಾಗಿದೆ. ಮೇಲಿನ ವೈಪರೀತ್ಯಗಳಿಂದ ಬುಡಕಟ್ಟು ಸಮುದಾಯಗಳು ತಮ್ಮ ಕುಲಕಸುಬುಗಳನ್ನು ಹೇಗೆ ಕಳೆದುಕೊಂಡಿವೆ ಎಂಬುದು ವೇದ್ಯವಾಗುತ್ತದೆ. ಹೀಗೆ ಆಧುನಿಕತೆಯ ಪ್ರಭಾವದಿಂದ ಕುಲಕಸುಬುಗಳು ಕೈತಪ್ಪಿ, ಅತಂತ್ರ ಸ್ಥಿತಿ ಉಂಟಾಗಿ ಕುಟುಂಬ ಜೀವನ ನಿರ್ವಹಣೆಗೆ ವೃತ್ತಿ ಪರಿವರ್ತನೆಯು ಬುಡಕಟ್ಟು ಸಮುದಾಯಗಳಿಗೆ ಅನಿವಾರ್ಯವಾಯಿತು.

### ೫.೩.೨ ಉತ್ತರ ಕನ್ನಡ ಜಿಲ್ಲೆಯ ಗೌಳಿಗರ ವೃತ್ತಿ ಪರಿವರ್ತನೆ[೯]

ಮೂಲತಃ ಅಲೆಮಾರಿಗಳಾದ ಗೌಳಿಗರು ತಮ್ಮ ಕುಲ ಕಸುಬಾದ ಪಶುಸಂಗೋಪನೆ, ಹೈನುಗಾರಿಕೆ, ಕುಮ್ರಿ ಬೇಸಾಯ, ಕಾಡಿನ ಉತ್ಪನ್ನ ಮಾರಾಟ ಹಾಗೂ ಅರಣ್ಯ ಆಹಾರ ಸಂಗ್ರಹಣೆ ಮುಂತಾದ ವೃತ್ತಿಗಳನ್ನು ಹೊಂದಿದ್ದರು. ಅಲೆಮಾರಿಗಳಿಂದ ಕ್ರಮೇಣ ಅರೆ-ಅಲೆಮಾರಿಗಳಾಗಿ ಸುಮಾರು ೫-೬ ದಶಕಗಳಿಂದ ಕಾಡಿನಲ್ಲಿ ತಮಗೆ ಅನುಕೂಲವೆನಿಸಿದ ಸ್ಥಳಗಳಲ್ಲಿ ಗುಂಪು ಗುಂಪಾಗಿ ಒಂದೇ ಕಡೆ ನೆಲೆಸುವಂತಾಯಿತೆನ್ನುತ್ತಾರೆ. ಕೆಲವು ಕುಟುಂಬಗಳು ಕುಮ್ರಿ ಬೇಸಾಯ ಮಾಡುತ್ತಿದ್ದ ಕೃಷಿ ಭೂಮಿ, ಇನ್ನು ಕೆಲವು ಕುಟುಂಬಗಳು ಅತಿಕ್ರಮಿಸಿದ ಅರಣ್ಯ ಕೃಷಿಭೂಮಿ (೧/೨ ಎಕರೆಯಿಂದ ೩ಎಕರೆವರೆಗೆ) ಹೊಂದಿದ್ದು, ಕುಲಕಸುಬಾದ ಹೈನುಗಾರಿಕೆಯಲ್ಲದೇ, ಕೃಷಿ, ಕೃಷಿ-ಕೂಲಿ, ಅರಣ್ಯ ಉತ್ಪನ್ನಗಳ ಸಂಗ್ರಹಣೆ-ಮಾರಾಟ, ಅರಣ್ಯ ಆಹಾರ ಸಂಗ್ರಹಣೆ ಅವರ ಸಾಮಾನ್ಯ ವೃತ್ತಿಯಾಗಿದ್ದವು.

ಆದರೆ ಕಾಲ ಬದಲಾದಂತೆ ಹೊಸ ಅರಣ್ಯ ಕಾನೂನು, ಹೊಸ ಅರಣ್ಯ ನೀತಿ ಬಂದವು. ಕಾಯ್ದಿರಿಸಿದ ಅರಣ್ಯ, ಸಂರಕ್ಷಿತ ಅರಣ್ಯ ಎಂದು ಘೋಷಿಸಲಾದ ಕಾರಣ ಇದರಿಂದ ಹಲವಾರು

ತಲೆಮಾರುಗಳಿಂದ ನೆಲೆಸಿದ್ದರೂ ಕೂಡ ಖಾಸಗೀ ಭೂ ಒಡೆತನದ ಕಲ್ಪನೆ ಇರದ ಅವರು ಭೂ ದಾಖಲೆಗಳನ್ನು ಹೊಂದಿರದ್ದರಿಂದ ಗೌಳಿಗರಿಗೆ ಭೂ ಒಡೆತನ ಇಲ್ಲದಂತಾಯಿತು. ಅನೇಕ ಗೌಳಿಗರು ಕೃಷಿ ಭೂಮಿಯನ್ನು ಕಳೆದುಕೊಳ್ಳಬೇಕಾಯಿತು. ಇದಲ್ಲದೇ ಬೇಟೆಯಾಡುವುದು, ಅರಣ್ಯದಲ್ಲಿ ದನಕರುಗಳನ್ನು ಮೇಯಿಸುವುದು, ಅರಣ್ಯ ಉತ್ಪನ್ನ ಹಾಗೂ ಅರಣ್ಯ ಆಹಾರ ಸಂಗ್ರಹಣೆ ಮಾಡುವುದು ಮುಂತಾದವುಗಳನ್ನು ನಿಷೇಧಿಸಲಾಯಿತು. ಅರಣ್ಯ ಇಲಾಖೆಯವರ ಕಿರಿ-ಕಿರಿ ಹೆಚ್ಚಾಗಿ, ಅವರು ನೀಡುತ್ತಿದ್ದ ಶೋಷಣೆಗೆ ಗೌಳಿಗರು ದಾರಿಕಾಣದೇ ಕಂಗಾಲಾದರು. ಕಾಡಿಗೂ ಅವರಿಗೂ ಇದ್ದ ಅವಿನಾಭಾವ ಸಂಬಂಧ ಈಗ ಕೇವಲ ಕೃತಕವಾಗಿ ದಿಕ್ಕು ತಪ್ಪಿದ ಹಸುಳೆಯಾಗಿ ಅತಂತ್ರದ ಸ್ಥಿತಿ ಹೊಂದಿದ್ದಾರೆ.

**ಕೋಷ್ಟಕ ೫.೧೦**

**ವಿವಿಧ ಯೋಜನೆಗಳಿಗೆ ಕಬಳಿಸಿದ ಅರಣ್ಯ ಭೂಮಿ (ಹೆಕ್ಟೇರ್‌ಗಳಲ್ಲಿ)**

| ಅ. ನಂ. | ಯೋಜನೆಗಳು | ಅರಣ್ಯ ಭೂಮಿ |
|---|---|---|
| ೧ | ಸೀಬರ್ಡ್ ನೌಕಾನೆಲೆಗೆ | ೨೨೫೯ |
| ೨ | ಸೀಬರ್ಡ್ ಮೂರನೆ ಹಂತ | ೧೦೦೦ |
| ೩ | ಸೀಬರ್ಡ್ ಪುನರ್ವಸತಿಗೆ | ೬೪೩ |
| ೪ | ಕೈಗಾ ವಿದ್ಯುತ್ ಯೋಜನೆ | ೭೨೭ |
| ೫ | ಕೊಡಸಳ್ಳಿ ಆಣೆಕಟ್ಟು | ೧೩೬೦ |
| ೬ | ಕದ್ರಾ ಆಣೆಕಟ್ಟು | ೩೦೫೧ |
| ೭ | ಶರಾವತಿ ಆಣೆಕಟ್ಟು | ೭೦೦ |
| ೮ | ಅತಿಕ್ರಮಣ ಸಕ್ರಮಕ್ಕೆ (೧೯೯೭) | ೨೮೨೪ |
| ೯ | ಕೈಗಾ ನರೇಂದ್ರ ಮಾರ್ಗಕ್ಕೆ | ೩೩೦ |
| ೧೦ | ಕೊಂಕಣ ರೇಲ್ವೆ ಯೋಜನೆ | ೨೭೨ |
| ೧೧ | ಇನ್ನಷ್ಟು ಕಾರ್ಯಕ್ಕೆ ಸೇರಿ ಒಟ್ಟು | ೧೪೬೫೧ |

**ಆಧಾರ: ವಿಜಯ ಕರ್ನಾಟಕ, ದಿನಪತ್ರಿಕೆ, (೨೯-೧೧-೨೦೦೯, ಪು-೨)**

ಮೇಲಿನ ಕೋಷ್ಟಕ ಗಮನಿಸಿದರೆ, ವಿವಿಧ ಅಭಿವೃದ್ಧಿ ಯೋಜನೆಗಳಿಗೆ ಎಷ್ಟು ಅರಣ್ಯ ಭೂಮಿ ನಾಶವಾಗಿದೆಂಬುದನ್ನು ತಿಳಿಯಬಹುದು. ನಗರೀಕರಣ, ಔದ್ಯೋಗೀಕರಣ, ಆಣೆಕಟ್ಟು ಹಾಗೂ ಇತರ ಅಭಿವೃದ್ಧಿ ಯೋಜನೆಗಳಿಂದಾದ ಅರಣ್ಯ ನಾಶ, ಅರಣ್ಯ ಕಾನೂನಿನಂತೆ ಅರಣ್ಯದಲ್ಲಿ ದನ-ಕರುಗಳನ್ನು ಮೇಯಿಸುವುದರ ಮೇಲೆ ಹೇರಿದ ನಿರ್ಬಂಧಗಳಿಂದ ಸೃಷ್ಟಿಯಾದ ಮೇವು, ನೀರಿನ ಕೊರತೆಯಿಂದ ಸಹಜವಾಗಿ ದನಕರುಗಳು ಕಡಿಮೆಯಾದವು. ಅಲ್ಲದೇ ಹಾಲಿನ ಡೇರಿಗಳು ಬಂದಾಗಿನಿಂದ ಗೌಳಿ ಹಾಲಿನ ಬೇಡಿಕೆಯು ಕಡಿಮೆಯಾಯಿತು. ಇವೆಲ್ಲ ಕಾರಣಗಳಿಂದ ಕುಲಕಸುಬಾದ ಹೈನುಗಾರಿಕೆಗೆ ಹಿನ್ನಡೆ ಉಂಟಾಯಿತು. ಅಂದರೆ ಆಧುನೀಕರಣದಿಂದ ಮೂಲ ಕುಲಕಸುಬಾದ ಹೈನುಗಾರಿಕೆಯ

ಮೇಲೆ ವ್ಯತಿರಿಕ್ತ ಪರಿಣಾಮವಾಗಿದೆಯೆಂದೇ ಹೇಳಬಹುದು. ಅನೇಕ ಗೌಳಿ ಕುಟುಂಬಗಳು ಕುಲಕಸುಬನ್ನು ಕಳೆದುಕೊಂಡು ನೋವು ಅನುಭವಿಸುತ್ತಿದ್ದಾರೆ.

**ಕೋಷ್ಟಕ ೫.೧೧**

**ಮೂಲ ಉದ್ಯೋಗ (ಕುಲಕಸುಬು) ಹೈನುಗಾರಿಕೆಯ ಮೇಲೆ ವ್ಯತಿರಿಕ್ತ ಪರಿಣಾಮ**

| ಹೈನುಗಾರಿಕೆ ಮೇಲೆ ವ್ಯತಿರಿಕ್ತ ಪರಿಣಾಮ | ಪ್ರತಿಕ್ರಿಯಿಸಿದವರು | ಶೇಕಡಾವಾರು |
|---|---|---|
| ಆಗಿದೆ | ೧೯೭ | ೮೭.೫೫ |
| ಆಗಿಲ್ಲ | ೨೮ | ೧೨.೪೫ |
| ಒಟ್ಟು | ೨೨೫ | ೧೦೦.೦೦ |

**ಕೋಷ್ಟಕ ೫.೧೨**

**ಸಾಂಪ್ರದಾಯಿಕ ಉದ್ಯೋಗ ಹೈನುಗಾರಿಕೆ ಕಳೆದುಕೊಂಡ ನೋವು**

| ಹೈನುಗಾರಿಕೆ ಕಳೆದುಕೊಂಡಿದ್ದರಿಂದ | ಪ್ರತಿಕ್ರಿಯಿಸಿದವರು | ಶೇಕಡಾವಾರು |
|---|---|---|
| ನೋವು ಉಂಟಾಗಿದೆ | ೨೧೭ | ೯೬.೪೫ |
| ನೋವು ಉಂಟಾಗಿಲ್ಲ | ೮ | ೩.೫೫ |
| ಒಟ್ಟು | ೨೨೫ | ೧೦೦.೦ |




ಮೇಲಿನ ಕೋಷ್ಟಕನ್ನು ಅವಲೋಕಿಸಿದಾಗ ಸಂದರ್ಶಿಸಿದ ಒಟ್ಟು ೨೨೫ ಕುಟುಂಬಗಳಲ್ಲಿ ೧೯೭ ಕುಟುಂಬಗಳು ಆಧುನೀಕರಣದಿಂದ ಕುಲ ಕಸುಬಾದ ಹೈನುಗಾರಿಕೆಯ ಮೇಲೆ ವ್ಯತಿರಿಕ್ತ ಪರಿಣಾಮವಾಗಿದೆ ಎಂದು ಅಭಿಪ್ರಾಯಪಟ್ಟರೆ, ೨೮ ಕುಟುಂಬಗಳು ಇಂತಹ ಪರಿಣಾಮವೇನು ಆಗಿಲ್ಲವೆಂದು ಅಭಿಪ್ರಾಯ ಪಟ್ಟಿವೆ. ಇನ್ನೊಂದು ಕೋಷ್ಠಕದ ಪ್ರಕಾರ ೨೧೭ ಕುಟುಂಬಗಳು ಸಾಂಪ್ರದಾಯಿಕ ಉದ್ಯೋಗವಾದ ಹೈನುಗಾರಿಕೆಯನ್ನು ಕಳೆದುಕೊಂಡಿದ್ದಕ್ಕೆ ತಮಗೆ ನೋವು ಉಂಟಾಗಿದೆ ಎಂದರೆ

ಕೇವಲ ೮ ಕುಟುಂಬಗಳು ನೋವು ಉಂಟಾಗಿಲ್ಲವೆಂದಿದ್ದಾರೆ. ಉ.ಕ ಜಿಲ್ಲೆಯ ಗೌಳಿ ಸಮುದಾಯದ ವ್ಯಥೆಯ ಕಥೆಯನ್ನು ಈ ಅಂಕಿ-ಅಂಶಗಳು ಹೇಳುತ್ತಿವೆ. ತಮ್ಮ ಮೂಲ ಸ್ಥಾನದಿಂದ ಬೇರ್ಪಟ್ಟ ಇವರು ತಮ್ಮ ಮೂಲ ಕುಲಕಸುಬನ್ನು ಕಳೆದುಕೊಂಡು ನೋವನ್ನು ಅನುಭವಿಸಿದ್ದಾರೆ. ಕೆಲವೇ ಕುಟುಂಬಗಳು ಇನ್ನೂ ಹೈನುಗಾರಿಕೆಯಲ್ಲಿ ಉಳಿದುಕೊಂಡಿವೆ. ಹೀಗೆ ಹೊಸ ಅರಣ್ಯ ನೀತಿಗಳಿಂದ ಹಾಗೂ ಅರಣ್ಯ ಖಾತೆಯವರ ಕಿರಿ-ಕಿರಿಯಿಂದಾಗಿ ಕಾಡಿನೊಂದಿಗಿನ ಅವಿನಾಭಾವ ಸಂಬಂಧದಿಂದ ಬೇರ್ಪಟ್ಟ ನೋವು ಒಂದು ಕಡೆಯಾದರೆ, ಇನ್ನೊಂದು ಕಡೆ ಸಾಂಪ್ರದಾಯಿಕ ಕುಲ ಕಸುಬಾದ ಹೈನುಗಾರಿಕೆಯನ್ನು ಕಳೆದುಕೊಂಡು ಸಾಕಷ್ಟು ನೋವು ಹಾಗೂ ಮಾನಸಿಕ ತುಮುಲವನ್ನು ಅನುಭವಿಸಿದ್ದಾರೆ. ಸಾಂಪ್ರದಾಯಿಕ ಬುಡಕಟ್ಟು ಸಮುದಾಯಗಳಲ್ಲಿ ಮೂಲ ಪರಂಪರೆಯಿಂದ ಬೇರ್ಪಟ್ಟು ಕುಲಕಸುಬನ್ನು ಕಳೆದುಕೊಂಡಾಗ ವ್ಯಕ್ತಿಯಾಗಲಿ, ಕುಟುಂಬಗಳಾಗಲೀ ಹೊಸ ವಾತಾವರಣಕ್ಕೆ ಹೊಂದಿಕೊಳ್ಳುವವರೆಗೆ ನೋವು, ಮಾನಸಿಕ ತುಮುಲವನ್ನು ಅನುಭವಿಸುವುದು ಸಹಜ. ಕೆಲವರು ಬೇರೆ ಉದ್ಯೋಗಕ್ಕೆ ಸುಲಭವಾಗಿ ಹೊಂದಿಕೊಳ್ಳುತ್ತಾರೆ. ಆದರೆ ಇಡೀ ಸಮುದಾಯಕ್ಕೆ ಇಂತಹ ಹೊಂದಾಣಿಕೆ ಮಾಡಿಕೊಳ್ಳುವುದು ಅಸಾಧ್ಯವಾದ ಸಂಗತಿಯಾಗಿದೆ. ಹಿಂದಿನ ಪೀಳಿಗೆಯ ಹಿರಿಯ ಗೌಳಿಗರು ಹೊಂದಿಕೊಳ್ಳಲಾಗದೇ ಇನ್ನೂ ನೋವು ಅನುಭವಿಸುತ್ತಲೇ ಇದ್ದಾರೆ. ಆದರೆ ಇಂದಿನ ಪೀಳಿಗೆಯ ಯವಕ, ಯುವತಿಯರು ಹೊಸ ವಾತಾವರಣಕ್ಕೆ ಹೊಂದಿಕೊಂಡಿದ್ದಾರೆ.

ಈಗಿನ ಸ್ಥಿತಿಗತಿಯನ್ನು ಗಮನಿಸಿ, ವೃತ್ತಿ ದೃಷ್ಟಿಯಿಂದ ನೋಡಿದರೆ ಹಲವಾರು ಕಾರಣಗಳಿಂದ ಕೈ ತಪ್ಪಿ ಹೋಗುತ್ತಿರುವ ಸಾಂಪ್ರದಾಯಿಕ ಮೂಲ ವೃತ್ತಿಯಾದ ಹೈನುಗಾರಿಕೆಯಲ್ಲಿ ತೊಡಗಿದವರು (೧೫.೫%) ಕಡಿಮೆ. ಸ್ವಂತ ಭೂಮಿಯನ್ನು ಹೊಂದಿ ಸ್ವಂತ ಕೃಷಿಯಲ್ಲಿ ತೊಡಗಿದವರು (೪.೫%) ಇನ್ನೂ ವಿರಳ. ಇದಕ್ಕೆ ಪ್ರಮುಖ ಕಾರಣವೆಂದರೆ ಇವರಿಗೆ ಸ್ವಂತ ಭೂಮಿ ಎಂಬುದು ಅತಿ ವಿರಳ. ಕೆಲವರು ಕಾನೂನು ಬಾಹಿರವಾಗಿ ಅರಣ್ಯ ಭೂಮಿಯನ್ನು ಅಕ್ರಮ ಸಾಗುವಳಿಯಿಂದ ಕೃಷಿ ಮಾಡಿದರೂ ಅದು ಶಾಶ್ವತವಲ್ಲ. ಅಕ್ರಮ ಸಾಗುವಳಿಯ ಅರಣ್ಯ ಭೂಮಿಯಲ್ಲಿ ಕೆಲ ಭೂಮಿಯನ್ನು ಮಾತ್ರ ಸಕ್ರಮಗೊಳಿಸಲಾಗಿದೆ. ಭೂ ಹಿಡುವಳಿದಾರರ ಇಲ್ಲವೇ ಮೇಲ್ಜಾತಿಯವರ ಕೃಷಿ ಭೂಮಿಯಲ್ಲಿ ದುಡಿಯುವ ಭೂ ರಹಿತ ಕೃಷಿ ಕೂಲಿಗಳೇ ಹೆಚ್ಚು (೮೦%). ಬಹುತೇಕ ಗೌಳಿಗರಿಗೆ ಪೂರ್ಣ ಕುಟುಂಬವನ್ನು ಸಾಕುವಷ್ಟು ಹೈನುಗಾರಿಕೆ ಇಲ್ಲದ್ದರಿಂದ ಊಳಲು ಸ್ವಂತ ಭೂಮಿಯೂ ಇಲ್ಲದ್ದರಿಂದ ಹೈನುಗಾರಿಕೆಯೊಂದಿಗೆ ಕೃಷಿ ಕೂಲಿ ಇವರಿಗೆ ಅನಿವಾರ್ಯವಾಗಿದೆ. ಕೃಷಿಕೂಲಿಯು ವರ್ಷವೀಡಿ ದೊರಕದೇ ಋತುಮಾನಕ್ಕನುಸಾರವಾಗಿ (ನಾಟಿ ಸಮಯದಿಂದ ಕೊಯ್ಲುವರೆಗೆ) ೫-೬ ತಿಂಗಳು ಮಾತ್ರ ದೊರಕುವದರಿಂದ, ಭೂ ರಹಿತ ಕೃಷಿ ಕೂಲಿಕಾರರಿಗೆ ನಿತ್ಯ ಜೀವನ ನಿರ್ವಹಣೆಗೆ ಕೂಲಿ ಸಾಲದೇ ಆರ್ಥಿಕ ತೊಂದರೆಯಿಂದ ಇತರ ಕೂಲಿ ಕೆಲಸ ಮಾಡುವುದು ಅನಿವಾರ್ಯವಾಗಿದೆ. ಇತರ ಕೂಲಿ ಕೆಲಸಗಳೆಂದರೆ ಗಾರೆ ಕೆಲಸ, ರಸ್ತೆ ನಿರ್ಮಾಣ ಕೆಲಸ, ಕಟ್ಟಡ ನಿರ್ಮಾಣ ಕೆಲಸದಲ್ಲಿ ಮಹಿಳೆಯರು ಕಲ್ಲು-ಮಣ್ಣು, ಇಟ್ಟಿಗೆ, ಸಿಮೆಂಟ್-ಕಾಂಕ್ರೀಟ್ ಹೊರುವುದು ಇತ್ಯಾದಿ. ಲಿಂಗ ಬೇಧವಿಲ್ಲದೇ ಪುರಷರೊಂದಿಗೆ ಮಹಿಳೆಯರು ದುಡಿಯುತ್ತಾರೆ. ಕೃಷಿಕೂಲಿ ಸಿಗದೇ ಇದ್ದ ಸಮಯದಲ್ಲಿ ಬೇರೆ ಕೂಲಿ ಮಾಡಲು ಪುರುಷರು ದೂರದ ಊರಿಗೆ ಹೋದರೆ, ಮಹಿಳೆಯರು ಸಮೀಪದ ಊರುಗಳಿಗೆ

ಹೋಗಿ ಹೆಚ್ಚು ಕೂಲಿ ಸಿಗುವ ಗಾರೆ ಕೆಲಸ, ಕಟ್ಟಡ ಕಟ್ಟುವ ಕೆಲಸಗಳಲ್ಲಿ ತೊಡಗುತ್ತಾರೆ. ಕೆಲವು ಮಹಿಳೆಯರು ಕಾಡು ಹಣ್ಣು, ಮುತ್ತುಗದ ಎಲೆಯ ತಟ್ಟೆ, ತರಕಾರಿ, ಧಾನ್ಯ, ಬೆಣ್ಣೆ, ತುಪ್ಪ ಮುಂತಾದವುಗಳನ್ನು ಪಟ್ಟಣದ ಸಂತೆಗೆ ಹೋಗಿ ಮಾರುತ್ತಾರೆ. ಇನ್ನು ಕೆಲವರು ಸಣ್ಣಪುಟ್ಟ ದಿನಸಿ ಅಂಗಡಿ, ಚಹಾದ ಅಂಗಡಿ ಇಟ್ಟುಕೊಂಡು ವ್ಯಾಪಾರ ಮಾಡುತ್ತಾರೆ. ಆಧುನೀಕರಣದಿಂದ ಗೌಳಿಗರ ಕೆಳಮಟ್ಟದ ಶಿಕ್ಷಣಕ್ಕನುಗುಣವಾಗಿ ಸ್ಥಾನಿಕವಾಗಿ ಸ್ವಲ್ಪ ಮಟ್ಟಿಗೆ ಬೇರೆ ಉದ್ಯೋಗಗಳಲ್ಲಿ (ಅರಣ್ಯ ಖಾತೆಯಲ್ಲಿ, ಫ್ಯಾಕ್ಟರಿಗಳಲ್ಲಿ) ಅವಕಾಶ ದೊರಕಿದೆಯಾದರೂ ಕೆಲವರಿಗೆ ಮಾತ್ರ, ಬಹುತೇಕ ಕುಟುಂಬಗಳ ಆದಾಯದಲ್ಲಿ ಹೇಳಿಕೊಳ್ಳುವಂತಹ ಹೆಚ್ಚಳವಾಗಿಲ್ಲ. ಆ ಕಾರಣದಿಂದ ಗೌಳಿ ಯುವಕರು ಹೆಚ್ಚಿನ ಕೂಲಿ ಸಿಗುವ ಕೆಲಸ ಹುಡುಕಿಕೊಂಡು ಗೋವಾಕ್ಕೆ ವಲಸೆ ಹೋಗುವ ಪ್ರಕ್ರಿಯೆ ಸಾಮಾನ್ಯವಾಗಿದೆ. ಹಾಗೆ ಗೋವಾಕ್ಕೆ ಹೋದವರು ಮೂಲ ಗೌಳಿವಾಡದಲ್ಲಿಯ ತಮ್ಮ ಕುಟುಂಬದೊಂದಿಗೆ ಸಂಬಂಧ/ಸಂಪರ್ಕವನ್ನು ಹೊಂದಿರುತ್ತಾರೆ. ದುಡ್ಡು ಮಾಡಿಕೊಂಡು ಊರಿಗೆ ಮರಳುತ್ತಾರೆ. ಕುಟುಂಬದೊಂದಿಗೆ ಅಲ್ಲಿಯೇ ನೆಲೆಸುವವರೂ ಇದ್ದಾರೆ.

**ಬದಲಾವಣೆ**[೨೦]

ಹೈನುಗಾರಿಕೆ ಕಡಿಮೆಯಾಗುತ್ತಿದ್ದಂತೆ ನಿತ್ಯ ಜೀವನ ನಿರ್ವಹಣೆಗೆ ಊಳು ಭೂಮಿಯಿಲ್ಲದ ಗೌಳಿಗರು ಗ್ರಾಮೀಣ ಭಾಗದಲ್ಲಿ ಭೂಹಿಡುವಳಿದಾರರ, ಮೇಲ್ಜಾತಿಯವರ ಭೂಮಿಯಲ್ಲಿ ಕೃಷಿ ಕೂಲಿಗಳಾಗಿ ದುಡಿಯಲು ಪ್ರಾರಂಭಿಸಿದರು. ಋತುಮಾನವನ್ನಲಂಬಿಸಿದ ಕೃಷಿ–ಕೂಲಿಯು ವರ್ಷವಿಡೀ ದೊರಕದಿರುವುದರಿಂದ ಭೂರಹಿತ ಕೃಷಿ–ಕೂಲಿಕಾರರು ಇತರ ಕೂಲಿ ಕೆಲಸವನ್ನು ಅರಸಿ ಬೇರೆ ಊರಿಗೆ ಇಲ್ಲವೇ ಸಮೀಪದ ಪಟ್ಟಣ/ನಗರಗಳಿಗೆ ಹೋಗುವುದು ಅನಿವಾರ್ಯವಾಯಿತು. ಮಹಿಳೆಯರು ಕಾಡು, ಹಣ್ಣು–ಹಂಪಲ, ತರಕಾರಿ, ಬೆಣ್ಣೆ, ತುಪ್ಪ, ಮುಂತಾದವುಗಳನ್ನು ಸಮೀಪದ ಪಟ್ಟಣದ ಸಂತೆಗಳಿಗೆ ಹೋಗಿ ಮಾರುವ ರೂಢಿಯಿದೆ. ಅಲ್ಲದೇ ಕಾಲಕ್ರಮೇಣ ಸಾರಿಗೆ ಸಂಪರ್ಕ ವ್ಯವಸ್ಥೆಯು ಸುಧಾರಣೆಯಾಗುತ್ತಿದೆ. ಇವೆಲ್ಲ ಕಾರಣಗಳಿಂದ ಗ್ರಾಮೀಣ ಹಾಗೂ ಪಟ್ಟಣದ ನಾಗರಿಕ ಸಮುದಾಯಗಳ ಜೊತೆ ಸಂಪರ್ಕ ಹೆಚ್ಚಾಗಿ, ಮುಖಾಮುಖಿಯಾಗಿ ನಾಗರಿಕ ಸಂಸ್ಕೃತಿಯ ಪ್ರಭಾವವು ಇವರ ಮೇಲೆ ನಿಚ್ಚಳವಾಗಿದೆಯೆಂದು ಹೇಳಬಹುದು.

ಹೀಗೆ ಆಧುನಿಕ ಸಂಸ್ಕೃತಿಯ ಪ್ರಭಾವಕ್ಕೊಳಗಾಗಿ ಗೌಳಿಗರಿಗೂ ಇಂದು ಆಧುನಿಕತೆಯ ಗಾಳಿ ಸೋಂಕಿದೆ. ಪಟ್ಟಣ/ನಗರಗಳಿಗೆ ಕೆಲಸಕ್ಕೆ ಹೋಗುವ ಗೌಳಿಗರು, ನಗರ ಜೀವನದ ಪ್ರಭಾವಕ್ಕೊಳಗಾಗಿದ್ದಾರೆ. ಹೊಟೇಲ ಊಟ ರೂಢಿ ಮಾಡಿಕೊಂಡಿದ್ದಾರೆ. ದುಡಿಯುವ ಯುವಕರು, ಶಿಕ್ಷಿತ ಕಾಲೇಜ ಯುವಕರು ಮೋಟರ ಬೈಕ್, ಮೊಬೈಲ್ ಹೊಂದಿದ್ದಾರೆ. ಗೌಳಿಗರು ತಮ್ಮ ಮಕ್ಕಳನ್ನು ತಪ್ಪದೇ ಶಾಲೆಗೆ ಕಳಿಸುವುದು ಸುರುವಾಗಿದೆ. ಹೆಣ್ಣು ಹುಡುಗರನ್ನು ಶಾಲೆಗೆ ಕಳಿಸುವುದು ಸುರುವಾದಂದಿನಿಂದೀಚೆಗೆ ಹೆಣ್ಣು ಹುಡುಗರು ಮೊದಲಿನಂತೆ ಮನೆ ಮನೆಗೆ ಹೋಗಿ ಹಾಲು ಹಾಗೂ ಹಾಲಿನ ಉತ್ಪನ್ನಗಳನ್ನು ಮಾರಲು ಒಪ್ಪುತ್ತಿಲ್ಲ. ಹಿಂದು ಮುಂದು ನೋಡುತ್ತಿದ್ದಾರೆ.

ಇಂದಿನ ಸ್ಕೂಲ, ಕಾಲೇಜಿಗೆ ಹೋಗುವ ಯುವಕ-ಯುವತಿಯರಲ್ಲಿ ನಾಗರಿಕ ಸುಖ ಜೀವನವೆಂಬ ಭ್ರಮೆಯಲ್ಲಿ ಪಾರಂಪರಿಕ ವೃತ್ತಿಯ ಬಗ್ಗೆ ತಾತ್ಸಾರ ಭಾವನೆ, ಕೀಳರಿಮೆ ಮೂಡುತ್ತಿದೆ. ಯುವಕ-ಯುವತಿಯರಲ್ಲಿ ಪಶುಪಾಲನೆ ಅಥವಾ ಪಾರಂಪರಿಕ ವೃತ್ತಿಯ ಬಗ್ಗೆ ವಿಚಾರಿಸಿದರೆ ಉದಾಸೀನದ ಮಾತುಗಳು ಕೇಳಿಬರುತ್ತಿವೆ.

ಪಾರಂಪರಿಕ ವೃತ್ತಿಯನ್ನು ಇಷ್ಟಪಡದೇ ಆಧುನಿಕ ಉದ್ಯೋಗ, ವ್ಯಾಪಾರಗಳನ್ನು ಮಾಡುತ್ತ ತಾವೂ ಕೂಡ ಮೇಲ್ವರ್ಗದವರಂತೆ ಮುಂದು ಬರಬೇಕೆಂಬ ಸ್ಪರ್ಧಾ ಮನೋಭಾವನೆ ಬೆಳೆಯುತ್ತಿದೆ. ಸೋತು ಹೋದ ಮೂಲವೃತ್ತಿಯನ್ನೇ ಮುಂದುವರೆಸಿ, ಬಡತನ, ಆರ್ಥಿಕ ಹಿನ್ನಡೆ, ಕನಿಷ್ಠ ಸೌಲಭ್ಯ ಹೊಂದದ ಜೀವನ, ಸಾಮಾಜಿಕ ಕೀಳರಿಮೆ ಹೊಂದುವ ಬದಲು ವಿದ್ಯೆ ಕಲಿತು, ಆಧುನಿಕ ಹೊಸ ಉದ್ಯೋಗಗಳಲ್ಲಿ ತೊಡಗಿ ಆರ್ಥಿಕ ಆದಾಯ ಹೆಚ್ಚಿಸಿಕೊಂಡು ಸಮಾಜದಲ್ಲಿ ಉತ್ತಮ ಸ್ಥಾನಮಾನ ಪಡೆಯಬೇಕೆಂಬ ಅಪೇಕ್ಷೆ ಇವರು ಹೊಂದಿದ್ದಾರೆ.

ಈ ಹಿಂದೆ ಒಂದೊಂದು ಅವಿಭಕ್ತ ಕುಟುಂಬಗಳಲ್ಲಿ ೫೦ ರಿಂದ ೧೦೦ ದನಕರುಗಳು ಇರುತ್ತಿದ್ದು ಪಶುಸಂಗೋಪನೆ, ಹೈನುಗಾರಿಕೆಯೇ ಮೂಲ ಕುಲಕಸುಬಾಗಿತ್ತು. ಈಗ ವಿಭಕ್ತ ಕುಟುಂಬಗಳೇ ಹೆಚ್ಚಿದ್ದು, ಒಂದೊಂದು ಕುಟುಂಬದಲ್ಲಿ ೨-೧೦ ದನಕರುಗಳು ಕಾಣಸಿಗುತ್ತವೆ. ಒಂದೊಂದು ವಿಭಕ್ತ ಕುಟುಂಬಗಳು ದನಕರುಗಳನ್ನೇ ಹೊಂದಿಲ್ಲ. ಕುಲಕಸುಬಾದ ಹೈನುಗಾರಿಕೆ ಕ್ರಮೇಣವಾಗಿ ಮಾಯವಾಗುತ್ತಿದೆ.

ಈಗೀಗ ಸಮಯಕ್ಕೆ ಸರಿಯಾಗಿ ಮಳೆಯಾಗದೇ ಇದ್ದ ಅಲ್ಪ ಭೂಮಿಯಲ್ಲಿದ್ದ ಬೆಳೆ ಹಾನಿಯಾಗಿ ಆರ್ಥಿಕ ಸಂಕಷ್ಟ ಹೆಚ್ಚಾಗಿ, ಬೇರೆ ವೃತ್ತಿ ಮಾಡಲು ಬಂಡವಾಳವಿಲ್ಲದೇ ಆರ್ಥಿಕ ವ್ಯವಸ್ಥೆಯಲ್ಲಿ ಅಸ್ಥಿರತೆ ಉಂಟಾಗಿ ಜೀವನ ಕ್ರಮದಲ್ಲಿ ಏರುಪೇರುಗಳು ಉಂಟಾಗುತ್ತಿವೆ. ಇದರಿಂದ ಹೊಸ ತಲೆಮಾರಿನ ಜನ ವಿಶೇಷವಾಗಿ ಯುವಕರು ಕೃಷಿಯಿಂದ ಯಾವ ಲಾಭವೂ ಇಲ್ಲ ಎನ್ನುವ ಭಾವನೆಯನ್ನು ತಳೆಯುತ್ತಿದ್ದಾರೆ.

ಹೊಸ ಹೊಸ ಉದ್ಯೋಗವಕಾಶಗಳು ಸಮುದಾಯದ ಆರ್ಥಿಕ ಬದಲಾವಣೆಯನ್ನು ಮಾಡುತ್ತಿರುವುದು ಗಮನಾರ್ಹ ಸಂಗತಿ.

**೫.೩.೪ ಬದಲಾಗುತ್ತಿರುವ ಆರ್ಥಿಕ ಸ್ಥಿತಿಗತಿ**

ಆಧುನೀಕರಣಗೊಂಡ ಇಂದಿನ ಸಮಾಜದಲ್ಲಿ ಆರ್ಥಿಕತೆಗೆ ಹೆಚ್ಚಿನ ಪ್ರಾಧಾನ್ಯತೆಯನ್ನು ನೀಡಲಾಗುತ್ತಿದೆ. ಯಾಕೆಂದರೆ ಯಾವುದೇ ಒಬ್ಬ ವ್ಯಕ್ತಿ ಅಥವಾ ಸಮುದಾಯದ ಸಾಮಾಜಿಕ ಸ್ಥಾನಮಾನಗಳನ್ನು ನಿರ್ಧರಿಸುವಲ್ಲಿ ಆರ್ಥಿಕ ಚಟುವಟಿಕೆಗಳು ಮುಖ್ಯ ಪಾತ್ರ ವಹಿಸುತ್ತವೆ. ಗೌಳಿ ಸಮುದಾಯವು ಆರ್ಥಿಕವಾಗಿ ಅನೇಕ ಸಮಸ್ಯೆಗಳನ್ನು ಇಟ್ಟುಕೊಂಡು ತನ್ನ ಒಡಲಿನಲ್ಲಿಯೇ ಆರ್ಥಿಕ ಸ್ಥಿತ್ಯಂತರಕ್ಕೆ ಒಳಗಾಗುತ್ತಿದೆ. ಬದಲಾದ ಸಾಮಾಜಿಕ/ಆರ್ಥಿಕ ಪರಿಸರ ಹಾಗೂ ಕೈಗಾರಿಕೀರಣದ ಪರಿಣಾಮದಿಂದಾಗಿ ಅನೇಕರು ಕುಲಕಸುಬು ವೃತ್ತಿಗಳ ಬದಲಾವಣೆಯೊಂದಿಗೆ ತಮ್ಮ ಆರ್ಥಿಕ ಜೀವನ

ಕ್ರಮವನ್ನು ಬದಲಾಯಿಸುತ್ತಿದ್ದಾರೆ. ಈ ಜನರ ಆರ್ಥಿಕ ವ್ಯವಸ್ಥೆಯ ಗುಣಾತ್ಮಕ ಹಾಗೂ ಪರಿಮಾಣಾತ್ಮಕ ಮುಖಗಳನ್ನು ಗುರುತಿಸಲು ಈ ಕೆಳಗೆ ಕಾಣಿಸಿದ ನಾಲ್ಕು ಅಂಶಗಳ ಅವಲೋಕನ ಅವಶ್ಯ.[೨೧]

೧. ಜೀವನೋಪಾಯದ ಮೂಲಗಳು

೨. ಆರ್ಥಿಕ ಚಟುವಟಿಕೆಗಳಲ್ಲಿ ಕೆಲಸದ ವಿಂಗಡನೆ

೩. ಪರಂಪರಾಗತ ವೃತ್ತಿಗಳು ಮತ್ತು ಅವಲಂಬಿಸಿದ ಹೊಸ ವೃತ್ತಿಗಳು

೪. ಆರ್ಥಿಕ ಚಟುವಟಿಕೆಯ ಮೇಲೆ ಜಡತನದ ಪ್ರಭಾವ.

ಸಾಕಷ್ಟು ಮೂಲ ಸ್ವರೂಪದಲ್ಲೇ ತಮ್ಮ ಸಾಂಸ್ಕೃತಿಕ ವಿಶಿಷ್ಟತೆಯನ್ನು ಕಾಯ್ದುಕೊಂಡು ಬಂದಿರುವ ಗೌಳಿಗರ ಕುಲಕಸುಬಾದ ಹೈನುಗಾರಿಕೆಯು ಸಾಂಪ್ರದಾಯಿಕ ವೃತ್ತಿ. ಬದಲಾದ ಪರಿಸರ, ಅರಣ್ಯ ನಾಶ ಹಾಗೂ ಕೈಗಾರಿಕೀಕರಣದಿಂದ ಪಾರಂಪರಿಕ ಕುಲಕಸುಬು ಇಲ್ಲವಾಗುತ್ತ ಕುಟುಂಬ ನಿರ್ವಹಣೆಗೆ ಕಂಡುಕೊಂಡ ಪರ್ಯಾಯ ವ್ಯವಸ್ಥೆಗಳಲ್ಲಿ ಕೃಷಿಯಲ್ಲದೇ ಕೃಷಿಕೂಲಿಯೂ ಮುಖ್ಯವಾಗಿದೆ ಹಾಗೂ ಮಹತ್ವವಾದ ಆರ್ಥಿಕ ಚಟುವಟಿಕೆಯಾಗಿದೆ. ಕೂಲಿಯು ಅವರ ಆರ್ಥಿಕ ಸ್ಥಿತಿಗತಿಯ ಜೊತೆಗೆ ಸಾಮಾಜಿಕ ಜೀವನ ವಿಧಾನವನ್ನು ಸಹ ತೋರಿಸುತ್ತದೆ. ಇವರು ಅನುಸರಿಸುವ ವೃತ್ತಿಗಳಲ್ಲಿ ಸಾಕಷ್ಟು ವ್ಯತ್ಯಾಸ ಹಾಗೂ ಬದಲಾವಣೆಯಾಗಿ, ಗೌಳಿಗರು ಆರ್ಥಿಕ ಬದಲಾವಣೆಗೆ ಒಳಗಾಗಿದ್ದಾರೆ. ಇಂದು ಜೀವನ ನಿರ್ವಹಣೆಗಾಗಿ ಇವರು ಹಲವು ಕಸುಬುಗಳನ್ನು ಅಂದರೆ ಕುಲಕಸುಬಲ್ಲದೆ ಕೃಷಿ, ಕೃಷಿಕೂಲಿ ಇತರ ಕೂಲಿ ಕೆಲಸ, ಚಿಕ್ಕಪುಟ್ಟ ವ್ಯಾಪಾರಗಳನ್ನು ಅವಲಂಬಿಸಿದ್ದಾರೆ. ಈ ಎಲ್ಲ ಕಸುಬಗಳ ಪಾತ್ರ ಆರ್ಥಿಕ ಸುಧಾರಣೆಯಲ್ಲಿ ಹಿರಿದಾಗಿದೆ. ಈಗಿನ ಗೌಳಿ ಕುಟುಂಬಗಳನ್ನು ಗಮನಿಸಿದರೆ ಅವರು ಒಂದೇ ವಿಶಿಷ್ಟ ವೃತ್ತಿಯನ್ನು ಅವಲಂಬಿಸದೇ ಕೃಷಿ, ಕೃಷಿಕೂಲಿ, ಹೈನುಗಾರಿಕೆ ಹಾಗೂ ಇತರ ಉದ್ಯೋಗಗಳಲ್ಲಿ ಒಂದಕ್ಕಿಂತ ಹೆಚ್ಚು ವೃತ್ತಿಗಳಲ್ಲಿ ತೊಡಗಿಸಿಕೊಂಡಿರುವುದು ಕಂಡು ಬರುತ್ತದೆ. ಆದರೆ ಕೆಳಮಟ್ಟದ ಸಾಕ್ಷರತೆ/ಶಿಕ್ಷಣ ಹಾಗೂ ವೃತ್ತಿ ಕೌಶಲ್ಯದ ಕೊರತೆ ಅವರನ್ನು ಕೆಳಮಟ್ಟದ ಕಡಿಮೆ ಸಂಭಾವನೆ ತರುವಂತಹ ಕೆಲಸಗಳಿಗೆ ತಳ್ಳುತ್ತವೆ. ಶಿಕ್ಷಣದ ಕೊರತೆಯು ಇವರು ಸರಕಾರಿ ಉದ್ಯೋಗಗಳನ್ನು ಪಡೆಯಲು ಮುಖ್ಯ ಅಡತಡೆಯಾಗಿದೆ. ಒಂದು ಅಂದಾಜಿನ ಪ್ರಕಾರ ಕೇವಲ ೪೭ ಜನ ಗೌಳಿಗರು ಮಾತ್ರ ಸರಕಾರಿ ಉದ್ಯೋಗಗಳಲ್ಲಿದ್ದಾರೆ. ಬದಲಾದ ಪರಿಸ್ಥಿತಿಯಲ್ಲಿ ಕಾಡಿನಲ್ಲಿ ಕೆಲಸವಿಲ್ಲ. ಹತ್ತಿರದಲ್ಲಿ ಬೇಕಾದ ಉದ್ಯೋಗ ಮಾರ್ಗವಿಲ್ಲ. ಗಂಡಸರು ಉದ್ಯೋಗವನ್ನು ಹುಡುಕಿಕೊಂಡು ದೂರದ ಊರಿಗೆ ಹೋಗುತ್ತಾರೆ. ಕೆಲವೊಮ್ಮೆ ಇಡೀ ಕುಟುಂಬವೇ ವಲಸೆ ಹೋಗುತ್ತದೆ. ವೃದ್ಧ ತಂದೆ-ತಾಯಿ ಹಾಗೂ ಮಕ್ಕಳನ್ನು ಹಿಂದೆ ಬಿಟ್ಟು ಗಂಡ-ಹೆಂಡತಿ ದುಡಿಯಲು ಗೋವಾಕ್ಕೆ ವಲಸೆ ಹೋದಾಗ, ವೃದ್ಧರು ತಮ್ಮನ್ನು ತಾವು ನೋಡಿಕೊಳ್ಳಲಾಗದೆ ಮಕ್ಕಳನ್ನೂ ನೋಡಿಕೊಳ್ಳಲಾಗದೇ ಬಹುಕಷ್ಟ ಅನುಭವಿಸಿದ ಉದಾಹರಣೆ ಉಂಟು. ಲಿಂಗಬೇಧವಿಲ್ಲದೇ ಸ್ತ್ರೀ-ಪುರುಷರು ಒಟ್ಟಿಗೆ ದುಡಿಯುತ್ತಾರೆ. ಗೌಳಿಗರ ಆರ್ಥಿಕ ವ್ಯವಸ್ಥೆಯಲ್ಲಿ ಮಹಿಳೆಯರ ಪಾತ್ರ ಪ್ರಧಾನವಾಗಿದೆ. ಮಹಿಳೆಯರು ದುಡಿಮೆಯಲ್ಲಿ ಪುರುಷರಿಗಿಂತ ಕಡಿಮೆಯಿಲ್ಲ. ಆರ್ಥಿಕ ಅಂಶಗಳಿಗೆ ಸಂಬಂಧಿಸಿದಂತೆ ಗೌಳಿ ಮಹಿಳೆಯರದು ಗಮನಾರ್ಹ ಕೊಡುಗೆ (೫೨.೮%). ಹೆಣ್ಣು ಮನೆ ಕೆಲಸವಲ್ಲದೇ ಕುಲಕಸುಬಾದ ಪಶುಪಾಲನೆ, ಹೈನುಗಾರಿಕೆ, ಕೋಳಿ ಸಾಕಾಣೆಯ ಜೊತೆಗೆ ಕೃಷಿ ಇಲ್ಲವೆ ಕೃಷಿಕೂಲಿ ಕೆಲಸದಲ್ಲೂ ದುಡಿಯುತ್ತ ಬಿಡುವಿನ ವೇಳೆಯ ಸಂದರ್ಭದಲ್ಲಿ

ಋತುಮಾನಕ್ಕೆ ಅನುಗುಣವಾಗಿ ದೊರೆಯುವ ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸಿ ಕುಟುಂಬಕ್ಕೆ ಬೇಕಾದಷ್ಟು ಇಟ್ಟುಕೊಂಡು ಉಳಿದವುಗಳನ್ನು ಪಟ್ಟಣ ಸಂತೆಗೆ ಹೋಗಿ ಮಾರುತ್ತಾಳೆ. ಬಂದ ಹಣದಿಂದ ಮನೆಗೆ ಬೇಕಾದ ಸಾಮಾನುಗಳನ್ನು ಕೊಂಡು ತರುತ್ತಾಳೆ. ದನಗಳ ಸೆಗಣಿಗೊಬ್ಬರ ಹಾಗೂ ಹಿತ್ತಲಲ್ಲಿಯ ಬಾಳೆ ಮಾರಿಕೆಯು ಮಹಿಳೆಯ ಜವಾಬ್ದಾರಿಯೆ. ಇಷ್ಟೇ ಅಲ್ಲದೆ ಶಿಶುಮಕ್ಕಳ ಪಾಲನೆ, ವೃದ್ಧರ ಪಾಲನೆಯೂ ಮಹಿಳೆಯ ಪಾಲೇ. ಹೀಗೆ ಮಹಿಳೆಯರದು ಪುರಸೊತ್ತಿಲ್ಲದ ಕೆಲಸ. ಸ್ತ್ರೀ ಶಕ್ತಿ ಸಂಘ, ಸ್ವ-ಸಹಾಯ ಗುಂಪು (SHG) ಇವುಗಳಿಂದ ಮಹಿಳೆಯರಲ್ಲಿ ಆರ್ಥಿಕ ಸ್ವಾತಂತ್ರ್ಯ ಹಾಗೂ ಬದಲಾವಣೆ ಕಂಡು ಬರುತ್ತಿದೆ. ಪಶುಪಾಲನೆಗೆ ಉತ್ತೇಜನ ನೀಡಲು ಅಮೃತ ಯೋಜನೆಯು ಬಂದಿದೆ. ಅನುದಾನವಾಗಿ ರೂ. ೨೬೨೫೦/- ಪಡೆಯಬಹುದು. ಉಳಿದ ೮೭೫೦/- ರೂಪಾಯಿಗಳನ್ನು ಬ್ಯಾಂಕಿನಿಂದ ಸಾಲ ಪಡೆಯಬಹುದು. ೧೮-೬೦ ವಯಸ್ಸಿನವರೆಗೆ ಈ ಅವಕಾಶವಿರುವುದರಿಂದ ಗೌಳಿ ಮಹಿಳೆಯರು ಇದರ ಫಲಾನುಭವವನ್ನು ಪಡೆದುಕೊಂಡಿದ್ದಾರೆ.

ಯಲ್ಲಾಪೂರ, ಹಳಿಯಾಳ, ಮುಂಡಗೋಡ ಭಾಗದ ಗೌಳಿಗರು ಕೃಷಿ ಉತ್ಪನ್ನಗಳ ಮೇಲೆ ಅವಲಂಬಿತರಾಗಿದ್ದಾರೆ. ಕೃಷಿ ಉತ್ಪನ್ನಗಳನ್ನು ಸಹಕಾರಿ ಸಂಘಗಳಿಗೆ ಹಾಕುವುದರ ಮೂಲಕ ಸಾಲವನ್ನು ಪಡೆಯುತ್ತಾರೆ. ಭತ್ತ, ಹತ್ತಿ ಬೆಳೆಗಳ ಮಾರಾಟಕ್ಕೆ ಸಹಕಾರಿ ಸಂಘಗಳು ಸಹಾಯವಾಗಿವೆ. ಇವು ಮಧ್ಯವರ್ತಿಗಳ ಹಾವಳಿಯನ್ನು ತಪ್ಪಿಸಿವೆ. ಕಿರವತ್ತಿಯಲ್ಲಿ ಗೌಳಿ ಉನ್ನತಿ ಎಂಬ ಸಂಘ ೧೯೯೭ ರಲ್ಲೇ ಪ್ರಾರಂಭವಾಗಿದೆ. ವೈಯಕ್ತಿಕವಾಗಿ ಸಂಘದಲ್ಲಿ ೫೦,೦೦೦/- ರಿಂದ ೨ ಲಕ್ಷ ರೂಪಾಯಿವರೆಗೆ ಸಾಲ ನೀಡುತ್ತಾರೆ.

ಇಷ್ಟಾದರೂ ಇವರ ಆರ್ಥಿಕ ಚಟುವಟಿಕೆಗಳು ಜಡತನದಿಂದ ನರಳುತ್ತಿವೆ ಎಂದೇ ಹೇಳಬೇಕಾಗಿದೆ.

೧. ಕಾಡಿನಲ್ಲೇ ನೆಲೆಸಿರುವ ಈ ಜನ ಮೂಲಸ್ಥಾನದಿಂದ ಕದಲದೇ ಜೀವನ ನಡೆಸಬಯಸುವುದು.
೨. ಕಾಡಿನ ಸಂಪನ್ಮೂಲಗಳನ್ನು ಖಾಸಗಿಯವರಿಗೆ ಮಾರುವುದು.
೩. ಕೃಷಿ ಕಾರ್ಮಿಕರಾಗಿ ಗ್ರಾಮೀಣ ಪ್ರದೇಶಗಳಿಗೆ/ಪಟ್ಟಣಗಳಿಗೆ ಹೋದವರು ದುಶ್ಚಟಗಳಿಗೆ ಬಲಿಯಾಗಿ ಸಾಲದಲ್ಲಿ ಮುಳುಗುವುದು.
೪. ಹೊಸ ಆರ್ಥಿಕ ಚಟುವಟಿಕೆಗಳಲ್ಲಿ ಹೆಚ್ಚಿನ ಆಸಕ್ತಿ ಹೊಂದಿಲ್ಲದಿರುವುದು.[೨]

ಬದಲಾದ ಪರಿಸ್ಥಿತಿಯಲ್ಲಿ ಜೀವನ ಶೈಲಿಯೂ ಬದಲಾಗುತ್ತಿದೆ. ಚಹಾ ಜನಪ್ರಿಯವಾಗಿದೆ. ರಸ್ತೆ ಬದಿ ಚಹಾ ಅಂಗಡಿಗಳನ್ನು ತೆರೆದಿರುವ ನಿದರ್ಶನಗಳೂ ಇವೆ. ಮೊದಲಿನಂತೆ ಈಗ ಯಾವ ಬುಡಕಟ್ಟುಗಳೂ ಕಾಡಿನ ಯಜಮಾನ್ಯವನ್ನು ಉಳಿಸಿಕೊಂಡಿಲ್ಲ. ಅವರ ಹಕ್ಕುಗಳನ್ನು ಮಿತಿಗೊಳಪಡಿಸಲಾಗಿದೆ. ಹೀಗಾಗಿ ಗೌಳಿ ಸಮುದಾಯದವರು ಈಗೀಗ ಸಂಪೂರ್ಣವಾಗಿ ಕಾಡನ್ನೇ ಅವಲಂಬಿಸಿ ಬದುಕು ನಡೆಸುತ್ತಿಲ್ಲ. ಕಾಡಿನ ನಾಶ ಹಾಗೂ ಅರಣ್ಯ ನೀತಿ/ಕಾನೂನುಗಳಿಂದ ಹೇರಲ್ಪಟ್ಟ ನಿರ್ಬಂಧಗಳೇ ಕಾರಣ. ಬದಲಾದ ಆರ್ಥಿಕ ವ್ಯವಸ್ಥೆಯಿಂದಾಗಿ ಕೆಲವರು ಮಾತ್ರ ಸಣ್ಣ ಹಿಡುವಳಿದಾರರಾಗಿ ಮತ್ತು ಬಹುತೇಕ ಗೌಳಿಗರು ಕೃಷಿ ಕಾರ್ಮಿಕರಾಗಿ ಪರಿವರ್ತನೆ ಹೊಂದಿದ್ದಾರೆ. ಕೃಷಿ/ಬೇಸಾಯದ

ಋತುಗಳಲ್ಲಿ ಕೃಷಿ ಕಾರ್ಮಿಕರು ತಮ್ಮ ಸುತ್ತಮುತ್ತಲಿನ ಗ್ರಾಮೀಣ ಪ್ರದೇಶದ ಗ್ರಾಮಗಳಿಗೆ ಕೃಷಿಕೂಲಿ ಕೆಲಸಕ್ಕೆ ಹೋಗುವುದು ರೂಢಿಯಾಗಿದೆ. ದಿನಗೂಲಿಯಂತೆ ಅಥವಾ ತಿಂಗಳ ಸಂಬಳ ಗೊತ್ತುಮಾಡಿಕೊಂಡು ನಾಲ್ಕೈದು ತಿಂಗಳು ಕಾಲ (ನಾಟಿಯಿಂದ ಹಿಡಿದು ಕೊಯ್ಲುವರೆಗೆ) ದುಡಿದು ಹಣ ಸಂಪಾದಿಸುತ್ತಾರೆ. ಬೇಸಾಯದ ಋತುವಿನಲ್ಲಿ ನಡೆಯುವ ಈ ವಲಸೆಯಲ್ಲಿ ಸಾಲದ ಸೌಲಭ್ಯವೂ ಇರುತ್ತದೆ. ಇದು ಸ್ಥಳೀಯ ನಾಗರಿಕ ಸಮುದಾಯದವರೊಡನೆ ನಿರಂತರ ಸಂಪರ್ಕ ಸಾಧನೆಗೆ ಅವಕಾಶ ಕಲ್ಪಿಸಿದೆ. ಅಲ್ಪ ಮಟ್ಟಿಗೆ ಕೈಗಾರಿಕೀರಣದ ಸುಳಿಗೆ ಸಿಕ್ಕಿ ಹಾಕಿಕೊಂಡಿರುವ ಇವರು ಪರಿವರ್ತನೆಗೆ ಗುರಿಯಾಗಿದ್ದಾರೆ. ಕೈಗಾರಿಕಾ ನೀತಿಯು ಬಾಂಧವ್ಯ ವಿಸ್ತರಣೆಗೆ ಅವಕಾಶ ಮಾಡಿಕೊಟ್ಟಿದೆ. ಕೈಗಾರಿಕಾ ಕ್ಷೇತ್ರದ ಪ್ರಭಾವದಿಂದಾಗಿ ಗುಂಪು ಅನನ್ಯತೆಯ ವಿಸ್ತರಣಾ ಪ್ರವೃತ್ತಿಗಳೂ ಕಾಣಿಸಿಕೊಳ್ಳುತ್ತಿವೆಯೆನ್ನಬಹುದು. ನಗರೀಕರಣ, ಕೈಗಾರಿಕೀಕರಣಗಳು ಜೊತೆಗೆ ಸಮಸ್ಯೆಗಳನ್ನೂ ಹುಟ್ಟಿಸಿವೆ. ಕುಡಿತ ಹಾಗೂ ಕೈ ಹಿಡಿತ ಇಲ್ಲದೆ ಭರಿಸುವ ವೆಚ್ಚದಿಂದಾಗಿ ಈ ಜನ ಸಾಲದಲ್ಲಿ ಮುಳುಗಿ ಹೋಗುವ ಭಯದ ಆತಂಕ. ಸಾಲ ನೀಡುವವರನ್ನು ನಿಯಂತ್ರಿಸುವ ಶಾಸನಗಳು ಬರದ ಹೊರತು ವಿಮುಕ್ತಿ ಆಗದ ಕೆಲಸ. ಸಾಲ ನೀಡಿಕೆಗಾಗಿ ಬುಡಕಟ್ಟು ಸಹಕಾರಿ ಸಂಘಗಳನ್ನು ಬಲಪಡಿಸುವ ಅಗತ್ಯ ಬಹಳವಿದೆ.

ಸಾರಿಗೆ ಸಂಪರ್ಕ, ಶಿಕ್ಷಣ ಮತ್ತು ವೈದ್ಯಕೀಯ ಸೌಲಭ್ಯ ಒದಗಿಸುವ ವಿಷಯದಲ್ಲಿ ಸಾಕಷ್ಟು ಸುಧಾರಣೆ ಕಂಡುಬಂದಿದೆ. ಬಹುತೇಕ ಎಲ್ಲ ಮುಖ್ಯ ನೆಲೆಗಳಲ್ಲಿ ಕಿರಿಯ ಪ್ರಾಥಮಿಕ ಶಾಲೆ ಹಾಗೂ ಅಂಗನವಾಡಿಗಳಿವೆ. ಸರಕಾರಿ ಯೋಜನೆಗಳ ಧನ ಸಹಾಯದಿಂದ ಬಹುತೇಕ ಮನೆಗಳು ಹಂಚಿನ ಮನೆಗಳಾಗಿವೆ. ಆಶ್ರಯ ಮನೆಗಳು ಬಾಗಿಲು ಕಿಡಕಿಗಳನ್ನು ಹೊಂದಿವೆ. ಸುಮಾರು ಅರ್ಧಕ್ಕಿಂತಲೂ ಹೆಚ್ಚಿನ ಮನೆಗಳು ಶೌಚಾಲಯಗಳನ್ನು ಹೊಂದಿವೆ. ಸುಮಾರು ಮುಕ್ಕಾಲು ಮನೆಗಳು ಭಾಗ್ಯ ಜ್ಯೋತಿ ವಿದ್ಯುದೀಕರಣಕ್ಕೊಳಗಾಗಿವೆ. ದಟ್ಟಕಾಡಿನ ಅತೀ ಒಳಗಿದ್ದ ನೆಲೆಗಳಿಗೆ ಸಾರಿಗೆ ಸಂಪರ್ಕ ಇನ್ನೂ ಕಲ್ಪಿಸ ಬೇಕಾಗಿದೆ. ಅಂಥ ಕಡೆಗಳಲ್ಲಿ ಕಾಲ್ನಡಿಗೆಯಲ್ಲೇ ನಡೆದು ಹೋಗುತ್ತಾರೆ. ಬಹುತೇಕ ಗೌಳಿ ಕುಟುಂಬಗಳು ಸೈಕಲ್‌ಗಳನ್ನು ಹೊಂದಿದ್ದರಿಂದ ಹೆಚ್ಚಿನ ವೆಚ್ಚವಿಲ್ಲದೆ ಸಮುದಾಯದ ಇತರರ ಸಂಪರ್ಕ ಸುಲಭ ಸಾಧ್ಯವಾಗಿದೆ. ಅಲ್ಪ ಸ್ಥಿತಿವಂತ ಯುವಕರು, ಮೋಟಾರ್ ಬೈಕಗಳನ್ನೂ ಹೊಂದಿದ್ದಾರೆ. ಸುಮಾರು ಅರ್ಧದಷ್ಟು ಕುಟುಂಬಗಳು ರೇಡಿಯೋ, ಮೊಬೈಲ್ ಫೋನ್ ಹೊಂದಿರುವುದನ್ನು ಕಾಣಬಹುದು. ಕೆಲವು ಮನೆಗಳಲ್ಲಿ ಟಿ.ವ್ಹಿ.ಗಳನ್ನು ಕಾಣಬಹುದು. ಇವೆಲ್ಲ ಸಂಪರ್ಕ ಸಮೂಹದ ಮಾಧ್ಯಮಗಳು ಸಾಮಾಜಿಕ ಬದಲಾವಣೆಯ ಸುಲಭ ಸಾಧನಕ್ಕೆ ಪೂರಕವಾಗಿದೆಯೆನ್ನಬಹುದು. ಇತ್ತೀಚಿಗೆ ಗೌಳಿ ಸಮುದಾಯದ ಯುವಕ-ಯುವತಿಯರು, ಮಹಿಳೆಯರು ಹಾಗೂ ಮಕ್ಕಳು ಆಧುನೀಕರಣದ ಸೆಳೆತಕ್ಕೆ ಹೆಚ್ಚು ಹೆಚ್ಚು ಒಳಗಾಗುತ್ತಿದ್ದಾರೆ. ಅವರು ಧರಿಸುವ ಉಡುಪು, ಆಭರಣ ಹಾಗೂ ಬಳಸುವ ಸೌಂದರ್ಯ ಪ್ರಸಾದನ ಸಾಮಗ್ರಿಗಳಲ್ಲಿ ಇದನ್ನು ನಾವು ಕಾಣಬಹುದು. ಮನೆಯಲ್ಲಿ ಮಣ್ಣಿನ ಮಡಿಕೆ, ಗಡಿಗೆಗಳು ಮಾಯವಾಗಿ ಅಲ್ಯೂಮಿನಿಯಂ, ಸ್ಟೀಲ್‌ಪಾತ್ರೆ, ಪ್ಲಾಸ್ಟಿಕ್ ಬಕೆಟ್, ಕೊಡಗಳನ್ನು ಕಾಣಬಹುದು. ಸಹಕಾರಿ ಸಂಘ ಹಾಗೂ ಬ್ಯಾಂಕುಗಳಿಂದ ಸಾಲ ಸೌಲಭ್ಯ ಹೆಚ್ಚಾಗಿ, ಖಾಸಗಿ ಭೂ ಹಿಡುವಳಿದಾರರು, ಜಮೀನುದಾರರು ಹೆಚ್ಚಿನ ಬಡ್ಡಿಗೆ ಸಾಲಕೊಟ್ಟು ಶೋಷಣೆ ಮಾಡುವುದು ಕಡಿಮೆಯಾಗಿದೆ. ವೃತ್ತಿ

ಪಲ್ಲಟನೆಯಿಂದ ಆರ್ಥಿಕ ಸುಧಾರಣೆಯಾಗಿದೆ. ಆದರೆ ಗೌಳಿ ಸಮುದಾಯದ ಹಿರಿಯರು ಹೇಳುವ ಪ್ರಕಾರ ದುಡ್ಡು ಹೆಚ್ಚಾಗಿ ಜನರು ಸ್ವಾರ್ಥಿಗಳಾಗುತ್ತಿದ್ದಾರೆ; ಮೌಲ್ಯ ಕುಸಿಯುತ್ತಿದೆ.

**೫.೪ ಶೈಕ್ಷಣಿಕ ಪರಿವರ್ತನೆ**

ಶಿಕ್ಷಣ ಎಂದರೆ ಜೀವನ ನಿರ್ವಹಣಾ ತರಬೇತಿ ಎಂಬ ಅರ್ಥವಿದೆ. ಜೊತೆಗೆ ಅನುಭವವನ್ನು ಪಡೆಯುವುದು, ಅವಶ್ಯವಿರುವ ಕೌಶಲ್ಯಗಳನ್ನು ಕಲಿತುಕೊಳ್ಳುವುದು ಎಂದು ಪರಿಭಾವಿಸಬಹುದಾಗಿದೆ. ಶಿಕ್ಷಣವು ಅಂತರಂಗದೊಳಗಿರುವ ಸಕಲ ಸಾಮರ್ಥ್ಯಗಳನ್ನು ವಿಕಸಿತಗೊಳಿಸಿರುವ ವಿಧಾನವಾಗಿದೆ. ಶಿಕ್ಷಣವು ವ್ಯಕ್ತಿಯ ವ್ಯಕ್ತಿತ್ವದ ವಿವಿಧ ಮುಖಗಳನ್ನು ಬೆಳೆಸುವ ಮತ್ತು ಪ್ರೌಢಗೊಳಿಸುವ ಶಕ್ತಿಯಾಗಿದೆ. ಕುಟುಂಬದ, ಗ್ರಾಮದ, ರಾಜ್ಯದ ಮತ್ತು ದೇಶದ ಅಭಿವೃದ್ಧಿಯ ಬುನಾದಿಯಾಗಿದೆ. ಆತ್ಮ ಸಾಕ್ಷಾತ್ಕಾರವೇ ಶಿಕ್ಷಣ. ವ್ಯಕ್ತಿಯ ಶರೀರ, ಮನಸ್ಸು ಮತ್ತು ಚೈತನ್ಯಗಳ ಬೆಳವಣಿಗೆಯೇ ಶಿಕ್ಷಣ. ಯುವಕರು ಬಯಸುವ ಭವಿಷತ್ತಿನ ಜೀವನಕ್ಕೆ ಅವರನ್ನು ಸನ್ನದ್ಧಗೊಳಿಸುವ ವ್ಯವಸ್ಥೆಯೇ ಶಿಕ್ಷಣ. ಶಿಕ್ಷಣ ಮುಖ್ಯವಾಗಿ ಒಂದು ಸಂಸ್ಕಾರ, ಸಾಧನೆ. ವ್ಯಕ್ತಿಯ ಅಂತರಂಗದ ಅರಿವಿನ ಜೊತೆಗೆ ಬಹಿರಂಗದ ಪರಿಜ್ಞಾನವನ್ನು ಕ್ರೋಢಿಕರಿಸಿ ಪರಿಪೂರ್ಣ ಜೀವನದತ್ತ ಮುನ್ನಡೆಸುವುದೇ ನಿಜವಾದ ಶಿಕ್ಷಣ. ಶಿಕ್ಷಣವೆಂದರೆ ವ್ಯಕ್ತಿತ್ವದ ಸರ್ವತೋಮುಖ ಬೆಳವಣಿಗೆಗೆ ದಾರಿದೀಪ. ಶಿಕ್ಷಣ ಸಮಾಜದಲ್ಲಿ ಬಾಳಿಬದುಕುವ ರೀತಿ ನೀತಿ ಹಾಗು ನೆಲೆಗಟ್ಟನ್ನು ಒದಗಿಸುತ್ತದೆ. ಮಾನವೀಯ ಮೌಲ್ಯಗಳನ್ನು ಬೆಳೆಸುವ ಶಿಕ್ಷಣ ಮಾನವನನ್ನು ಇತರ ಜೀವಿಗಳಿಗಿಂತ ಉನ್ನತ ಸ್ತರದಲ್ಲಿ ನಿಲ್ಲಿಸುತ್ತದೆ. ಹೀಗೆ ಅನೇಕ ಬುದ್ಧಿಜೀವಿಗಳು ಶಿಕ್ಷಣದ ಮಹತ್ವವನ್ನು ಕುರಿತು ಹೇಳಿದ ವಾಕ್ಯಗಳನ್ನು ಗಮನಿಸಬಹುದು.

ಶಿಕ್ಷಣವೆಂದರೆ ಕೇವಲ ಅಕ್ಷರ ಜ್ಞಾನವಲ್ಲ. ಶಿಕ್ಷಣವು ಜ್ಞಾನ ಹಾಗೂ ವೈಚಾರಿಕ ತಿಳುವಳಿಕೆ ಒದಗಿಸಿ ಸಮಾಜದಲ್ಲಿ ಆದರ್ಶಪ್ರಾಯವಾಗಿ ಜೀವನ ನಡೆಸಲು ಮೂಲಭೂತವಾದ ಕೌಶಲ್ಯವನ್ನು ಕೊಡುತ್ತದೆ. ಸ್ವಾಮಿ ವಿವೇಕಾನಂದರ ನುಡಿಯಂತೆ 'ವಿದ್ಯೆಯು ಮನಸ್ಸಿನಲ್ಲಿ ಅರ್ಥ ಮಾಡಿಕೊಳ್ಳದೇ ಇರುವ, ವಿವೇಚನೆಯಿಲ್ಲದ ಅವ್ಯವಸ್ಥಿತ ವಿಷಯ ಸಂಗ್ರಹಣೆಯಲ್ಲ. ವಿದ್ಯೆಯು ಕೇವಲ ವಿಷಯ ಸಂಗ್ರಹಣೆಯ ತತ್ವದ್ದಾಗಿದ್ದರೆ ಪುಸ್ತಕ ಭಂಡಾರಗಳು ಅತ್ಯುನ್ನತ ಜ್ಞಾನಿಗಳಾಗುತ್ತಿದ್ದವು ಮತ್ತು ವಿಶ್ವಕೋಶಗಳು ಮಹಾಋಷಿಗಳಾಗುತ್ತಿದ್ದವು'.

ಶಿಕ್ಷಣವು ಸ್ವಂತಿಕೆ, ಸ್ವಾಭಿಮಾನ, ಸಂತೋಷದ ಬದುಕನ್ನು ನಡೆಸುವದಕ್ಕೆ ಸಹಾಯಕವಾಗಬೇಕು. ಶಿಕ್ಷಣ ದಾರಿ ದೀಪವಾಗಬೇಕು. ಶಿಕ್ಷಣವೆಂಬ ದೀಪ ಹೆದ್ದಾರಿಯಲ್ಲಿ ದಿಕ್ಕು ತೋರಿಸುವ ಕೈಗಂಬದಂತೆ ಇರಬೇಕು. ಶಿಕ್ಷಣದಿಂದ ಮಕ್ಕಳ ವ್ಯಕ್ತಿತ್ವವು ಆಂತರ್ಯದಿಂದಲೇ ವಿಕಾಸಗೊಳ್ಳುವಂತಿರಬೇಕು. ಜೀವನದ ಎಲ್ಲಾ ಕ್ಷೇತ್ರಗಳಿಗೆ ಅನ್ವಯಿಸಿ ನಿರ್ದಿಷ್ಟ ರೂಪದ ಮಾರ್ಗದರ್ಶನ ನೀಡುವಂತಿರಬೇಕು. ಮಗುವಿನ ಸರ್ವತೋಮುಖ ಬೆಳವಣಿಗೆಗೆ ಪೂರಕವಾಗಿ ಭದ್ರ ನೆಲೆಗಟ್ಟನ್ನು ಒದಗಿಸುವಂತಿರಬೇಕು.

ಈಗಿನ ಶಿಕ್ಷಣದ ಉದ್ದೇಶವು ವೈಜ್ಞಾನಿಕ ದೃಷ್ಟಿಕೋನ, ಪರಿಸರ ಪ್ರಜ್ಞೆ, ಸಾಮಾಜಿಕ ಮೌಲ್ಯಗಳ ಪರಿಚಯ, ಆರ್ಥಿಕ ಅಗತ್ಯಗಳ ಪೂರೈಕೆ, ಸಾಮಾಜಿಕ ಸೌಲಭ್ಯಗಳ ಸದುಪಯೋಗ ಈ ಅಂಶಗಳನ್ನು ಒಳಗೊಂಡಿರಬೇಕು.

ಆಧುನಿಕ ಸಮಾಜಗಳಲ್ಲಿನ ಪ್ರಾಮುಖ್ಯವಾದ ಸಾಮಾಜಿಕ ಸಂಸ್ಥೆಗಳಲ್ಲಿ ಶಿಕ್ಷಣವೂ ಒಂದು. ಅದು ಆಧುನಿಕ ಮಾನವ ಸಮೂಹ ಜೀವನದ ಅನಿವಾರ್ಯ ಅವಶ್ಯಕತೆ; ನಾಗರಿಕ ಮಾನವ ಜಗತ್ತಿನ ಉಸಿರು; ಆಧುನಿಕ ಸಮಾಜದ ಸಲಕ್ಷಣ. ನಾಗರಿಕ ಜೀವನದ ಸಾಧನೆ ಸಾರ್ಥಕತೆಗಳು ಶಿಕ್ಷಣವನ್ನವಲಂಬಿಸಿವೆ. ಒಂದು ಸಮುದಾಯದ ಸರ್ವತೋಮುಖ ಅಭಿವೃದ್ಧಿಯೂ ಶಿಕ್ಷಣವನ್ನು ಅವಲಂಬಿಸಿದೆ. ಯಾವುದೇ ಒಂದು ರಾಷ್ಟ್ರದ ಅಭಿವೃದ್ಧಿಯನ್ನು ಇತರ ರಾಷ್ಟ್ರಗಳು ಅಳೆಯುವುದು ಮೊದಲು ಶಿಕ್ಷಣದಿಂದ ಎಂಬುದನ್ನು ಮರೆಯಬಾರದು. ಶಿಕ್ಷಣವು ಸಮಾಜದ ಪ್ರತಿಯೊಂದು ಸಮಸ್ಯೆಗಳ ನಿರ್ಮೂಲನೆಗೆ ಸಂಜೀವಿನಿ ಎಂದು ಹೇಳಬಹುದು. ಎಲ್ಲಕ್ಕಿಂತ ಮುಖ್ಯವಾಗಿ ವ್ಯಕ್ತಿ ಸಮಾಜದಲ್ಲಿ ಮತ್ತು ಮುಖ್ಯವಾಹಿನಿಯಲ್ಲಿ ಮಿಳಿತವಾಗಬೇಕಾದರೆ ಶಿಕ್ಷಣ ಅಗತ್ಯವಾಗಿದೆ. ಶಿಕ್ಷಣ ಎನ್ನುವ ಸಾಮಾಜಿಕ ಸಂಸ್ಥೆಗೆ ಎಲ್ಲ ಸಮಾಜಗಳಲ್ಲೂ ಎರಡು ಪ್ರಮುಖ ಜವಾಬ್ದಾರಿಗಳಿವೆ. ೧) ಸಮಾಜದ ಸಾಂಸ್ಕೃತಿಕ ಪರಂಪರೆಯನ್ನು ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ವರ್ಗಾಯಿಸುವುದು ೨) ಆ ಸಮಾಜದಲ್ಲಿ ಬದಲಾವಣೆಯನ್ನು ತರುವುದಕ್ಕೆ ಪೂರಕವಾದ ವಾತಾವರಣವನ್ನು ಸೃಷ್ಟಿಸುವುದು.

ಶಿಕ್ಷಣವು ಸಾಮಾಜಿಕ ಬದಲಾವಣೆಯ ನಿಯೋಗವಾಗಿದೆ. ಇದು ಸಾಮಾಜಿಕ ಚಲನೆಯ ವಾಹಕವಾಗಿ ಮೇಲ್ಮುಖ ಚಲನೆಗೆ ಅನುವು ಮಾಡಿಕೊಡುತ್ತದೆ.

**ಭಾರತದಲ್ಲಿ ಶಿಕ್ಷಣ ಸ್ವರೂಪ**

ಐದು ಸಾವಿರ ವರ್ಷಗಳ ಸುದೀರ್ಘ ಇತಿಹಾಸವಿರುವ ಅನೇಕ ಭಾಷೆ, ಸಂಸ್ಕೃತಿ, ಧರ್ಮ, ಪರಂಪರೆಗಳ ವೈವಿಧ್ಯತೆಯನ್ನು ಹೊಂದಿರುವ ಭಾರತ ದೇಶದಲ್ಲಿಯ ಶಿಕ್ಷಣದ ಸ್ವರೂಪವನ್ನು ಮೂರು ಹಂತಗಳಲ್ಲಿ ಸಂಕ್ಷಿಪ್ತವಾಗಿ ವಿವರಿಸಬಹುದು.

ಪ್ರಾಚೀನ ವೇದೋಪನಿಷತ್ತು ಕಾಲದಲ್ಲಿ ಮೌಖಿಕ ಶಿಕ್ಷಣವೇ ಪ್ರಧಾನವಾಗಿತ್ತು. ಜಾತಿ ಬೇಧ, ಲಿಂಗಭೇದವಿಲ್ಲದೆ ಶೈಕ್ಷಣಿಕ ಅವಕಾಶ ಎಲ್ಲರಿಗೂ ಮುಕ್ತವಾಗಿತ್ತು. ಆಶ್ರಮ ಪದ್ಧತಿಯಂತೆ ಬಾಲ್ಯಾಶ್ರಮದಲ್ಲಿ ಗುರುಕುಲಗಳ ಮೂಲಕ ಶಿಕ್ಷಣ ಪಡೆಯುವ ವ್ಯವಸ್ಥೆಯಿತ್ತು. ಆಧ್ಯಾತ್ಮಿಕತೆ, ನೈತಿಕತೆ, ಮಾನವೀಯ ಮೌಲ್ಯ, ಬದುಕುವ ರೀತಿ–ನೀತಿಗಳು ಆಗಿನ ಶಿಕ್ಷಣದ ಲಕ್ಷ್ಯವಾಗಿತ್ತು. ನಂತರ ಚತುರ್ವರ್ಣ ವ್ಯವಸ್ಥೆ ಉದಯಿಸಿ ಕಾಲಕ್ರಮೇಣ ಶಿಕ್ಷಣವೆಂಬುದು ಬ್ರಾಹ್ಮಣ, ಪುರೋಹಿತ ವರ್ಗದವರ ಸ್ವತ್ತಾಗಿ ಅವರಿಗೆ ಮಾತ್ರ ಮೀಸಲು ಎನ್ನುವ ಸಾಮಾಜಿಕ ಪರಂಪರೆ ರೂಢಿಯಾಯಿತು.

ಬ್ರಿಟಿಷ್ ವಸಾಹತುಶಾಹಿಯ ಕಾಲದಲ್ಲಿ ಔಪಚಾರಿಕ ಶಿಕ್ಷಣ ವ್ಯವಸ್ಥೆ ಪ್ರಾರಂಭವಾಯಿತು. ಬ್ರಿಟಿಷ್ ಆಡಳಿತದ ದಾಸ್ಯದ ಛಾಯೆಯಾದ ಮೆಕಾಲೆ ಶಿಕ್ಷಣದ ನೀತಿಯು ಕಾರ್ಖಾನೆಯಲ್ಲಿ ವಸ್ತುಗಳನ್ನು ತಯಾರಿಸುವ ಮಾದರಿಯಲ್ಲಿ ಪ್ರತಿ ರಾಜ್ಯದಲ್ಲಿ ಬ್ರಿಟಿಷ್ ಆಡಳಿತಕ್ಕೆ ಪೂರಕವಾಗುವಂತಹ ಸುಶಿಕ್ಷಿತರೆಂಬ ಸಮುದಾಯವನ್ನು ಹುಟ್ಟುಹಾಕುವಲ್ಲಿ ಯಶಸ್ವಿಯಾಯಿತು. ಕಾಲಕ್ರಮೇಣ ಶಿಕ್ಷಣದ ಸಾರ್ವತ್ರೀಕರಣ ಕಂಡುಬಂತು. ಸಂಪ್ರದಾಯ, ನಂಬಿಕೆಗಳು ಸಡಿಲಗೊಂಡು ಶಾಲಾ, ಕಾಲೇಜುಗಳು ಪ್ರಾರಂಭವಾದವು. ವಿಶ್ವವಿದ್ಯಾಲಯಗಳು ಸ್ಥಾಪನೆಯಾದವು. ಶಾಲೆ/ವಿದ್ಯಾಲಯ ಎನ್ನುವ ಚೌಕಟ್ಟಿನೊಳಗೆ ಕಲಿಕೆ ಎನ್ನುವುದು

ಆರಂಭವಾಯಿತು. ಪ್ರತಿ ರಾಜ್ಯದ ಬೇರೆ ಬೇರೆ ಸಮುದಾಯಗಳು ಅವರವರ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳಿಗೆ ತಕ್ಕಂತೆ ಶಿಕ್ಷಣ ಪಡೆದರು.

ಸ್ವಾತಂತ್ರ್ಯ ನಂತರದ ಕಾಲಾವಧಿಯಲ್ಲಿಯ ಇಂಗ್ಲಿಷ ಶಿಕ್ಷಣ ಪದ್ಧತಿಯನ್ನೇ ಈಗಲೂ ಸಹ ಮುಂದುವರೆಸಿಕೊಂಡು ಬರುತ್ತಿದ್ದೇವೆ. ಇಂಗ್ಲೀಷ ಶಿಕ್ಷಣವೆಂದರೆ ಲೌಕಿಕ ಶಿಕ್ಷಣ, ಲೋಕ ಪರಿಜ್ಞಾನ, ದೇಹೇಂದ್ರಿಯ ಭೋಗ ಶಿಕ್ಷಣ, ಮಾಹಿತಿ ಸಂಗ್ರಹ, ವಿಷಯ ಸಂಗ್ರಹ ಇವುಗಳನ್ನು ಒಳಗೊಂಡಿರುತ್ತದೆ. ಶಿಕ್ಷಣ ಕ್ಷೇತ್ರಗಳಲ್ಲೂ ಸಂವಿಧಾನಾತ್ಮಕವಾಗಿ ಸಮಾನತೆ, ಸ್ವಾತಂತ್ರ್ಯ ಸಾರ್ವತ್ರೀಕರಣ ಕಾಣಬಹುದು. ನಮ್ಮಲ್ಲಿ ಔಪಚಾರಿಕ ಶಿಕ್ಷಣ ವ್ಯವಸ್ಥೆ ಇದ್ದು ಪ್ರಾಥಮಿಕ ಶಿಕ್ಷಣ ೬–೧೩ ವರ್ಷಗಳ ವಯಸ್ಸಿನವರೆಗೆ, ಪ್ರೌಢಶಿಕ್ಷಣ, ೧೩–೧೫ ವರ್ಷ, ಆನಂತರ ಪದವಿಪೂರ್ವ ಕಾಲೇಜು, ಕಾಲೇಜು ಶಿಕ್ಷಣ ಮುಂದುವರೆಯುತ್ತದೆ. ದಾಖಲಾತಿ, ಹಾಜರಾತಿ ಪದ್ಧತಿ ಇದೆ. ಹೀಗೆ ನಿರ್ದಿಷ್ಟವಾದ ಚೌಕಟ್ಟಿನಲ್ಲಿ ತನ್ನದೇ ಆದ ಕ್ಷೇತ್ರ ಕಾರ್ಯವನ್ನು ಹೊಂದಿದೆ. ಅಂದರೆ ಶಿಕ್ಷಣ ವ್ಯಾಪ್ತಿಯು ಶಾಲಾ ಕಾಲೇಜುಗಳಿಗೆ ಸೀಮಿತವಾಗಿದೆ. ಉದ್ಯೋಗಕ್ಕೆ ಅಷ್ಟೇ ಸೀಮೀತವಾಗಿರುವ ಒಂದು ಶಿಕ್ಷಣದ ಸ್ವರೂಪವನ್ನು ನಮ್ಮಲ್ಲಿ ಕಾಣಬಹುದು. ಆದರೆ ಸರ್ವರಿಗೂ ಶಿಕ್ಷಣ, ಸಮಗ್ರ ಶಿಕ್ಷಣ, ಜೀವನ ಶಿಕ್ಷಣ ಎಂಬ ವಾಸ್ತವಗಳ ಮೂಲಕ ಸಾಮಾಜಿಕ ನ್ಯಾಯವನ್ನು ದೊರಕಿಸುವಲ್ಲಿ ಈಗಿನ ಶಿಕ್ಷಣ ಫಲಕಾರಿಯಾಗಿಲ್ಲ. ಹೀಗಾಗಿ ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿ ಸಾಕಷ್ಟು ಪರಿಣಾಮಕಾರಿಯಾದ ಬದಲಾವಣೆಯಾಗಬೇಕಾಗಿರುವುದು ಗಮನಾರ್ಹವಾಗಿದೆ.[೨೩]

'ಹಿಂದೆ ಶಿಕ್ಷಣವನ್ನು ಜ್ಞಾನಾರ್ಜನೆಯಾಗಿ ಪಡೆಯುತ್ತಿದ್ದರು. ನಂತರದಲ್ಲಿ ಇದು ಉದ್ಯೋಗ ಗಿಟ್ಟಿಸಿ ಹಣ ಸಂಪಾದಿಸುವ ಸಾಧನೆಯಾಯಿತು. ಪ್ರಸ್ತುತ ಶಿಕ್ಷಣ ಸ್ಥಾನಮಾನದ ಸಾಧನೆಯಾಗಿದೆ. ಈ ಶಿಕ್ಷಣ ಸಾಮಾನ್ಯ ಜನರ ಮೇಲೆ ಯಾವ ರೀತಿಯ ಪರಿಣಾಮ ಬೀರುತ್ತಿದೆ ಎಂಬುದನ್ನು ನಾವು ಕಾಣಬಹುದಾಗಿದೆ. ನಮ್ಮ ರಾಜ್ಯದಲ್ಲಿ ನಡೆದ ಒಂದು ಗಣತಿಯ ಪ್ರಕಾರ ಕನ್ನಡ ಮಾಧ್ಯಮ ಶಾಲೆಯಲ್ಲಿ ಓದುತ್ತಿರುವ ಸುಮಾರು ಶೇ. ೪೦ ರಷ್ಟು ಮಕ್ಕಳು ಕನ್ನಡವನ್ನು ಸಾಮಾನ್ಯ ರೀತಿಯಲ್ಲಿ ಓದಲು ಬರೆಯಲು ಬರದಿರುವ ಸ್ಥಿತಿಯನ್ನು ತಲುಪಿದ್ದಾರೆ'.[೨೪] ಅಷ್ಟೇ ಏಕೆ, ಕನ್ನಡ ಮಾತೃಭಾಷೆಯುಳ್ಳ ಪದವಿ ಪಡೆದ ಈಗಿನ ಯುವಕರು ಸಹ ಎಷ್ಟೊಂದು ಅಶುದ್ಧ ಕನ್ನಡ ಬರೆಯುತ್ತಾರೆಂದರೆ ಇದು ನಮ್ಮ ಶಿಕ್ಷಣ ವ್ಯವಸ್ಥೆಗೆ ಹಿಡಿದ ಕನ್ನಡಿಯಾಗಿದೆ.

'ಮುಂದುವರೆದ ರಾಷ್ಟ್ರದ ಶಿಕ್ಷಣ ಪದ್ಧತಿಗೂ ನಮ್ಮ ವ್ಯವಸ್ಥೆಗೂ ಹೋಲಿಸಿದಾಗ ನಮ್ಮಲ್ಲಿ ಶಿಕ್ಷಕ ವೃತ್ತಿ ಆಯ್ಕೆಯ ಕೆಲಸವಾಗಿರದೆ ಜೀವನ ನಿರ್ವಹಣೆಯ ಸಾಧನವಾಗಿರುವುದು ಗಮನಾರ್ಹವಾಗಿದೆ. ಬೋಧಕ ವೃತ್ತಿ ಒಂದು ರೀತಿಯ ತಪಸ್ವಿಯ ಜೀವನದಂತೆ. ಇಲ್ಲಿ ಶಿಕ್ಷಕನೇ ಒಂದು ಮಾದರಿ'.[೨೫] ಶಿಕ್ಷಕ ವೃತ್ತಿ ಉನ್ನತವಾದುದು. ಆದರೆ ಶಿಕ್ಷಕ ವೃತ್ತಿಯಲ್ಲಿ ಅಭಿರುಚಿಯಿಲ್ಲದಿದ್ದರೂ ಜೀವನ ನಿರ್ವಹಣೆಯ ಅನಿವಾರ್ಯತೆಯಿಂದ ಬಂದವರಿಗೆ ಶಿಕ್ಷಕ ವೃತ್ತಿಯಲ್ಲಿ ಶ್ರದ್ಧೆಯಿಲ್ಲವೆನ್ನುವುದು ವಿದಿತ. ಶಿಕ್ಷಕ ವೃತ್ತಿಯಲ್ಲಿ ಶ್ರದ್ಧೆಯಿಲ್ಲದಂತವರು ಈ ವೃತ್ತಿಯನ್ನು ತೊರೆದು ತಮ್ಮ ಜೀವನ ನಿರ್ವಹಣೆಗೆ ಬೇರೊಂದು ಮಾರ್ಗವನ್ನು ಹುಡುಕಿಕೊಳ್ಳುವುದು ಉಚಿತ.

ಸರ್ವರಿಗೂ ಶಿಕ್ಷಣ ನೀಡುವುದು ಸರಕಾರದ ಆದ್ಯ ಕರ್ತವ್ಯ. ಇದು ಮುಂದುವರೆದ ರಾಷ್ಟ್ರಗಳಲ್ಲಿ ಯಥಾವತ್ತಾಗಿ ಪಾಲನೆಯಾಗುತ್ತಿದೆ. ಆದರೆ ನಮ್ಮಲ್ಲಿ ಇದು ಸಂವಿಧಾನದಲ್ಲಿ ಮಾತ್ರ ಇದೆ. ಆದ್ದರಿಂದಲೇ ಸರ್ವಶಿಕ್ಷಣ ಅಭಿಯಾನ ಇನ್ನೂ ಮರೀಚಿಕೆಯಾಗಿದೆ. ಶಿಕ್ಷಣ ಖಾಸಗೀಕರಣಗೊಂಡು ಸರಕಾರಿ ಶಾಲೆಗಳೆಂದರೆ ಅನಾಥರು, ಬಡವರು, ದಿಕ್ಕುದೆಶೆಯಿಲ್ಲದವರು ಓದುವ ಶಾಲೆ ಎಂಬ ಭಾವನೆ ಬಂದಿದೆ. ಜೊತೆಗೆ ಈ ಶಾಲೆಗಳು ಸಹ ಇದಕ್ಕೆ ಪೂರಕವಾಗಿಯೇ ಕಾರ್ಯನಿರ್ವಹಿಸುತ್ತಿವೆ. ನಮ್ಮ ದೇಶದಲ್ಲಿ ಶೇ. ೮೦ ರಷ್ಟು ಶೈಕ್ಷಣಿಕ ಸಂಸ್ಥೆಗಳು ಸಾರ್ವಜನಿಕ ವಲಯದ ಒಡೆತನದಲ್ಲಿದ್ದು ಮತ್ತು ಶೇ. ೨೦ ರಷ್ಟು ಶೈಕ್ಷಣಿಕ ಸಂಸ್ಥೆಗಳು ಖಾಸಗಿ ಒಡೆತನದಲ್ಲಿದ್ದರೂ, ವಿದ್ಯಾರ್ಥಿಗಳ ಪ್ರಮಾಣ ಶೇ. ೮೦ ಖಾಸಗಿವಲಯದಲ್ಲೂ, ಶೇ. ೧೦ ರಷ್ಟು ಸಾರ್ವಜನಿಕ ವಲಯದಲ್ಲೂ ಇದೆ. ಈ ದೇಶದ ಜನರು ತಮ್ಮ ವ್ಯವಸ್ಥೆಯ ಮೇಲೆ ತಾವೇ ಎಷ್ಟು ಅಪನಂಬಿಕೆ ಹೊಂದಿದ್ದಾರೆ ಎಂಬುದನ್ನು ಇದು ಸೂಚಿಸುತ್ತದೆ.[೨] ಉತ್ತಮ ಶಿಕ್ಷಣವು ಎಲ್ಲ ಹಂತದಲ್ಲೂ ವಾಣಿಜ್ಯೀಕರಣಗೊಳ್ಳುತ್ತಿದೆ. ಉಚ್ಚ ಶಿಕ್ಷಣವು ಶ್ರೀಮಂತರ ಸ್ವತ್ತಾಗುತ್ತದೆ. ತಮ್ಮ ಶ್ರೀಮಂತಿಕೆಯ ಬಲದಿಂದ ಹೆಚ್ಚು ಹಣಗಳಿಸುವ ಉನ್ನತ ವೃತ್ತಿಪರ ಪದವಿಗಳಾದ ಡಾಕ್ಟರ್, ಇಂಜನೀಯರ್ ಪದವಿ ಪಡೆಯಲು ಹಾತೊರೆಯುತ್ತಿದ್ದಾರೆ. ಮಧ್ಯಮ ವರ್ಗದವರು, ಸಾಲ ಮಾಡಿಯಾದರೂ ಈ ಪದವಿಗಳನ್ನು ಪಡೆಯಬೇಕೆಂಬ ಲಾಲಸೆಯಲ್ಲಿದ್ದಾರೆ. ಇನ್ನು ಆರ್ಥಿಕವಾಗಿ ಹಿಂದುಳಿದ ಜನರು ಕಂಗಾಲಾಗಿದ್ದಾರೆ. ಯಾಕೆಂದರೆ ಉಚ್ಚ ಶಿಕ್ಷಣ ಅವರಿಗೆ ಗಗನ ಕುಸುಮವಾಗುತ್ತಿದೆ. ಹೇಗಾದರೂ ಸರಿ ತಮ್ಮ ವೈಯಕ್ತಿಕ ಗುರಿ ತಲುಪಬೇಕೆಂಬ ತತ್ವಕ್ಕೆ ಸುಶಿಕ್ಷಿತರು ಬದ್ಧರಾಗಿದ್ದಾರೆ. ಇದು ನಮ್ಮ ಇಂದಿನ ಶಿಕ್ಷಣದ ಸ್ಥಿತಿಗತಿ.

**ಬುಡಕಟ್ಟುಗಳು ಮತ್ತು ಶಿಕ್ಷಣ**

ಬಹುತೇಕ ಬುಡಕಟ್ಟುಗಳು ದಟ್ಟ ಅರಣ್ಯ, ಗುಡ್ಡ ಕಾಡುಗಳಲ್ಲಿ ವಾಸಿಸುತ್ತ ಸಾಂಸ್ಕೃತಿಕ ಹಾಗೂ ಭೌಗೋಳಿಕ ಪ್ರತ್ಯೇಕತೆಯಿಂದಾಗಿ ಹಾಗೂ ನಾಗರಿಕ ಸಂಪರ್ಕದಿಂದ ದೂರವಿದ್ದುದರಿಂದ ಇವು ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ತೀರಾ ಹಿಂದುಳಿದಿವೆ. ದಟ್ಟ ಅರಣ್ಯಗಳಲ್ಲಿ ನೆಲೆಸಿದ ಇವರ ಭೌಗೋಳಿಕ ಪ್ರತ್ಯೇಕತೆಯಿಂದಾಗಿ ಔಪಚಾರಿಕ ಶಿಕ್ಷಣ ನೀಡುವಂತಹ ಸಂಸ್ಥೆಗಳನ್ನು ಸ್ಥಾಪಿಸಲು ಸಾಧ್ಯವಾಗದಂತಹ ಪರಿಸ್ಥಿತಿ ಇದೆ. ಆದರೂ ಅವರಿಗೆ ಶಿಕ್ಷಣ ತಲುಪಿಸುವುದು ಸರಕಾರದ ಕರ್ತವ್ಯ. ಇಲ್ಲಿ ಸ್ವಾಮಿ ವಿವೇಕಾನಂದರು ಶತಮಾನದ ಹಿಂದೆ ನುಡಿದ ಒಂದು ಮಾತು ನೆನಪಿಗೆ ಬರುತ್ತದೆ. ಅದೇನೆಂದರೆ 'ಸಮಾಜದ ಕೊನೆಯ ಸ್ತರದಲ್ಲಿರುವ ವ್ಯಕ್ತಿ ಶಿಕ್ಷಣದ ಬಳಿಗೆ ಬರಲಾಗದಿದ್ದರೆ ಆ ಶಿಕ್ಷಣವೇ ನಿರ್ಲಕ್ಷಿತರನ್ನು ಹುಡುಕಿಕೊಂಡು ಹೋಗಬೇಕು. ಇಲ್ಲದಿದ್ದರೆ ಆ ಶಿಕ್ಷಣ ವ್ಯವಸ್ಥೆ ನಿಷ್ಪ್ರಯೋಜಕ.' ಈ ಮಾತು ಇಂದಿಗೂ ಪ್ರಸ್ತುತ.

ಬುಡಕಟ್ಟುಗಳೆಂದರೆ ನಿನ್ನೆಯ ಅರಿವಿಲ್ಲದೆ ನಾಳೆಯ ಯೋಚನೆ ಇಲ್ಲದೆ ಇಂದಿಗೆ ಬದುಕುವ ಇವರು ತಮ್ಮದೇ ಆದ ಆದರ್ಶ ಲೋಕದಲ್ಲಿದ್ದಾರೆ. ನಿಜವಾದ ಮಾನವೀಯ ನಾಗರಿಕ ಸಂಸ್ಕೃತಿ ಇರುವುದು ಇವರಲ್ಲೇ. ಅದರಲ್ಲೂ ಇವರಲ್ಲಿರುವ ಹಂಚಿ ತಿನ್ನುವ ಮನೋಬಾವ, ಸಾಮುದಾಯಿಕ ಜೀವನ, ಲಿಂಗ ಸಮಾನತೆ ನಮ್ಮ ಇತರ ಸಮುದಾಯಗಳಿಗೆ ಸವಾಲಾಗಿವೆ. ಸಾಮಾನ್ಯವಾಗಿ ಬುಡಕಟ್ಟು

ಜನರು ಸ್ವೇಚ್ಛಾಚಾರವಲ್ಲದ ಸ್ವತಂತ್ರಪ್ರಿಯರು. ಯಾರ ಹಂಗಿಲ್ಲದೆ ತಮ್ಮಷ್ಟಕ್ಕೆ ತಾವೇ ಎನ್ನುವ ಅನಿರ್ಬಂಧಿತರು. ಇವರು ಜಿಂಕೆ ಮರಿಗಳು, ಓಡಿದರೆ ಸಿಗುವುದಿಲ್ಲ; ಹಿಡಿದರೆ ಓಡುವುದಿಲ್ಲ. ಸದಾ ಚಟುವಟಿಕೆಯಿಂದಿರುವ ಇವರು ಯಾವುದೇ ರೀತಿಯ ರಿವಾಜಗಳಿಗೆ ಸೊಪ್ಪು ಹಾಕುವವರಲ್ಲ. ಹಾಗೇ ನಿರ್ಬಂಧಗಳಿಗೂ ಕೂಡ. ತುಂಬಾ ಚುರುಕು ಸ್ವಭಾವದ ಈ ಸ್ವಾಭಿಮಾನಗಳು ಕಲಿಕೆಯಲ್ಲಿ ಮೇಲಿಗರೆ. ಇವರ ಬುದ್ಧಿಶಕ್ತಿಯ ಮಟ್ಟ ಇತರರ ಮಕ್ಕಳಿಗಿಂತ ಚೆನ್ನಾಗಿದೆ. ಒಳ್ಳೆಯ ಗ್ರಹಿಕಾ ಶಕ್ತಿಯನ್ನು ಇವರು ಹೊಂದಿದ್ದಾರೆ. ಆದರೆ ನಮ್ಮ ಸಂಪ್ರದಾಯಿಕ ಕಪ್ಪು ಹಲಗೆ ಯೋಜನೆಯ ಶಿಕ್ಷಣ ಈ ಮಕ್ಕಳಿಗೆ ತರವಾದುದೇ ಎಂಬುದನ್ನು ಯೋಚಿಸಬೇಕಾಗುತ್ತದೆ.[೨೭]

ಆದಿವಾಸಿಗಳು ಸ್ವತಂತ್ರ ಪ್ರಿಯರು. ಬೇಡುವವರಲ್ಲ. ಸೋಮಾರಿಗಳಲ್ಲ. ಸ್ವಯಂ ಆಡಳಿತ ಪದ್ಧತಿಯನ್ನು ತಮ್ಮ ಗೌಳಿವಾಡಗಳ ನಿರ್ವಹಣೆಗೆ ಬಳಸುತ್ತಿದ್ದರು. ಇವರು ತುಂಬಾ ಸ್ವಾಭಿಮಾನಿಗಳು. ಯಾರನ್ನೂ ಅವಲಂಬಿಸಿರುವುದಿಲ್ಲ. ಮಕ್ಕಳನ್ನು ತುಂಬಾ ಪ್ರೀತಿಸುತ್ತಾರೆ. ಹಾಗೆಯೇ ಅವರನ್ನು ಸ್ವತಂತ್ರವಾಗಿ ಬೆಳೆಯಲು ಬಿಡುತ್ತಾರೆ. ಹೆಣ್ಣು ಮತ್ತು ಗಂಡಿನ ಭೇದವಿಲ್ಲ. ಪ್ರಕೃತಿ ಆರಾಧನೆಯೇ ಇವರ ಮೂಲಧರ್ಮ.[೨೮]

ಅವರು ಅರಣ್ಯದಲ್ಲಿ ವಾಸಿಸುತ್ತಿದ್ದಾಗ ಅವರಿಗೆ ಬೇಕಾದ ಜೀವನ ಶಿಕ್ಷಣವಾದ ಬದುಕಲಿಕ್ಕೆ ಬೇಕಾದ ಬೇಟೆ, ಆಹಾರ ಸಂಗ್ರಹಣಾ ವಿಧಾನ, ನಾಟಿ ಔಷಧಿ ವಿದ್ಯೆ, ಪ್ರಾಣಿಗಳ ಚಲನವಲನ, ನೀರಿನ ಮೂಲ, ನಿಸರ್ಗದ ವಿಕೋಪಗಳ ಪೂರ್ವಜ್ಞಾನ, ಸ್ವಯಂ ರಕ್ಷಣಾ ಕಲೆ, ದೈಹಿಕ ಕಸರತ್ತು, ವಾಸನಾ ಶಕ್ತಿ, ಕಾಡಿನ ಉತ್ಪಾದನೆಗಳ ಸಂಗ್ರಹ, ಹಕ್ಕಿ ಪಕ್ಷಿಗಳ ಕುರಿತು ಅರಿವು ಹಾಗೂ ತಮ್ಮ ಜನವರ್ಗದಲ್ಲಿ ಆಚರಿಸಬೇಕಾದ ಸಂಪ್ರದಾಯಗಳ ಸಾಮಾಜಿಕ ಬದುಕು,[೨೯] ಸಮತಾವಾದ ತಳಹದಿಯ ಮೇಲೆ ಜೀವನ ನಡೆಸುವುದು, ಸಹಬಾಳ್ವೆಯಿಂದ ಬಾಳ್ವೆ ನಡೆಸಲು ಹಂಚಿ ತಿನ್ನುವ ಪದ್ಧತಿ, ಹಿರಿಯರಿಗೆ ಗೌರವ, ಗಂಡುಹೆಣ್ಣಿನ ನಡುವೆ ತಾರತಮ್ಯವಿಲ್ಲದೆ ಬದುಕುವುದು, ಆಸ್ತಿಯ ಒಡೆತನವನ್ನು ತಾರತಮ್ಯವಿಲ್ಲದೆ ಪ್ರತಿಪಾದಿಸುವುದು, ತಮ್ಮ ಬದುಕನ್ನು ತಮ್ಮ ಕಾಲ ಮೇಲೆ ನಿಂತು ನಡೆಸುವುದು ಮುಂತಾದವುಗಳಿಗೆ ಅಗತ್ಯವಾದ ಶಿಕ್ಷಣ ಅವರಿಗೆ ಸಾಂಪ್ರದಾಯಿಕವಾಗಿ ತಂದೆ-ತಾಯಂದಿರಿಂದ, ಹಾಡಿ ನಾಯಕನಿಂದ, ಹಿರಿಯರಿಂದ ದೊರೆಯುತ್ತಿತ್ತು.[೩೦] ಅಲ್ಲದೇ ತಮ್ಮ ಸಮುದಾಯದಲ್ಲಿ ಪಾಲಿಸಬೇಕಾದ 'ನಿಷಿದ್ಧ'ಗಳ ತಿಳುವಳಿಕೆ ಜೀವನದ ಭಾಗವೇ ಆಗಿರುತ್ತಿತ್ತು. ಇದೊಂದು ಬುಡಕಟ್ಟುಗಳು ತಮ್ಮ ಸಮಾಜದಲ್ಲಿ ಸಹಜವಾಗಿ ಹೊಂದಿದ್ದ ಅದ್ಭುತವಾದ ಅನೌಪಚಾರಿಕ ಶಿಕ್ಷಣ ವ್ಯವಸ್ಥೆಯೇ ಆಗಿತ್ತು. ಇಂದಿನ ಸಾಕ್ಷರತಾ ಔಪಚಾರಿಕ ಶಿಕ್ಷಣಕ್ಕಿಂತ ಸಂಪೂರ್ಣವಾಗಿ ಭಿನ್ನವಾಗಿದ್ದ ತಲೆ-ತಲಾಂತರಗಳಿಂದ ಮೌಖಿಕವಾಗಿ ಸಾಗಿ ಬಂದ ಜೀವನಾನುಭವದ ಪಾರಂಪರಿಕ ಶಿಕ್ಷಣವಾಗಿ ಅತ್ಯಂತ ರೋಚಕವಾಗಿದೆ. ಪಾರಂಪರಿಕ ಔಪಚಾರಿಕ ಶಿಕ್ಷಣವನ್ನು ಅನುಸರಿಸುವ ರೀತಿಯಲ್ಲಿ ಒಂದೊಂದು ಸಮುದಾಯಕ್ಕೂ ವ್ಯತ್ಯಾಸ, ಭಿನ್ನತೆ ಕಾಣುತ್ತೇವೆ. ಸಂಸ್ಕೃತಿಯ ಮೂಲ ಆಕರಗಳು ಅವರ ಶಿಕ್ಷಣ ಪದ್ಧತಿಯಲ್ಲಿವೆ. ಶಿಕ್ಷಣವೆಂದರೆ ಕೇವಲ ಅಕ್ಷರ ಕಲಿಯುವುದಲ್ಲ. ಶಿಕ್ಷಣಕ್ಕೂ ಸಂಸ್ಕೃತಿಗೂ ಬದುಕಿಗೂ ಅವಿನಾಭಾವ ಸಂಬಂಧವಿದೆ. ಅನೇಕ ಬುಡಕಟ್ಟುಗಳಲ್ಲಿ ಅಕ್ಷರ ಕಲಿಸುವ ಶಿಕ್ಷಣ ಇರಲಿಕ್ಕಿಲ್ಲ. ಆದರೆ ಬದುಕನ್ನು ರೂಪಿಸಿಕೊಳ್ಳುವ ಶಿಕ್ಷಣವಿದೆ.

ಸಂಸ್ಕೃತಿಯನ್ನು ಉಳಿಸಿಕೊಳ್ಳುವ ಶಿಕ್ಷಣವಿದೆ. ಆದುದರಿಂದ ಅವರನ್ನು ಅನಕ್ಷಸ್ಥರೆಂದು ಕರೆಯಬಹುದೇ ಹೊರತು ಅಶಿಕ್ಷಿತರೆಂದು, ಅಸಂಸ್ಕೃತರೆಂದು ಕರೆಯಲಾಗದು.

ಆದರೆ ಅನಕ್ಷರತೆಯೇ ಬುಡಕಟ್ಟು ಜನರ ಎಲ್ಲಾ ಸಮಸ್ಯೆಗಳಿಗೆ ಮೂಲ ಮತ್ತು ಅವರ ಅಭಿವೃದ್ಧಿಗೆ ತೊಡಕಾಗಿದೆ. ಅನಕ್ಷರತೆಯಿಂದ ಅಜ್ಞಾನ, ಮೂಢನಂಬಿಕೆ, ದೌರ್ಜನ್ಯಕ್ಕೊಳಗಾಗುವುದು ಹೆಚ್ಚಾಗುತ್ತದೆ. ಅರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಹಿಂದುಳಿದಿರುವಿಕೆಗೆ ಶಿಕ್ಷಣದ ಕೊರತೆಯೇ ಕಾರಣ. ಅವರು ಯಾವ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ, ಅವರು ಹೇಗೆ ನಾಗರಿಕ ಸಮಾಜದಿಂದ ಶೋಷಣೆಗೆ ಒಳಗಾಗುತ್ತಿದ್ದಾರೆ, ತಮ್ಮ ಅಭಿವೃದ್ಧಿಗಾಗಿ ಸರಕಾರ ಯಾವ ಕಾರ್ಯಕ್ರಮಗಳನ್ನು ಜಾರಿಗೊಳಿಸಿದೆ, ಆ ಕಾರ್ಯಕ್ರಮಗಳ ಪ್ರಯೋಜನವನ್ನು ಹೇಗೆ ಪಡೆಯಬೇಕು, ಅವರು ಸಾಮಾಜಿಕವಾಗಿ ಅರ್ಥಿಕವಾಗಿ ಹೇಗೆ ಅಭಿವೃದ್ಧಿಯಾಗಬೇಕು ಎಂಬುದರ ಬಗ್ಗೆ ಚಿಂತನೆ ಮಾಡಲು ಹಾಗೂ ತಮ್ಮ ಬುಡಕಟ್ಟುಗಳನ್ನು ಅಭಿವೃದ್ಧಿ ಪಥದೆಡೆಗೆ ಕೊಂಡೊಯ್ಯಲು ಅವರಿಗೆ ಪ್ರಮುಖವಾಗಿ ಶಿಕ್ಷಣ ಬೇಕು. ಅವರು ಅಕ್ಷರಸ್ಥರಾಗಬೇಕು.

ಪ್ರತಿಯೊಂದು ಬುಡಕಟ್ಟು ಸಮುದಾಯಗಳು ತಮ್ಮದೇ ಆದ ಸ್ವತಂತ್ರ ಭಾಷೆಯನ್ನು ಹೊಂದಿವೆ. ಅವರ ಭಾಷೆಗೆ ಲಿಪಿ ಇಲ್ಲದೆ ಇರುವದರಿಂದ ಅವರು ಶೈಕ್ಷಣಿಕವಾಗಿ ತೀರಾ ಹಿಂದುಳಿದಿದ್ದಾರೆ. ಅವರ ಭಾಷೆಗಳಲ್ಲಿ ನೆರೆಹೊರೆ ಪ್ರದೇಶಗಳ ಭಾಷೆಯ ಪ್ರಭಾವವನ್ನು ಕಾಣಬಹುದು. ನೆರೆ ಹೊರೆಯವರ ಭಾಷೆ ಸಂಪೂರ್ಣವಾಗಿ ಬರುವುದಿಲ್ಲ. ಲಿಪಿ ಹೊಂದದ ಅವರ ಮಾತೃಭಾಷೆಯಲ್ಲಿ ಶಿಕ್ಷಣ ಕೊಡಿಸುವುದು ದೂರದ ಮಾತು. ಪ್ರಾದೇಶಿಕ ಭಾಷೆಯಲ್ಲಿ ಶಿಕ್ಷಣ ನೀಡಬೇಕು. ನಗರದಿಂದ ಶಿಕ್ಷಕರು ಕಾಡಿಗೆ ಹೋಗಿ ಶಿಕ್ಷಣ ನೀಡುವುದು ನಗರವಾಸಿ ಶಿಕ್ಷಕರಿಗೆ ತೊಂದರೆಯ ವಿಷಯ. ಅಲ್ಲದೇ ಬುಡಕಟ್ಟು ಜನರು ಶಿಕ್ಷಣದ ಮಹತ್ವ ಅರಿಯದೇ ಇರುವುದಿರಂದ ಶಿಕ್ಷಣ ನೀಡುವುದು ತೊಂದರೆದಾಯಕ ಸಂಗತಿಯಾಗಿದೆ. ಇಂತಹ ಪರಿಸ್ಥಿತಿಯಲ್ಲೂ ಸರಕಾರ ಬುಡಕಟ್ಟು ಜನರಿಗೆ ಶಿಕ್ಷಣ ನೀಡಲು ಎಲ್ಲ ಕ್ರಮ ತೆಗೆದುಕೊಂಡಿದ್ದಾರೆ. ಆದರೆ ಸಾಕ್ಷರತೆಯ ಪ್ರಮಾಣ ಬುಡಕಟ್ಟುಗಳಲ್ಲಿ ನಿಧಾನಗತಿಯಲ್ಲಿ ಹೆಚ್ಚುತ್ತಿದ್ದು ಇದೊಂದರಿಂದಲೇ ಅಭಿವೃದ್ಧಿಯನ್ನು ಸಾಧಿಸಲು ಸಾಧ್ಯವಾಗುತ್ತಿಲ್ಲ.

ಪ್ರಪಂಚದ ಬುಡಕಟ್ಟುಗಳನ್ನು ಶೈಕ್ಷಣಿಕವಾಗಿ ಗಮನಿಸಿದಾಗ ಕಂಪ್ಯೂಟರ್ ಯುಗದಲ್ಲಿ ಅವರಿಗೆ ಜೀವನದ ಅತಿ ಮುಖ್ಯ ಘಟ್ಟವಾದ ಶಿಕ್ಷಣ ಸಿಗುತ್ತಿಲ್ಲ. ಅಂದರೆ ಇತ್ತೀಚಿನ ಸರಕಾರಗಳು ಬುಡಕಟ್ಟುಗಳ ಬಗ್ಗೆ ಎಷ್ಟರ ಮಟ್ಟಿಗೆ ಕಾಳಜಿವಹಿಸಿವೆ ಎಂಬುದನ್ನು ಕಾಣಬಹುದು. ಪ್ರಾಚೀನ ಕಾಲದಿಂದ ತಮ್ಮ ಪಾಡಿಗೆ ತಾವು ವಂಶಪರಂಪರೆಯಾಗಿ ರೂಢಿಸಿಕೊಂಡು ಬಂದಿರುವ ತಮ್ಮದೆಯಾದ ಅನೌಪಚಾರಿಕ ಸಾಂಸ್ಕೃತಿಕ ಶಿಕ್ಷಣವನ್ನು ಅವರು ಮುಂದುವರೆಸಿಕೊಂಡು ಬಂದಿರುವುದನ್ನು ನೋಡಬಹುದು. ಯಾವುದೇ ಒಂದು ರಾಷ್ಟ್ರದ ಅಭಿವೃದ್ಧಿಯನ್ನು ಇತರ ರಾಷ್ಟ್ರಗಳು ಅಳೆಯುವುದು ಮೊದಲು ಶಿಕ್ಷಣದಿಂದ ಎಂಬುದನ್ನು ಮರೆಯಬಾರದು. ಆದರೆ ಭಾರತದಂತಹ ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರದಲ್ಲಿ ಕಂಪ್ಯೂಟರ ಶಿಕ್ಷಣದ ಪ್ರಭಾವವಿದ್ದರೂ ಎಷ್ಟರ ಮಟ್ಟಿಗೆ ಭಾರತದಲ್ಲಿ ವಾಸಿಸುವ ಬುಡಕಟ್ಟು ಸಮುದಾಯಗಳನ್ನು

ಅದು ಮುಟ್ಟಿದೆ ಎಂಬುದು ಬಹಳ ಮುಖ್ಯ. ಈ ಹಿನ್ನೆಲೆಯಲ್ಲಿ ಇಂದಿನ ಸಾಮಾಜಿಕ ವ್ಯವಸ್ಥೆಗೆ ಶಿಕ್ಷಣ ಎಷ್ಟು ಮುಖ್ಯವೊ ಬುಡಕಟ್ಟು ಸಮುದಾಯಗಳಿಗೂ ಶಿಕ್ಷಣ ಅಷ್ಟೇ ಮುಖ್ಯ.

**ಭಾರತದ ಸ್ವಾತಂತ್ರ್ಯ ಪೂರ್ವದಲ್ಲಿ ಬುಡಕಟ್ಟು ಸಮುದಾಯಗಳ ಶಿಕ್ಷಣ**

'ಸ್ವಾತಂತ್ರ್ಯ ಪೂರ್ವದ ಭಾರತದಲ್ಲಿ ಆದಿವಾಸಿಗಳ ಕುರಿತಾಗಿ ಇದ್ದ ನಿರ್ಲಕ್ಷ್ಯದ ಧೋರಣೆಯಿಂದಾಗಿ ಅವರು ಮೂಲೆಗುಂಪಾಗಿದ್ದರು. ಬುಡಕಟ್ಟು ಸಮುದಾಯಗಳು ಹೊಂದಿದ್ದ ನಿಸರ್ಗ ಸಹಜ ಗುಣಗಳಾದ ನಾಚಿಕೆಯ ಸ್ವಭಾವ, ಅಲೆಮಾರಿತನ, ಯಾರೊಂದಿಗೂ ನೇರವಾಗಿ ವ್ಯವಹರಿಸದ ಮುಜಗರ ಸ್ವಭಾವಗಳಿಂದ ಅವರು ಶಿಕ್ಷಣದಿಂದ ವಂಚಿತರಾಗಬೇಕಾಯಿತು. ನೇರವಾದ ಶಿಕ್ಷಣದ ಕಾರ್ಯಕ್ರಮಗಳು ಅವರಿಗೆ ದೊರೆಯಲಿಲ್ಲ. ಬುಡಕಟ್ಟು ಜನರ ವಿದ್ಯಾಬ್ಯಾಸಕ್ಕೆ ಬ್ರಿಟಿಷ್ ಸರಕಾರ ಹೆಚ್ಚಿನ ಗಮನ ನೀಡಲಿಲ್ಲ. ಇಂಥಹ ಸಂದರ್ಭದಲ್ಲಿ ಬುಡಕಟ್ಟು ಜನರಿಗೆ ಶಿಕ್ಷಣದ ಆಶಾದೀಪವಾದವರು ಕ್ರಿಶ್ಚಿಯನ್ ಮಿಷನರಿಗಳು. ಆದ್ದರಿಂದ ಕ್ರಿಶ್ಚಿಯನ್ ಮಿಷನರಿಗಳನ್ನು ಬುಡಕಟ್ಟು ಸಮುದಾಯಗಳ ಶಿಕ್ಷಣ ಪ್ರಸಾರದ ಆರಂಭಿಕರೆಂದು ಗುರುತಿಸಲಾಗುತ್ತದೆ'.[೩೦] ಕೇವಲ ಕ್ರೈಸ್ತ ಮಿಷನರಿಗಳು ಬುಡಕಟ್ಟಿನ ಜನರು ವಾಸಿಸುತ್ತಿರುವ ಪ್ರದೇಶಗಳಲ್ಲಿ ಶಾಲೆಗಳನ್ನು ತೆರೆದರು. ವಿಶೇಷವಾಗಿ ಉತ್ತರ ಈಶಾನ್ಯ ಭಾರತದಲ್ಲಿ ಶಾಲೆಗಳನ್ನು ತೆರೆದು ಬುಡಕಟ್ಟಿನ ಮಕ್ಕಳಿಗೆ ಶಿಕ್ಷಣ ನೀಡುವುದರ ಜೊತೆಗೆ ಆರ್ಥಿಕ ಮತ್ತು ಸಾಮಾಜಿಕ ಸೌಲಭ್ಯಗಳನ್ನು ಒದಗಿಸಿದರು. ಆದರೆ ಇಲ್ಲಿ ಕಂಡು ಬಂದ ಸಾಮಾನ್ಯ ವಿಷಯವೆಂದರೆ ಮಿಷನರಿಗಳು ಶಾಲೆಗಳಲ್ಲಿ ಶಿಕ್ಷಣ ಕೊಡುವುದರ ಮೂಲಕ ಕ್ರೈಸ್ತ ಧರ್ಮದ ಪ್ರಚಾರ ಮಾಡತೊಡಗಿದರು. ಹಾಗೆಯೇ ಹಲವು ಬುಡಕಟ್ಟಿನ ಗುಂಪುಗಳು ಕ್ರೈಸ್ತ ಧರ್ಮಾವಲಂಬಿಗಳಾಗಲು ಕಾರಣರಾದರು. ಉದಾ: ಉತ್ತರ ಈಶಾನ್ಯ ರಾಜ್ಯಗಳಲ್ಲಿ ವಾಸಿಸುತ್ತಿರುವ ಮಿಜೊ, ನಾಗಾ, ಖಾಸಿ ಮುಂತಾದ ಬುಡಕಟ್ಟುಗಳು ಕ್ರೈಸ್ತ ಧರ್ಮಕ್ಕೆ ಮತಾಂತರಗೊಂಡರಲ್ಲದೆ ಮಿಷನರಿಗಳು ನೀಡಿದ ಶೈಕ್ಷಣಿಕ ಸೌಲಭ್ಯದಿಂದ ಈ ಬುಡಕಟ್ಟಿನ ಗುಂಪುಗಳಲ್ಲಿ ಹೆಚ್ಚಿನ ವಿದ್ಯಾವಂತರಿದ್ದಾರೆ.

'ಸಾಮೂಹಿಕ ಜನಾಂದೋಲನಗಳ, ಮಿಷನರಿಗಳ ಪ್ರಯತ್ನಗಳಿಂದಾಗಿ, ಕ್ರಮೇಣವಾಗಿ ಬುಡಕಟ್ಟು ಜನಸಮುದಾಯದ ಶಿಕ್ಷಣ ೧೯೫೦ರ ಸುಮಾರಿನಲ್ಲಿ ಆಶಾದಾಯಕ ಬೆಳವಣಿಗೆಯ ಕಡೆಗೆ ಮುಖ ಮಾಡಿತೆಂದು ಹೇಳಬಹುದಾಗಿದೆ'.[೩೨]

**ಭಾರತದ ಸ್ವಾತಂತ್ರ್ಯ ನಂತರದಲ್ಲಿ ಬುಡಕಟ್ಟು ಸಮುದಾಯಗಳ ಶಿಕ್ಷಣ**

ಭಾರತದ ಪ್ರಥಮ ಪ್ರಧಾನಿ ಜವಾಹರಲಾಲ ನೆಹರು ಅವರು 'ಆಧುನಿಕತೆ ಹಾಗೂ ಸುಧಾರಣಾವಾದದ ನೆಲೆಯಲ್ಲಿ ಬುಡಕಟ್ಟುಗಳ ಸಂಸ್ಕೃತಿಯನ್ನು ನಿರ್ಲಕ್ಷಿಸುವ ಹಾಗಿಲ್ಲ. ಶಿಕ್ಷಣ-ಪಠ್ಯಕ್ರಮ ಹಾಗೂ ಬುಡಕಟ್ಟು ಸಮುದಾಯಗಳ ಸಂಸ್ಕೃತಿಯ ಪೂರಕ ವ್ಯವಸ್ಥೆಯು ಅಷ್ಟು ಸುಲಭಕಾರ್ಯವಲ್ಲ. ಔಪಚಾರಿಕ ಶಿಕ್ಷಣದಿಂದಲೇ ನಾವು ಬುಡಕಟ್ಟುಗಳ ಶಿಕ್ಷಣ ಅಭಿವೃದ್ಧಿ ಸಾಧಿಸಲು ಸಾಧ್ಯವಿಲ್ಲ. ಅದಕ್ಕಾಗಿ ವಿಶೇಷ ಶಿಕ್ಷಣದ ಕ್ರಮಗಳನ್ನು ಅವರ ಅಗತ್ಯಗಳ ಅನುಸಾರ ರೂಪಿಸಬೇಕಾದ ತುರ್ತು ಅಗತ್ಯವಿದೆ' ಎಂದು ಹೇಳಿದರು. ಬುಡಕಟ್ಟು ಶಿಕ್ಷಣದ ಹಾಗೂ ಸಮುದಾಯಗಳ ಹಿತಾಸಕ್ತಿಯನ್ನು

ಕಾಪಾಡುವ ಕೆಲವು ಸೌಲಭ್ಯಗಳು ಸಂವಿಧಾನದಲ್ಲಿ ರೂಪಿತವಾದವು. ಕಲಂ ೪೬ ರ ಪ್ರಕಾರ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಶೈಕ್ಷಣಿಕ ಹಾಗೂ ಆರ್ಥಿಕ ಹಿತವನ್ನು ರಕ್ಷಿಸುವುದು ರಾಜ್ಯದ ಹೊಣೆಗಾರಿಕೆಯಾಗಿದೆ. ಕೊಠಾರಿ ಶಿಕ್ಷಣ ಆಯೋಗವು (೧೯೬೪-೬೬) ತನ್ನ ಶಿಫಾರಸ್ಸುಗಳಲ್ಲಿ ಬುಡಕಟ್ಟು ಸಮುದಾಯದ ಶಿಕ್ಷಣಕ್ಕೆ ಆದ್ಯತೆ ನೀಡುವಂತೆ ತಿಳಿಸಿತು. ನಿರ್ಲಕ್ಷಿತ ಕ್ಷೇತ್ರಗಳಿಗೆ ಶಿಕ್ಷಣವನ್ನು ಪ್ರಸಾರ ಮಾಡಬೇಕೆಂದು ಸೂಚಿಸಿತು. ಗುಡ್ಡಗಾಡು ಪ್ರದೇಶಗಳು ಆದ್ಯತೆಯ ಕೇಂದ್ರಗಳಾಗಿ ಪರಿವರ್ತಿತವಾದವು. ಪ್ರಾಥಮಿಕ ಶಾಲಾ ಶಿಕ್ಷಣ, ವಸತಿ ಶಿಕ್ಷಣ ಮಾದರಿಯ ಆಶ್ರಮ ಶಾಲೆಗಳ ಸ್ಥಾಪನೆ, ಶಾಲಾ ಆರಂಭದ ಎರಡು ವರ್ಷಗಳ ಶಿಕ್ಷಣ ಬೋಧನಾ ಮಾಧ್ಯಮ ಬುಡಕಟ್ಟು ಸಮುದಾಯದ ಭಾಷೆಯೆ ಆಗಿರಬೇಕೆಂದು, ಅನಂತರ ಪ್ರಾದೇಶಿಕ ಭಾಷೆಯಲ್ಲಿ ಶಿಕ್ಷಣ ನೀಡಬೇಕೆಂದು ಶಿಫಾರಸ್ಸು ಮಾಡಿತು. ಬುಡಕಟ್ಟು ಸಮುದಾಯಗಳ ಶಿಕ್ಷಣದ ಬೆಳವಣಿಗೆಗೆ 'ರಾಷ್ಟ್ರೀಯ ಶಿಕ್ಷಣ ನೀತಿ' ೧೯೮೬ (NPE) ಅತೀ ಪ್ರಮುಖವಾದ ಕೊಡುಗೆಗಳನ್ನು ನೀಡಿತೆಂದು ಹೇಳಬಹುದು. ಬುಡಕಟ್ಟು ವಾತಾವರಣದಲ್ಲಿ ಬೋಧಿಸಲು ಅರ್ಹ ಹಾಗೂ ಅನುಭವಿ ಶಿಕ್ಷಕರ ನೇಮಕಾತಿಯಾಗಬೇಕೆಂದು, ಶಿಕ್ಷಕರನ್ನು ಈ ಪ್ರದೇಶಗಳಿಗೆ ಆಕರ್ಷಿಸಲು ಸರಕಾರ ಪ್ರಯತ್ನಿಸಬೇಕೆಂದು ಸಲಹೆ ನೀಡಿತು.[೩೩]

ಬುಡಕಟ್ಟು ಜನರ ಸರ್ವತೋಮುಖ ಅಭಿವೃದ್ಧಿಗೆ ಸೂಕ್ತ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದು ಭಾರತ ಸ್ವಾತಂತ್ರ್ಯವಾದ ನಂತರ. ಭಾರತ ಸರಕಾರ ಹಲವು ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಸೌಲಭ್ಯಗಳನ್ನು ಬುಡಕಟ್ಟಿನ ಜನರಿಗೆ ಒದಗಿಸಿದೆ. ಅದರಲ್ಲಿ ಶೈಕ್ಷಣಿಕ ಸೌಲಭ್ಯಗಳೆಂದರೆ: ಉಚಿತ ಮತ್ತು ಕಡ್ಡಾಯ ಪ್ರಾಥಮಿಕ ಶಿಕ್ಷಣವನ್ನು ಜಾರಿ ಮಾಡಿದ್ದಲ್ಲದೆ, 'ಮಕ್ಕಳು ವಿದ್ಯಾಭ್ಯಾಸವನ್ನು ಪಡೆಯುವುದು ಅವರ ಹಕ್ಕು' ಎಂಬುದನ್ನು ಸಂವಿಧಾನದಲ್ಲಿ ಸೇರಿಸಲಾಯಿತು. ಶಾಲೆಗಳಿಗೆ ತಮ್ಮ ಮಕ್ಕಳನ್ನು ಕಳುಹಿಸದೆ ಶಿಕ್ಷಣ ವಂಚಿತರನ್ನಾಗಿ ಮಾಡುವ ತಂದೆ-ತಾಯಿಗಳ ಮೇಲೂ ಕ್ರಮಕೈಗೊಳ್ಳುವುದಾಗಿ ಸರ್ಕಾರ ಘೋಷಿಸಿತು.

ಇದಲ್ಲದೆ ಬುಡಕಟ್ಟಿನ ಮಕ್ಕಳಿಗೆ ಶಾಲೆಯಲ್ಲಿ ಮಧ್ಯಾಹ್ನದ ಊಟ, ಉಚಿತ, ಬಟ್ಟೆ, ಪುಸ್ತಕ ವಿತರಣೆ ಅವರಿಗೆ ವಿದ್ಯಾರ್ಥಿ ವೇತನ, ಅಲ್ಲದೇ ಪ್ರತ್ಯೇಕ ವಿದ್ಯಾರ್ಥಿನಿಲಯ ಮತ್ತು ಆಶ್ರಮ ಶಾಲೆಗಳು, ಉದ್ಯೋಗ ಮತ್ತು ತಂತ್ರಜ್ಞಾನ ತರಬೇತಿ ಕೇಂದ್ರಗಳನ್ನು ತೆರೆದಿದೆ. ಎಲ್ಲಾ ಶಾಲಾ ಕಾಲೇಜು, ಉನ್ನತ ವ್ಯಾಸಂಗ, ವೃತ್ತಿಪರ ಕೋರ್ಸುಗಳಲ್ಲಿಯೂ ಅವರಿಗೆ ಮೀಸಲಾತಿಯನ್ನು ಒದಗಿಸಿದೆ. ಉನ್ನತ ಹುದ್ದೆಗಳಿಗೆ ಸೇರಬಯಸುವ ಅಭ್ಯರ್ಥಿಗಳಿಗೆ ಉಚಿತ ತರಬೇತಿಯನ್ನು ನೀಡುತ್ತಿದೆ. ಹೀಗೆ ನಮ್ಮ ಸರಕಾರ ಹಣಕಾಸು ಮತ್ತು ಹಣಕಾಸೇತರ ಸೌಲಭ್ಯಗಳನ್ನು ಒದಗಿಸುತ್ತಿದೆ. ಇದರಿಂದ ಅವರುಗಳು ವಿದ್ಯಾವಂತರಾಗುತ್ತಿದ್ದಾರೆ. ಆದರೆ ಸರಕಾರವು ಒದಗಿಸಿದ ಸೌಲಭ್ಯಗಳಿಗೆ ಅನುಗುಣವಾಗಿ ನಿರೀಕ್ಷಿತ ಮಟ್ಟದಲ್ಲಿ ಅವರುಗಳ ವಿದ್ಯಾಭ್ಯಾಸ ಮಟ್ಟ ಏರಿಕೆಯಾಗಿಲ್ಲ ಎಂಬುದನ್ನು ಈ ಕೆಳಗಿನ ಜನಗಣತಿಯ ಅಂಕಿ-ಅಂಶಗಳಿಂದ ತಿಳಿದುಕೊಳ್ಳಬಹುದು.

## ಕೋಷ್ಟಕ ೫.೧೩

### ಸಾಮಾನ್ಯ ಹಾಗೂ ಬುಡಕಟ್ಟುಗಳ ತುಲನಾತ್ಮಕ ಸಾಕ್ಷರತೆ[೩೪]

| ಜನಗಣತಿ | ಸಾಮಾನ್ಯ ಸಾಕ್ಷರತೆ | ಬುಡಕಟ್ಟು ಸಾಕ್ಷರತೆ |
|---|---|---|
| ೧೯೬೧ | ೨೪.೦೦% | ೮.೫೩% |
| ೧೯೭೧ | ೨೯.೪೫% | ೧೧.೩೦% |
| ೧೯೮೧ | ೩೬.೨೩% | ೧೬.೩೫% |
| ೧೯೯೧ | ೫೨.೩೩% | ೨೯.೬೦% |
| ೨೦೦೧ | ೬೫.೨೮% | ೪೭.೧೦% |

**ಆಧಾರ:** ಬುಡಕಟ್ಟು ವ್ಯವಹಾರಗಳ ಸಚಿವಾಲಯ ವಾರ್ಷಿಕ ವರದಿ, ೨೦೦೬.

ಉತ್ತರ ಈಶಾನ್ಯ ಪ್ರದೇಶದ ಲುಷಾಯಿ ಬುಡಕಟ್ಟಿನ ಶೇಕಡಾ ೪೦ರಷ್ಟು ಜನ ವಿದ್ಯಾವಂತರಿದ್ದಾರೆ. ರಾಜ್ಯವಾರು ಶಿಕ್ಷಣ ಮಟ್ಟವನ್ನು ಗಮನಿಸಿದಾಗ ಆಂಧ್ರಪ್ರದೇಶದಲ್ಲಿ ಕೇವಲ ಶೇಕಡಾ ೪ ರಷ್ಟು ಬುಡಕಟ್ಟು ಜನರು ವಿದ್ಯಾವಂತರಿದ್ದಾರೆ. ಮಣಿಪುರದಲ್ಲಿ ಶೇಕಡಾ ೨೭ರಷ್ಟು ಬುಡಕಟ್ಟಿನ ಜನರು ವಿದ್ಯಾವಂತರಾಗಿದ್ದಾರೆ. ಗುಜರಾತ್, ಕೇರಳ, ಮಹಾರಾಷ್ಟ್ರ, ರಾಜ್ಯಗಳಲ್ಲಿ ಬುಡಕಟ್ಟಿನ ವಿದ್ಯಾವಂತರ ಸಂಖ್ಯೆ ಗಣನೀಯವಾಗಿ ಹೆಚ್ಚಾಗುತ್ತಿದೆ. ಹಾಗೆಯೇ ಮಿಜೋರಾಮದ ಮಿಜೋ, ಮಣಿಪುರದ ಚೇರು, ಮೇಘಾಲಯದ ಖಾಸಿ, ಕುಕಿಗಳಲ್ಲಿ ವಿದ್ಯಾವಂತರ ಸಂಖ್ಯೆ ಬಹಳ ಹೆಚ್ಚಾಗಿದೆ.

ಐದನೇ ಶಿಕ್ಷಣದ ಅಖಿಲ ಭಾರತದ ಸರ್ವೇಕ್ಷಣೆಯು ಬುಡಕಟ್ಟು ಸಮುದಾಯಗಳ ಶಿಕ್ಷಣದ ಸ್ಥಿತಿಗತಿಯ ಅಂಕಿ-ಅಂಶಗಳನ್ನು ನೀಡುತ್ತದೆ. ಅದರಲ್ಲಿ ೮೩% ಬುಡಕಟ್ಟುಗಳು ೧ ಕಿ.ಮೀ. ಅಂತರದಲ್ಲಿ ಶಾಲೆಯನ್ನು ಪಡೆದಿವೆ. ೧೩.೯% ಜನಸಮುದಾಯಕ್ಕೆ ಶಾಲೆಯು ೧.೫ ಕಿ.ಮೀ. ಅಂತರದಲ್ಲಿ ಲಭ್ಯವಿಲ್ಲ. ೮.೩% ಬುಡಕಟ್ಟುಗಳಿಗೆ ೨ ಕಿ.ಮೀ. ಅಂತರದಲ್ಲಿ ಶಾಲೆಗಳ ಲಭ್ಯತೆ ಇಲ್ಲ ಎಂದು ಸೂಚಿಸುತ್ತದೆ. ಸುಮಾರು ೨೫೦೦೦ ಬುಡಕಟ್ಟು ನೆಲೆಗಳು ಶಾಲಾ ಶಿಕ್ಷಣ ವ್ಯವಸ್ಥೆ ಹೊಂದಿಲ್ಲವೆಂದು ತಿಳಿಸಿತು. ಪ್ರೌಢಶಿಕ್ಷಣದ ಲಭ್ಯತೆಯ ತೀರಾ ಹಿಂದುಳಿದ ಸ್ಥಿತಿಯನ್ನು ಪ್ರಸ್ತಾಪಿಸಿ ೧೮.೮% ಪರಿಶಿಷ್ಟರು ಮಾತ್ರ

ಈ ಸೌಲಭ್ಯ ಪಡೆದುದಾಗಿ ತಿಳಿಸಿತು. ಕೇಂದ್ರ ಸರ್ಕಾರ, ರಾಜ್ಯ ಸರಕಾರಗಳು, ಸಂಘ ಸಂಸ್ಥೆಗಳು, ಸರಕಾರೇತರ ಸ್ವಯಂ ಸಂಸ್ಥೆಗಳು, ಶಿಕ್ಷಣ ಕಾರ್ಯಗಳಿಗೆ ಪ್ರಯತ್ನಿಸಬೇಕೆಂದು ತಿಳಿಸಿತು.

**ಕರ್ನಾಟಕದಲ್ಲಿ ಬುಡಕಟ್ಟು ಸಮುದಾಯಗಳ ಶಿಕ್ಷಣ**[೬೫]

ಭಾರತದ ಸಂವಿಧಾನದ ಪ್ರಕಾರ ಕರ್ನಾಟಕದಲ್ಲಿ ೫೦ ಉಪಜಾತಿಗಳನ್ನು ಪರಿಶಿಷ್ಟ ವರ್ಗಗಳಿಗೆ ಸೇರಿಸಲಾಗಿದೆ. ಇವುಗಳಲ್ಲಿ 'ಕೊರಗ' ಹಾಗೂ 'ಜೇನುಕುರಬ' ಬುಡಕಟ್ಟುಗಳನ್ನು ಪ್ರಾಚೀನ ಬುಡಕಟ್ಟುಗಳೆಂದು ಗುರುತಿಸಲಾಗಿದೆ. ಕನ್ನಡ ನಾಡಿನ ಬಹುಸಂಖ್ಯಾತ ಬುಡಕಟ್ಟು ಜನರ ಮಾತೃಭಾಷೆ ಕನ್ನಡವಲ್ಲ. ಹಾಲಕ್ಕಿಯವರು ಕನ್ನಡ, ಸಿದ್ದಿಗಳು ಕನ್ನಡ ಮಿಶ್ರಿತದ ಕೊಂಕಣಿ, ಗೌಳಿಗರು ಹಾಗೂ ಕುಣಬಿಯರು ಕೊಂಕಣಿ ಮಿಶ್ರಿತ ಮರಾಠಿ ಹೀಗೆ ಬೇರೆ ಬೇರೆ ಮಾತೃಭಾಷೆಗಳನ್ನು ಹೊಂದಿದ್ದಾರೆ. ೨೦೦೧ರ ಜನಗಣತಿ ಪ್ರಕಾರ ಕರ್ನಾಟಕದಲ್ಲಿ ಪರಿಶಿಷ್ಟ ವರ್ಗಗಳ ಸಂಖ್ಯೆ ೨೪,೬೩,೯೮೬ ಇದ್ದು, ಇದು ಒಟ್ಟು ಜನಸಂಖ್ಯೆಯ ೬.೫೫% ಇದೆ. ಕರ್ನಾಟಕದ ಬಹುತೇಕ ಎಲ್ಲ ಜಿಲ್ಲೆಗಳಲ್ಲಿ ಬುಡಕಟ್ಟು ಜನರು ವಾಸಿಸುತ್ತಿದ್ದಾರೆ. ಬುಡಕಟ್ಟುಗಳ ಶೈಕ್ಷಣಿಕ, ಆರ್ಥಿಕ ಹಾಗೂ ಸಾಮಾಜಿಕ ಅಭಿವೃದ್ಧಿಗೆ ಸರಕಾರ ಪ್ರಯತ್ನಿಸುತ್ತಿದೆ. ಕೇಂದ್ರ ಸರಕಾರದ ಅನುದಾನ ಹಾಗೂ ರಾಜ್ಯಪಾಲುದಾರಿಕೆಯಲ್ಲಿ ಅನೇಕ ಕಾರ್ಯಕ್ರಮಗಳು ರಾಜ್ಯದಲ್ಲಿ ಜಾರಿಯಲ್ಲಿವೆ. ೧೯೯೧ ರಲ್ಲಿ ಪರಿಶಿಷ್ಟ ವರ್ಗಗಳ ನಿರ್ದೇಶನಾಲಯವನ್ನು ತೆರೆಯಲಾಗಿದೆ. ಅತಿಹೆಚ್ಚು ಬುಡಕಟ್ಟು ಜನಸಂಖ್ಯೆ ಹೊಂದಿರುವ ಐದು ಜಿಲ್ಲೆಗಳಾದ ಮೈಸೂರ, ಕೊಡಗು, ಚಿಕ್ಕಮಗಳೂರು, ದಕ್ಷಿಣ ಕನ್ನಡ ಹಾಗೂ ಚಾಮರಾಜನಗರಗಳಲ್ಲಿ ಬುಡಕಟ್ಟು ಅಭಿವೃದ್ಧಿ ಕೇಂದ್ರಗಳನ್ನು ತೆರೆಯಲಾಗಿದೆ. ೨೦೦೧-೦೨ ರಲ್ಲಿ ಚಿತ್ರದುರ್ಗ, ಬೆಳಗಾವಿ, ರಾಯಚೂರ, ಚಾಮರಾಜನಗರ ಜಿಲ್ಲೆಗಳಲ್ಲಿ ಬುಡಕಟ್ಟು ಕಲ್ಯಾಣಾಧಿಕಾರಿಗಳನ್ನು ನೇಮಿಸಲಾಗಿದೆ. ತಾಲೂಕ ಮಟ್ಟದಲ್ಲಿ ಸಮಾಜ ಕಲ್ಯಾಣಾಧಿಕಾರಿಗಳು ಪರಿಶಿಷ್ಟವರ್ಗದ ಶಿಕ್ಷಣದ ಹೊಣೆಗಾರಿಕೆ ಹೊತ್ತುಕೊಂಡಿದ್ದಾರೆ.

ಕರ್ನಾಟಕ ರಾಜ್ಯದಲ್ಲಿ ಬುಡಕಟ್ಟು ಸಮುದಾಯಗಳ ಸಾಕ್ಷರತೆ ಹಾಗೂ ಶಿಕ್ಷಣ ಪೂರಕ ಕಾರ್ಯಕ್ರಮಗಳನ್ನು ರೂಪಿಸಲಾಗಿದೆ. ೨೦೦೧ ರ ಜನಗಣತಿ ಪ್ರಕಾರ ಕರ್ನಾಟಕದ ಸಾಮಾನ್ಯ ಸಾಕ್ಷರತೆ ೬೭% ಪ್ರತಿಶತವಿದ್ದು ಬುಡಕಟ್ಟುಗಳ ಸಾಕ್ಷರತೆಯು ೪೮.೦೭ ರಷ್ಟು ಕಂಡುಬಂದಿದೆ. ಪುರುಷರಲ್ಲಿ ೫೩.೦೨% ಹಾಗೂ ಮಹಿಳೆಯರಲ್ಲಿ ೩೬.೦೬% ಸಾಕ್ಷರತೆ ಕಂಡು ಬಂದಿದೆ. ಸಮಾಜಕಲ್ಯಾಣ ಇಲಾಖೆ, ಕೇಂದ್ರದ ಅನುದಾನ ಬಳಿಸಿಕೊಂಡು ತನ್ನದೆಯಾದ ಶಿಕ್ಷಣ ಯೋಜನೆಗಳನ್ನು ಜಾರಿ ಮಾಡಿದೆ. ಬುಡಕಟ್ಟು ಮಕ್ಕಳಿಗಾಗಿ ಆಶ್ರಮ ಶಾಲೆಗಳು (ವಸತಿ ಮಾದರಿಯ ಶಾಲೆಗಳು-೧೨೨, ಅಲ್ಲಿ ೯೨೦೦ ಮಕ್ಕಳು ಓದುತ್ತಿದ್ದಾರೆ). ಉಚಿತ ಮೆಟ್ರಿಕ್ ಪೂರ್ವ ಹಾಸ್ಟೆಲ್‌ಗಳು (ಈಗ ಹುಡುಗರಿಗೆ ೭೨ ಹಾಗೂ ಹುಡುಗಿಯರಿಗೆ ೨೦ ಹಾಸ್ಟೆಲ್‌ಗಳು ಕಾರ್ಯನಿರತವಾಗಿದ್ದು, ೪೯೦೦ ಮಕ್ಕಳು ಇದರ ಲಾಭಪಡೆಯುತ್ತಿದ್ದಾರೆ). ೧೦ ಶಾಲಾ ಸಂಕೀರ್ಣಗಳು ಹಾಗೂ ಕೇಂದ್ರಿಯ ವಸತಿ ಶಾಲೆಗಳು ಕಾರ್ಯನಿರತವಾಗಿವೆ (ಶಾಲೆಗಳು -೦೨ ಇದ್ದು ೨೨೬ ಮಕ್ಕಳು ಇದ್ದಾರೆ). ಪರಿಶಿಷ್ಟ ಶಿಕ್ಷಣಕ್ಕಾಗಿ ಅನುದಾನಿತ ಶಾಲಾ ಕಾಲೇಜುಗಳು ಇವೆ. ಉಚಿತ ಪಠ್ಯಪುಸ್ತಕ, ವಸತಿ ಹಾಗೂ ವಿದ್ಯಾರ್ಥಿವೇತನ ನೀಡಲಾಗುತ್ತಿದೆ. ವಿವಿಧ ವೃತ್ತಿಕೋರ್ಸುಗಳಲ್ಲಿ ಮೀಸಲಾತಿ ಸೌಲಭ್ಯವಿದ್ದು, ಇಂಜನೀಯರಿಂಗ್ ವೈದ್ಯಕೀಯ

ಶಿಕ್ಷಣಕ್ಕಾಗಿ ಅವಕಾಶವಿದೆ. ಪರೀಕ್ಷೆಯಲ್ಲಿ ರ್‍ಯಾಂಕಗಳಿಸುವ ಮಕ್ಕಳಿಗೆ ಬಹುಮಾನ, ಪದವಿ ಹಾಗೂ ಉನ್ನತ ಶಿಕ್ಷಣಕ್ಕೆ ಸಾಲಸೌಲಭ್ಯ ಕಲ್ಪಿಸಲಾಗಿದೆ. 'ಬುಕ್ ಬ್ಯಾಂಕ್' ಎನ್ನುವ ಪುಸ್ತಕ ನೀಡುವ ಸೌಲಭ್ಯವಿದ್ದು, ಎಂ.ಫಿಲ್., ಪಿಹೆಚ್.ಡಿ ಸಂಶೋಧನೆಗೆ ಹಣಕಾಸಿನ ಸೌಲಭ್ಯವನ್ನು ನೀಡಲಾಗುತ್ತಿದೆ. ಬುಡಕಟ್ಟು ವರ್ಗದ ಪ್ರತಿನಿಧಿಗಳಿಗೆ ಕರಕುಶಲ ತರಬೇತಿ, ಹೊಲಿಗೆ ತರಬೇತಿ, ಡ್ರಾಯಿಂಗ್, ಪೆಂಟಿಂಗ್ ತರಬೇತಿಗಳು ಚಾಲನೆಯಲ್ಲಿವೆ. ಸ್ವಯಂ ಜೀವನ ನಡೆಸಲು ಸಶಕ್ತಿಗೊಳಿಸುವ ಅಲ್ಪಾವಧಿ ತರಬೇತಿ ಶಿಕ್ಷಣ ಕಾರ್ಯಕ್ರಮಗಳು ಕರ್ನಾಟಕದಲ್ಲಿ ಜನಪ್ರಿಯವಾಗಿವೆ. ಇಲಾಖೆಯು ೨೭೮ ಸಂಸ್ಥೆಗಳನ್ನು ನಡೆಸುತ್ತಿದ್ದು, ೧೭೬೭೦ ಮಕ್ಕಳು ಲಾಭ ಪಡೆಯುತ್ತಿದ್ದಾರೆ. ಸರಕಾರದ ಜೊತೆಗೆ ಸರಕಾರೇತರ ಸಂಘ ಸಂಸ್ಥೆಗಳು ಬುಡಕಟ್ಟು ಜನಾಂಗದ ಅಭಿವೃದ್ಧಿಗಾಗಿ ದುಡಿಯುತ್ತಿವೆ. ಡಾ. ಸುದರ್ಶನರವರ ನೇತೃತ್ವದ 'ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರ' ಬಿಳಿಗಿರಿ ರಂಗನಬೆಟ್ಟದಲ್ಲಿ ಕಾರ್ಯಪ್ರವೃತ್ತವಾಗಿದೆ. ಮಕ್ಕಳ ಶಿಕ್ಷಣದ ಹೊಸ ಪ್ರಯೋಗಗಳು ಇಲ್ಲಿ ಸಾಗಿದೆ. ಹೆಗ್ಗಡದೇವನ ಕೋಟೆಯ ವಿವೇಕಾನಂದ ಯುವ ಕೇಂದ್ರ ಶಿಕ್ಷಣದ ಪ್ರಸಾರ ಮಾಡುತ್ತದೆ. ವಿಶ್ವವಿದ್ಯಾಲಯಗಳು ಈ ದಿಸೆಯಲ್ಲಿ ಕಾರ್ಯ ಪ್ರವೃತ್ತರಾಗಿದ್ದು ***ಕನ್ನಡ ವಿಶ್ವವಿದ್ಯಾಲಯ ಹಂಪಿಯಲ್ಲಿ 'ಬುಡಕಟ್ಟು ಅಧ್ಯಯನ ವಿಭಾಗ'*** ವನ್ನು ಪ್ರಾರಂಭಿಸಿ, ಕರ್ನಾಟಕದ ಬುಡಕಟ್ಟು ಶಿಕ್ಷಣ ಸಂಶೋಧನೆ ಹಾಗೂ ಬುಡಕಟ್ಟು ಸಂಸ್ಕೃತಿಯ ರಕ್ಷಣೆಗೆ ಸತತವಾಗಿ ಕಾರ್ಯ ಪ್ರವೃತ್ತಿಸಲಾಗಿದೆ. ಪುಸ್ತಕಪ್ರಕಟಣೆ, ಕಾರ್ಯಗಾರ, ವಿಚಾರಗೋಷ್ಠಿ, ಚಿಂತನ ಮಂಥನ ಮಾಡುತ್ತಿದೆ. ಇದು ಶ್ಲಾಘನೀಯ ಕಾರ್ಯವಾಗಿದೆ. ರಾಜ್ಯ ಸರಕಾರದಡಿಯಲ್ಲಿ 'ಬುಡಕಟ್ಟು ಸಂಶೋಧನಾ ಹಾಗೂ ಪ್ರಕಟಣಾ ವಿಭಾಗ' ಹೊಂದಿರುವ ಇಲಾಖೆಯು, ಕೇಂದ್ರದೊಡನೆ ಸೂಕ್ತ ಸಮನ್ವಯ ಸಾಧಿಸಿ ರಾಜ್ಯದಲ್ಲಿ ಬುಡಕಟ್ಟು ಜನಾಂಗದ ಶಿಕ್ಷಣಕ್ಕಾಗಿ ಶ್ರಮಿಸುತ್ತಿದೆ.

ಒಟ್ಟಾರೆಯಾಗಿ ಹೇಳುವುದಾದರೆ ಬುಡಕಟ್ಟು ಸಮುದಾಯವು ಶಿಕ್ಷಣ ತಜ್ಞರ, ಆರ್ಥಿಕ ತಜ್ಞರ ಗಮನಸೆಳೆದಿದೆ. ಶಿಕ್ಷಣದ ಕಲ್ಯಾಣಕ್ಕಾಗಿ ವ್ಯಾಪಕವಾಗಿ ಕಾರ್ಯಕ್ರಮಗಳು ಜಾರಿಯಾಗಿವೆ. ಮುಂದಿನ ದಿನಗಳು ಬುಡಕಟ್ಟು ಸಮುದಾಯಗಳ ಅಭಿವೃದ್ಧಿಯನ್ನು ಸಾಧಿಸಬಲ್ಲವು ಎಂಬ ಆಶಾವಾದವನ್ನು ನಿಶ್ಚಿತವಾಗಿ ಹೊಂದಬಹುದಾಗಿದೆ.

**ಉತ್ತರ ಕನ್ನಡ ಜಿಲ್ಲೆಯ ಗೌಳಿ ಸಮುದಾಯದಲ್ಲಿ ಶೈಕ್ಷಣಿಕ ಬದಲಾವಣೆ**

ಗೌಳಿಗರು ದಟ್ಟ ಅರಣ್ಯ, ಕಾಡಿನಲ್ಲಿ ಒಂದು ಕಡೆ ನೆಲೆ ನಿಂತು ತಮ್ಮದೇ ಆದ ಪಾರಂಪರಿಕ ಮೂಲ ವೃತ್ತಿ/ಕುಲಕಸುಬಾದ ಹೈನುಗಾರಿಕೆಯನ್ನು ಮೈಗೂಡಿಸಿಕೊಂಡು, ತಮ್ಮ ಅಗತ್ಯತೆಗಳನ್ನು ರೂಪಿಸಿಕೊಂಡು ಮಾನಸಿಕವಾಗಿ ನೆಮ್ಮದಿಯ ಬದುಕು ಬಾಳುತ್ತಿದ್ದ ಜನ. ಗೌಳಿ ಸಮುದಾಯವು ಶೈಕ್ಷಣಿಕವಾಗಿ ಅತ್ಯಂತ ಹಿಂದುಳಿದ ಜನರಾಗಿದ್ದಾರೆ. ಶೈಕ್ಷಣಿಕ ಹಿಂದುಳಿದಿರುವಿಕೆ ಇವರನ್ನು ಆರ್ಥಿಕ, ಸಾಮಾಜಿಕ, ರಾಜಕೀಯವಾಗಿ ಇನ್ನೂ ಹಿಂದುಳಿದವರನ್ನಾಗಿ ಮಾಡಿದೆ. ಗೌಳಿಗರು ತಮ್ಮದೆ ಆದ ಸಂಸ್ಕೃತಿಯನ್ನು ಮತ್ತು ಶಿಕ್ಷಣ ಪದ್ಧತಿಯನ್ನು ಕಟ್ಟಿಕೊಂಡಿದ್ದಾರೆ. 'ನೋಡಿ ತಿಳಿ; ಮಾಡಿ ಕಲಿ' ಇದು ಗೌಳಿ ಸಮುದಾಯದ ಶಿಕ್ಷಣ ಪದ್ಧತಿಯಾಗಿದೆ. ಕಲಿಕೆ-ಗಳಿಕೆ ಅವರಲ್ಲಿ ಏಕಕಾಲದಲ್ಲಿಯೇ ನಡೆದಿರುತ್ತದೆ. ಆಧುನಿಕ ಔಪಚಾರಿಕ ಶಿಕ್ಷಣ ವ್ಯವಸ್ಥೆಯಿಂದ ದೂರವಿದ್ದ ಈ ಗೌಳಿ ಸಮುದಾಯದಲ್ಲಿ ಯಾವ

ರೀತಿಯ ಅನೌಪಚಾರಿಕ ಶಿಕ್ಷಣ ಪದ್ಧತಿ, ಇತ್ತೋ ಅದನ್ನು ಇವತ್ತಿಗೂ ಮುಂದುವರಿಸಿಕೊಂಡು ಬರುತ್ತಿದ್ದಾರೆ ಎನ್ನುವುದನ್ನು ನೋಡಿದರೆ ಪಾರಂಪರಿಕ ಶಿಕ್ಷಣದ ಜೀವಂತಿಕೆಯನ್ನು ಇವರಲ್ಲಿ ಇನ್ನೂ ಸ್ವಲ್ಪ ಕಾಣಬಹುದು.

ಬ್ರಿಟಿಷ್ ವಸಾಹತುಶಾಹೀ ಆಡಳಿತ ಕಾಲದಲ್ಲಿ ಔಪಚಾರಿಕ ಶಾಲಾ ಶಿಕ್ಷಣ ಜಾರಿಗೆ ಬಂದ ಮೇಲೆ ರಾಜ್ಯದ ಬೇರೆ ಬೇರೆ ಸಮುದಾಯಗಳು ಅವರವರ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳಿಗೆ ತಕ್ಕಂತೆ ಶಿಕ್ಷಣವನ್ನು ಪಡೆದರು. ಆದರೆ ಗೌಳಿ ಸಮುದಾಯದವರಿಗೆ ಔಪಚಾರಿಕ ಶಿಕ್ಷಣದ ಅವಕಾಶ ಸಿಗಲಿಲ್ಲ. ಯಾಕೆಂದರೆ ಶಾಲಾ ಶಿಕ್ಷಣವು ಗೌಳಿ ಸಮುದಾಯಕ್ಕೆ ಹೊಸದು. ಇವರು ದಟ್ಟ ಅರಣ್ಯದಲ್ಲಿ, ನಾಗರಿಕ ಸಮಾಜದಿಂದ ದೂರ ವಾಸಿಸುತ್ತಿದ್ದರಿಂದ ಗೌಳಿ ವಾಡಾಗಳಲ್ಲಿ ಶಾಲೆಗಳಿದ್ದಿಲ್ಲ. ಅಲ್ಲದೇ ಶಿಕ್ಷಣದ ಮಹತ್ವದ ಅರಿವು ಇವರಿಗೆ ಇರಲಿಲ್ಲ. ಒಂದು ವೇಳೆ ಮಕ್ಕಳು ಶಾಲೆಗೆ ಹೋಗಬೇಕೆಂದರೆ ವಾಡಾದಿಂದ ಬಹುದೂರ ಹೋಗಿ ಕಲಿಯಬೇಕಾಗುತ್ತಿತ್ತು. ಆದರೆ ಮಕ್ಕಳನ್ನು ದೂರದ ಶಾಲೆಗೆ ಕಳಿಸುವ ಆಸಕ್ತಿ ಇರಲಿಲ್ಲ. ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸದೇ ದನ ಮೇಯಿಸಲು ಇಲ್ಲವೇ ಗದ್ದೆಗೆ ಕಳುಹಿಸುತ್ತಿದ್ದರು. ಯಾರಾದರೂ ಮಕ್ಕಳನ್ನು ಏಕೆ ಶಾಲೆಗೆ ಕಳಿಸುವುದಿಲ್ಲವೆಂದು ಕೇಳಿದರೆ ಕಲಿತು ಏನು ಉದ್ಧಾರವಾಗಬೇಕಾಗಿದೆ ಎನ್ನುತ್ತಿದ್ದರಲ್ಲದೇ ಶಾಲೆಗೆ ಕಳಿಸಿದರೆ ಹೊಟ್ಟೆ ಹೊರೆಯಲು ಹಣ ಸಿಗುವುದೇ ಎಂದು ಕೇಳುತ್ತಿದ್ದರು.

ಆದರೆ ಆಧುನಿಕತೆ, ಔದ್ಯೋಗೀಕರಣ, ನಗರೀಕರಣ ಹಾಗೂ ಅಭಿವೃದ್ಧಿ ಯೋಜನೆಗಳಿಂದಾದ ಅರಣ್ಯ ನಾಶದಿಂದ ಮತ್ತು ಅರಣ್ಯ ನೀತಿಗಳಿಂದ ಬದಲಾದ ಅತಂತ್ರ ಪರಿಸ್ಥಿತಿಯಲ್ಲಿ ಕುಲಕಸುಬು ಹೈನುಗಾರಿಕೆ ಕೈತಪ್ಪಿ ಅವರು ಪರ್ಯಾಯವಾಗಿ ಸುತ್ತಲಿನ/ಸಮೀಪದ ಗ್ರಾಮೀಣ ಪ್ರದೇಶದಲ್ಲಿ ಜಮೀನದಾರ, ಮೇಲ್ಜಾತಿಯವರ ಜಮೀನಿನಲ್ಲಿ ಕೃಷಿಕೂಲಿ ಮಾಡಲಾರಂಭಿಸಿದರು. ಇದರಿಂದ ಸುತ್ತಲಿನ ನಾಗರಿಕ ಸಮಾಜದ ಜೊತೆ ಸಂಪರ್ಕ ಬೆಳೆದು ಅವರ ಕಲಿಯುವ ಮಕ್ಕಳನ್ನು ನೋಡಿ ಹಾಗೂ ಅವರ ಪ್ರಭಾವದಿಂದ ತಾವೂ ತಮ್ಮ ಮಕ್ಕಳನ್ನು ಶಾಲೆಗೆ ಯಾಕೆ ಕಳಿಸಬಾರದು ಎಂಬ ಯೋಚನೆ ಮೂಡಿ, ಮಕ್ಕಳನ್ನು ಶಾಲೆಗೆ ಕಳಿಸಲು ಮನಸ್ಸು ಮಾಡಲಾರಂಭಿಸಿದರು. ವರ್ಷವಿಡೀ ಕೃಷಿಕೂಲಿ ಸಿಗದ ಸಮಯದಲ್ಲಿ ಕೆಲವರು ಅತ್ತ ಕಾಡೂ ಇಲ್ಲದೇ ಇತ್ತ ಹತ್ತಿರದಲ್ಲಿ ಬೇಕಾದ ಉದ್ಯೋಗ ಮಾರ್ಗವಿಲ್ಲದೆ ಬೇರೆ ಕೆಲಸವನ್ನು ಅರಸಿ ವಲಸೆ ಹೋಗಬೇಕಾದಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಶಿಕ್ಷಣದ ಕೊರತೆಯಿಂದ ಕಡಿಮೆ ಸಂಭಾವನೆಯ ಕೆಲಸ ದೊರಕುತ್ತಿದ್ದುದರಿಂದ ಇಡೀ ಕುಟುಂಬ ನಿರ್ವಹಣೆಯು ಕಠಿಣವಾಯಿತು. ಆಗ ಗೌಳಿಗರಿಗೆ ಶಿಕ್ಷಣದ ಮಹತ್ವದ ಅರಿವಾಯಿತು. ಸ್ವಯಂ ಸೇವಾ ಸಂಸ್ಥೆಗಳೂ ಸಹ ಶಿಕ್ಷಣದ ಮಹತ್ವದ ಬಗ್ಗೆ ಅರಿವು ಹುಟ್ಟಿಸುವಲ್ಲಿ ಪಾತ್ರ ವಹಿಸಿದವು. ಇಂದಿನ ಸಮಾಜ ವ್ಯವಸ್ಥೆಗೆ ಶಿಕ್ಷಣ ಎಷ್ಟು ಮುಖ್ಯವೋ ಅದೇ ರೀತಿ ವಂಶ ಪರಂಪರೆಯಾಗಿ ತಮ್ಮ ಪಾಡಿಗೆ ತಾವು ಅನೌಪಚಾರಿಕ ಸಾಂಸ್ಕೃತಿಕ ಶಿಕ್ಷಣವನ್ನು ಮುಂದುವರೆಸಿಕೊಂಡು ಬಂದಿರುವ ಗೌಳಿ ಸಮುದಾಯಕ್ಕೂ ಶಿಕ್ಷಣ ಅಷ್ಟೇ ಮುಖ್ಯವೆಂಬ ಅರಿವಾದ್ದರಿಂದ ಮಕ್ಕಳನ್ನು ಶಾಲೆಗೆ ಕಳಿಸಲಾರಂಭಿಸಿದರು.

ಸರಕಾರದ ಶೈಕ್ಷಣಿಕ ಯೋಜನೆಗಳ ಪರಿಣಾಮದಿಂದ ಬಹುತೇಕ ಗೌಳಿವಾಡಗಳಲ್ಲಿ ಇಲ್ಲವೆ ಸಮೀಪದ ಗ್ರಾಮಗಳಲ್ಲಿ ಪ್ರಾಥಮಿಕ ಶಾಲೆಗಳ ಸೌಲಭ್ಯವಿದ್ದುದ್ದರಿಂದ, ಉಚಿತ ಹಾಗೂ ಕಡ್ಡಾಯ ಶಿಕ್ಷಣದ ಪರಿಣಾಮದಿಂದಾಗಿ ಮತ್ತು ರಾಜ್ಯ ಸರಕಾರದ ಪ್ರಾಥಮಿಕ ಶಿಕ್ಷಣಕ್ಕೆ ಕೊಡುತ್ತಿರುವ ಹಲವು ಯೋಜನೆಗಳಿಂದಾಗಿ ಗೌಳಿ ಸಮುದಾಯದ ಮಕ್ಕಳು ಇತ್ತೀಚಿಗೆ ಶಾಲೆಗೆ ಹೋಗಲು ಪ್ರಾರಂಭಿಸಿದರು. ಇಂದು ಬಹುತೇಕ ಗೌಳಿವಾಡಾಗಳಲ್ಲಿ ಕಿರಿಯ ಪ್ರಾಥಮಿಕ ಶಾಲೆ, ಅಂಗನವಾಡಿಗಳನ್ನು ಕಾಣಬಹುದು. ಇದು ಇಂದಿನ ಪೀಳಿಗೆಯ ಮಕ್ಕಳಿಗೆ ವರದಾನವಾಗಿದೆ.

ರಾಜ್ಯದ ಮೊದಲನೇ ಹಿಂದುಳಿದ ವರ್ಗಗಳ ಹಾವನೂರ ಆಯೋಗದ ವರದಿ-೧೯೭೫ ರ ಪ್ರಕಾರ ರಾಜ್ಯದ ಗೌಳಿ ಸಮುದಾಯದಲ್ಲಿ ಅಕ್ಷರಸ್ಥರ ಸಂಖ್ಯೆ ಶೇ ೨.೫ ರಷ್ಟಿದ್ದು, ೭ ನೇ ತರಗತಿ ಒಳಗೆ ಶಾಲೆಯನ್ನು ಮಧ್ಯಕ್ಕೆ ಬಿಟ್ಟವರ ಸಂಖ್ಯೆ ಶೇ. ೪೩.೯ ಕ್ಕಿಂತ ಹೆಚ್ಚಿತ್ತು. ೧೯೮೫ ರಲ್ಲಿ ೨೫ ಜನ ವಿದ್ಯಾರ್ಥಿಗಳು ಎಸ್.ಎಸ್.ಎಲ್.ಸಿ. ಪರೀಕ್ಷೆಗೆ ಕುಳಿತು ತೇರ್ಗಡೆಯಾಗಿದ್ದರಂತೆ. ಗೌಳಿಗರಲ್ಲಿ ಅನಕ್ಷರಸ್ಥರ ಸಂಖ್ಯೆ ಹೆಚ್ಚಿದ್ದು, ಶಾಲೆಯನ್ನು ಮಧ್ಯದಲ್ಲೇ ಬಿಡುವವರ ವಿಶೇಷವಾಗಿ ಶಾಲೆ ಬಿಡುವ ಹೆಣ್ಣು ಮಕ್ಕಳ ಸಂಖ್ಯೆ ಅಧಿಕ. ಉನ್ನತ ಶಿಕ್ಷಣದಲ್ಲಿ ಪ್ರತಿಶತ ಒಂದಕ್ಕಿಂತಲೂ ಕಡಿಮೆ ಎಂದು ಹೇಳಬಹುದು. ಶಾಲಾ ಕಾಲೇಜುಗಳಲ್ಲಿ ಓದುತ್ತಿರುವ ಗೌಳಿ ಸಮುದಾಯದ ವಿದ್ಯಾರ್ಥಿಗಳ ಸಂಖ್ಯೆಯನ್ನು ರಾಜ್ಯದ ಪ್ರತಿಶತ ವಿದ್ಯಾರ್ಥಿಗಳ ಸಂಖ್ಯೆ ಹಾಗೂ ಇತರ ಸಮುದಾಯಕ್ಕೆ ಹೋಲಿಸಿದರೆ ತೀರಾ ಕಡಿಮೆ. ಮೇಲಿನ ಅಂಕಿ-ಅಂಶಗಳನ್ನು ಗಮನಿಸಿದರೆ ರಾಜ್ಯದಲ್ಲಿ ಗೌಳಿ ಸಮುದಾಯದ ಶೈಕ್ಷಣಿಕ ಹಿಂದುಳಿದಿರುವಿಕೆಯ ಮನದಟ್ಟಾಗುತ್ತದೆ.

ಶೇ ೭೫ ರಷ್ಟು ಹೆಣ್ಣು ಮಕ್ಕಳು ಪ್ರೌಢಶಾಲೆಯ ಹಂತದಲ್ಲಿ ಶಾಲೆ ಬಿಟ್ಟವರಾಗಿದ್ದಾರೆ. ಪ್ರೌಢಶಾಲಾವ್ಯವಸ್ಥೆಯಲ್ಲಿ ಆಕೆ ಪ್ರಕೃತಿದತ್ತವಾಗಿ ಋತುಮತಿಯಾದ ದಿನದಿಂದ ಅವಳನ್ನು ಹೈಸ್ಕೂಲ್, ಕಾಲೇಜಿಗೆ ಕಳಿಸುವುದಿಲ್ಲ. ಯಾಕೆಂದರೆ ಕಳಿಸಿದರೆ ಹೊರ ಜನರ ಜೊತೆ ಬೆರೆತು ಪ್ರೀತಿ ಪ್ರೇಮದಲ್ಲಿ ಸಿಲುಕಿ ಕೆಟ್ಟ ಹೆಸರು ತರುತ್ತಾರೆಂಬ ಭಯ. ಈಗೀಗ ನಗರೀಕರಣದಿಂದ ಪ್ರಭಾವಿತರಾದವರು ಮತ್ತು ನಗರವಾಸಿ ವಿದ್ಯಾವಂತ ತಂದೆ-ತಾಯಂದಿರು ತಮ್ಮ ಹೆಣ್ಣು ಮಕ್ಕಳನ್ನು ಶಾಲಾ ಕಾಲೇಜುಗಳಿಗೆ ಕಳುಹಿಸುತ್ತಾರೆ. ಆದರೆ ಅಂಥವರು ಬೆರಳಿಣಿಕೆಯಷ್ಟು ಮಾತ್ರ. ಶೇ. ೩% ಕ್ಕಿಂತ ಕಡಿಮೆ ಎಂದರೆ ತಪ್ಪಾಗಲಾರದು.

ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲೆಗಳಿಗೆ ಸಂಬಂಧಿಸಿದಂತೆ ಎದುರಿಸುತ್ತಿರುವ ಸಮಸ್ಯೆಯೆಂದರೆ ಮಕ್ಕಳು ಶಾಲೆಯನ್ನು ಮಧ್ಯದಲ್ಲಿ ಬಿಡುವ ಸಂಗತಿಯಾಗಿದೆ. ಗಂಡಿಗಿಂತ ಹೆಣ್ಣು ಮಕ್ಕಳು ಶಾಲೆ ಮಧ್ಯದಲ್ಲಿ ಬಿಡುವುದು ಅಧಿಕ. ರಾಜ್ಯ ಮಟ್ಟದಲ್ಲಿ ಶಾಲೆಯನ್ನು ಮಧ್ಯದಲ್ಲಿ ಬಿಟ್ಟ ಮಕ್ಕಳ ಪ್ರಮಾಣ ೧೪.೪೨%. ಉತ್ತರ ಕನ್ನಡ ಜಿಲ್ಲೆಯ ಅಂಕಿ ಅಂಶ ಹೀಗಿದೆ. ಗಂಡು ೮.೮೯%, ಹೆಣ್ಣುಮಕ್ಕಳು-೮.೫೨%, ಒಟ್ಟು ಶೇ ೮.೭೧%. ಶಾಲೆ ಬಿಡಲು ಕಾರಣಗಳೆಂದರೆ ಬಡತನ, ಲಿಂಗತಾರತಮ್ಯ, ಖರ್ಚನ್ನು ನಿಯಂತ್ರಿಸಲು, ಹೆಣ್ಣುಮಕ್ಕಳನ್ನು ಶಾಲೆ ಬಿಡಿಸಿ ಮದುವೆ ಮಾಡುವುದು, ಸಾಮಾಜಿಕ, ಆರ್ಥಿಕ ಶೋಷಣೆ, ಹೆಣ್ಣು ಹೆಚ್ಚು ಕಲಿತರೆ ಗಂಡಿನ ಸಮಸ್ಯೆ, ಅವಳನ್ನು ನಿಯಂತ್ರಿಸುವುದು ಕಷ್ಟ, ಹೆಣ್ಣಿಗೆ ಲೈಂಗಿಕ ದೌರ್ಜನ್ಯದ ಭಯ, ಸರಿಯಿಲ್ಲದ ಶಾಲಾ ವ್ಯವಸ್ಥೆ, ಶಿಕ್ಷಕರಿಲ್ಲದಿರುವುದು, ಶಾಲೆಯ ಸಮೀಪ

ವಿದ್ಯಾರ್ಥಿನಿಯರಿಗಿಲ್ಲದ ವಸತಿ ನಿಲಯ ಸಮಸ್ಯೆ ಇತ್ಯಾದಿ. ಆದರೆ ಸರಕಾರಿ ಶಿಕ್ಷಣ ಇಲಾಖೆ ಉಚಿತ ಊಟ, ಪಠ್ಯಪುಸ್ತಕ, ಸಮವಸ್ತ್ರ, ಶಿಷ್ಯವೇತನ ಮುಂತಾದವುಗಳನ್ನು ಒದಗಿಸಿದ್ದರಿಂದ ಇತ್ತೀಚಿಗೆ ಶಾಲೆಗಳಲ್ಲಿ ಈ ಮಕ್ಕಳ ಸಂಖ್ಯೆ ಹೆಚ್ಚಾಗುತ್ತಿದೆ.

## ಶಿಕ್ಷಣ ಪ್ರಗತಿ

೧೯೯೩-೯೪ನೇ ಸಾಲಿನಲ್ಲಿ ಉತ್ತರ ಕನ್ನಡ ಜಿಲ್ಲೆಯಲ್ಲಿ ಸಂಪೂರ್ಣ ಸಾಕ್ಷರತಾ ಆಂದೋಲನವನ್ನು ಎಲ್ಲ ತಾಲೂಕಗಳಲ್ಲಿ ಹಮ್ಮಿಕೊಳ್ಳಲಾಗಿತ್ತು. ಅದರ ಯಶಸ್ವಿಯಾಗಿ ಸಾಮಾನ್ಯ ಸಮಿತಿ, ಕಾರ್ಯಕಾರಿ ಸಮಿತಿ, ಪರಿಸರ ನಿರ್ಮಾಣ ಸಮಿತಿ, ಬೋಧನಾ ಸಮಿತಿಗಳ ರಚನೆ ಮಾಡಲಾಗಿತ್ತು. ಜಿಲ್ಲಾದ್ಯಂತ ಸಮೀಕ್ಷೆಯನ್ನು ನಡೆಸಿ ಅನಕ್ಷರಸ್ಥರನ್ನು ಗುರುತಿಸಲಾಯಿತು. ಸಂಪೂರ್ಣ ಸಾಕ್ಷರತಾ ಆಂದೋಲನದಲ್ಲಿ ಭಾಗವಹಿಸಿದ್ದ ಪ್ರಮುಖ ಸಂಸ್ಥೆಗಳೆಂದರೆ 'ಶ್ರಮಿಕ ವಿದ್ಯಾಪೀಠ', 'ಬಾಲ ಪ್ರಗತಿ ಕೇಂದ್ರ', 'ಬಾಪೂಜಿ ಎಜುಕೇಶನ್ ಸೊಸೈಟಿ', 'ರೋಹಿತ ವಿಕಾಸ ಸಂಸ್ಥೆ', 'ಜನಿಯರ್ಸ ಗೌಳಿಸಂಘ', 'ಯೂತ್ ಫೆಡರೇಶನ್' ಇತ್ಯಾದಿ. ಪ್ರಗತಿಪರ ಸಂಘಟನೆಗಳ ಕಲಿಕಾ ಕೇಂದ್ರವನ್ನು ಆರಂಭಿಸಲಾಯಿತು.

## ಗೌಳಿಗರ ಸಾಕ್ಷರತಾ ಪ್ರಮಾಣ

೧೯೬೧ ರಿಂದ ೨೦೦೧ರ ವರೆಗಿನ ಗೌಳಿಗರ ಸಾಕ್ಷರತಾ ವರದಿಯನ್ನು ಒಟ್ಟು ಜನಸಂಖ್ಯೆಗೆ ಹೋಲಿಕೆ ಮಾಡಿ ನೋಡಿದರೆ ಸಾಕ್ಷರತಾ ಪ್ರಮಾಣವು ಹೆಚ್ಚುತ್ತಾ ಹೋಗಿರುವುದನ್ನು ಕಾಣಬಹುದಾಗಿದೆ. ೧೯೭೧ರ ವರೆಗೆ ಮೆಟ್ರಿಕ್ಯೂಲೇಷನ್ ನಂತರದ ಶಿಕ್ಷಣವನ್ನು ಪೂರೈಸಿದ ಒಬ್ಬ ವ್ಯಕ್ತಿಯೂ ಕಂಡು ಬರುವುದಿಲ್ಲ. ಆದರೆ ೧೯೮೧ರ ನಂತರ ಮೆಟ್ರಿಕ್ಯೂಲೇಷನ್ ನಂತರ ಶಿಕ್ಷಣ ಪಡೆಯುವರಲ್ಲಿಯೂ ಪ್ರಮಾಣ ನಿಧಾನವಾಗಿ ಹೆಚ್ಚಳಗೊಂಡಿರುವುದನ್ನು ಕಾಣಬಹುದಾಗಿದೆ. ಔಪಚಾರಿಕ ಶಿಕ್ಷಣದ ಕಡೆ ಹೆಚ್ಚು ಒಲವು ತೋರಿಸದ್ದರಿಂದ ಸ್ವಾತಂತ್ರ್ಯ ಪೂರ್ವದಲ್ಲಿ ವಿದ್ಯಾವಂತರು ಗೌಳಿ ಸಮುದಾಯದಲ್ಲಿ ಅಪರೂಪವಾಗಿದ್ದರು. ಆದರೆ ಒಂದು ಸಮುದಾಯ ಚಲನಶೀಲವಾದಾಗ ಏನೆಲ್ಲಾ ಘಟಿಸುತ್ತದೆ ಎನ್ನುವುದನ್ನು ಕಾಣಬಹುದು. ಪುರುಷ ವಿದ್ಯಾರ್ಥಿಗಳ ಸಂಖ್ಯೆಯಲ್ಲಿ ಸ್ವಲ್ಪ ಬೆಳವಣಿಗೆಯನ್ನು ಕಾಣಬಹುದು. ಆದರೆ ಸ್ತ್ರೀಯರದ್ದು ಹಿನ್ನಡೆ ಇದೆ. ಹುಡುಗಿಯರ ವಿದ್ಯಾಭ್ಯಾಸಕ್ಕೆ ಹೆಚ್ಚಿನ ಪ್ರಾಶಸ್ತ್ಯ ಸಿಗುತ್ತಿಲ್ಲ ಎನ್ನಬಹುದು. ಹೆಣ್ಣು ಮಕ್ಕಳಿಗೆ ಸಾಕಷ್ಟು ಪ್ರಮಾಣದ ಸ್ವಾತಂತ್ರ್ಯವಿದೆ. ಇಷ್ಟಾಗಿಯೂ ಶಿಕ್ಷಣ ಕ್ಷೇತ್ರದಲ್ಲಿ ಮಹಿಳೆಯರು ಕಡಿಮೆಯಾಗಲು ಕಾರಣ ಗೌಳಿ ಹೆಣ್ಣುಮಕ್ಕಳಿಗೆ ಚಿಕ್ಕ ವಯಸ್ಸಿನಲ್ಲಿ ಮದುವೆ ಮಾಡುವುದರಿಂದ ಅವರಿಗೆ ವಿದ್ಯೆ ಏಕೆ ಎನ್ನುವ ಪ್ರಶ್ನೆ ಇರಬಹುದು. ಆದರೆ ಇತ್ತೀಚಿನ ದಿನಗಳಲ್ಲಿ ಈ ಸಮುದಾಯವು ಒಲವು ತೋರಿಸುವುದರ ಮೂಲಕ ಗೌಳಿಗ ಹೆಣ್ಣು ಮಕ್ಕಳು ಶಿಕ್ಷಣ ಕಲಿತು ಉದ್ಯೋಗಿಗಳಾಗಿರುತ್ತಿರುವುದನ್ನು ಕಾಣಬಹುದು. ಆಧುನಿಕತೆಯ ಸುಳಿಗೆ ಸಿಗದಂತೆ ಎಚ್ಚರವಾಗಿ ಮುನ್ನಡೆಸಲು ಮುಖಂಡರ ಮಾರ್ಗದರ್ಶನದ ಅವಶ್ಯಕತೆ ಇದೆ.

**ಕೋಷ್ಟಕ ೫.೧೪**

**ಉತ್ತರ ಕನ್ನಡ ಜಿಲ್ಲೆಯ ತಾಲೂಕವಾರು ಸಾಮಾನ್ಯ ಸಾಕ್ಷರತೆ ಪ್ರಮಾಣ–೨೦೦೧**

| ಕ್ರ ಸಂ. | ತಾಲೂಕು | ಪುರುಷರು | ಮಹಿಳೆಯರು | ಒಟ್ಟು |
|---|---|---|---|---|
| ೧ | ಅಂಕೋಲಾ | ೮೫% | ೬೭.೭ | ೭೬.೮ |
| ೨ | ಭಟ್ಕಳ | ೮೨.೦% | ೬೬.೫ | ೭೪.೧ |
| ೩ | ಹಳಿಯಾಳ | ೭೪.೫% | ೫೨.೪ | ೬೩.೭ |
| ೪ | ಹೊನ್ನಾವರ | ೮೩.೫% | ೬೮.೨ | ೭೫.೮ |
| ೫ | ಕಾರವಾರ | ೯೧.೫% | ೭೬.೩ | ೮೪.೦ |
| ೬ | ಕುಮಟಾ | ೮೭.೬% | ೭೧.೬ | ೭೯.೬ |
| ೭ | ಮುಂಡಗೋಡ | ೭೯.೯% | ೫೯.೩ | ೭೦.೫ |
| ೮ | ಸಿದ್ದಾಪುರ | ೮೬.೨% | ೭೦.೮ | ೭೮.೬ |
| ೯ | ಶಿರಸಿ | ೮೭.೪% | ೭೬.೪ | ೮೨.೦ |
| ೧೦ | ಜೋಯಿಡಾ | ೭೬.೮% | ೫೪.೦ | ೬೫.೪ |
| ೧೧ | ಯಲ್ಲಾಪುರ | ೮೧.೨$ | ೬೬.೩ | ೭೩.೯ |
| ೧೨ | ದಾಂಡೇಲಿ | ೯೦.೪% | ೭೫.೫ | ೮೩.೧ |
| | **ಒಟ್ಟು** | **೮೪.೫** | **೬೮.೫** | **೭೬.೬** |

ಈ ಕೋಷ್ಟಕವನ್ನು ನೋಡಿದರೆ, ಸಾಕ್ಷರತೆಯ ಪ್ರಮಾಣವು ಜೋಯಿಡಾ ಮತ್ತು ಹಳಿಯಾಳ ತಾಲೂಕುಗಳಲ್ಲಿ ಉಳಿದ ತಾಲೂಕುಗಳಿಗಿಂತ ಸ್ವಲ್ಪ ಮಟ್ಟಿಗೆ ಕಡಿಮೆಯಾಗಿದೆ. ಕಾರಣವೆಂದರೆ ಇವು ಹಿಂದುಳಿದ ಹಾಗೂ ಪರಿಶಿಷ್ಟ ಜನರನ್ನು ಹೊಂದಿರುವ ಎರಡು ತಾಲೂಕುಗಳಾಗಿರುವದರಿಂದ ಸಾಕ್ಷರತೆಯ ಪ್ರಮಾಣ ಕಡಿಮೆ ಇದೆ.

**ಕೋಷ್ಟಕ ೫.೧೫**

**ಗೌಳಿಗರ ಹಾಗೂ ಬುಡಕಟ್ಟು ಮತ್ತು ಸಾಮಾನ್ಯ ಜನರ ತುಲನಾತ್ಮಕ ಸಾಕ್ಷರತಾ ಪ್ರಮಾಣ**

| ಇಸ್ವಿ | ಗೌಳಿಗರ ಸಾಕ್ಷರತೆ (ಅಂದಾಜು) | ಬುಡಕಟ್ಟು ಸಾಕ್ಷರತೆ (ಭಾರತ) | ಸಾಮಾನ್ಯ ಸಾಕ್ಷರತೆ (ಭಾರತ) |
|---|---|---|---|
| ೧೯೬೧ | ೨.೦ | ೮.೫೩ | ೨೪.೦೦ |
| ೧೯೭೧ | ೨.೫ | ೧೧.೩ | ೨೯.೪೫ |
| ೧೯೮೧ | ೭.೫ | ೧೬.೩೫ | ೩೬.೨೩ |
| ೧೯೯೧ | ೧೫.೦ | ೨೯.೬ | ೫೨.೩೩ |
| ೨೦೦೧ | ೨೬.೦ | ೪೭.೧೦ | ೬೫.೩೮ |
| ೨೦೧೧ | ೪೦.೦೦ | | |




ಈ ಕೋಷ್ಟಕವನ್ನು ನೋಡಿದರೆ ಸರಕಾರದ ಯೋಜನೆಗಳು ಇವರಿಗೆ ತಲುಪಿ ಸ್ವಲ್ಪ ಮಟ್ಟಿನ ಸಾಕ್ಷರತೆಯಲ್ಲಿ ಏರಿಕೆಯನ್ನು ಕಾಣಬಹುದು. ಹಾಗೆಯೇ ಶಾಲಾ ಮಕ್ಕಳ ದಾಖಲಾತಿ ಪ್ರಮಾಣದಲ್ಲಿ ಅಂದರೆ ಪ್ರಾಥಮಿಕ ಮಾಧ್ಯಮದವರೆಗೆ ಶೇಕಡವಾರು ಹೇಗೆ ಏರಿಕೆ ಉಂಟಾಗಿದೆ ಎನ್ನುವುದನ್ನು ಈ ಮುಂದಿನ ಕೋಷ್ಟಕದಿಂದ ಗಮನಿಸಬಹುದು.

**ಕೋಷ್ಟಕ ೫.೧೬**

**ಗೌಳಿಗರ ಪ್ರಾಥಮಿಕ ಹಾಗೂ ಮಾಧ್ಯಮಿಕ ಮಕ್ಕಳ ಶಾಲೆಗಳಲ್ಲಿ ಮಕ್ಕಳ ದಾಖಲಾತಿ ಸಂಖ್ಯೆಯಲ್ಲಿ ಏರಿಕೆ[೩೬] (ಶೇಕಡಾವಾರು)**

| ವರ್ಷ | ಪ್ರಾಥಮಿಕ | ಮಾಧ್ಯಮಿಕ |
|---|---|---|
| ೧೯೯೧-೯೨ | ೮೪.೭೨ | ೬೪.೫೩ |
| ೧೯೯೨-೯೩ | ೮೬.೬೨ | ೬೫.೨೧ |
| ೧೯೯೩-೯೪ | ೮೭.೨೬ | ೬೫.೫೬ |
| ೧೯೯೪-೯೫ | ೮೭.೬೨ | ೬೬.೧೨ |
| ೧೯೯೫-೯೬ | ೮೭.೭೨ | ೬೯.೪೦ |
| ೧೯೯೬-೯೭ | ೮೮.೭೨ | ೭೦.೪೩ |
| ೧೯೯೭-೯೮ | ೮೯.೫೯ | ೭೨.೪೪ |
| ೧೯೯೮-೯೯ | ೯೦.೪೨ | ೭೪.೦೦ |
| ೧೯೯೯-೦೦ | ೯೧.೧೮ | ೭೫.೬೬ |
| ೨೦೦೦-೦೧ | ೯೧.೬೫ | ೭೮.೦೮ |




ಈ ಕೋಷ್ಟಕವನ್ನು ನೋಡಿದರೆ ಗೌಳಿಗರ ಮಕ್ಕಳಲ್ಲಿ ಶಾಲೆಗೆ ಬರುವ ಪ್ರಮಾಣ ಪ್ರಾಥಮಿಕದಿಂದ ಮಾಧ್ಯಮಿಕದವರೆಗೂ ಹೆಚ್ಚಾಗಿದೆ ಎನ್ನುವುದನ್ನು ತೋರಿಸುತ್ತದೆ. ಮೇಲಿನ ಕೋಷ್ಟಕದಲ್ಲಿ ಚರ್ಚಿಸಿರುವಂತೆ ಮಕ್ಕಳ ಸಂಖ್ಯಾ ಪ್ರಮಾಣದಲ್ಲಿ ಏರಿಕೆ ಕಂಡುಬಂದರೂ ಅವರು ಶಾಲೆಯನ್ನು ಮಧ್ಯದಲ್ಲೇ ಬಿಡುವುದನ್ನು ಕಾಣಬಹುದು. ಉತ್ತರ ಕನ್ನಡದಲ್ಲಿ ೧೯೯೧ ರಲ್ಲಿ ಶಾಲೆ ಬಿಡುವವರ ಪ್ರಮಾಣ ಬಾಲಕರು ಶೇ. ೨೨.೭ ರಷ್ಟು ಮತ್ತು ಬಾಲಕಿಯರು ಶೇ. ೩೩.೧೦ರಷ್ಟಿತ್ತು. ಈಗ ಬದಲಾವಣೆಯೊಂದಿಗೆ ಬಾಲಕರು ಶೇ. ೮.೮೯ ರಷ್ಟು ಬಾಲಕಿಯರು ಶೇ. ೮.೫೨ರಷ್ಟು ಶಾಲೆಯನ್ನು ಮಧ್ಯದಲ್ಲಿ ಬಿಡುತ್ತಿದ್ದಾರೆ.

ಶಾಲೆ ಬಿಡುವುದನ್ನು ಕಡಿಮೆ ಮಾಡಲು ಹಲವಾರು ಪ್ರಯತ್ನಗಳನ್ನು ಕೈಗೊಳ್ಳಲಾಯಿತು. ೨೦೦೩ ರ ನವ್ಹೆಂಬರ ತಿಂಗಳಿನಿಂದ 'ಸರ್ವ ಶಿಕ್ಷಣ ಅಭಿಯಾನ' ಎನ್ನುವ ವಿನೂತನ ಯೋಜನೆ ಜಾರಿಗೆ ಬಂದಿತು.

**ಸರ್ವ ಶಿಕ್ಷಣ ಅಭಿಯಾನದ ಉದ್ದೇಶಗಳು**[೩೭]

೧. ಪ್ರತಿ ೪೦ ಮಕ್ಕಳಿಗೆ ಒಬ್ಬ ಶಿಕ್ಷಕ

೨. ಒಂದು ಪ್ರಾಥಮಿಕ ಶಾಲೆಯಲ್ಲಿ ೨ ಶಿಕ್ಷಕರು

೩. ಪ್ರತಿ ಜನವಸತಿ ೧ ಕಿ.ಮೀ. ವ್ಯಾಪ್ತಿಯೊಳಗೆ ಶಾಲಾ ಸ್ಥಾಪನೆ

೪. ಉಚಿತ ಪುಸ್ತಕ

೫. ವಿಶೇಷ ಅಗತ್ಯವುಳ್ಳ ಮಕ್ಕಳ ಶಿಕ್ಷಣಕ್ಕಾಗಿ ಪ್ರತಿ ಮಗುವಿಗೆ ಒಂದು ವರ್ಷಕ್ಕೆ ೧೫೦೦ ರೂ.ಗಳ ನೆರವು

'ಗಿರಿಜನರ ವಿದ್ಯಾರ್ಥಿನಿಯರಿಗಾಗಿ ರಾಜ್ಯದಾದ್ಯಂತ ೭೧ ಮೆಟ್ರಿಕ್ ಪೂರ್ವ ಬಾಲಕ, ಬಾಲಕಿಯರ ವಿದ್ಯಾರ್ಥಿನಿ ನಿಲಯಗಳಿದ್ದು, ಇವುಗಳಲ್ಲಿ ಪ್ರತಿ ವರ್ಷ ೨೦೦೦ ವಿದ್ಯಾರ್ಥಿಗಳು ಇದರ ಪ್ರಯೋಜನ ಪಡೆದುಕೊಳ್ಳುತ್ತಿದ್ದಾರೆ. ಈ ಗಿರಿಜನರ ವಿದ್ಯಾರ್ಥಿನಿಯರಿಗೆ ಉತ್ತರ ಕನ್ನಡ ಜಿಲ್ಲೆಯಲ್ಲಿ ೧೦ ವಿದ್ಯಾರ್ಥಿನಿಲಯಗಳಿದ್ದು ಅವುಗಳು ಈ ಕೆಳಕಂಡ ಸ್ಥಳಗಳಲ್ಲಿ ಕಾರ್ಯನಿರ್ವಹಿಸುತ್ತಿವೆ. ಉತ್ತರ

ಕನ್ನಡದ ೧೦ ತಾಲೂಕಗಳಲ್ಲಿ ವಿದ್ಯಾರ್ಥಿನಿ ನಿಲಯಗಳನ್ನು ಕಾಣಬಹುದು. ಜೋಯಿಡಾ ತಾಲೂಕ ಒಂದನ್ನು ಬಿಟ್ಟು ಉಳಿದ ತಾಲೂಕಗಳಲ್ಲಿ ವಿದ್ಯಾರ್ಥಿನ ನಲಯಗಳನ್ನು ಕಾಣಬಹುದು. ಈ ವಿದ್ಯಾರ್ಥಿನಿ ನಿಲಯಗಳಲ್ಲಿ ಪ್ರವೇಶವನ್ನು ಶೇ. ೭೫ ರಷ್ಟು ಪರಿಶಿಷ್ಟ ಜಾತಿ ಪಂಗಡಗಳಿಗೆ ಉಳಿದ ಶೇ. ೨೫ ರಷ್ಟು ಹಿಂದುಳಿದ ವರ್ಗಗಳಿಗೆ ಕಾಯ್ದಿರಿಸಲಾಗಿದೆ.[೩೮]

ನಮ್ಮ ಸರ್ವೆಕ್ಷಣೆಯ ಪ್ರಕಾರ ಉತ್ತರ ಕನ್ನಡ ಜಿಲ್ಲೆಯ ಗೌಳಿಗರಲ್ಲಿ ಹೆಚ್ಚಿನ ಶಿಕ್ಷಣ ಪಡೆದವರ ಸಂಖ್ಯೆ ಈ ಕೆಳಗಿನಂತಿದೆ.

| | | |
|---|---|---|
| ಎಸ್. ಎಸ್. ಎಲ್. ಸಿ. | – | ೧೫೦ |
| ಪಿಯುಸಿ. | – | ೫೨ |
| ಪದವಿ | – | ೨೩ |
| ಸ್ನಾತಕೋತ್ತರ | – | ೦೬ |
| ಇತರೆ (ಐ.ಟಿ.ಐ, ಡಿಪ್ಲೋಮಾ ಹಾಗೂ ತತ್ಸಮಾನ) | – | ೧೦೮ |

ಈ ಮೇಲಿನ ಅಂಕಿ ಸಂಖ್ಯೆಗಳನ್ನು ನೋಡಿದಾಗ ಕಂಡುಬರುವುದೇನೆಂದರೆ ಉ.ಕ. ಜಿಲ್ಲೆಯ ಗೌಳಿ ಸಮುದಾಯಗಳಲ್ಲಿ ಶಿಕ್ಷಣದ ಕೊರತೆ ಇರುವುದರೊಂದಿಗೆ ಉಚ್ಚ ಶಿಕ್ಷಣ ಪಡೆದವರ ಸಂಖ್ಯೆ ಒಟ್ಟು ಜನಸಂಖ್ಯೆಯ ದೃಷ್ಟಿಯಿಂದ ನೋಡಲಾಗಿ ಅತ್ಯಂತ ಕಡಿಮೆಯಾಗಿದೆ. ಅಂದಾಜು ೨೫,೦೦೦ ಕ್ಕಿಂತ ಹೆಚ್ಚು ಜನಸಂಖ್ಯೆ ಇರುವ ಈ ಸಮುದಾಯದಲ್ಲಿ ಕೇವಲ ೨೩ ಜನ ಪದವೀಧರರಾಗಿದ್ದು ಕೇವಲ ೬ ಜನರು ಸ್ನಾತಕೋತ್ತರ ಪದವಿ ಹೊಂದಿದ್ದಾರೆಂದರೆ ಈ ಸಮುದಾಯದ ಶೈಕ್ಷಣಿಕ ಸ್ಥಿತಿಗತಿ ಇನ್ನೂ ಎಷ್ಟೊಂದು ಶೋಚನಿಯವಾಗಿದೆ ಎಂಬುದು ಸ್ಪಷ್ಟವಾಗಿ ಕಂಡು ಬರುತ್ತದೆ. ಆದರೂ ಉತ್ತರ ಕನ್ನಡ ಜಿಲ್ಲೆಯ ಗೌಳಿಗ ಸಮುದಾಯದಲ್ಲಿ ಬದಲಾಗುತ್ತಿರುವ ಶೈಕ್ಷಣಿಕ ಚಿತ್ರಣವನ್ನು ನೋಡಿದರೆ ಹೆಣ್ಣು ಮಕ್ಕಳು ಶಿಕ್ಷಣ ಪಡೆಯಲು ಪೂರ್ಣ ಸ್ವತಂತ್ರರಾಗಿದ್ದಾರೆಂದು ಹೇಳಬಹುದು. ಉಚ್ಚ ಶಿಕ್ಷಣದ ವಿಷಯಗಳಲ್ಲಿ ಹೆಣ್ಣು ಮಕ್ಕಳನ್ನು ವಾಡೆಯಿಂದ ದೂರ ಕಳುಹಿಸಲು ಸಾಂಪ್ರದಾಯಿಕ ಕಟ್ಟಳೆಗಳು ಅಡ್ಡಿ ಬರುತ್ತವೆ. ಆದರೂ ಕೂಡ ಅಲ್ಲಲ್ಲಿ ಕೆಲವು ಹೆಣ್ಣು ಮಕ್ಕಳು ದೂರದ ಊರಲ್ಲಿರುವ ಮಹಿಳಾ ವಸತಿ ನಿಲಯಗಳಲ್ಲಿದ್ದು ಉಚ್ಚ ಶಿಕ್ಷಣ ಪಡೆಯುತ್ತಿರುವುದು ಭವಿಷ್ಯಕ್ಕೆ ಒಂದು ಆಶಾಕಿರಣವಾಗಿದೆ.

ನಮ್ಮ ಸರ್ವೇಕ್ಷಣೆಯಲ್ಲಿ ಉ.ಕ ಜಿಲ್ಲೆಯ ಗೌಳಿಗ ಸಮುದಾಯದ ಶಿಕ್ಷಣಮಟ್ಟ ಅವಲೋಕಿಸಿದಾಗ ಅನಕ್ಷರಸ್ಥರೆ (೫೯.೨%) ಹೆಚ್ಚು. ಅಕ್ಷರಸ್ಥರು ४೦.೮%. ಪ್ರಾಥಮಿಕ ಮಟ್ಟದ (೭ ನೇ ತರಗತಿವರೆಗೆ ಅಥವಾ ಅದಕ್ಕಿಂತಲೂ ಕಡಿಮೆ) ಶಿಕ್ಷಣ ಹೊಂದಿದವರು ೩೫.೫% ಎಸ್.ಎಸ್.ಎಲ್.ಸಿ.ವರೆಗೆ ಓದಿದವರು ೩.೧%. ಪಿಯುಸಿ ವರೆಗೆ ಓದಿದವರು ೧.೬%. ಪದವಿವರೆಗೆ ಓದಿದವರು ೦.೬%. ಇತ್ತೀಚಿಗೆ ಸಾಮಾನ್ಯವಾಗಿ ಬಹುತೇಕ ಎಲ್ಲ ವಾಡೆಗಳಲ್ಲಿ ಅಂಗನವಾಡಿ ಹಾಗೂ ಕಿರಿಯ ಪ್ರಾಥಮಿಕ ಶಾಲೆಗಳು (೮೦%) ಇರುವುದರಿಂದ ಮತ್ತು ೨-೩ ಕಿ.ಮೀ ಅಂತರದಲ್ಲಿ ಹಿರಿಯ ಪ್ರಾಥಮಿಕ ಶಾಲೆಗಳನ್ನು ಹೊಂದಿರುವುದರಿಂದ ಪ್ರಾಥಮಿಕ ಶಿಕ್ಷಣ ಮಟ್ಟ ೩೫% ವರೆಗೆ ಏರಿದೆಯನ್ನಬಹುದು. ಯಾವ ವಾಡೆಗಳಲ್ಲಿಯೂ ಮಾಧ್ಯಮಿಕ ಶಾಲೆಗಳು ಇರುವುದಿಲ್ಲ. ೭ನೇ ವರ್ಗದ ನಂತರ ಶಾಲೆಗೆ ಹೋಗುವವರ

ಸಂಖ್ಯೆ ಇಳಿಮುಖವಾಗಿದೆ. ಏಕೆಂದರೆ ಸಾಮಾನ್ಯವಾಗಿ ಹೆಣ್ಣು ಮಕ್ಕಳನ್ನು ಹೈಸ್ಕೂಲ ಶಿಕ್ಷಣಕ್ಕೆ ಬೇರೆ ದೂರದ ಊರಿಗೆ ಕಳಿಸಲು ಇಷ್ಟಪಡುವುದಿಲ್ಲ. ಗಂಡು ಮಕ್ಕಳೂ ಸಹಿತ ತಮ್ಮ ವಾಡೆಯಲ್ಲಿದ್ದ ಪ್ರಾಥಮಿಕ ಶಿಕ್ಷಣದ ನಂತರ ಹೈಸ್ಕೂಲ ಶಿಕ್ಷಣಕ್ಕೆ ಬೇರೆ ಊರಿಗೆ ಹೋಗುವ ಬದಲು ಪಾಲಕರ ಜೊತೆಗೆ ಕೂಲಿಗೆ ಹೋಗುವುದೇ ಹೆಚ್ಚು. ಆದರೂ 'ವನವಾಸಿ ಕಲ್ಯಾಣ ಕೇಂದ್ರ' ದಿಂದ ಕೇವಲ ಗೌಳಿ ಮಕ್ಕಳಿಗಾಗಿ ಮಾತ್ರ ಅಂಬಿಕಾನಗರದಲ್ಲಿ ಸ್ಥಾಪಿತವಾದ ವನವಾಸಿ ವಿದ್ಯಾರ್ಥಿನಿಲಯಕ್ಕೆ ಎಷ್ಟೋ ಗೌಳಿ ವಿದ್ಯಾರ್ಥಿಗಳು ಮಾಧ್ಯಮಿಕ ಶಿಕ್ಷಣದ ಸಲುವಾಗಿ ಹೋಗುತ್ತಾರೆ. ಕಾಲೇಜು ಶಿಕ್ಷಣಕ್ಕೆ ಹೋಗುವವರು ಅತಿ ವಿರಳ ಎನ್ನಬಹುದು.

ಉಚ್ಚ ಹಾಗೂ ತಾಂತ್ರಿಕ ಶಿಕ್ಷಣದತ್ತ ಇನ್ನೂ ಒಲವು ಹೆಚ್ಚಿಲ್ಲ. ಏಕೆಂದರೆ ಆರ್ಥಿಕ ತೊಂದರೆ ಒಂದು ಕಡೆಯಾದರೆ, ಕೆಲವು ಯುವಕರು ಪದವಿವರೆಗೆ ಶಿಕ್ಷಣ ಪಡೆದರೂ ಅವರಿಗೆ ಯೋಗ್ಯ ಆದಾಯ ನೀಡುವ ಉದ್ಯೋಗ ದೊರಕಿಲ್ಲವೆಂಬುದು ಇನ್ನೊಂದು ಕಾರಣ. ಅವರು ಹೇಳುವ ಪ್ರಕಾರ ಧನಗರ್ ಗೌಳಿ  ಸಮುದಾಯವು ಎಸ್.ಟಿ. ಪಂಗಡಕ್ಕೆ ಸೇರಬೇಕಾದರೂ ಸರಕಾರವು ಹಿಂದುಳಿದ ಜಾತಿ ಪ್ರವರ್ಗ-೧ ಗುಂಪಿಗೆ ಸೇರಿಸಿದೆಯಾದ್ದರಿಂದ ಯಾವುದೇ ರೀತಿಯ ಸಹಾಯ ಸೌಲಭ್ಯ ದೊರಕುತ್ತಿಲ್ಲ. ಹೀಗಾಗಿ ಮಕ್ಕಳನ್ನು ಓದಿಸಲು ಅನುಕೂಲವಾಗಿಲ್ಲ.

ಅವರದು ಮರಾಠಿ ಮಾತೃಭಾಷೆಯಾಗಿದ್ದರಿಂದ ಗೌಳಿ ಮಕ್ಕಳಿಗೆ ಕನ್ನಡ ಮಾಧ್ಯಮ ಶಿಕ್ಷಣಕ್ಕೆ ಹೊಂದಿಕೊಳ್ಳಲು ವಿಳಂಬವಾಗುತ್ತಿದೆ. ಆದರೆ ಅನಿವಾರ್ಯ. ವಿಶೇಷವಾಗಿ ಹೆಚ್ಚು ಹೆಚ್ಚು ಆಶ್ರಮ ಶಾಲೆ/ ವಸತಿ ಶಾಲೆ ಪ್ರಾರಂಭಿಸಿ ಅವರ ಭಾಷೆ ಗೊತ್ತಿರುವ ಸ್ವಯಂ ಸೇವಕ ಶಿಕ್ಷಕರನ್ನು ನೇಮಿಸಿಕೊಂಡರೆ, ವಸತಿ ಶಾಲೆಗಳಲ್ಲಿ ಅವರು ಮಕ್ಕಳ ಜೊತೆಗೆ ಹೆಚ್ಚಿನ ಸಮಯ ಕಳೆಯುವುದಲ್ಲದೆ ಒಳಾಂಗಣ, ಹೊರಾಂಗಣ ಚಟುವಟಿಕೆಗಳ ಮೂಲಕ ಮಕ್ಕಳಲ್ಲಿ ಹೆಚ್ಚಿನ ಆಸಕ್ತಿಯನ್ನು ಮೂಡಿಸಬಹುದು. ಇದು ಆಶ್ರಮ ಶಾಲೆಗಳಿಂದ ಮಾತ್ರ ಸಾಧ್ಯ. ಅನೌಪಚಾರಿಕ ಮಾಧ್ಯಮಗಳ ಮುಖಾಂತರ ಓದು ಬರಹದ ಅವಶ್ಯಕತೆ ಎಷ್ಟು ಅಗತ್ಯ ಎಂಬುದನ್ನು ಮನವರಿಕೆ ಮಾಡಿಕೊಟ್ಟರೆ ಸಾಕ್ಷರತೆ ಪ್ರಮಾಣವು ಇನ್ನೂ ಹೆಚ್ಚಾಗಬಹುದು.

**ಬದಲಾವಣೆ**

ಇಂದಿನ ಆಧುನಿಕ ಔಪಚಾರಿಕ ಶಿಕ್ಷಣವನ್ನು ಕಡ್ಡಾಯ ಮಾಡಿರುವುದರಿಂದ ಇವರಲ್ಲಿ ಪಾರಂಪರಿಕ ಶಿಕ್ಷಣ ಕ್ರಮೇಣ ಮರೆಯಾಗುತ್ತಿದೆ. ಆಧುನಿಕ ಶಿಕ್ಷಣದ ಕಡೆಗೆ ಮಕ್ಕಳು ಆಸಕ್ತಿ ತೋರಿಸುತ್ತಿದ್ದಾರೆ. ಮಕ್ಕಳಲ್ಲಿ ಪರಂಪರೆಯ ಬಗೆಗಿರುವ ಆಸಕ್ತಿ ಕಡಿಮೆಯಾಗುತ್ತಿರುವುದರಿಂದ, ಸರಕಾರದ ಯೋಜನೆಗಳು ಹಾಗೂ ಸರಕಾರೇತರ ಸಂಸ್ಥೆಗಳ ಪರಿಶ್ರಮದಿಂದ ಔಪಚಾರಿಕ ಶಿಕ್ಷಣ ಸಿಗುವುದರ ಮೂಲಕ ಅಕ್ಷರಸ್ಥರ ಪ್ರಮಾಣ ಹೆಚ್ಚಾಗುತ್ತಿದೆ.

ಶಿಕ್ಷಣದ ಪ್ರವೇಶ ಗೌಳಿ ಸಮುದಾಯದ ಸಾಂಸ್ಕೃತಿಕ ಬದುಕಿನ ಮೇಲೆ ಸಾಕಷ್ಟು ಪ್ರಭಾವ ಬೀರಿದೆ. ಶಾಲೆಗೆ ಹೋಗುವ ಮಕ್ಕಳು ಪರಂಪರಾಗತ ಕಲಾ ಪ್ರದರ್ಶನಗಳನ್ನು ಹಳೆಯ ಫ್ಯಾಶನ್

ಎಂದು ಮೂಗು ಮುರಿಯಲಾರಂಭಿಸಿದ್ದಾರೆ. ಶಿಕ್ಷಣ ಹೊಂದಿದವರಿಗೆ ಸಾಮಾಜಿಕ ಪ್ರತಿಷ್ಠೆಯು ಲಭಿಸಿದೆ. ಶಿಕ್ಷಣವು ಬುಡಕಟ್ಟು ಜನರ ವಿವೇಚನಾ ಶಕ್ತಿಯನ್ನು ವೃದ್ಧಿಸಿಸುವದರೊಂದಿಗೆ ಸಂಸ್ಕೃತಿ ಅನುಷ್ಠಾನದಲ್ಲಿ ಬದಲಾವಣೆಯನ್ನು ತಂದಿದೆ. ಶಿಕ್ಷಣದ ಪ್ರಭಾವದಿಂದ ಗೌಳಿ ಯುವಕರಲ್ಲಿ ರಾಜಕೀಯ ಮಹತ್ವ ಹಾಗೂ ಆರ್ಥಿಕ ಸುಧಾರಣೆಯ ಬಗ್ಗೆ ಹೆಚ್ಚಿನ ಅರಿವು ಮೂಡುತ್ತಿದೆ. ಮಹಿಳಾ ವಿಮೋಚನೆಗೆ ಅವಕಾಶ ಮಾಡಿದೆ. ಶಿಕ್ಷಣದ ಪ್ರಭಾವದಿಂದ ವೈಚಾರಿಕತೆ ಮತ್ತು ವೈಜ್ಞಾನಿಕತೆ ಬೆಳೆದು ಯುವಕರಲ್ಲಿ ಧರ್ಮ, ಸಂಪ್ರದಾಯಗಳ ಮೇಲಿನ ನಂಬಿಕೆ ಕಡಿಮೆಯಾಗುತ್ತಿದೆ. ಮೂಢನಂಬಿಕೆ, ಕಂದಾಚಾರಗಳ ಹಿಡಿತ ಸಡಿಲಗೊಳ್ಳುತ್ತಿದೆ. ಕಾಲೇಜ್ ಯುವಕರು ಫ್ಯಾಶನ್‌ಗೆ ಮಾರುಹೋಗುತ್ತಿದ್ದಾರೆ.

**೫.೫ ರಾಜಕೀಯ ಪರಿವರ್ತನೆ**

**೫.೫.೧ ರಾಜಕೀಯ ವ್ಯವಸ್ಥೆ ಎಂದರೇನು ?**

ಆಲ್‌ಮೊಂಡ ಮತ್ತು ಕೊಲೆಮನ್‌ರ ಪ್ರಕಾರ 'ಸಮಾಜದಲ್ಲಿ ರಾಜಕೀಯ ಕಾರ್ಯ ಚಟುವಟಿಕೆಗಳನ್ನು ನಿರ್ವಹಿಸುವ ವ್ಯವಸ್ಥೆಯೇ ರಾಜಕೀಯ ವ್ಯವಸ್ಥೆ'.[೩೯]

'ಸಮಾಜದ ಪ್ರಗತಿ ಮತ್ತು ಸುಧಾರಣೆಗಳು ಯೋಗ್ಯ ರಾಜಕೀಯ ವ್ಯವಸ್ಥೆಯನ್ನು ಅವಲಂಬಿಸಿರುತ್ತವೆ. ರಾಜ್ಯ ಮತ್ತು ಸಮಾಜ ಇವರೆಡೂ ಪರಿಕಲ್ಪನೆಗಳಲ್ಲಿ ಕೆಲವೊಂದು ವ್ಯತ್ಯಾಸಗಳು ಕಂಡುಬಂದರೂ ಇವೆರಡು ವ್ಯವಸ್ಥೆಗಳು ಪರಸ್ಪರ ಅವಲಂಬಿತ ಹಾಗೂ ಪೂರಕವಾಗಿರುತ್ತವೆ. ಸಮಾಜವು ತನ್ನ ಸದಸ್ಯರ ಚಟುವಟಿಕೆಗಳ ಮೇಲೆ ನಿಯಂತ್ರಣವನ್ನು ತರುವ ಉದ್ದೇಶದಿಂದ ಸ್ಥಾಪಿಸಿಕೊಂಡ ಹಲವಾರು ವ್ಯವಸ್ಥೆಗಳಲ್ಲಿ ರಾಜಕೀಯ ವ್ಯವಸ್ಥೆಯು ಒಂದಾಗಿದೆ. ವ್ಯಕ್ತಿಯ ವ್ಯಕ್ತಿತ್ವದ ಬೆಳವಣಿಗೆಯಲ್ಲಿ ಕುಟುಂಬದಷ್ಟೇ ಮಹತ್ವದ ಪಾತ್ರವನ್ನು ರಾಜಕೀಯ ವ್ಯವಸ್ಥೆ ನಿರ್ವಹಿಸುತ್ತದೆ. ಸಾಮಾಜಿಕ ಭದ್ರತೆಯನ್ನು ತರುವ ಪ್ರಮುಖ ಘಟಕವೇ ರಾಜಕೀಯ ವ್ಯವಸ್ಥೆಯಾಗಿದೆ'.[೪೦]

**೫.೫.೨ ರಾಜಕೀಯ ಹಾಗೂ ಬುಡಕಟ್ಟುಗಳು**

ಹಿಂದಿನ ಕಾಲದಲ್ಲಿ ರಾಜಕೀಯ ಶಕ್ತಿ ಮತ್ತು ಅಧಿಕಾರವು ಉನ್ನತ ಜಾತಿಯವರಲ್ಲಿ ಕೇಂದ್ರೀಕೃತವಾಗಿತ್ತು. ಗ್ರಾಮ ಭಾರತದಲ್ಲಿನ ಉನ್ನತ ಜಾತಿಗಳು ಮತ್ತು ಅಲ್ಲಿರುವ ಪ್ರಬಲ ಕೋಮುಗಳು ರಾಜಕೀಯದಲ್ಲಿ ಪ್ರಭಾವಶಾಲಿ ಪಾತ್ರವನ್ನು ನಿರ್ವಹಿಸುತ್ತಿದ್ದವು. ಗ್ರಾಮ ಪಂಚಾಯತಿಗಳು ಅವರ ನೇರ ನಿಯಂತ್ರಣದಲ್ಲಿದ್ದವು. ೧೯೫೦ರಲ್ಲಿ ನಮ್ಮ ದೇಶ ಪ್ರಜಾಸತ್ತಾತ್ಮಕ ರಾಜಕೀಯ ವ್ಯವಸ್ಥೆಯನ್ನು ಅಂಗೀಕರಿಸಿತು. ಎಲ್ಲರಿಗೂ ಮತಹಾಕುವುದಕ್ಕೆ ಮತ್ತು ತಮಗೆ ಬೇಕಾದ ನಾಯಕರನ್ನು ತಾವೇ ಆರಿಸಿಕೊಳ್ಳುವುದಕ್ಕೆ ಈ ವ್ಯವಸ್ಥೆ ಅವಕಾಶವಿತ್ತಿತು. ಅಷ್ಟು ಮಾತ್ರವಲ್ಲ ವಿಧಾನ ಸಭೆ, ಲೋಕಸಭೆ, ಮತ್ತು ಪಂಚಾಯತಿ ವ್ಯವಸ್ಥೆಯ ವಿವಿಧ ಸ್ತರಗಳಲ್ಲಿ ಕೆಲವು ಸ್ಥಾನಗಳನ್ನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನರಿಗೆ ಮೀಸಲಾಗಿಡುವ ಪರಿಪಾಠ ಪ್ರಾರಂಭವಾಯಿತು. ಇದರಿಂದ ಪರಿಶಿಷ್ಟ ಪಂಗಡದವರು ನಾಯಕರಾಗಿ ಹೊರಹೊಮ್ಮುತ್ತಿದ್ದಾರೆ. ಅವರೀಗ ತಮ್ಮ ಸಮಯದಾಯದ ಬಗ್ಗೆ ಮಾತನಾಡುವ ಸಾಮರ್ಥ್ಯ ಪಡೆದಿದ್ದಾರೆ. ಇವರ ಮತಗಳನ್ನು ಪಡೆಯಲು ಇಂದು ಪ್ರಭಾವಶಾಲಿ ರಾಜಕೀಯ ಪಕ್ಷಗಳು ಪೈಪೋಟಿ ನಡೆಸುತ್ತಲಿವೆ. ಪ್ರಜಾಸತ್ತಾತ್ಮಕ ಆಡಳಿತ ವ್ಯವಸ್ಥೆ ಇಂದು ಬುಡಕಟ್ಟುಗಳ

ರಾಜಕೀಯ ಸಬಲೀಕರಣಕ್ಕೆ ದಾರಿ ಮಾಡಿಕೊಟ್ಟಿದೆ. ನಿಧಾನವಾಗಿ ಇವರು ರಾಜಕೀಯದಲ್ಲಿ ಭಾಗವಹಿಸುತ್ತಿದ್ದಾರೆ.

ಬುಡಕಟ್ಟು ರಾಜ್ಯಗಳಾದ ಮಿಜೋರಾಮ್, ನಾಗಾಲ್ಯಾಂಡ್, ಮೇಘಾಲಯ, ಅರುಣಾಚಲ ಪ್ರದೇಶ, ಜಾರ್ಖಂಡ ಮುಂತಾದ ರಾಜ್ಯಗಳಲ್ಲಿ ಬುಡಕಟ್ಟುಗಳು ಸಂಪೂರ್ಣ ರಾಜಕೀಯ ಅಧಿಕಾರವನ್ನು ಹೊಂದಿವೆ. ಬುಡಕಟ್ಟುಗಳು ಸಾಕಷ್ಟು ಜನಸಂಖ್ಯೆ ಹೊಂದಿದ ರಾಜ್ಯಗಳಲ್ಲಿ ಕ್ರಮೇಣವಾಗಿ ರಾಜಕೀಯ ಪ್ರಬಲತೆಯನ್ನು ಹೊಂದುತ್ತಿವೆ. ಕಡಿಮೆ ಜನಸಂಖ್ಯೆ ಹೊಂದಿದ ಹಾಗೂ ಭೌಗೋಳಿಕ/ ಸಾಮಾಜಿಕ ಪ್ರತ್ಯೇಕತೆಯನ್ನು ಹೊಂದಿ ನಾಗರಿಕ ಸಮಾಜದಿಂದ ದೂರವಿದ್ದ ಬುಡಕಟ್ಟುಗಳು ರಾಜಕೀಯ ಜಾಗೃತಿಯ ಕೊರತೆಯಿಂದ ಹಿಂದುಳಿದಿವೆ. ಉತ್ತರ ಕನ್ನಡ ಜಿಲ್ಲೆಯ ಗೌಳಿ ಸಮುದಾಯವು ಇದಕ್ಕೆ ಹೊರತಾಗಿಲ್ಲ.

**೫.೫.೩ ಧನಗರ್ ಗೌಳಿ ಸಮುದಾಯದಲ್ಲಿ ಒಳಾಡಳಿತ ವ್ಯವಸ್ಥೆ – ನ್ಯಾಯ ಪಂಚಾಯತಿ**[೮]

ಸಾಮಾನ್ಯವಾಗಿ ಗೌಳಿಗರು, ತಮ್ಮ ತಮ್ಮಲ್ಲಿ ಬರುವ ಜಗಳಗಳಿಗೆ ಪೊಲೀಸ ಸ್ಟೇಷನ್‌ಗೆ, ಕೋರ್ಟಗೆ ಹೋಗುವ ಸಾಧ್ಯತೆ ಬಹಳ ಕಡಿಮೆ. ತಮ್ಮಲ್ಲಿಯೇ ನ್ಯಾಯ ನಿರ್ಣಯ ಮಾಡಿಕೊಳ್ಳುತ್ತಾರೆ. "ಜಾಂತ್ಯಾಲೋಕ" ಅಥವಾ ಪಂಚರು ಎಂದು ನ್ಯಾಯ ಪಂಚಾಯತಿಯ ಹಿರಿಯರನ್ನು ಕರೆಯಲಾಗುತ್ತದೆ. ಯಡಿಗ್ಯ, ಸೆಳಿಕ್ಯೆ, ಕೋಕರೆ, ಬೋಡಕಾರ್ ಹಾಗೂ ಪಾಂಡ್ರಮಿಶೆ ಕುಳಿಗೆ ಸೇರಿದ ೫ ಜನ ನ್ಯಾಯ ಮಂಡಳಿ ನ್ಯಾಯ ನಿರ್ಣಯ ಮಾಡುತ್ತದೆ. ಇವರಿಲ್ಲದಾಗ ನಂತರದ ಕುಳಿಗಳಿಗೆ ಸೇರಿದ ಲ್ಯಾಂಬೋರ್, ಯಮಕರ್, ಪಿಂಗಳ್ಯೆ ಹಾಗೂ ವರೂಕ್ ಕುಳಿಗೆ ಸೇರಿದ ಹಿರಿಯರು ಈ ಕಾರ್ಯ ನೆರವೇರಿಸುವರು.

"ಜಾಂತ್ಯಾಗಡಿ" ಅಂದರೆ ನ್ಯಾಯಪಂಚಾಯತಿಯ ಮುಖ್ಯಸ್ಥನನ್ನು "ಜಾಂತ್ಯಾ" ಎಂದು ಕರೆಯಲಾಗುತ್ತದೆ. ಇವನಿಗೆ ಸಹಾಯ ಮಾಡಲು ವಾಡೆಗೊಬ್ಬ ಪಟೇಲ ಇದ್ದು, ಇವನು ಕೋಳಿಕಾರ್ ಕುಳಿಗೆ ಸೇರಿರುತ್ತಾನೆ. ಪಾಂಡ್ರಮಿಶೆಗೆ ಸೇರಿದ ಹಿರಿಯ ವ್ಯಕ್ತಿ ಗೌಡನಾಗಿ ಕಾರ್ಯನಿರ್ವಹಿಸುವನು. ಮೊದಲು ಸಾಮಾನ್ಯವಾಗಿ ಯಡಿಗ್ಯನ ಮನೆಯಲ್ಲಿ ಆಗುತ್ತಿದ್ದ ಪಂಚಾಯತಿ ಈಗ ಊರಿನ ಗುಡಿಯ ಮುಂದೆ ನಡೆಯುತ್ತದೆ.

ಕೌಟುಂಬಿಕ ಸಮಸ್ಯೆಗಳು, ಧಾರ್ಮಿಕ ಅನಾಚರಣೆ, ವೈವಾಹಿಕ ಸಮಸ್ಯೆ, ವ್ಯಭಿಚಾರ, ಕಳ್ಳತನ, ಮೋಸ ಇತ್ಯಾದಿಗಳಿಗೆ ಸಂಬಂಧಿಸಿದ ಸಮಸ್ಯೆಗಳ ಕುರಿತು ಪಂಚಾಯತಿ ನಿರ್ಣಯ ಕೈಗೊಳ್ಳುತ್ತದೆ. ತಮ್ಮ ವಾಡೆಯಲ್ಲಾದ ಜಗಳಗಳು ಇತರರಿಗೆ ತಿಳಿಯಬಾರದೆಂದು ನೋಡಿಕೊಳ್ಳುವ ಹಿರಿಯರು ಇದಕ್ಕೆ ಅನುಗುಣವಾಗಿ ವರ್ತಿಸುತ್ತಾರೆ. ಸಾಕ್ಷಿ ಪುರಾವೆಗಳನ್ನು ಪರಿಶೀಲಿಸಿದ ಜ್ಯಾಂತಲೋಕ ಅದಕ್ಕೆ ಯೋಗ್ಯವಾದ ಶಿಕ್ಷೆಯನ್ನು ನೀಡಬಹುದಾಗಿದೆ. ನ್ಯಾಯ ಬೇಡಿದವರು ಹಾಗೂ ಅನ್ಯಾಯ ಮಾಡಿದವರು ಇದನ್ನು ಪ್ರಶ್ನಿಸುವಂತಿಲ್ಲ.

ವ್ಯಭಿಚಾರ ಮಾಡಿದರೆ, ವಿಧವೆ ಗರ್ಭಧರಿಸಿದರೆ, ಮದುವೆಯಾದವಳು ಮದುವೆಯಾದ ಗಂಡನನ್ನು ಇಷ್ಟಪಟ್ಟರೆ, ಯಡಿಗ್ಯನೊಂದಿಗೆ ಅಸಭ್ಯವಾಗಿ ವರ್ತಿಸಿದರೆ ದಂಡ ಕೊಡುವದು ಅನಿವಾರ್ಯವಾಗಿದೆ. ತಲೆಜುಟ್ಟನ್ನು ಬೋಳಿಸಿಕೊಳ್ಳುವ ಅವಮಾನದಿಂದ ಹಿಡಿದು ಅನೇಕ ಪ್ರಕಾರದ

ಶಿಕ್ಷೆಯನ್ನು ಪಂಚಾಯತಿ ನೀಡುತ್ತದೆ. ಇದಕ್ಕೆ ಬುಡಕಟ್ಟಿನ ಏಕತೆ ಹಾಗೂ ಪಾವಿತ್ರ್ಯತೆಯನ್ನು ಕಾಯುವ ಉದ್ದೇಶ ಪ್ರಮುಖವಾಗಿದೆ.

**ಬದಲಾವಣೆ**[೮೨]

೧) ಸಣ್ಣ-ಪುಟ್ಟ ಕಟ್ಟಳೆ-ಸಂಪ್ರದಾಯಗಳನ್ನು ಈಗಿನ ಕಾಲೇಜ ಯುವಕರು ಪಾಲಿಸುವುದಿಲ್ಲ.

೨) ನಗರೀಕರಣ ಹಾಗೂ ನಾಗರಿಕ ಸಮುದಾಯಗಳ ಸಂಪರ್ಕದಿಂದ ಪ್ರಭಾವಿತರಾಗಿ ಇತ್ತೀಚಿಗೆ ದೈವದವರಿಂದ ತೀರ್ಪು ಆಗದೇ ಇದ್ದಾಗ ಅಥವಾ ದೈವದವರ ತೀರ್ಪಿನಿಂದ ಅಸಮಾಧಾನವಾದಾಗ ಕೆಲವು ಗೌಳಿಗರು (೫% ) ನ್ಯಾಯ ದೊರಕಿಸಿಕೊಳ್ಳಲು ಕೋರ್ಟು, ಕಚೇರಿಗಳಿಗೆ ಹೋಗುತ್ತಿದ್ದಾರೆ.

೩) ಹಿಂದಿನ ಈ ಬಗೆಯ ಬಡಕಟ್ಟು ಒಳಾಡಳಿತ ಕ್ರಮ ಈಗ ಗೌಳಿ ಬುಡಕಟ್ಟಿನಲ್ಲಿ ಶಿಥಿಲವಾಗಿ ಹೋಗಿದೆ. ಗೌಳಿಗರು ವಾಸಿಸುವ ಯಾವ ಯಾವ ಸೀಮೆಯಲ್ಲಿ ಯಾವ ಯಾವ ಹಳ್ಳಿಗಳು ಬರುತ್ತವೆಯೆನ್ನುವ ಕಲ್ಪನೆ ಸೀಮಾ ಮುಖಂಡರಾದಿಯಾಗಿ ಅನೇಕರಿಗೆ ಗೊತ್ತೇ ಇಲ್ಲ. ಕೆಲವು ಹಿಂದಿನ ತಲೆಮಾರಿನವರು ಮೂರು ಸೀಮೆಗಳ ಉಲ್ಲೇಖವನ್ನು ಮಾಡಿ ತಮ್ಮಲ್ಲಿಯ ಆಡಳಿತ ಕ್ರಮವನ್ನು ನೆನಪಿಸಿಕೊಂಡು ಹೇಳುತ್ತಾರೆ. ಸೀಮಾ ಮಟ್ಟದ ಆಡಳಿತ ಕುಸಿದರೂ ಸಹ ಕೆಲವಡೆ ಗ್ರಾಮ ಮಟ್ಟದಲ್ಲಿ ಸಂಘಟನೆ ಇನ್ನೂ ಉಳಿದುಕೊಂಡಿದೆ. ಎಚ್ಚೆತ್ತುಕೊಳ್ಳಲು ಹಲವರು ಪ್ರಯತ್ನಿಸುತ್ತಿರುವುದು ಕಂಡು ಬರುತ್ತದೆ.

**೫.೫.೪ ಉತ್ತರ ಕನ್ನಡ ಜಿಲ್ಲೆಯ ಧನಗರ ಗೌಳಿಗರಲ್ಲಿ ರಾಜಕೀಯ ಪರಿವರ್ತನೆ**[೮೩]

ಉತ್ತರ ಕನ್ನಡ ಜಿಲ್ಲೆಯ ದಟ್ಟಕಾಡಿನಲ್ಲೇ ನೆಲೆಸಿದ್ದ ಅತಿ ಕಡಿಮೆ ಜನಸಂಖ್ಯೆ ಹೊಂದಿರುವ ಧನಗರ ಗೌಳಿ ಸಮುದಾಯವು ಭೌಗೋಳಿಕ ಮತ್ತು ಸಾಮಾಜಿಕ ಪ್ರತ್ಯೇಕತೆಯನ್ನು ಹೊಂದಿ ನಾಗರಿಕ ಸಮಾಜದಿಂದ ದೂರವಿದ್ದುದರಿಂದ ಇವರಲ್ಲಿ ರಾಜಕೀಯ ಗಂಧವೇ ಇರಲಿಲ್ಲ. ರಾಜಕೀಯ ಜಾಗೃತಿ, ರಾಜಕೀಯ ಅಸ್ತಿತ್ವ ಇವರಲ್ಲಿ ಇರಲಿಲ್ಲ. ಮತದಾರರ ಪಟ್ಟಿಯಲ್ಲಿ ಬಹುತೇಕ ಗೌಳಿಗರ ಹೆಸರು ಇರಲಿಲ್ಲ. ಮತದಾರರ ಪಟ್ಟಿಯಲ್ಲಿ ಇವರ ಹೆಸರು ಕಂಡು ಬಂದಿದ್ದೆ ೧೯೭೧ ರಿಂದೀಚೆಗೆ ಎನ್ನಬಹುದು. ರಾಜಕೀಯ ಜಾಗೃತೆ, ರಾಜಕೀಯ ಪ್ರಜ್ಞೆ ಬೆಳೆಯಲಾರಂಭಿಸಿತಾದರೂ ಆಸಕ್ತಿಯ ಕೊರತೆಯಿಂದ ರಾಜಕೀಯವಾಗಿ ತುಂಬಾ ಹಿಂದುಳಿದ್ದಾರೆ.

ಆಧುನೀಕರಣದ ಪರಿಣಾಮದಿಂದಾದ ಅರಣ್ಯ ನಾಶ ಹಾಗೂ ಸರಕಾರದ ಅರಣ್ಯ ನೀತಿಗಳಿಂದ ಅರಣ್ಯದ ಮೇಲಿನ ಅವರ ಹಕ್ಕಿಗೆ ಚ್ಯುತಿ ಬಂದು, ಸಾಂಪ್ರದಾಯಿಕ /ಪರಂಪರಾಗತ ಕುಲಕಸುಬಾದ ಹೈನುಗಾರಿಕೆ ಕೈ ತಪ್ಪಿ ತಮ್ಮ ಉಪಜೀವನಕ್ಕೆ ಗೌಳಿಗರು ಕೃಷಿ ಹಾಗೂ ಕೃಷಿ-ಕೂಲಿ ಕಡೆಗೆ ವಾಲುತ್ತಿರುವುದರಿಂದ ಸಹಜವಾಗಿ ಗ್ರಾಮೀಣ ಪ್ರದೇಶದ ನಾಗರಿಕರೊಂದಿಗೆ ಸಂಪರ್ಕವೇರ್ಪಟ್ಟು ಗ್ರಾಮೀಣ ನಾಗರಿಕತೆಯ ಮುಖಾಮುಖಿ ಪ್ರಭಾವದಿಂದ ಗೌಳಿಗರಲ್ಲಿ ರಾಜಕೀಯ ಪ್ರಜ್ಞೆ ಜಾಗೃತಿಗೊಂಡು ಅದು ಕ್ರಮೇಣ ಬೆಳೆಯುತ್ತಿದೆ. ರಾಜಕೀಯ ಪ್ರಜ್ಞೆ ಬೆಳೆಯುತ್ತಿದ್ದರೂ ಸಂಪೂರ್ಣ ಸಮುದಾಯ ರಾಜಕೀಯ ಪ್ರಜ್ಞೆಯನ್ನು ಹೊಂದಿದೆಯೆಂದು ಹೇಳಲಿಕ್ಕಾಗದು. ಕಡ್ಡಾಯ ಮತದಾನದ ಕುರಿತು ಸಹ

ಇವರಲ್ಲಿ ಸಂಪೂರ್ಣ ಅರಿವಿಲ್ಲ. ಇವರಲ್ಲಿ ಶಿಕ್ಷಣ ಪ್ರಮಾಣ ಹೆಚ್ಚಾದಂತೆ ಬಹುಶಃ ರಾಜಕೀಯ ಅರಿವು ವಿಸ್ತಾರಗೊಳ್ಳಬಹುದು. ಹಲವಾರು ಸ್ವಯಂಸೇವಾ ಸಂಸ್ಥೆಗಳು ಹಾಗೂ ಸರಕಾರೇತರ ಸಂಘಟನೆಗಳು ಗೌಳಿ ಸಮುದಾಯದ ಅಭಿವೃದ್ಧಿ ಕಾರ್ಯಗಳಲ್ಲಿ ನಿರತವಾಗಿದ್ದು, ಗೌಳಿಗರಲ್ಲಿ ರಾಜಕೀಯ ಅರಿವು, ಜಾಗೃತಿ ಹೆಚ್ಚಿಸಲು ಅವುಗಳ ಪಾತ್ರವೂ ಇದೆ ಎಂದರೆ ತಪ್ಪಾಗಲಾರದು. ಉದಾ: Green Tribal Empowerment, Dandeli, TLM, ವನವಾಸಿ ಕಲ್ಯಾಣ ಕೇಂದ್ರ, ಇತ್ಯಾದಿ. ಉ.ಕ.ಜಿಲ್ಲೆಯ ಗೌಳಿ ಸಮುದಾಯದಲ್ಲಿ ರಾಜಕೀಯ ಪಕ್ಷಗಳ ಸದಸ್ಯತ್ವ ಹೊಂದಿದವರು ಕಡಿಮೆ. ಉ.ಕ. ಜಿಲ್ಲೆಯಲ್ಲಿ ಕಾಂಗ್ರೆಸ್ ಮತ್ತು ಬಿ.ಜೆ.ಪಿ. ಪಕ್ಷಗಳು ಹೆಚ್ಚು ಚಟುವಟಿಕೆಯುಳ್ಳ ಪಕ್ಷಗಳಾಗಿವೆ. ಗೌಳಿಗರಲ್ಲಿ ಇತ್ತೀಚಿಗೆ ರಾಜಕೀಯ ಆಸಕ್ತಿ ಹೆಚ್ಚುತ್ತಿದೆ. ಹೆಚ್ಚೆಚ್ಚು ಜನರು ರಾಜಕೀಯ ಚಟುವಟಿಕೆಗಳಲ್ಲಿ ತೊಡಗುತ್ತಿದ್ದಾರೆ. ಇವರ ರಾಜಕೀಯ ಚಟುವಟಿಕೆಯು ಕೇವಲ ಗ್ರಾಮ ಪಂಚಾಯತಿ, ತಾಲೂಕ ಪಂಚಾಯತಿ ಮತ್ತು ಜಿಲ್ಲಾ ಪಂಚಾಯತಿಗಳಿಗೆ ಮಾತ್ರ ಸೀಮಿತವಾಗಿದೆ. ಕಳೆದ ಚುನಾವಣೆಯಲ್ಲಿ ಗೌಳಿ ಸಮುದಾಯದ ಒಟ್ಟು ೧೫ ಜನರು ಗ್ರಾಮ ಪಂಚಾಯತ ಸದಸ್ಯರಾಗಿ ೨ ಜನರು ತಾಲೂಕ ಪಂಚಾಯತ ಸದಸ್ಯರಾಗಿ ಚುನಾಯಿತರಾಗಿದ್ದಾರೆ.

ತಾಲೂಕ ಪಂಚಾಯತ ಸದಸ್ಯರು

೧. ಜನ್ನಾಬಾಯಿ ಸೆಳಕೆ, ಭಾಗವತಿ (ಆಲೂರ), ಹಳಿಯಾಳ ತಾಲೂಕ

೨. ಕೊಂಡುಬಾಯಿ ದೇವು ಜೋರೆ, ಮೈನಳ್ಳಿ, ಮುಂಡಗೋಡ ತಾಲೂಕ

ಹದಿನೈದು ಜನ ಗ್ರಾಮ ಪಂಚಾಯತ ಸದಸ್ಯರಲ್ಲಿ ಇಬ್ಬರು ಗ್ರಾಮ ಪಂಚಾಯತ ಅಧ್ಯಕ್ಷರು ಮತ್ತು ಒಬ್ಬರು ಗ್ರಾಮ ಪಂಚಾಯತ ಉಪಾಧ್ಯಕ್ಷರಾಗಿದ್ದಾರೆ.

೧. ಜಾನು ಕೊಕ್ರೆ, ಅಂಬಿಕಾನಗರ ಗ್ರಾಮ ಪಂಚಾಯತ್ ಅಧ್ಯಕ್ಷ

೨. ಜನ್ನು ಪಾಂಡ್ರಮಿಶೆ, ಮದನೂರ್ ಗ್ರಾಮ ಪಂಚಾಯತ್ ಅಧ್ಯಕ್ಷ

೩. ದೋಂಡು ಜಂಗಲೆ, ಕಿರವತ್ತಿ ಗ್ರಾಮ ಪಂಚಾಯತ್ ಉಪಾಧ್ಯಕ್ಷ

ಈಗಿನ ಗೌಳಿ ಯುವಕರಲ್ಲಿ ಹೆಚ್ಚುತ್ತಿರುವ ಶಿಕ್ಷಣದ ಪ್ರಭಾವದಿಂದ ರಾಜಕೀಯ ಜಾಗೃತೆ ಹೆಚ್ಚುತ್ತಿದ್ದು ರಾಜಕೀಯ ಸಾಮರ್ಥ್ಯ ಸ್ವಲ್ಪ ಮಟ್ಟಿಗೆ ದೊರಕುವಂತಾಗಿದೆ.

**ಕೋಷ್ಟಕ ೫.೧೭**

**ಶಿಕ್ಷಣದಿಂದ ರಾಜಕೀಯ ಸಾಮರ್ಥ್ಯ**

| | | |
|---|---|---|
| ಶಿಕ್ಷಣದಿಂದ ರಾಜಕೀಯ ಸಾಮರ್ಥ್ಯ ದೊರಕಿದೆ | ೮೬ | ೩೮.೨% |
| ದೊರಕಿಲ್ಲ | ೧೩೯ | ೬೧.೮% |
| **ಒಟ್ಟು** | **೨೨೫** | **೧೦೦%** |

೨೨೫ ಸಂದರ್ಶಿತ ಪೈಕಿ ೮೬ ಜನರು ಶಿಕ್ಷಣದಿಂದ ತಮಗೆ ರಾಜಕೀಯ ಸಾಮರ್ಥ್ಯ ದೊರಕಿದೆ ಎಂದು ಭಾವಿಸಿದರೆ ೧೩೯ ಜನರು ಶಿಕ್ಷಣದಿಂದ ತಮಗೆ ರಾಜಕೀಯ ಸಾಮರ್ಥ್ಯ

ದೊರಕಿಲ್ಲವೆಂದು ಹೇಳಿದ್ದಾರೆ. ಅಂದರೆ ಶಿಕ್ಷಣದಿಂದ ರಾಜಕೀಯ ಸಾಮರ್ಥ್ಯ ದೊರಕುತ್ತಿದೆ ಆದರೆ ಕಡಿಮೆ. ಶಿಕ್ಷಣದ ಪ್ರಮಾಣ ಸಾಲದು. ರಾಜಕೀಯ ಸಾಮರ್ಥ್ಯದ ಕೊರತೆಯಿಂದ ಇವರಿಗೆ ರಾಜಕೀಯ ಲಾಭವನ್ನು ಪಡೆಯಲು ಸಾಧ್ಯವಾಗಿಲ್ಲ. ಶಿಕ್ಷಣದ ಪ್ರಮಾಣ ಹೆಚ್ಚಿದಂತೆ ರಾಜಕೀಯ ಸಾಮರ್ಥ್ಯವೂ ಹೆಚ್ಚಬಹುದು. ಇನ್ನೊಂದು ದೃಷ್ಟಿಕೋನದಿಂದ ನೋಡಿದರೆ ರಾಜಕೀಯ ಸಾಮರ್ಥ್ಯ ಹೊಂದಲು ಶಿಕ್ಷಣವೊಂದೇ ಸಾಲದು. ಆರ್ಥಿಕ ಹಾಗೂ ಸಂಘಟನೆಯ ಬಲವೂ ಬೇಕು. ಸಮುದಾಯಗಳ ಆರ್ಥಿಕ ಸ್ಥಿತಿಗೂ, ಶಿಕ್ಷಣಕ್ಕೂ ಆ ಮೂಲಕ ರಾಜಕೀಯ ಸಾಮರ್ಥ್ಯಕ್ಕೂ ನೇರವಾದ ಸಂಬಂಧವಿದೆ. ಅಂದರೆ ಶೈಕ್ಷಣಿಕ ಪ್ರಗತಿಯ ಜೊತೆಗೆ ಆರ್ಥಿಕ ಸ್ಥಿತಿಯು ಬಲಗೊಂಡಾಗ ಮಾತ್ರ ಸಂಘಟನೆಯ ಶಕ್ತಿ ಸಬಲವಾಗಿ ಸಾಮರ್ಥ್ಯ ಶಕ್ತಿ ಹೊಂದಲು ಸಾಧ್ಯ.

ಸಮುದಾಯ ಸಂಘಟನೆಯ ಕೊರತೆಯಿಂದ ಗೌಳಿಗರು ರಾಜಕೀಯವಾಗಿ ಇನ್ನೂ ಪ್ರಬಲವಾಗಿಲ್ಲ. ಉತ್ತರ ಕನ್ನಡ ಜಿಲ್ಲಾ ಧನಗರ ಗೌಳಿ ಸಮುದಾಯ ಸಮಿತಿ (ರಿ) ಯಲ್ಲಾಪೂರ, ಎಂಬ ಸಂಘಟನೆ ೨೦೦೮ ರಲ್ಲಿ ಅಸ್ತಿತ್ವಕ್ಕೆ ಬಂದಿದ್ದು, ಸ್ಥಾಪನೆಗೊಂಡಾಗ ಅದರ ಪದಾಧಿಕಾರಿಗಳು ಈ ಕೆಳಗಿನಂತಿದ್ದರು.

| | | |
|---|---|---|
| ಅಧ್ಯಕ್ಷ | : | ಬಮ್ಮು ಯಡಿಗೆ |
| ಉಪಾಧ್ಯಕ್ಷ | : | ವಿಠ್ಠು ಜಾನು ಪಾಂಡ್ರಮಿಶೆ |
| ಕಾರ್ಯದರ್ಶಿ | : | ದೊಂಡು ಪಾಟೀಲ |
| ಸಂಘಟನಾ ಕಾರ್ಯದರ್ಶಿ | : | ಬಾಗು ಪಿಂಗಳೆ |

೨೦೧೦ ರಲ್ಲಿ ಹೊಸ ಪದಾಧಿಕಾರಿಗಳನ್ನು ಆರಿಸಲಾಯಿತು. ಈಗಿನ ಹೊಸ ಪದಾಧಿಕಾರಿಗಳು ಈ ಕೆಳಗಿನಂತಿದ್ದಾರೆ.

| | | |
|---|---|---|
| ಅಧ್ಯಕ್ಷ | : | ಯಮ್ಮು ಟಕ್ಕು ವರಕ್ |
| ಉಪಾಧ್ಯಕ್ಷ | : | ಬಮ್ಮು ಬೀರು ಯಡಿಗೆ |
| ಕಾರ್ಯದರ್ಶಿ | : | ಅಬ್ಬು ದತ್ತು ಪಾಂಡ್ರಮಿಶೆ |
| ಸಂಘಟನಾ ಕಾರ್ಯದರ್ಶಿ | : | ದೊಂಡು ಕಾಳು ಪಾಟೀಲ |
| ಖಜಾಂಚಿ | : | ಬಜ್ಜು ಜನ್ನು ಪಿಂಗಳೆ |

ಈ ಸಂಘಟನೆಯು ಜಿಲ್ಲಾದ್ಯಂತ ಗೌಳಿಗರು ಹೆಚ್ಚಾಗಿ ನೆಲೆಸಿರುವ ಹಳಿಯಾಳ, ಜೋಯಿಡಾ ಯಲ್ಲಾಪೂರ, ಮುಂಡಗೋಡ ಈ ನಾಲ್ಕು ತಾಲೂಕಗಳಲ್ಲಿ ತನ್ನ ಕಾರ್ಯಕ್ಷೇತ್ರವನ್ನು ವಿಸ್ತರಿಸಿಕೊಂಡಿದೆ. ಈ ಸಂಘಟನೆಯು ಪ್ರತಿಯೊಂದು ಗೌಳಿವಾಡಾದಲ್ಲಿ ಬೆಳೆದು ಬಲಗೊಳ್ಳಬೇಕಿದೆ.

ರಾಜಕೀಯದಲ್ಲಿ ಪ್ರಭಾವಿ ಸ್ಥಾನಮಾನ ಹೊಂದಿ ಪ್ರಬಲ ರಾಜಕೀಯ ಶಕ್ತಿಯಾಗಿ ಬೆಳೆಯಬೇಕಾದರೆ ಈ ಸಮುದಾಯವು ಇನ್ನೂ ದೀರ್ಘ ಹಾಗೂ ಕಠಿಣ ಮಾರ್ಗ ಕ್ರಮಿಸಬೇಕಾಗುತ್ತದೆ. ಮುಂದಿನ ಪೀಳಿಗೆಯ ಗೌಳಿ ಯುವಕರಲ್ಲಿ ಹೆಚ್ಚಿನ ಶಿಕ್ಷಣ ಹಾಗೂ ಆರ್ಥಿಕ ಪ್ರಭಾವದಿಂದ ಸಂಘಟನೆ ಪ್ರಬಲವಾಗಿ ಈ ಸಮುದಾಯವು ರಾಜಕೀಯ ಪ್ರಬಲತೆಯನ್ನು ಹೊಂದುವ ಸಾಧ್ಯತೆಯನ್ನು ಅಲ್ಲಗಳೆಯುವಂತಿಲ್ಲವೆಂದು ಹೇಳಬಹುದು.

**ಬದಲಾವಣೆಗಳು**

೧. ರಾಜಕೀಯ ಜಾಗೃತೆ ಹೆಚ್ಚಾಗುತ್ತ ಇದೆ.

೨. ಸ್ಥಾನಿಕ ಸಂಸ್ಥೆಗಳಾದ ಗ್ರಾಮ ಪಂಚಾಯತ್, ತಾಲೂಕ ಪಂಚಾಯತ್ ಹಾಗೂ ಜಿಲ್ಲಾ ಪಂಚಾಯತ್ ಚುನಾವಣೆಗಳಲ್ಲಿ ನೇರ ಸಹಭಾಗಿತ್ವ ಕಾಣಿಸುತ್ತದೆ.

೩. ಇತರರಂತೆ ತಾವೂ ರಾಜಕೀಯ ಶಕ್ತಿಯಾಗಿ ಬೆಳೆದು ರಾಜಕೀಯ ಲಾಭ ಹಾಗೂ ಹೆಚ್ಚಿನ ಸರಕಾರಿ ಸೌಲಭ್ಯಗಳನ್ನು ಪಡೆಯಬೇಕೆಂಬ, ವಿಶೇಷವಾಗಿ ಗೌಳಿ ಸಮುದಾಯಕ್ಕೆ ಎಸ್.ಟಿ. ಎಂಬ ಅಧಿಕೃತ ಸ್ಥಾನಮಾನ ಪಡೆಯಬೇಕೆಂಬ ಮನೋಭಾವನೆ (ಛಲ) ಗೌಳಿ ಯುವಕರಲ್ಲಿ ಬೆಳೆಯುತ್ತಿದೆ.

೪. ಪ್ರಬಲ ರಾಜಕೀಯ ಶಕ್ತಿಯಾಗಿ ಬೆಳೆಯುವತ್ತ, ಉ.ಕ.ಜಿಲ್ಲಾ ಮಟ್ಟದಲ್ಲಿ ಧನಗರ ಗೌಳಿ ಸಮುದಾಯ ಸಂಘಟನೆಯನ್ನು ಹುಟ್ಟು ಹಾಕಿದ್ದಾರೆ. ಸಂಘಟನೆಯನ್ನು ಜಿಲ್ಲೆಯಾದ್ಯಂತ ಪ್ರತಿಯೊಂದು ಗೌಳಿವಾಡಾದಲ್ಲಿ ಬಲಗೊಳಿಸಲು ಯುವಕರು ಹೆಚ್ಚಿನ ಆಸಕ್ತಿಯನ್ನು ತೋರಿಸುತ್ತಿದ್ದಾರೆ. ಆದರೆ ಹಣದ ಕೊರತೆಯಿಂದ ಸಂಘಟನಾ ಕಾರ್ಯ ನಿಧಾನಗತಿಯಲ್ಲಿ ಸಾಗಿದೆ ಹಾಗೂ ಸಂಘಟನೆಯು ಬಲಗೊಳ್ಳುವುದು ಕಷ್ಟಸಾಧ್ಯ.

**೫.೬. ಸಾಂಸ್ಕೃತಿಕ ಪರಿವರ್ತನೆ**

ಭೌತ ಸಂಸ್ಕೃತಿ (ನಾಗರಿಕತೆ) ಬಹಳ ವೇಗವಾಗಿ ಮಾರ್ಪಾಡಾಗುವುದು. ಆದರೆ ಅಭೌತ ಸಂಸ್ಕೃತಿ (ಸಂಸ್ಕೃತಿ) ಅಷ್ಟೇ ವೇಗದಿಂದ ಮಾರ್ಪಾಡುವಾಗುವುದಿಲ್ಲ. ಈ ಹಿಂಬೀಳಿಕೆಗೆ ಸಾಂಸ್ಕೃತಿಕ ಹಿಂಬೀಳಿಕೆ ಎನ್ನುವರು. ಇದರಿಂದ ಕೆಲವೊಮ್ಮೆ ಸಾಮಾಜಿಕ ಸಮಸ್ಯೆಗಳು ಹಾಗೂ ಸಂಘರ್ಷಗಳು ಉಂಟಾಗುತ್ತವೆ. ಕಾರಣ ಭೌತ ಸಂಸ್ಕೃತಿಯ ಮಾರ್ಪಾಡಿಗನುಗುಣವಾಗಿ (ಅಭೌತ) ಸಂಸ್ಕೃತಿಯೂ ಮಾರ್ಪಾಡು ಗೊಳ್ಳುವುದು ಅಥವಾ ಹೊಂದಿಕೊಳ್ಳುವುದು ಅನಿವಾರ್ಯ.[೪೪]

ಸಂಸ್ಕೃತಿಯು ಮಾನವನ ಪರಂಪರಾಗತ ವಸ್ತುಗಳನ್ನು ಒಳಗೊಂಡಿದ್ದರೂ ಜಡವಾದುದಲ್ಲ. ಆದರೆ ಪರಿವರ್ತನಶೀಲವಾದುದು. ಸಾಂಸ್ಕೃತಿಕ ಅಂಶಗಳು ಎಂಬುದು ಇಲ್ಲಿ ಮುಖ್ಯವಾಗಿ ಅಭೌತ ಸಂಸ್ಕೃತಿಗೆ ಸಂಬಂಧಿಸಿದವುಗಳಾಗಿದ್ದು ಸಾಮಾಜಿಕ ಪರಿವರ್ತನೆಗೆ ಅವಕಾಶವಿರುತ್ತದೆ. ಮೌಲ್ಯಗಳು ಮತ್ತು ನಂಬಿಕೆಗಳು, ರೂಢಿಗಳು, ಆಚಾರ ವಿಚಾರಗಳು, ರೀತಿ–ನೀತಿಗಳು, ಲೋಕಾಚಾರ, ನೈತಿಕ ನಿಯಮಗಳು, ಸಿದ್ಧಾಂತಗಳು ಮತ್ತು ಅಭಿರುಚಿಗಳು, ಮತಧರ್ಮ, ಶಿಕ್ಷಣ, ಶಾಸನ, ಮುಂತಾದ ಸಂಸ್ಥೆಗಳು ಇವೆಲ್ಲವೂ ಅಭೌತ ಸಂಸ್ಕೃತಿಯ ವಿವಿಧ ಅಂಶಗಳಾಗಿ ಸಾಮಾಜಿಕ ಪರಿವರ್ತನೆಗಳಿಗೂ ಕಾರಣವಾಗುವುವು. ಧಾರ್ಮಿಕ ನಂಬಿಕೆ ಮತ್ತು ಶ್ರದ್ಧೆ ವ್ಯಾಪಕವಾಗಿ ಹರಡಿದ್ದ ಕಾಲವಿದ್ದಂತೆ ಧರ್ಮ ದೇವರುಗಳನ್ನು ನಂಬದ ನಾಸ್ತಿಕವಾದಕ್ಕೆ ಜನರು ಮಾರು ಹೋಗಿದ್ದ ಕಾಲವೂ ಇತ್ತು. ರಾಬರ್ಟ ಬೈರಸ್ಟಡ್–ಪ್ರಕಾರ 'ಜನರ ಚಿಂತನೆ ಅವರು ಏನನ್ನು ಮಾಡುವರು ಮತ್ತು ಬಯಸುವರು ಎಂಬುದನ್ನು ಬಹಳವಾಗಿ ನಿರ್ಧರಿಸುತ್ತದೆ'.

ತತ್ವಾದರ್ಶಗಳು ಸಾಮಾಜಿಕ ಪರಿವರ್ತನೆಯ ಬಲವಾದ ಶಕ್ತಿಯಾಗಿವೆ. ಜನರು ತಾವು ಎದುರಿಸಬೇಕಾಗಿ ಬರುವ ಸವಾಲುಗಳು, ಸಮಸ್ಯೆಗಳು, ಒತ್ತಡಗಳು ಮತ್ತು ವೈಚಾರಿಕ ಸಂಘರ್ಷಗಳಿಗೆ ಗತ ಜೀವನದಲ್ಲಿ ಯಾವುದೇ ಪರಿಹಾರ ಕಾಣದೇ ಇದ್ದಾಗ ಹೊಸ ವಿಚಾರಗಳನ್ನು ಮಾದರಿಗಳನ್ನು ಹುಡುಕಿಕೊಂಡು ಹೋಗುವರು. ಈ ಹಿನ್ನೆಲೆಯಲ್ಲಿಯೇ ದಾರ್ಶನಿಕ ಪ್ಲೇಟೋ 'ತತ್ವಾದರ್ಶಗಳು ಜಗತ್ತನ್ನು ಆಳುತ್ತವೆ' ಎಂದಿದ್ದಾನೆ. ವರ್ತನೆಗಳು, ಜೀವನಕ್ರಮ, ಆಲೋಚನೆಯ ರೀತಿ ಇವುಗಳು ಸಾಮಾಜಿಕ ಮೌಲ್ಯಗಳಿಂದ ಪ್ರಭಾವಿತವಾಗಿವೆ. ಪರಂಪರಾಗತ ಮೌಲ್ಯಗಳಿಂದ ಆಧುನಿಕ ಮೌಲ್ಯಗಳಿಗೆ ದಾರಿ ಮಾಡಿಕೊಡುತ್ತಿವೆ.

ಸಾಂಸ್ಕೃತಿಕ ಅಂಶಗಳು ಸಾಮಾಜಿಕ ಪರಿವರ್ತನೆಗೆ ಹೇಗೆ ಕಾರಣವಾಗಬಹುದೆಂಬ ಅಂಶವನ್ನು ಮ್ಯಾಕ್ಸವೆಬರ್ ಎಂಬ ಸಮಾಜಶಾಸ್ತ್ರಜ್ಞನು ತಮ್ಮ 'The Protestant Ethic and the Spirit of Capitalism' ಎಂಬ ಗ್ರಂಥದಲ್ಲಿ ಸ್ಪಷ್ಟವಾಗಿ ಬರೆದಿದ್ದಾನೆ. ಆತನ ಅಭಿಪ್ರಾಯದಲ್ಲಿ ಜನರ ಧಾರ್ಮಿಕ ನಂಬಿಕೆಗಳು ಮತ್ತು ಆಚರಣೆಗಳು ಮತ್ತು ಅವರ ಆರ್ಥಿಕ ಚಟುವಟಿಕೆಗಳು ಇವುಗಳ ನಡುವೆ ನೇರ ಸಂಬಂಧವಿದೆ.

ಸಾಮಾಜಿಕ ಶಾಸನಗಳು ಸಾಮಾಜಿಕ ಪರಿವರ್ತನೆಯನ್ನು ತರುವ ಸಾಂಸ್ಕೃತಿಕ ಅಂಶಗಳ ಸಾಲಿಗೆ ಸೇರುತ್ತವೆ. ಸಾಮಾಜಿಕ ಶಾಸನಗಳ ಮೂಲಕ ಜನರ ಜೀವನ ಶೈಲಿ, ಮನೋಭಾವನೆಗಳು, ಮೌಲ್ಯಗಳು ಹಾಗೂ ದೃಷ್ಟಿಕೋನಗಳಲ್ಲಿ ಬದಲಾವಣೆ ತರಲು ಪ್ರಯತ್ನಿಸಲಾಗಿದೆ. ಸಾಮಾಜಿಕ ಪಿಡುಗುಗಳಾದ ಅಸ್ಪೃಶ್ಯತೆ, ದೇವದಾಸಿ ಪದ್ಧತಿ, ವಿಧವಾ ವಿವಾಹ ನಿಷೇಧ, ಜಾತಿ ಪದ್ಧತಿ, ಬಾಲ್ಯ ವಿವಾಹ, ವ್ಯಭಿಚಾರ, ವರದಕ್ಷಿಣೆ, ಮದ್ಯವ್ಯಸನ, ಸ್ತ್ರೀಯರ ಮತ್ತು ದುರ್ಬಲರ ಮೇಲಿನ ದೌರ್ಜನ್ಯ ಮುಂತಾದವುಗಳನ್ನು ನಿವಾರಣೆ ಮಾಡಲು ಇವು ಪ್ರಯತ್ನಿಸುತ್ತವೆ.[೪೫]

'ಒಂದು ಸಂಸ್ಕೃತಿ ಸ್ಥಿತ್ಯಂತರದ ಸವಾಲುಗಳನ್ನು ಸ್ವೀಕರಿಸುವಾಗ ಬೌದ್ಧಿಕವಾಗಿ ಚಿಂತಿಸುವುದರ ಜೊತೆಗೆ ಪ್ರತಿರೋಧದ ವೈಚಾರಿಕ ದಿಟ್ಟತನವನ್ನು ಮೈಗೂಡಿಸಿಕೊಂಡಿರುತ್ತದೆ. ಸಕ್ರೀಯ ದರ್ಶನಗಳ ಜೊತೆ ತಾನು ಪಡೆದ ಅನ್ಯಜ್ಞಾನವನ್ನು ಸಂಯೋಜಿಸುವ ವಿಶಿಷ್ಟ ಗುಣ ಭಾರತದ ಬಹುಪಾಲು ಸಮುದಾಯಗಳಿಗಿದೆ. ಭಾರತದ ಜ್ಞಾನ ಶಿಸ್ತುಗಳಿಗೆ ಕೊಡುಕೊಳ್ಳುವ ವ್ಯವಧಾನವಿದೆ. ತನ್ನನ್ನೂ ಉಳಿಸಿಕೊಂಡು ಅದು ಅನ್ಯವನ್ನು ಸಂಯೋಜಿಸಿಕೊಳ್ಳುವ ನಮ್ಯತೆಯನ್ನು ಹೊಂದಿದೆ. ಸಂಸ್ಕೃತಿ ತನ್ನಷ್ಟಕ್ಕೆ ತಾನು ಸ್ವತಂತ್ರ ಘಟಕವಲ್ಲ. ಅದು ಸಮುದಾಯದ ಅಂತಃಸತ್ವ ಕಾಲದ ಒತ್ತಡಗಳು ಪ್ರಭಾವಗಳು ಹೇಗೆ ಸಮುದಾಯಗಳ ಮೇಲೆ ಬದಲಾವಣೆಗಳ ಅನಿವಾರ್ಯತೆಯನ್ನು ತರುತ್ತವೋ ಆಗೆಲ್ಲಾ ಸಂಸ್ಕೃತಿ ತನ್ನಷ್ಟಕ್ಕೆ ತಾನು ಸ್ಥಿತ್ಯಂತರಗಳಿಗೆ ಒಳಗಾಗುತ್ತದೆ. ಅದು ಕಾಲದ ಎಲ್ಲ ಬಗೆಯ ಪ್ರಭಾವಗಳ ಜೊತೆ ಅದರ ಮುಖಾಮುಖಿಯೇ ಹೊರತು ಒಂದು ಸಂಸ್ಕೃತಿಯ ನಾಶವಲ್ಲ. ಈ ಪ್ರಭಾವ, ಒತ್ತಡ ಮುಖಾಮುಖಿಗಳ ಗೊಂದಲಗಳಲ್ಲಿ ಬದಲಾವಣೆಯನ್ನು ಬಯಸುವ ಸಂಸ್ಕೃತಿ ಒಂದು ನಿಚ್ಚಳ ಚಹರೆ (Identity) ಯನ್ನು ಕಾಪಾಡಿಕೊಳ್ಳುತ್ತಲೇ ಇರುತ್ತದೆ. ಇದು ಸಂಸ್ಕೃತಿಯ ಕೋಶದೊಳಗಿನ ನಡೆವ ಅನನ್ಯ ವ್ಯಾಪಾರ. ಇದು ನಿರಾಕರಣ ಮತ್ತು ಸ್ವೀಕರಣದ ವಿಸ್ಮಯ ಪ್ರಕ್ರಿಯೆ. ಚಹರೆಯ ಕುರಿತು

ಸಮುದಾಯ ಸದಾ ಎಚ್ಚರಿಕೆಯಿಂದಿರುತ್ತದೆ. ಅನ್ಯಾಕ್ರಮಣಗಳನ್ನು ಅದು ಸಹಿಸದು. ಮುಖ್ಯವಾಗಿ ಸಂಸ್ಕೃತಿ ಮನುಷ್ಯನ ಬದುಕಿನ ಉತ್ಪನ್ನವೆಂದು ನಂಬುವದಾದರೆ, ಮನುಷ್ಯ ಅನೇಕ ಆವಿಷ್ಕಾರಗಳ ಮೂಲಕ ತನ್ನ ಬದುಕನ್ನು ಕಟ್ಟಿಕೊಂಡಿರುವ ಸತ್ಯ ನಮಗೆ ಅರ್ಥವಾಗುವುದಾದರೆ ಸಂಸ್ಕೃತಿಯು ಇಡಿಯಾಗಿ ಎಲ್ಲ ಸ್ಥಿತ್ಯಂತರಗಳಿಂದ ಹೊರತಾಗಿರುವುದಾದರೂ ಹೇಗೆ? ಮಾನವನ ಸಾಮಾಜಿಕ ಸಂಸ್ಥೆಗಳು ವಿಕಾಸವನ್ನು ಓದುವಾಗ ಅಲ್ಲಿ ಮನುಷ್ಯ ಹೇಗೆ ತನ್ನ ಸುತ್ತಲ ರೋಮಾಂಚನಗಳಿಂದ ಪ್ರಭಾವಿತನಾಗಿ ಬದಲಾವಣೆಗಳನ್ನು ತಂದುಕೊಂಡ ಎಂಬುದು ಗೊತ್ತಾಗುತ್ತದೆ. ಈ ವಿಕಾಸಶೀಲ ಗುಣವೇ ಶಿಲಾಯುಗದಿಂದ ನಮ್ಮನ್ನು ಇಂದಿನ ಆಧುನಿಕ ತಂತ್ರಜ್ಞಾನದ ವಿಶ್ವಗ್ರಾಮಕ್ಕೆ ಎಳೆದು ತಂದು ನಿಲ್ಲಿಸಿದೆ. ಹೀಗೆ ಭಾರತದ ಎಲ್ಲ ಸಾಂಸ್ಕೃತಿಕ ಘಟಕಗಳು ಸ್ಥಿತ್ಯಂತರಗಳ ಹಲವು ಮಜಲುಗಳನ್ನು ಹಾದು ಬಂದು ಇನ್ನೂ ತಮ್ಮ ಚಹರೆಗಳನ್ನು ಉಳಿಸಿಕೊಂಡಿವೆ'.[೪೬]

ಬುಡಕಟ್ಟು ಜನರ ಅರಣ್ಯವಾಸ, ಬೆಟ್ಟ ಗುಡ್ಡವಾಸ ಅಥವಾ ಊರಿನ ಬಳಿಯಿದ್ದಾಗಲೂ ಪ್ರತ್ಯೇಕ ಕೇರಿ/ಹಟ್ಟಿಗಳಲ್ಲಿ ವಾಸ ಇವು ತಮ್ಮ ಸಂಸ್ಕೃತಿಯ ಚಹರೆಗಳನ್ನು ಕಾಪಾಡಿಕೊಂಡು ಬರಲು ಸಹಕಾರಿಯಾಗಿವೆ. ಉತ್ಪಾದನಾ ಕ್ರಿಯೆಗಳಲ್ಲಿ ಇರುವ ಸಾಪೇಕ್ಷ ಪ್ರತ್ಯೇಕತೆಯೂ ಬುಡಕಟ್ಟು ಚಹರೆ ಉಳಿಸಿಕೊಂಡು ಬರಲು ಕಾರಣವಾಗಿದೆ. ಉದಾ: ಪಶುಪಾಲನೆ, ಬೇಟೆಗಾರಿಕೆ, ಅರಣ್ಯ ಉತ್ಪನ್ನ ಸಂಗ್ರಹಣೆ ಇತ್ಯಾದಿ.

ಭೌಗೋಳಿಕತೆ, ಚಾರಿತ್ರಿಕತೆ, ಸಾಮಾಜಿಕತೆ, ಸಾಂಸ್ಕೃತಿಕತೆ, ಭಾಷಿಕ ಕಾರಣಗಳು, ಅವಲಂಬಿತ ಮೌಲ್ಯಗಳು ಹೀಗೆ ಹತ್ತು ಹಲವಾರು ಅಂಶಗಳು ಸಾಂಸ್ಕತಿಕ ಚಹರೆಗೆ ಕಾರಣವಾಗಿರುತ್ತವೆ. ಸಂಸ್ಕೃತಿಯಲ್ಲಿರುವ ಉನ್ನತ ಮೌಲ್ಯ ಹಾಗೂ ಧೋರಣೆಗಳನ್ನು ವಿವರಿಸಿಸುವುದು ಚಹರೆಯ ಗುರಿಯಾಗಿದೆ. ಬುಡಕಟ್ಟುಗಳ ಬದುಕಿನಲ್ಲಿ ಬದಲಾವಣೆ ಹಾಗೂ ಪರಿಷ್ಕಾರಗಳು ನಿಧಾನವಾಗಿರುವುದರಿಂದ ಸಾಂಸ್ಕೃತಿಕ ಚಹರೆಗಳು ಹೆಚ್ಚಾಗಿ ಕಂಡುಬರುತ್ತವೆ. ಒಂದು ಸಮುದಾಯದಲ್ಲಿ ಶಿಕ್ಷಣದ ಮಟ್ಟ ಹೆಚ್ಚಿದಂತೆಲ್ಲಾ ಸಮಾಜ ಎಲ್ಲಾ ವಿಧದಲ್ಲಿಯೂ ಬದಲಾಗಲು ಸಾಧ್ಯ.

ಕುಲ ಲಾಂಛನ, ಆಹಾರ ಪದ್ಧತಿ, ಉಡುಪು ಮತ್ತು ಆಭರಣ, ಭಾಷಾ ವೈವಿಧ್ಯತೆ ಇವು ಸಾಂಸ್ಕೃತಿಕ ಚಹರೆಯ ಗುರುತಿಸುವಿಕೆಗೆ ಕಾರಣವಾಗುವ ಭೌತಿಕ ಅಂಶಗಳು. ಸಾಂಸ್ಕೃತಿಕ ಚಹರೆಯ ಗುರುತಿಸುವಿಕೆಗೆ ಕಾರಣವಾಗುವ ಮಾನಸಿಕ/ ಸಾಂಸ್ಕೃತಿಕ ಅಂಶಗಳೆಂದರೆ ಬುಡಕಟ್ಟು ಸಮುದಾಯಗಳು ತಾವು ಹೊಂದಿರುವ ಕುಲದ ಮೂಲ, ರಕ್ತ ಸಂಬಂಧದ ಪಾವಿತ್ರತೆಯ ಭಾವನೆ, ಅವರ ಮೌಖಿಕತೆಯಲ್ಲಿ ಉಳಿದುಕೊಂಡಿರುವ ಪುರಾಣ, ಐತಿಹ್ಯ, ಜನಪದ ಸಾಹಿತ್ಯ, ಆಚರಣೆಗಳು, ದೈವಗಳು, ಯುದ್ಧ ಹಾಗೂ ಸಹಕಾರದ ಸ್ಮೃತಿಗಳು, ಕಥನಗಳು.

ಯಾವ ಜಾತಿಗಳಿಗೂ ಸೇರದೇ ಪ್ರತ್ಯೇಕವಾಗಿ ಮತ್ತು ಕಾಡಿನಲ್ಲಿ ಉಳಿದಿರುವ ಹಾಗೂ ಸಂಸ್ಕೃತಿಯ ಘಟಕಗಳಾದ ನಂಬಿಕೆಗಳು, ಸಂಪ್ರದಾಯ, ಸಾಹಿತ್ಯ, ಸಂಗೀತ, ನೃತ್ಯ, ಕಲೆ, ಕರಕುಶಲತೆ ಮೊದಲಾದ ಹಲವಾರು ಅಂಶಗಳಿಂದ ವಿಶಿಷ್ಟವಾದ ಸಂಸ್ಕೃತಿಯನ್ನು ಹೊಂದಿ ಸ್ವಚ್ಛಂದವಾಗಿ ಬದುಕುತ್ತಿದ್ದ

ಬುಡಕಟ್ಟುಗಳು ಆಧುನಿಕ ನಾಗರಿಕ ಜಗತ್ತಿನಿಂದ ಮತ್ತು ಐಷಾರಾಮಿ ಜೀವನ ಪದ್ಧತಿಗಳಿಂದಾಗಿ ಆಕ್ರಮಣಕ್ಕೊಳಗಾಗಿ ತಮ್ಮ ಸೃಜನಶೀಲತೆಯನ್ನು ಕಳೆದುಕೊಂಡು ಆ ಮುಖಾಂತರ ತಮ್ಮದಲ್ಲದ ಸಂಸ್ಕೃತಿಯತ್ತ ದಾಪುಗಾಲು ಹಾಕುತ್ತ ತಮ್ಮದೂ ಅಲ್ಲದ, ಇತರರದೂ ಅಲ್ಲದಂತಹ ಸ್ಥಿತಿ ತಲುಪಿ ಸಾಂಸ್ಕೃತಿಕ ವೈಫಲ್ಯವನ್ನು ಎದುರಿಸಬಹುದಾದ ಸಾಧ್ಯತೆಯಿದೆ.

ಆಧುನಿಕ ಜಗತ್ತು ತನ್ನ ವೈಜ್ಞಾನಿಕ ಪ್ರಗತಿಯಿಂದಾಗಿ ಹೊಸ ಹೊಸ ಉತ್ಪದನಾ ಘಟಕಗಳನ್ನು ಸೃಷ್ಟಿಸುವ ಮುಖಾಂತರ ಅಲ್ಲಿ ಬೇರೆ ಬೇರೆ ಸಮುದಾಯ ಮತ್ತು ಬೇರೆ ಬೇರೆ ಬುಡಕಟ್ಟುಗಳು ಒಟ್ಟಾಗಿ ಬದುಕುವಂತಹ ಹಾಗೂ ಒಂದೆಡೆ ವಾಸಿಸುವಂತಹ ಕಾಲೋನಿಗಳು ನಿರ್ಮಾಣವಾಗಿ ಅಲ್ಲಿ ಹೊಸದಾಗಿ ಸಂಸ್ಕೃತಿ ತಲೆ ಎತ್ತಲು ಕಾರಣವಾಗಿದೆ. ಆಗ ಹೊಸ ಚಹರೆಗಳು ಪರಿವೇಷಗೊಳ್ಳುವ ಸಾಧ್ಯತೆಗಳಿವೆ. ಆಧುನಿಕ ಜಗತ್ತು ತನ್ನ ಕಬಂದ ಬಾಹುಗಳನ್ನು ಸಮೂಹದ ಸಾಂಸ್ಕೃತಿಕ ಜಗತ್ತಿನ ಮೇಲೆ ಬೀರಿ ಬುಡಕಟ್ಟುಗಳ ಕಲ್ಪನೆಯಲ್ಲಿರುವ ದೈವಗಳನ್ನು ಶಿಷ್ಟೀಕರಣಗೊಳಿಸುವ ಮುಖಾಂತರ ಹಲವಾರು ಬುಡಕಟ್ಟುಗಳನ್ನು ಏಕೀಕರಣಗೊಳಿಸುವ ಕ್ರಿಯೆಯಲ್ಲಿ ತೊಡಗಿರುವುದನ್ನು ಕಾಣಬಹುದು. ಬುಡಕಟ್ಟು ದೈವಗಳನ್ನು ಶಿಷ್ಟೀಕರಣಗೊಳಿಸುವ ಜೊತೆಗೆ ತುಂಬಾ ಪ್ರಸಿದ್ಧವಾದ ದೈವಗಳ ಆಡಳಿತವನ್ನು ಮುಜರಾಯಿ ಇಲಾಖೆ ವಹಿಸಿಕೊಳ್ಳುವ ಮುಖಾಂತರ ಸಹ ಶೀಷ್ಟಿಕರಣಗೊಳಿಸುವುದರ ಜೊತೆಗೆ ಸಾಂಸ್ಕ್ರತಿಕ ಏಕೀಕರಣಗೊಳಿಸುವುದು. ಆಧುನಿಕ ಜಗತ್ತಿನ ಸಂವಹನ ಮಾಧ್ಯಮಗಳಾದ ಟಿ.ವ್ಹಿ., ರೇಡಿಯೋಗಳು ಪದೇ ಪದೇ ತಮಗೆ ಅನುಕೂಲರವಾದ ಜೀವನದ ವಸ್ತುಗಳ ಬಗೆಗೆ ಹೇಳುವುದರ ಮುಖಾಂತರ ಬುಡಕಟ್ಟುಗಳಲ್ಲಿ ತಮ್ಮ ಜೀವನದ ವಸ್ತುಗಳು ಮಸುಕು, ಉಪಯೋಗ ಇಲ್ಲದವು ಎಂಬ ಭಾವನೆಯನ್ನು ಉಂಟು ಮಾಡುವುದರ ಜೊತೆಗೆ ಅವುಗಳನ್ನು ಉಪಯೋಗಿಸಿದರೆ ಕೀಳು ಎಂಬ ಅಭಿಪ್ರಾಯವನ್ನು ಸೃಷ್ಟಿ ಮಾಡುತ್ತವೆ. ಆ ಮುಖಾಂತರ ಹೊಸದಾದ ಚಹರೆಗಳನ್ನು ಅಳವಡಿಕೆ ಮಾಡಿಕೊಳ್ಳುವುದುಂಟು.

ಇತ್ತೀಚಿನ ದಿನಗಳಲ್ಲಿ ಬದಲಾವಣೆಗಳಿಂದಾಗುತ್ತಿರುವ ಸಾಮಾನ್ಯೀಕರಣಗಳಿಗೆ ಮಾಧ್ಯಮಗಳು ಆಧುನಿಕ ಸಂಪರ್ಕಗಳು, ಸಮೂಹ ಅಭಿಪ್ರಾಯಗಳು ಹೀಗೆ ಹಲವಾರು ಕಾರಣಗಳನ್ನು ನೋಡಬಹುದು. ಈ ಸಾಮಾನ್ಯೀಕರಣಗಳಿಂದಾಗಿ ಆಹಾರ, ಉಡುಪು, ಆಭರಣ ಮುಂತಾದವುಗಳಲ್ಲಿ ಬದಲಾವಣೆಯಾಗಿದ್ದು ಏಕರೂಪತೆಯನ್ನು ಕಾಣಬಹುದು. ಇಂತಹ ಸಂದರ್ಭದಲ್ಲಿ ನಿರ್ದಿಷ್ಟ ಆಹಾರ, ಉಡುಪು, ಆಭರಣಗಳು ಮೂಲೆಗುಂಪಾಗಿ ಹೊಸ ಅಳವಡಿಕೆಗಳು ತಮ್ಮ ಚಹರೆಯನ್ನು ಒತ್ತುತ್ತವೆ. ಆಧುನಿಕ ಜಗತ್ತಿನ ತೀವ್ರವಾದ ಸಂಪರ್ಕ ಸಾಧನೆಯಿಂದಾಗಿ ಸಮುದಾಯಗಳ ಅಂತರಗಳು ಕಡಿಮೆಯಾಗಿ, ಬೇಕೆನಿಸಿದಾಗ ಬೇಕಾದ ಸಮುದಾಯದೊಂದಿಗೆ ಸಂಪರ್ಕ ಹೊಂದುವ ಅವಕಾಶಗಳು ಹೆಚ್ಚಾಗಿ ತೀವ್ರಗತಿಯಲ್ಲಾಗುವ ಸಾಂಸ್ಕೃತಿಕ ಕೊಡುಕೊಳ್ಳುಗಳು ಚಹರೆ ಪರಿವೇಷಕ್ಕೆ ಕಾರಣವಾಗುತ್ತಿವೆ. ಜೊತೆಗೆ ಬುಡಕಟ್ಟು ಸಮುದಾಯಗಳಲ್ಲಿ ಶೀಷ್ಟಿಕರಣದ ಪ್ರಭಾವದಿಂದಾಗಿ ಅವರ ಕಲೆ, ಹಾಡು, ಕುಣಿತ ಮುಂತಾದವುಗಳಲ್ಲಿ ಬದಲಾವಣೆ ಕಾಣಬಹುದು, ಅಂದರೆ ತಮ್ಮ ಹಾಡುಗಳಲ್ಲಿ ಶೀಷ್ಟಿಕರಣದ ಟ್ಯೂನ್ ಬಳಸುವುದು, ಹಾಡುಗಳನ್ನು ಹಾಡುವಾಗ ಮತ್ತು ಕುಣಿತದ ಸಂದರ್ಭದಲ್ಲಿ ಆಧುನಿಕ ವಾದ್ಯಗಳನ್ನು

ಬಳಸುವುದು, ಸಿನಿಮಾ ಧಾಟಿ ಹಾಗೂ ಕುಣಿತಗಳನ್ನು ಅಳವಡಿಸಿಕೊಳ್ಳುವುದನ್ನು ಕಾಣಬಹುದು. ಈ ತರಹದ ಬದಲಾವಣೆಗಳು ಮೂಲ ಚಹರೆಯ ಮಸುಕು ಆಗಲು ಕಾರಣವಾಗಿವೆ.

ಬದಲಾದ ಜೀವನಕ್ಕೆ ಸಂಬಂಧಪಟ್ಟಂತೆ ಸಾಂಸ್ಕೃತಿಕ ಚಹರೆಗಳು ಬದಲಾಗುವುದನ್ನು ಕಾಣಬಹುದು. ಅರಣ್ಯ ನಾಶದಿಂದ ಬೇಟೆ, ಪಶು ಸಂಗೋಪನೆ, ಬೇಸಾಯ ಮೂರೂ ವೃತ್ತಿಗಳ ಮೇಲೆ ಆದ ವ್ಯತಿರಿಕ್ತ ಪರಿಣಾಮದಿಂದಾಗಿ ಇವುಗಳ ಸಮೃದ್ಧಿ ಕುಗ್ಗಿದ ಮೇಲೆ ಸಹಜವಾಗಿಯೇ ಗ್ರಾಮ ದೇವತೆಗಳ ಆರಾಧನೆಯೂ ಆ ಸಂಬಂಧದ ಸಂಪ್ರದಾಯಗಳೂ ಕಡಿಮೆಯಾಗಿವೆ ಎನ್ನಬಹುದು. ಪ್ರಕೃತಿಯ ಆರಾಧಕರಾಗಿದ್ದ ಬುಡಕಟ್ಟು ಜನರು ಕಾಲಕಾಲಕ್ಕೆ ಉಂಟಾದ ಧಾರ್ಮಿಕ ಪ್ರಭಾವಕ್ಕೆ ಒಳಪಟ್ಟು ಕಾಲಾಂತರದಲ್ಲಿ ಅವರ ಸಾಂಪ್ರದಾಯಿಕ ಆಚರಣೆಗಳಲ್ಲಿ ಬದಲಾವಣೆ ಕಾಣಬಹುದು. ಕಾಲಾನುಕ್ರಮಕ್ಕನುಗುಣವಾಗಿ ಆಧುನಿಕ ಪರಿಣಾಮಗಳಿಂದ ಇಲ್ಲವೆ ಅನ್ಯ ಸಂಸ್ಕೃತಿಗಳ ಪ್ರೇರಣೆಗಳಿಂದ ಚಹರೆಗಳು ಪುನರ್ ಸಮೀಕರಣಕ್ಕೆ ಒಳಗಾಗುತ್ತಿರುತ್ತವೆ. ಉದಾ: ದೇವರ ಮುಂದೆ ದೀಪವಿರಿಸುವ ಆಚರಣೆ ವಿದ್ಯುತ್ ದೀಪಾಲಂಕಾರವಾಗಿರುವ ಆಧುನಿಕ ತಂತ್ರಜ್ಞಾನದ ಪರಿಣಾಮ.

ಸಮಾಜದ ಉನ್ನತ ವರ್ಗವು ಬುಡಕಟ್ಟು ಅಥವಾ ಜನಪದ ಸಂಸ್ಕೃತಿಯ ಚಹರೆಗಳಿಗೆ ತಮ್ಮ ಸ್ವಾರ್ಥಕ್ಕನುಗುಣವಾಗಿ ತಿರುವು ಕೊಟ್ಟು ಆಚರಣೆಗಳನ್ನು ದುರ್ಬಳಕೆ ಮಾಡಿಕೊಳ್ಳುತ್ತಿರುತ್ತದೆ. ಅಂಥ ಚಹರೆಗಳು ರಾಜಕೀಯ ತಿರುವು ಪಡೆದು ಪರಿಹರಿಸಲಾಗದ ಸಮಸ್ಯೆಗಳಾಗಿ ಉಳಿದು ಬಿಡುತ್ತವೆ. ಉದಾ: ದೇವದಾಸಿ ಪದ್ಧತಿ, ಬೆತ್ತಲೆ ಸೇವೆ. ಶಿಷ್ಟ ಸಮಾಜಕ್ಕೆ ಅದರ್ಶವಾಗಿ ಕಂಡು ಬಂದದ್ದು ಬುಡಕಟ್ಟಿನಲ್ಲಿ ಸಹಜವಾದದ್ದಾಗಿರುತ್ತದೆ ಉದಾ: ವಿಧವಾ ವಿವಾಹ ಪದ್ಧತಿ.

ವಿದ್ಯಾಭ್ಯಾಸ-ಉದ್ಯೋಗಗಳ ಸಂಬಂಧ ರೂಪಿಸುವ ಇಂದಿನ ಶಿಕ್ಷಣ ನಿರುದ್ಯೋಗಿಗಳನ್ನು ಅತಂತ್ರರನ್ನಾಗಿ ಮಾಡಿರುವುದು ನಿಜವಾದರೂ ಬುಡಕಟ್ಟು ವರ್ಗಗಳಿಗೆ ಅಸ್ತಿತ್ವವನ್ನು ಇಲ್ಲದಂತೆ ಮಾಡಿದೆ. ಏಕೆಂದರೆ ಪರಂಪರಾಗತ ವೃತ್ತಿಗಳಿಗೆ ಪ್ರಾಶಸ್ತ್ಯವೂ ಇಲ್ಲ; ಬುಡಕಟ್ಟು ಯುವ ವರ್ಗಕ್ಕೆ ತಮ್ಮ ಪರಂಪರಾಗತ ವೃತ್ತಿ ಅಪಮಾನಕರ; ಹಾಗೆಯೇ ಆಧುನಿಕ ಬದುಕು ಗಗನ ಕುಸುಮ ಎನಿಸಿಬಿಟ್ಟಿದೆ.

ವೈದಿಕ ಪರಂಪರೆಯ ಪೂಜೆ ಅಥವಾ ಶಿಷ್ಟ ದೈವಾಚರಣೆಗಳ ಪ್ರಭಾವ ಪ್ರೇರಣೆಗಳು ಜನಪದ ಜೀವನ ಶೈಲಿಯೊಂದಿಗೆ ಬೆರೆತು ಬೆಸೆದುಕೊಳ್ಳುವ ಸಂದರ್ಭಗಳಲ್ಲಿ ಎರಡು ಚಹರೆಗಳ ನಡುವೆ ಹೊಂದಾಣಿಕೆ ಅಥವಾ ಘರ್ಷಣೆ ಏರ್ಪಡುತ್ತದೆ. ಹೊಂದಾಣಿಕೆಯಾದಾಗ ಎರಡೂ ಚಹರೆಗಳು ಉಳಿದುಕೊಳ್ಳುತ್ತವೆ. ಘರ್ಷಣೆ ಏರ್ಪಟ್ಟಾಗ ಪ್ರಬಲವಾದದ್ದು ಆ ಸಂದರ್ಭಕ್ಕೆ ದುರ್ಬಲವೆನಿಸಿದ್ದರ ಅಸ್ತಿತ್ವವನ್ನು ಮರೆಮಾಚುತ್ತದೆ.

ಹೀಗೆ ಯಾವುದೇ ಸಮಾಜದ ಸಾಂಸ್ಕೃತಿಕ ಚಹರೆಗಳು ಎಲ್ಲಿಂದೆಲ್ಲಿಗೋ ಕವಲೊಡೆದು ಎಲ್ಲೆಲ್ಲೋ ಬೇರೂರಿ ಹಲವು ಸ್ವರೂಪಗಳಲ್ಲಿ ಅಸ್ತಿತ್ವವನ್ನು ಬದಲಿಸುತ್ತಿರುತ್ತವೆ; ಗಟ್ಟಿಗೊಳ್ಳುತ್ತವೆ; ಟೊಳ್ಳಾಗುತ್ತವೆ; ಸರಿಯಾಗುತ್ತವೆ.

ಬುಡಕಟ್ಟುಗಳು ತಮ್ಮ ಬುಡಕಟ್ಟು ಸ್ವಭಾವಗಳನ್ನು ನಿರಂತರವಾಗಿ ಬದಲಿಸಿಕೊಳ್ಳುತ್ತಿರುವಾಗ ಅದರ ಚಹರೆಗಳು ಕೂಡ ಬದಲಾಗುತ್ತವೆ. ಆದರೆ ಸಮುದಾಯ ಸ್ಮೃತಿಕೋಶ ಅದನ್ನೊಂದು 'ಜಾತಿ' ಕಲ್ಪನೆಯಾಗಿ ಉಳಿಸಿಕೊಳ್ಳುತ್ತದೆ. ನಾಗರಿಕ ಸಮಾಜದ ವೃತ್ತಿಧರ್ಮಗಳಿಗೆ ಅನುಗುಣವಾಗಿ ನಗರಗಳೊಂದಿಗೆ ಬೆರೆತು ಜೀವಿಸುವಾಗ ತಮ್ಮ ಊರು, ಜಾತಿ-ಧರ್ಮದ ಜನರೊಂದಿಗೆ ತಮ್ಮದೇ ಆದ ಆಚರಣೆಗಳ ಕಾರ್ಯಕ್ರಮಗಳಲ್ಲಿ ಒಂದೆಡೆ ಸೇರುತ್ತಾರೆ. ಉದಾ: ಬೆಂಗಳೂರಿನ ಕೊಡವ, ತುಳು, ಕೊಂಕಣಿ, ಲಿಂಗಾಯತ, ಒಕ್ಕಲಿಗ ಸಮಾಜ. ಬುಡಕಟ್ಟು ಚಹರೆ ಬದಲಾಗಿ ಪ್ರಧಾನ ಸಮಾಜದೊಳಗೆ ಒಂದು ಜಾತಿ ಅಸ್ಮಿತೆಯಾಗಿ ನೆಲೆಗೊಳ್ಳುವ ಈ ಪ್ರಕ್ರಿಯೆಗೆ ನೂರಾರು ವರ್ಷಗಳ ಇತಿಹಾಸವಿದೆ. ಬುಡಕಟ್ಟು ಚಹರೆ ಜಾತಿ ಅಸ್ಮಿತೆಯಾಗಿ ರೂಪುಗೊಂಡೊಡನೆ ಅದರ ಕ್ರಿಯಾತ್ಮಕ, ಚಹರೆ ಬದಲಾಗಿ 'ಪರಿಭಾವಿತ' ಚಹರೆಯಾಗಿ ನೆಲೆಗೊಳ್ಳುತ್ತದೆ. ದೇವಿ ಪ್ರಸಾದ ಚಟ್ಟೋಪಾಧ್ಯಾಯರು ಹೇಳುವ ಹಾಗೆ ಇಂದಿನ ನೂರಾರು ಜಾತಿಗಳು 'Half Completed de-tribalization' ಪ್ರಕ್ರಿಯೆಯಿಂದಾಗಿ ರೂಪುಗೊಂಡಿವೆ.[೪೭]

**ಗೌಳಿಗರಲ್ಲಿ ಸಾಂಸ್ಕೃತಿಕ ಪರಿವರ್ತನೆ**

ಭಾರತವು ಹಲವು ಜಾತಿ, ಮತ, ವರ್ಣ, ವರ್ಗ ಮುಂತಾದ ಪಂಗಡ ಹಾಗೂ ಹಲವು ಧರ್ಮ, ಸಂಸ್ಕೃತಿಗಳ ನೆಲೆಬೀಡು. ಇಲ್ಲಿ ಹಲವು ಜಾತಿ ಜನಾಂಗವು ತಮ್ಮ ತಮ್ಮ ಕಲೆ ಸಂಸ್ಕೃತಿಗೆ ಕಾರಣವಾಗಿದ್ದಾರೆ. ಹಿಂದುತ್ವದ ಅಂಶಗಳನ್ನು ಮೈಗೂಡಿಸಿಕೊಂಡು ಬಂದ ಗೌಳಿಗರು ತಮ್ಮದೇ ಆದ ಕಲೆ, ಸಂಸ್ಕೃತಿಯನ್ನು ಹುಟ್ಟು ಹಾಕಿ ವಿಶಿಷ್ಟರೆನಿಸಿಕೊಂಡಿದ್ದಾರೆ.

ಗೌಳಿಗರು ಪಶು ಪಾಲಕರಾಗಿದ್ದು ಅಲೆಮಾರಿ, ಅರೆ-ಅಲೆಮಾರಿಗಳಾಗಿದ್ದರು. ಎಲ್ಲಿ ಹುಲ್ಲು-ನೀರು ಇದೆಯೋ, ಅದೇ ನಮ್ಮ ಮನೆಮಾರು ಎಂಬುದು ಅವರ ಜೀವನ ಸಿದ್ಧಾಂತವಾಗಿತ್ತು. ಅಂತೆಯೇ ಅನಾದಿ ಕಾಲದಿಂದಲೂ ದಟ್ಟ ಅರಣ್ಯಗಳಲ್ಲಿ ವಾಡಾಗಳನ್ನು ನಿರ್ಮಿಸಿಕೊಂಡು ತಮ್ಮದೇ ಆದ ಒಳಾಡಳಿತ ವ್ಯವಸ್ಥೆಯಂತೆ ಒಬ್ಬ ಮುಖಂಡನ ಮಾರ್ಗದರ್ಶನದಲ್ಲಿ ಜೀವನ ಸಾಗಿಸುತ್ತ ಬಂದ ಗೌಳಿಗರಲ್ಲಿ ಪ್ರಚಲಿತವಿರುವ ಕಲೆ, ಚಿತ್ತಾರ, ಕರಕುಶಲತೆ, ಸಾಹಿತ್ಯ, ನೃತ್ಯ, ವಾದ್ಯವಾದನ ಮುಂತಾದ ಕಲೆಗಳು ಅವರ ಸಂಸ್ಕೃತಿಯ ಪ್ರತೀಕವಾಗಿವೆ. ಈ ಕಲೆಗಳಲ್ಲಿ ನೃತ್ಯಕಲೆ ವಿಶಿಷ್ಟವಾದದ್ದು.

'ಗೌಳಿಗರು ಮೂಲತಃ ನೃತ್ಯಪ್ರಿಯರು, ಬುಡಕಟ್ಟಿನ ಪರಂಪರಾಗ ಕುಣಿತಗಳು ಇಂದಿಗೂ ವೈಶಿಷ್ಟಪೂರ್ಣವಾಗಿವೆ. ಗೌಳಿಗರು ವರ್ಷದುದ್ದಕ್ಕೂ ಆಚರಿಸುವ ಹಬ್ಬ ಹರಿದಿನಗಳಲ್ಲಿ ಕುಣಿತಗಳಿಗೆ ವಿಶೇಷ ಪ್ರಾಧಾನ್ಯತೆ ಇರುತ್ತದೆ. ಹೋಳಿ ಹಬ್ಬ, ದಸರಾ, ದೀಪಾವಳಿ ಈ ಹಬ್ಬಗಳು ಪ್ರಾರಂಭವಾಗುವ ಪೂರ್ವದಲ್ಲಿ ಜಗಾ ಕುಣಿತ ನಡೆಯುತ್ತದೆ. 'ಗಜ್ಜಾಗಲಾಚ' ಕೃಷ್ಣ ಮತ್ತು ರಾಧೆಯರನ್ನು ಹೊಗಳುವ ಕೊಂಡಾಡುವ ಹೆಜ್ಜೆ ಹಾಕುತ್ತ ಕುಣಿಯುವ ನೃತ್ಯ. ಈ ಸಂದರ್ಭದಲ್ಲಿ ಪುಂಗಿ ವಾದ್ಯವನ್ನು ಬಳಸುತ್ತಾರೆ. ಗೌಳಿಗರು ಕಳೆ ಕೀಳುವ ನೃತ್ಯದಲ್ಲಿ ಸುಮಾರು ಆರೆಂಟು ಜನ ಪುರುಷರು ಸೇರಿಕೊಂಡು ಮಾಡುವ ನೃತ್ಯ ಪುರುಷ ಪ್ರಧಾನವಾದುದು. ಮಹಿಳೆಯರಿಗೆ ಸಂಬಂಧಿಸಿದಂತೆ ಪುಗಡಿ ಕುಣಿತ, ಜಿಮ್ಮಾ ಕುಣಿತ, ಈ ಮುಂತಾದ ನೃತ್ಯಗಳು ಸ್ತ್ರೀಯರಿಗೆ ಸಂಬಂಧಿಸಿದವುಗಳು. ಗೌಳಿಗರು ವಿಶೇಷವಾಗಿ ಬಳಸುವ ವಾದ್ಯಗಳೆಂದರೆ ಕೊಳಲು, ಡೊಳ್ಳು, ತಾಳ, ಡೋಲು, ಪುಂಗಿ ಮುಂತಾದವುಗಳು. 'ಹಚ್ಚೆ'

ಕಲೆಯನ್ನು ಗೌಳಿಗರು 'ಗೋಂದಾನ್' ಎಂದು ಕರೆಯುತ್ತಾರೆ. ಹಿಂದೂ ಧರ್ಮೀಯರಂತೆ ಹಚ್ಚೆ ಹಾಕಿಸಿಕೊಳ್ಳುವ ಪದ್ಧತಿ ಅವರಲ್ಲಿಯೂ ಕಂಡುಬರುತ್ತದೆ. ಹಬ್ಬ ಹರಿದಿನಗಳಲ್ಲಿ ಗೋಡೆ ಬರಹ, ಚಿತ್ತಾರಗಳನ್ನು ಬಿಡಿಸುವುದನ್ನು ಉಳಿಸಿಕೊಂಡು ಬಂದಿದ್ದಾರೆ'.[೪೮]

ಗೌಳಿ ಸಮುದಾಯವು ಅತ್ಯಂತ ಸಾಂಪ್ರದಾಯಿಕ ಸಮುದಾಯವಾಗಿರುವುದರಿಂದ ಸಾಮಾನ್ಯವಾಗಿ ತಮ್ಮ ಪೂಜಾ ವಿಧಿ-ವಿಧಾನಗಳಲ್ಲಿ ಬದಲಾವಣೆಗಳನ್ನು ಮಾಡಿಕೊಳ್ಳಲು ಇಚ್ಛಿಸುವುದಿಲ್ಲ. ಆದರೂ ಕೂಡ ಆಧುನೀಕರಣದ ಪ್ರಭಾವದಿಂದಾಗಿ ಕೆಲಮಟ್ಟಿನ ಬದಲಾವಣೆಗಳು ಅನಿವಾರ್ಯವಾಗುತ್ತವೆ. ಸಂಪೂರ್ಣವಾಗಿ ಸಾಂಪ್ರದಾಯಿಕವಾದ ವಿಧಾನಗಳಿಗೆ ಅಂಟಿಕೊಂಡಿರುವುದು ಸಾಧ್ಯವಾಗುವುದಿಲ್ಲ. ಸಾಮಾಜಿಕ ಬದಲಾವಣೆಯ ನಿಯಮಗಳನುಸಾರವಾಗಿ ದೈನಂದಿನ ವ್ಯವಹಾರಗಳಲ್ಲಿ ಬದಲಾವಣೆ ಅನಿವಾರ್ಯವಾಗುತ್ತದೆ. ಸೀಮಂತ ಕಾರ್ಯದ ಆಚರಣೆಗಳಲ್ಲಿ, ವಿವಾಹ ವಿಧಿ-ವಿಧಾನಗಳಲ್ಲಿ ಹಾಗೂ ಶವ ಸಂಸ್ಕಾರ ವಿಧಿ-ವಿಧಾನಗಳಲ್ಲಿ ಕೆಲ ಮಟ್ಟಿಗೆ ಬದಲಾವಣೆಗಳಾಗಿವೆಯೆಂದು ಅವರೇ ಅಭಿಪ್ರಾಯಪಡುತ್ತಾರೆ.

ಗೌಳಿಗರ ಜೀವನ ವಿಧಾನದಲ್ಲಿ ಆರ್ಥಿಕ ಅಂಶವು ಪ್ರಗತಿ ಹೊಂದಿದಂತೆ ತನ್ನ ಬಾಹ್ಯ ರೂಪವನ್ನು ಬದಲಾಯಿಸಿದ ಇವರು ಬದಲಾದ ಸಮಾಜದೊಂದಿಗೆ ತಮ್ಮ ಜೀವನವನ್ನು ಅದಕ್ಕೆ ತಕ್ಕ ಹಾಗೇ ಹೊಂದಿಸಿಕೊಂಡು ತಮ್ಮ ಸಾಂಸ್ಕೃತಿಕ ಚಹರೆಗಳನ್ನು ಉಳಿಸಿಕೊಂಡಿದ್ದಾರೆ. ಶತಮಾನಗಳಿಂದ ಕಾಲಚಕ್ರಕ್ಕೆ ಸಿಲುಕಿ ದಿನವೂ ಈ ಸಮುದಾಯದ ಸ್ವರೂಪ ಬದಲಾಗುತ್ತಲೆ ಇದೆ. ಆದರೆ ಕ್ರಾಂತಿಕಾರಿ ಬದಲಾವಣೆ ಆಗಿಲ್ಲ. ಆದರೂ ಕಾಲ ಕ್ರಮೇಣ ಮಂದಗತಿಯಲ್ಲಿ ಸಾಂಸ್ಕೃತಿಕ ಬದಲಾವಣೆಯಾಗುತ್ತಿರುವುದನ್ನು ಗಮನಿಸಬಹುದಾಗಿದೆ.

**ಬದಲಾವಣೆ**

ಬಹುತೇಕ ಗೌಳಿ ಕುಟುಂಬಗಳಿಗೆ ಕಾಡಿನಲ್ಲಿ ಸಿಗುತ್ತಿದ್ದ ಗಡ್ಡೆ-ಗೆಣಸು, ಹಣ್ಣು -ಹಂಪಲ, ಬೇಟೆ ಮಾಂಸ ಇತ್ಯಾದಿ ಮುಖ್ಯ ಆಹಾರವಾಗಿತ್ತು. ಆದರೆ ಬಡಜನರಿಗಾಗಿ ನೀಡುವ ರೇಶನ್ ಕಾರ್ಡ ಇವರ ಆಹಾರ ಕ್ರಮವನ್ನೇ ಬದಲಾಯಿಸಿದೆ ಎನ್ನಬಹುದು. ಅಕ್ಕಿ, ಗೋಧಿ, ಬೇಳೆ, ಸಕ್ಕರೆಯನ್ನು, ಬಳಸಲು ಪ್ರಾರಂಭಿಸಿದ್ದಾರೆ. ತಮ್ಮ ಕುಲಕಸುಬದಾದ ಹೈನುಗಾರಿಕೆ ಕೈ ತಪ್ಪಿ, ಕೆಲವರಿಗೆ ಹಾಲು, ಮೊಸರು, ಬೆಣ್ಣೆ, ತುಪ್ಪ ಉಪಯೋಗಿಸುವುದು ಕಡಿಮೆಯಾಗಿದೆ. ಟೀ, ಕಾಫಿ, ಬಳಸಲು ಪ್ರಾರಂಭಿಸಿದ್ದಾರೆ. ಇನ್ನು ನಗರಗಳಿಗೆ ಸಮೀಪವಿದ್ದ ಜನರು ನಗರಕ್ಕೆ ಯಾವುದೇ ಕೆಲಸಕ್ಕೆ ಹೋಗುವ ಜನರು ಅಲ್ಲಿಯೇ ಹೊಟೇಲ ಊಟಕ್ಕೂ ಒಗ್ಗಿ ಹೋಗಿದ್ದಾರೆ. ನಗರಗಳಿಗೆ /ಪಟ್ಟಣಕ್ಕೆ ಕೆಲಸ ಅರಸಿ ಹೋಗುವ ಜನರಿಗೆ ಹೊಟೇಲ್ ಆಹಾರ ಹೊಂದಿಕೊಳ್ಳುವಂತೆ ಮಾಡಿದೆ.

ಮಿಶ್ರ ಮರಾಠಿ ಮಾತನಾಡುವ ಇವರು ಸುತ್ತಲ ಪರಿಸರದ ಪ್ರಭಾವಕ್ಕೆ ಒಳಗಾಗಿ ಕಾಲಾಂತರದಲ್ಲಿ ಕನ್ನಡ ಭಾಷೆಯನ್ನು ಮಾತನಾಡಲು ಕಲಿತಿದ್ದಾರೆ. ಹೆಣ್ಣುಮಕ್ಕಳ ಶಾಲೆಯಲ್ಲಿ ನಡೆಯುವ ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ತಮ್ಮ ಸಾಂಪ್ರದಾಯಿಕ ನೃತ್ಯ, ಹಾಡು ಇವುಗಳನ್ನು ಕಡಿಮೆ ಮಾಡಿ ಇಂದಿನ ಚಲನಚಿತ್ರದ ಹಾಡು ನೃತ್ಯಗಳನ್ನು ಕೈಗೊಳ್ಳುತ್ತಿದ್ದಾರೆ. ಸಾಂಪ್ರದಾಯಿಕ ಉಡುಗೆ ತೊಡುಗೆಗಳು ಕಡಿಮೆ ಆಗಿ ಆಧುನಿಕ ಉಡುಪುಗಳಾದ ನೈಟಿ, ಚೂಡಿದಾರ ಧರಿಸುತ್ತಿದ್ದಾರೆ. ಮಧ್ಯಮ ವಯಸ್ಸಿನ ಮಹಿಳೆಯರು

ಸಾಂಪ್ರದಾಯಿಕವಾಗಿ ಕಚ್ಚೆ ಹಾಕಿ ಸೀರೆ ಉಡುವುದನ್ನು ಕ್ರಮೇಣವಾಗಿ ನಿಲ್ಲಿಸಿ, ಸಾಮಾನ್ಯ ಮಾದರಿಯಲ್ಲಿಯೇ ಸೀರೆಯನ್ನು ಉಡುತ್ತಿದ್ದಾರೆ. ಪುರುಷರು ಈ ಮೊದಲು ಅರ್ಧ ತೋಳಿನ ಅಂಗಿ ಮತ್ತು ಲಂಗೋಟಿಯನ್ನು ಹಾಕಿಕೊಳ್ಳುತ್ತಿದ್ದರು. ಈಗ ಇಂತವರ ಸಂಖ್ಯೆ ಬಹಳ ಕಡಿಮೆ. ಮಧ್ಯಮ ವಯಸ್ಸಿನ ಪುರುಷರು ಅರ್ಧ ತೋಳಿನ ಅಂಗಿ, ಅರ್ಧ ಪ್ಯಾಂಟ್ (Half Pant), ತಲೆಗೆ ಪಾಗೋಟ (ಮುಂಡಾಸ) ಧರಿಸುತ್ತಾರೆ. ಕಿವಿಗೆ ಓಲೆ ಧರಿಸುತ್ತಾರೆ. ಆದರೆ ಆಧುನಿಕ ಯುವಕರು ಟೀ ಶರ್ಟ, ಉದ್ದನೆಯ ಪ್ಯಾಂಟ್ ಅಥವಾ ಜೀನ್ಸ್ ಧರಿಸುತ್ತಾರೆ. ಕಾಲಿಗೆ ಹೊಸ ನಮೂನೆಯ ಸ್ಪೋರ್ಟ್ಸ ಷೂಗಳನ್ನು ಧರಿಸುತ್ತಾರೆ. ಕಣ್ಣಿಗೆ ಕೂಲಿಂಗ ಗ್ಲಾಸ್, ಕೈಯಲ್ಲಿ ಮೊಬೈಲ್, ಮೋಟಾರ ಬೈಕ್‌ಗಳನ್ನು ಈಗಿನ ಯುವಕರು ಬಳಸುವುದು ಹೆಚ್ಚಾಗಿದೆ. ನಗರದ ಪ್ರಭಾವಕ್ಕೆ ಒಳಗಾಗಿ ಹುಟ್ಟುಹಬ್ಬಗಳನ್ನು ಅದ್ದೂರಿಯಾಗಿ ಆಚರಿಸಿಕೊಳ್ಳುತ್ತಿದ್ದಾರೆ. ಸಾಂಪ್ರದಾಯಿಕ ಕಾರ್ಯಕ್ರಮಗಳಾದ ನಾಮಕರಣ, ವಿವಾಹ, ಸೀಮಂತ ಕಾರ್ಯ ಇವುಗಳ ಮೇಲೂ ಆಧುನಿಕತೆಯ ಪ್ರಭಾವ ಸಾಕಷ್ಟು ಕಾಣಬಹುದು. ಮನೆಯ ಗೋಡೆಯ ಮೇಲೆ ಸುಣ್ಣದ ಚಿತ್ತಾರ ಮೂಡಿಸುವುದು ಕಡಿಮೆ ಆಗಿ ಬಣ್ಣ ಬಣ್ಣದ ಹಾಳೆಗಳಿಂದ ಮೇಲ್ಛಾವಣಿ ಅಲಂಕರಿಸುವುದು ಹೆಚ್ಚಾಗಿದೆ. ಟಿ.ವ್ಹಿ., ವಿಡಿಯೋಗಳು ಈಗ ಮನೆಯಲ್ಲಿ ರಾರಾಜಿಸುತ್ತವೆ. ಕರಕುಶಲತೆ ಹಚ್ಚೆ ಹಾಕಿಸಿಕೊಳ್ಳುವುದು ಸಾಕಷ್ಟು ಕಡಿಮೆಯಾಗಿದೆ. ಮನೆಯ ಅಡಿಗೆ ಕೋಣೆಯಲ್ಲಿ ಮಣ್ಣಿನ ಗಡಿಗೆಗಳ ಬದಲಾಗಿ ಸ್ಟೀಲ್, ಅಲ್ಯುಮಿನಿಯಂ ಪಾತ್ರೆಗಳು, ಕೊಡ, ಬಕೀಟಗಳು ಹೆಚ್ಚಾಗಿ ಆವರಿಸಿವೆ. ಉಡುಗೆ-ತೊಡುಗೆ, ವರ್ತನೆ, ಮಾತು, ಮಾತಿನ ಶೈಲಿಯಲ್ಲಿ ಬದಲಾವಣೆ ಕಂಡು ಬರುತ್ತದೆ. ಸಾಂಪ್ರದಾಯಿಕ ಹಬ್ಬ ಹರಿದಿನಗಳ ಬಗ್ಗೆ ಇಂದಿನ ಯುವಕರು ಅಷ್ಟೊಂದಾಗಿ ಆಸಕ್ತಿ ತೋರಿಸುತ್ತಿಲ್ಲ. ಮಾಧ್ಯಮಗಳ ಆಧುನಿಕತೆಯ ಪ್ರಭಾವಕ್ಕೆ ಒಳಗಾಗಿ ಯುವಕರು ದುಶ್ಚಟಗಳಾದ ಮದ್ಯಸೇವನೆ, ಸ್ಪಾರ ಗುಟಕಾ ಸೇವನೆ ಮುಂತಾದ ಚಟಗಳ ದಾಸರಾಗುತ್ತಿದ್ದಾರೆ. ಶಾಲೆಗಳಲ್ಲಿ ನಡೆಯುವ ವಾರ್ಷಿಕ ಸ್ನೇಹ ಸಮ್ಮೇಳನದಲ್ಲಿ ಮಾಧ್ಯಮಗಳ ಪ್ರಭಾವ ಅಧಿಕ ಆಗಿದೆ. ಯುವ ಸಮುದಾಯಗಳ ಮೇಲೆ ಆಧುನಿಕ ಪರಿವರ್ತನೆಯಿಂದ ಸಂಸ್ಕೃತಿಯ ಅಪಮೌಲೀಕರಣ ಆಗುತ್ತಿದೆ. ಗೋಡೆಗಳ ಮೇಲೆ ಸುಣ್ಣದಿಂದ ಅನೇಕ ಚಿತ್ತಾರಗಳನ್ನು ಬಿಡಿಸುವ ಕಲೆ ನಗರ ಸಮೀಪದ ಗೌಳಿವಾಡಾಗಳಲ್ಲಿ ಸಂಪೂರ್ಣವಾಗಿ ತೊಲಗಿ ಹೋಗಿದೆ. ನಗರದಿಂದ ೧೦-೧೫ ಕಿ.ಮೀ. ದೂರವಿರುವ ಗೌಳಿವಾಡಾಗಳಲ್ಲಿ ಈ ಕಲೆ ಇನ್ನೂ ಜೀವಂತವಾಗಿದೆ. ಕರಕುಶಲತೆ, ಹಚ್ಚೆ, ಸಂಪ್ರದಾಯಿಕ ಹಾಡು ನೃತ್ಯಗಳು ಸಮುದಾಯದಲ್ಲಿ ಗೌಣವಾಗಿವೆ. ಈ ಮೊದಲು ಮದುವೆಗಳನ್ನು 'ಯಡಿಗ'ನೇ ನೇರವೇರಿಸುತ್ತಿದ್ದರು. ಈಗ ಬ್ರಾಹ್ಮಣ ಪುರೋಹಿತರನ್ನು ವಿವಾಹ ಸಂದರ್ಭಕ್ಕೆ ಕರೆಯುವುದು ಸ್ವಲ್ಪ ವಾಡಿಕೆಯಾಗಿದೆ. ಮದುವೆಗಳು ಈ ಮೊದಲು ಹೆಣ್ಣಿನ ಮನೆ ಮುಂದೆ ನಡೆಯುತ್ತಿದ್ದವು. ಈಗ ಸಾಮೂಹಿಕ ವಿವಾಹಗಳನ್ನು ವಿಠ್ಠಲ-ರುಕ್ಮಾಯಿ ದೇವಸ್ಥಾನದಲ್ಲಿ ಒಟ್ಟಿಗೆ ಮಾಡಿ, ಖರ್ಚು, ವೆಚ್ಚಗಳನ್ನು ಸಮಾನವಾಗಿ ಹಂಚಿಕೊಂಡು ಆರ್ಥಿಕ ಭಾರವನ್ನು ಕಡಿಮೆ ಮಾಡಿಕೊಳ್ಳುತ್ತಿದ್ದಾರೆ. ಆರ್ಥಿಕವಾಗಿ ಸ್ವಲ್ಪ ಸ್ಥಿತಿವಂತರು ಮದುವೆ ಸಂದರ್ಭದಲ್ಲಿ ಬ್ಯಾಂಡ್ ಬಾಜಾ, ಶಹನಾಯಿ, ಫೋಟೊ, ವಿಡಿಯೋ ಶೂಟಿಂಗ್ ಕೈಕೊಳ್ಳುತ್ತಿದ್ದಾರೆ. ಇದು ಎಲ್ಲರಿಗೂ ಸಾಧ್ಯವಾಗದ ಮಾತು. ಸಾಂಸ್ಕೃತಿಕ ಪರಿವರ್ತನೆಯಿಂದ ಇಂದಿನ ಯುವಕರಲ್ಲಿ ಬಹಳಷ್ಟು ಬದಲಾವಣೆ ಕಂಡು ಬರುತ್ತಿದೆ.

ಶಿಕ್ಷಣದ ಪ್ರವೇಶ ಗೌಳಿ ಸಮುದಾಯದ ಸಾಂಸ್ಕೃತಿಕ ಬದುಕಿನ ಮೇಲೆ ಸಾಕಷ್ಟು ಪ್ರಭಾವ ಬೀರಿದೆ. ಶಾಲೆಗೆ ಹೋಗುವ ಮಕ್ಕಳು ಪರಂಪರಾಗತ ಕಲಾ ಪ್ರದರ್ಶನಗಳನ್ನು ಹಳೆಯ ಫ್ಯಾಷನ್ ಎಂದು ಮೂಗು ಮುರಿಯಲಾರಂಭಿಸಿದ್ದಾರೆ. ಶಿಕ್ಷಣ ಹೊಂದಿದವರಿಗೆ ಸಾಮಾಜಿಕ ಪ್ರತಿಷ್ಠೆಯೂ ಲಭಿಸಿದೆ. ಶಿಕ್ಷಣವು ಬುಡಕಟ್ಟು ಜನರ ವಿವೇಚನಾ ಶಕ್ತಿಯನ್ನು ವೃದ್ಧಿಸಿರುವದರೊಂದಿಗೆ ಸಂಸ್ಕೃತಿ ಅನುಷ್ಠಾನದಲ್ಲಿ ಬದಲಾವಣೆಯನ್ನು ತಂದಿದೆ. ಆಧುನಿಕತೆ ಹಾಗೂ ಶಿಕ್ಷಣದ ಪ್ರಭಾವದಿಂದ ವೈಚಾರಿಕತೆ ಮತ್ತು ವೈಜ್ಞಾನಿಕತೆ ಬೆಳೆದು ಯುವಕರಲ್ಲಿ ಧರ್ಮ ಸಂಪ್ರದಾಯಗಳ ಮೇಲಿನ ನಂಬಿಕೆ, ಹಿರಿಯರ ಮಾತಿನ  ಪಾಲನೆ ಕಡಿಮೆಯಾಗುತ್ತಿದೆ ಹಾಗೂ ಮೂಢನಂಬಿಕೆ, ಕಂದಾಚಾರಗಳ ಹಿಡಿತ ಸಡಿಲುಗೊಳ್ಳುತ್ತಿದೆ. ಹೆಣ್ಣು ಹುಡುಗರನ್ನು ಶಾಲೆಗೆ ಕಳಿಸುವುದು ಶುರುವಾದಂದಿನಿಂದಿಚೀಗೆ ಹೆಣ್ಣು ಹುಡುಗರು ಮೊದಲಿನಂತೆ ಮನೆ ಮನೆಗೆ ಹೋಗಿ ಹಾಲು ಹಾಗೂ ಹಾಲಿನ ಉತ್ಪನ್ನಗಳನ್ನು ಮಾರಲು ಒಪ್ಪುತ್ತಿಲ್ಲ. ಹಿಂದು ಮುಂದು ನೋಡುತ್ತಿದ್ದಾರೆ. ಇಂದಿನ ಸ್ಕೂಲ, ಕಾಲೇಜಿಗೆ ಹೋಗುವ ಯುವಕ ಯುವತಿಯರಲ್ಲಿ ನಾಗರಿಕ ಸುಖ ಜೀವನವೆಂಬ ಭ್ರಮೆಯಲ್ಲಿ ಪಾರಂಪರಿಕ ವೃತ್ತಿಯ ಬಗ್ಗೆ ತಾತ್ಸಾರ ಭಾವನೆ, ಕೀಳರಿಮೆ ಮೂಡುತ್ತಿದೆ. ಯುವಕ-ಯುವತಿಯರಲ್ಲಿ ಪಶುಪಾಲನೆ ಅಥವಾ ಪಾರಂಪರಿಕ ವೃತ್ತಿಯ ಬಗ್ಗೆ ವಿಚಾರಿಸಿದರೆ ಉದಾಸೀನದ ಮಾತುಗಳು ಕೇಳಿ ಬರುತ್ತಿವೆ. ಸಾಮುದಾಯಿಕ ಜೀವನ ನಶಿಸಿದೆ. ವಸ್ತು ಪ್ರಾಧ್ಯಾನ್ಯತೆ ಮತ್ತು ವ್ಯಕ್ತಿ ಪ್ರಾಧಾನ್ಯತೆ ಬೆಳೆದಿದೆ.

ನಂಬಿಕೆ ಮತ್ತು ಆಚರಣೆಗಳ ಕುರಿತಂತೆ ಬದಲಾವಣೆಗಳು ಹೀಗಿವೆ. ಆಲದ ಮರ, ಹುಣಸೆಮರಗಳು ದೆವ್ವದ ಆವಾಸಸ್ಥಾನಗಳು ಹಾಗೂ ಅಮವಾಸ್ಯೆ ಮತ್ತು ಹುಣ್ಣಿಮೆಯ ದಿನ ದೆವ್ವದ ಗಾಳಿ ಮೈಗೆ ಹಿಡಿದುಕೊಳ್ಳುತ್ತದೆ ಎಂಬ ನಂಬಿಕೆ ಕಡಿಮೆಯಾಗಿದೆ. ಕೂದಲು ಇಲ್ಲದಿರುವ ಕಡೆ ಕರಡಿ ತುಪ್ಪಳವನ್ನು ಸವರಿದರೆ ಕೂದಲು ಬರುತ್ತದೆ ಮತ್ತು ಹುಲಿಯ ಉಗುರನ್ನು ಮಕ್ಕಳ ಕೊರಳಿಗೆ ಧರಿಸಿದರೆ ಕೆಟ್ಟ ಕಣ್ಣು ನಿವಾರಣೆಯಾಗುತ್ತದೆ ಎಂಬ ನಂಬಿಕೆ ಇಲ್ಲವೆನ್ನುವಷ್ಟರ ಮಟ್ಟಿಗೆ ಕಡಿಮೆಯಾಗಿದೆ. ಮನೆಯ ದನಕರುಗಳು ರಕ್ತಕಾರಿದರೆ, ರಕ್ತವಾಂತಿಯಿಂದ ಸತ್ತರೆ ಅದು ಮಾಟದ ಪ್ರಭಾವಿರಬೇಕೆಂದು ನಂಬಿ ಪ್ರತಿಮಾಟ ಮಾಡಿಸುವುದು ಕಡಿಮೆಯಾಗಿದೆ. ಪಿತೃ ಪಕ್ಷದಲ್ಲಿ ಅನ್ನ ಹಾಕುವುದನ್ನು ಬಿಟ್ಟರೆ ಗೌಳಿಗರಲ್ಲಿ ಶ್ರಾದ್ಧ ಕರ್ಮವನ್ನು ಮಾಡುವ ವಿಧಿಯಿಲ್ಲ. ಆದರೆ ಈಗ ಕಾಲ ಬದಲಾಗಿದೆ ಸುಶಿಕ್ಷಿತರಾದ ಕೆಲವರು ಮೇಲ್ವರ್ಗದವರನ್ನು ಅನುಸರಿಸಿ ಶ್ರಾದ್ಧ ಕರ್ಮವನ್ನು ಮಾಡುತ್ತಾರೆ. ಸುಡಗಾಡಿಗೆ ಹೆಣವನ್ನು ಒಯ್ಯುವಾಗ ನೀರಿನ ಪಾತ್ರೆ ಇಲ್ಲವೆ ಅಡಿಗೆಯ ಪಾತ್ರೆಗಳನ್ನು ಮುಚ್ಚಿಟ್ಟು ಸ್ಮಶಾನಕ್ಕೆ ಹೋದರೆ ಸತ್ತವರ ಜೀವ ಪಾತ್ರೆಯ ಒಳಗೆ ಉಳಿಯುತ್ತದೆ. ಮತ್ತೆ ಪಾತ್ರೆಯ ಮುಚ್ಚಳ ತೆಗೆದಾಗ ಸಶ್ಮಾನಕ್ಕೆ ಒಯ್ದ ಹೆಣ ಜೀವ ತಾಳುತ್ತದೆ ಎಂಬ ನಂಬಿಕೆ ಕಡಿಮೆಯಾಗಿದೆ.

**೫.೭. ಆಧುನಿಕತೆಯ ಪ್ರಭಾವ ಹಾಗೂ ಪರಿಣಾಮಗಳು**

**ಸಕಾರಾತ್ಮಕ:** ಆಧುನಿಕತೆಯ ಪ್ರಭಾವದಿಂದಾಗಿ ಗೌಳಿಗರ ಜೀವನ ಶೈಲಿ ಬದಲಾಗಿದೆ. ಹುಲ್ಲಿನ ಛಾವಣಿಯ ಮನೆಗಳು ಮಾಯವಾಗಿ ಬಹುತೇಕ ಮನೆಗಳು ಹಂಚಿನ ಮನೆಗಳಾಗಿವೆ. ಆಶ್ರಯ ಮನೆಗಳು, ಬಾಗಿಲು, ಕಿಡಕಿಗಳನ್ನು ಹೊಂದಿವೆ. ಸುಮಾರು ಅರ್ಧಕ್ಕಿಂತಲೂ ಹೆಚ್ಚಿನ ಮನೆಗಳು ಶೌಚಾಲಯಗಳನ್ನು ಹೊಂದಿವೆ.

ಸುಮಾರು ಮುಕ್ಕಾಲು ಮನೆಗಳು ಭಾಗ್ಯ ಜ್ಯೋತಿ ವಿದ್ಯುತ್ತೀಕರಣವನ್ನು ಹೊಂದಿವೆ. ದಟ್ಟ ಕಾಡಿನ ಅತೀ ಒಳಗೆ ಇದ್ದ ನೆಲೆಗಳನ್ನು ಹೊರತು ಪಡಿಸಿ ಉಳಿದ ಗೌಳಿವಾಡಗಳು ಸಾರಿಗೆ-ಸಂಪರ್ಕ ರಸ್ತೆಯ ಸೌಲಭ್ಯವನ್ನು ಹೊಂದಿವೆ ಹಾಗೂ ನೀರಿನ ಸೌಲಭ್ಯವನ್ನೂ ಹೊಂದಿವೆ. ಬಹುತೇಕ ಗೌಳಿವಾಡಗಳು ಕಿರಿಯ ಪ್ರಾಥಮಿಕ ಶಾಲೆ, ಅಂಗನವಾಡಿಗಳನ್ನು ಹೊಂದಿವೆ. ಸಂಚಾರಿ ವೈದ್ಯಕೀಯ ಸೇವಾ ಸೌಲಭ್ಯವನ್ನು ಹೊಂದಿವೆ. ಬಹುತೇಕ ಕುಟುಂಬಗಳು ಸೈಕಲ್‌ಗಳನ್ನು ಹೊಂದಿದ್ದಾರೆ. ಅಲ್ಪ ಸ್ಥಿತಿವಂತ ಯುವಕರು ಮೋಟಾರ್ ಬೈಕ್‌ಗಳನ್ನು ಹೊಂದಿದ್ದಾರೆ. ಸುಮಾರು ಅರ್ಧದಷ್ಟು ಕುಟುಂಬಗಳು ರೇಡಿಯೋ, ಮೊಬೈಲ್ ಫೋನ ಹೊಂದಿರುವುದನ್ನು ಕಾಣಬಹುದು. ಕೆಲವು ಮನೆಗಳಲ್ಲಿ ಟಿ.ವಿ ಗಳನ್ನು ಕಾಣಬಹುದು. ಯಲ್ಲಾಪುರ ನಗರಕ್ಕೆ ಸಮೀಪವಿದ್ದ ಹಾಗೂ ರಾಷ್ಟ್ರೀಯ ಹೆದ್ದಾರಿಯ ಮೇಲಿದ್ದ ಹೆಚ್ಚು ಸುಧಾರಣೆಯಾದ ಕೋಳಿಕೇರಿ (ದೇಶಪಾಂಡೆ ನಗರ) ಗೌಳಿವಾಡಾದಲ್ಲಿ ಕೆಲ ಸ್ಥಿತಿವಂತ ಕುಟುಂಬಗಳು ಟ್ರಕ್, ಟ್ರ್ಯಾಕ್ಟರ್, ಫ್ರಿಜ್, ಮಿಕ್ಸಿ, ಗ್ಯಾಸ್ ಒಲೆ, ಟಿ.ವಿ, ಡಿವಿಡಿ, ಫ್ಯಾನ್, ಸೋಫಾ ಹೀಗೆ ಎಲ್ಲ ಆಧುನಿಕ ಸೌಕರ್ಯಗಳನ್ನು ಹೊಂದಿದ್ದಾರೆ. ಬಹುತೇಕ ಗೌಳಿ ಕುಟುಂಬಗಳಲ್ಲಿ ಮಣ್ಣಿನ ಮಡಿಕೆ ಗಡಿಗೆಗಳು ಮಾಯವಾಗಿ ಅಲ್ಯುಮಿನಿಯಂ, ಸ್ಟೀಲ್ ಪಾತ್ರೆ ಹಾಗೂ ಪ್ಲಾಸ್ಟಿಕ್ ಬಕೆಟ್, ಕೊಡಗಳನ್ನು ಕಾಣಬಹುದು. ಟಿ.ವಿ. ಯಂತಹ ಸಮೂಹ ಮಾಧ್ಯಮ ಹಾಗೂ ನಗರೀಕರಣದ ಪ್ರಭಾವದಿಂದ ಇತ್ತೀಚೆಗೆ ಗೌಳಿ ಸಮುದಾಯದ ಯುವಕ-ಯುವತಿಯರು, ಮಹಿಳೆಯರು ಹಾಗೂ ಮಕ್ಕಳು ಆಧುನೀಕರಣದ ಸೆಳೆತಕ್ಕೆ ಹೆಚ್ಚು ಒಳಗಾಗುತ್ತಿದ್ದಾರೆ. ಅವರು ಧರಿಸುವ ಉಡುಪು, ಆಭರಣ ಹಾಗೂ ಬಳಸುವ ಸೌಂದರ್ಯ ಪ್ರಸಾದನ ಸಾಮಗ್ರಿಗಳಲ್ಲಿ ಇದನ್ನು ನಾವು ಕಾಣಬಹುದು. ಉಡುಗೆ-ತೊಡುಗೆ, ಆಹಾರ ಪದ್ಧತಿ ಎಲ್ಲ ವಿಷಯಗಳಲ್ಲೂ ಆಧುನಿಕತೆ ನುಸುಳುತ್ತಿದೆ.

ಆಧುನಿಕತೆಯ ಪ್ರಭಾವದಿಂದ ಪರಂಪರಾಗತ ಕುಲಕಸುಬಾದ ಹೈನುಗಾರಿಕೆಯ ಮೇಲಾದ ವ್ಯತಿರಿಕ್ತ ಪರಿಣಾಮದಿಂದಾಗಿ ಕುಲಕಸುಬು ಕೈತಪ್ಪಿ ಹೋಗುವ ಹಾದಿಯಲ್ಲಿದ್ದು ಅತಂತ್ರ ಸ್ಥಿತಿಯುಂಟಾಗಿ ಕುಟುಂಬ ಜೀವನ ನಿರ್ವಹಣೆಗೆ ವೃತ್ತಿ ಪರಿವರ್ತನೆ ಗೌಳಿ ಸಮುದಾಯಕ್ಕೆ ಅನಿವಾರ್ಯವಾಯಿತು. ಪರ್ಯಾಯ ವೃತ್ತಿಯಾಗಿ ಕೃಷಿ ಹಾಗೂ ಕೃಷಿಕೂಲಿಯಲ್ಲಿ ತೊಡಗಿಸಿಕೊಂಡಿದ್ದಾರೆ. ಕೃಷಿಭೂಮಿಯನ್ನು ಹೊಂದಿದ ಕೆಲವರು ಮಾತ್ರ ಸಣ್ಣ ಹಿಡುವಳಿದಾರರಾಗಿ ಮತ್ತು ಬಹುತೇಕ ಭೂರಹಿತ ಗೌಳಿಗರು ಕೃಷಿ ಕಾರ್ಮಿಕರಾಗಿ (೮೦%) ಪರಿವರ್ತನೆ ಹೊಂದಿದ್ದಾರೆ. ಕೃಷಿಕೂಲಿಯು ವರ್ಷವಿಡೀ ದೊರಕದೇ ಋತುಮಾನಕ್ಕನುಸಾರವಾಗಿ ೫-೬ ತಿಂಗಳು ಮಾತ್ರ ದೊರಕುವುದರಿಂದ ಕೃಷಿಕೂಲಿ ಸಿಗದೇ ಇದ್ದ ಸಮಯದಲ್ಲಿ ಬೇರೆ ಕೂಲಿ ಮಾಡಲು ಪುರುಷರು ದೂರದ ಊರಿಗೆ ಹೋದರೆ ಮಹಿಳೆಯರು ಸಮಿಪದ ಊರುಗಳಿಗೆ ಹೋಗಿ ಗಾರೆ ಕೆಲಸ, ಕಟ್ಟಡ ಕಟ್ಟುವ ಕಡೆ ಇಟ್ಟಿಗೆ, ಸಿಮೆಂಟು, ಮಣ್ಣು ಹೊರುವ ಕೆಲಸಗಳಲ್ಲಿ ತೊಡಗುತ್ತಾರೆ. ಕೆಲವರು ಸಣ್ಣಪುಟ್ಟ ದಿನಸಿ ಅಂಗಡಿ, ಚಹಾದ ಅಂಗಡಿ ಇಟ್ಟುಕೊಂಡು ವ್ಯಾಪಾರ ಮಾಡುತ್ತಾರೆ.

ಇಂದಿನ ಸ್ಥಿತಿಗತಿಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಈಗಿನ ಗೌಳಿ ಕುಟುಂಬಗಳು ಒಂದೇ ವಿಶಿಷ್ಟವಾದ ವೃತ್ತಿಯನ್ನವಲಂಬಿಸಿಲ್ಲ. ಹೈನುಗಾರಿಕೆ, ಕೃಷಿ, ಕೃಷಿಕೂಲಿ ಹಾಗೂ ಇತರ ಕೂಲಿಕೆಲಸ ಮುಂತಾದವುಗಳಲ್ಲಿ ಒಂದಕ್ಕಿಂತ ಹೆಚ್ಚುವೃತ್ತಿಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಆರ್ಥಿಕ ಸುಧಾರಣೆಯತ್ತ

ಸಾಗುತ್ತಿರುವುದು ಕಂಡು ಬರುತ್ತಿದೆ. ಕೈಗಾರಿಕಾ ನೀತಿಯು ಬಾಂಧವ್ಯ ವಿಸ್ತರಣೆಗೆ ಅವಕಾಶ ಮಾಡಿಕೊಟ್ಟಿದೆ. ಕೈಗಾರಿಕಾ ಕ್ಷೇತ್ರದ ಪ್ರಭಾವದಿಂದಾಗಿ ಗುಂಪು ಅನನ್ಯತೆಯ ವಿಸ್ತರಣಾ ಪ್ರವೃತ್ತಿಗಳೂ ಕಾಣಿಸಿಕೊಳ್ಳುತ್ತಿವೆ.

ಆಧುನಿಕರಣದ ಪರಿಣಾಮವಾಗಿ ಹೆಚ್ಚಿದ ಅವಕಾಶಗಳಿಂದ ಕೆಲವು ಕುಟುಂಬಗಳು ಲಾಭ ಪಡೆದುಕೊಂಡು ತಮ್ಮ ಆದಾಯದಲ್ಲಿ ಹೆಚ್ಚಳ ಮಾಡಿಕೊಂಡು ಸ್ಥಿತಿವಂತರಾಗಿದ್ದಾರೆ. ಆದರೆ ಬಹುತೇಕ ಜನರು ಅಶಿಕ್ಷತರಾದ ಕಾರಣ ಇಂತಹ ಅವಕಾಶಗಳ ಲಾಭ ಪಡೆಯಲು ಸಾಧ್ಯವಾಗಿಲ್ಲ.

ಬದಲಾದ ಪರಿಸ್ಥಿತಿಯಲ್ಲಿ ಕಾಡಿನಲ್ಲಿ ಕೆಲಸವಿಲ್ಲದೆ, ಹತ್ತಿರದಲ್ಲಿ ಬೇಕಾದ ಉದ್ಯೋಗ ಮಾರ್ಗವಿಲ್ಲದೆ ಕೆಲವು ಕುಟುಂಬಗಳ ಪುರುಷರು ಉದ್ಯೋಗವನ್ನು ಹುಡುಕಿಕೊಂಡು ಹೋಗುವ ನಗರಾಭಿಮುಖ ವಲಸೆ ಹೆಚ್ಚುತ್ತಿದೆ. ಕೆಲವೊಮ್ಮೆ ಇಡೀ ಕುಟುಂಬವೇ ವಲಸೆ ಹೋಗುತ್ತದೆ. ನಗರಗಳಿಗೆ ಕೆಲಸಕ್ಕೆ ಹೊಗುವ ಗೌಳಿಗರು ನಗರ ಜೀವನದ ಪ್ರಭಾವಕ್ಕೊಳಗಾಗಿದ್ದಾರೆ. ಹೊಟೆಲ್ ಊಟ ರೂಢಿ ಮಾಡಿಕೊಂಡಿದ್ದಾರೆ.

ಆಧುನೀಕರಣ ಹಾಗೂ ಸುತ್ತಲಿನ ಇತರ ನಾಗರಿಕ ಸಮುದಾಯಗಳ ಪ್ರಭಾವದಿಂದ ಗೌಳಿಗರ ವಿಶೇಷವಾಗಿ ಯುವಕರ ಮನೋಭಾವನೆ ಹಾಗೂ ವೃತಿಗಳಲ್ಲಿ ಸಾಕಷ್ಟು ವ್ಯತ್ಯಾಸ ಹಾಗೂ ಬದಲಾವಣೆಯಾಗಿರುವುದು ಕಂಡು ಬರುತ್ತಿದೆ. ಶಿಕ್ಷಣದ ಪ್ರವೇಶ ಗೌಳಿ ಸಮುದಾಯದ ಸಾಂಸ್ಕೃತಿಕ ಬದುಕಿನ ಮೇಲೆ ಸಾಕಷ್ಟು ಪ್ರಭಾವ ಬೀರಿದೆ.

ಶಿಕ್ಷಣವು ಗೌಳಿ ಬುಡಕಟ್ಟು ಜನರ ವಿವೇಚನಾ ಶಕ್ತಿಯನ್ನು ವೃದ್ಧಿಸಿರುವುದರೊಂದಿಗೆ ಸಂಸ್ಕೃತಿ ಅನುಷ್ಠಾನದಲ್ಲಿ ಬದಲಾವಣೆಯನ್ನು ತಂದಿದೆ. ಶಿಕ್ಷಣದ ಪ್ರಭಾವದಿಂದ ಗೌಳಿ ಯುವಕರಲ್ಲಿ ರಾಜಕೀಯ ಮಹತ್ವ ಹಾಗೂ ಆರ್ಥಿಕ ಪ್ರಗತಿಯ ಬಗ್ಗೆ ಹೆಚ್ಚಿನ ಅರಿವು ಮೂಡುತ್ತಿದೆ. ಮಹಿಳಾ ವಿಮೋಚನೆಗೆ ಅವಕಾಶ ಮಾಡಿದೆ. ಆಧುನಿಕತೆಯ ಪ್ರಭಾವದಿಂದ ಜನನ ನಿಯಂತ್ರಣ ವಿಧಾನಗಳ ಬಳಕೆಯು ಹೆಚ್ಚಾಗಿ, ಜನನ ಸಂಖ್ಯೆಯನ್ನು ಮಿತಗೊಳಿಸಿ ಕುಟುಂಬದ ಗಾತ್ರವನ್ನು ಕಡಿಮೆಗೊಳಿಸಿದೆ. ಅವಿಭಕ್ತ ಕುಟುಂಬಗಳು ವಿಭಕ್ತ ಕುಟುಂಬಗಳಾಗಿ ಪರಿವರ್ತನೆಯಾಗುತ್ತಿವೆ. ರಾಜಕೀಯ ಸಂಘಟನೆಗಳಲ್ಲಿ ಸ್ಥಾನಿಕ ಸಂಸ್ಥೆಗಳಾದ ಗ್ರಾಮ ಪಂಚಾಯತ್, ತಾಲೂಕ ಪಂಚಾಯತ್, ಜಿಲ್ಲಾಪಂಚಾಯತ್ ಚುನಾವಣೆಗಳಲ್ಲಿ ನೇರ ಸಹಭಾಗಿತ್ವ ಕಾಣಿಸುತ್ತದೆ.

ಪಾರಂಪರಿಕ ವೃತ್ತಿಯನ್ನು ಇಷ್ಟಪಡದೇ ಆಧುನಿಕ ಉದ್ಯೋಗ ವ್ಯಾಪಾರಗಳನ್ನು ಮಾಡುತ್ತಾ ಹಾಗೂ ತಾವೂ ಕೂಡ ಮೇಲ್‌ವರ್ಗದವರಂತೆ ಮುಂದುಬರಬೇಕೆಂಬ ಸ್ಪರ್ಧಾ ಮನೋಭಾವನೆ ಬೆಳೆಯುತ್ತಿದೆ. ಸೋತು ಹೋದ ಮೂಲ ವೃತ್ತಿಯನ್ನೇ ಮುಂದುವರೆಸಿ ಬಡತನ, ಕನಿಷ್ಟ ಸೌಲಭ್ಯ ಹೊಂದದ ಜೀವನ ಹಾಗೂ ಸಾಮಾಜಿಕ ಕೀಳರಿಮೆಯಿಂದ ಬದುಕುವ ಬದಲು ವಿದ್ಯೆ ಕಲಿತು, ಆಧುನಿಕ ಹೊಸ ಉದ್ಯೋಗಗಳಲ್ಲಿ ತೊಡಗಿ ಆರ್ಥಿಕ ಆದಾಯ ಹೆಚ್ಚಿಸಿಕೊಂಡು ಸಮಾಜದಲ್ಲಿ ಉತ್ತಮ ಸ್ಥಾನಮಾನ ಪಡೆಯಬೇಕೆಂಬ ಮನೋಭಾವನೆಯನ್ನು ಹೊಂದಿದ್ದಾರೆ.

ಗೌಳಿಗರು ಮೂಲತಃ ಮರಾಠಿ ಮಾತನಾಡುವ ಜನರಾಗಿದ್ದರೂ ಕನ್ನಡದ ಆಡುನುಡಿ ಅವರ ಭಾಷೆಯ ಮೇಲೆ ಸಾಕಷ್ಟು ಮಟ್ಟಿಗೆ ಪ್ರಭಾವ ಬೀರಿದೆ. ಮಿಶ್ರ ಮರಾಠಿ ಮಾತನಾಡುವ ಇವರು ಸುತ್ತಲ ಪರಿಸರದ ಪ್ರಭಾವಕ್ಕೆ ಒಳಗಾಗಿ ಕ್ರಮೇಣ ಮರಾಠಿ ಮಿಶ್ರಿತ ಕನ್ನಡ ಭಾಷೆಯನ್ನು ಮಾತಾಡಲು ಸುರು ಮಾಡಿದ್ದಾರೆ. ಶಾಲೆಗೆ ಹೋಗುವ ಮಕ್ಕಳು ಕನ್ನಡ ಭಾಷೆಯುನ್ನು ಇನ್ನೂ ಚೆನ್ನಾಗಿ ಮಾತನಾಡಬಲ್ಲವರಾಗಿದ್ದಾರೆ. ಅವರು ಕನ್ನಡ ಭಾಷೆಯನ್ನು ಮುಖ್ಯ ಭಾಷೆಯನ್ನಾಗಿ ಅಳವಡಿಸಿಕೊಳ್ಳುವ ಸಾಧ್ಯತೆ ಇದೆ.

ವಿವಾಹ ಸಂದರ್ಭದಲ್ಲಿ ಹವ್ಯಕ ಬ್ರಾಹ್ಮಣ ಪುರೋಹಿತರನ್ನು ಕರೆಯಿಸುವದು ಇತ್ತೀಚೆಗೆ ಪ್ರಾರಂಭವಾಗಿದೆ.ವಿವಾಹದಲ್ಲಿ ಅದ್ದೂರಿತನ ಪ್ರಾರಂಭವಾಗಿದೆ.ಇತ್ತೀಚೆಗೆ ಸಾಮೂಹಿಕ ವಿವಾಹಗಳು ನಡೆಯಲು ಸುರುವಾಗಿದೆ. ಮನೆಗೆ ಹವ್ಯಕ ಬ್ರಾಹ್ಮಣರನ್ನು ಕರೆಯಿಸಿ ಸತ್ಯನಾರಾಯಣ ಪೂಜೆ ಮಾಡಿಸುವುದು ಆರಂಭವಾಗಿದೆ. ತಾವು ಸ್ವಂತ ಜಮೀನು ಆಸ್ತಿ ಹೊಂದಿದ್ದರೆ ಮಾತ್ರ ಆರ್ಥಿಕ ಜೀವನ ಮಟ್ಟ ಸುಧಾರಣೆ ಹೊಂದಿ ಸಮಾಜದಲ್ಲಿ ಒಳ್ಳೆ ಸ್ಥಾನಮಾನ ಪಡೆಯಲು ಸಾಧ್ಯ ಎಂಬ ಮನೋಭಾವನೆ ಯುವಕರಲ್ಲಿ ಕಂಡುಬರುತ್ತಿದೆ. ವೃತ್ತಿ ಪಲ್ಲಟಣದಿಂದಾಗಿ ಬೇರೆ ಬೇರೆ ವೃತ್ತಿಗಳಾದ ಕೃಷಿ, ಕೃಷಿಕೂಲಿ,ಇತರ ಕೂಲಿ, ಕೆಲಸ ಇಲ್ಲವೇ ಸಣ್ಣ ಪುಟ್ಟ ಚಹಾ ಅಂಗಡಿ, ದಿನಸಿ ಅಂಗಡಿ ತೆರೆದು ವ್ಯಾಪಾರದಲ್ಲಿ ತೊಡಗಿಸಿಕೊಳ್ಳುವುದು ಹಾಗೂ ಕೆಲವರು ಸರಕಾರಿ ನೌಕರಿ, ಇನ್ನು ಕೆಲವರು ಮಿಲಿಟರಿಯಲ್ಲಿ ಸೇರುವುದು ಕಂಡು ಬರುತ್ತಿದೆ.

**ನಕಾರಾತ್ಮಕ:** ಆಧುನಿಕತೆ ಹಾಗೂ ಕೈಗಾರಿಕೀಕರಣದ ಪ್ರಭಾವದಿಂದ ಗೃಹ ಕೈಗಾರಿಕೆ ಮತ್ತು ಕರಕುಶಲತೆಗಳು ನಶಿಸಿವೆ. ನಗರೀಕರಣ, ಕೈಗಾರಿಕೀಕರಣದ ಪ್ರಭಾವದಿಂದಾಗಿ ಹೆಚ್ಚಿದ ಕುಡಿತ ಹಾಗೂ ಕೈಹಿಡಿತ ಇಲ್ಲದೇ ಭರಿಸುವ ವೆಚ್ಚದಿಂದಾಗಿ ಈ ಜನ ಸಾಲದಲ್ಲಿ ಮುಳುಗಿ ಹೋಗುವ ಭಯದ ಆತಂಕ ಮೂಡಿದೆ.

ದುಡಿಮೆಯಿಂದ ಆದಾಯ ಹೆಚ್ಚಾದಾಗ ಯುವಕರ ಸ್ವಾರ್ಥ, ಚೈನಿ ಹೆಚ್ಚಾಗಿ ವೃದ್ಧರ ಕಡೆಗೆ ಕುಟುಂಬ ಹಾಗೂ ಸಮುದಾಯದ ಕಡೆಗೆ ನಿರ್ಲಕ್ಷತೆ ಹೆಚ್ಚಾಗುತ್ತಿದೆ. ವಸ್ತು ಪ್ರಾಧಾನ್ಯತೆ ಹೆಚ್ಚಾಗಿ ಜೀವನ ಮೌಲ್ಯ ಕುಸಿಯುತ್ತಿದೆ.

ಕೌಟುಂಬಿಕ ಶಿಥಿಲತೆಗೆ ಕಾರಣವಾಗಿದೆ. ಆಧುನಿಕ ಕುಟುಂಬವು ತನ್ನ ಪಾರಂಪರಿಕ ವೈಭವವನ್ನು ಕಳೆದುಕೊಂಡು ಕೇವಲ ಸದಸ್ಯರ ತಂಗುದಾಣವಾಗುತ್ತಿದೆ.

ಶಾಲಾ, ಕಾಲೇಜಿಗೆ ಹೋಗುವ ಮಕ್ಕಳು ಪರಂಪರಾಗತ ಕಲಾ ಪ್ರದರ್ಶನಗಳನ್ನು ಹಳೆಯ ಫ್ಯಾಶನ್ ಎಂದು ಮೂಗು ಮುರಿಯಲಾರಂಭಿಸಿದ್ದಾರೆ.

ಹೈಸ್ಕೂಲ, ಕಾಲೇಜಿಗೆ ಹೋಗುವ ಇಂದಿನ ಯುವಕ ಯುವತಿಯರಲ್ಲಿ ಪಾರಂಪರಿಕ ಮೂಲ ವೃತ್ತಿ/ಕುಲಕಸುಬಿನ ಬಗ್ಗೆ ತಾತ್ಸಾರ ಭಾವನೆ,ಕೀಳರಿಮೆ ಮೂಡುತ್ತಿದೆ.

ಆಧುನಿಕತೆ ಹಾಗೂ ಶಿಕ್ಷಣದ ಪ್ರಭಾವದಿಂದ ವೈಚಾರಿಕತೆ ಮತ್ತು ವೈಜ್ಞಾನಿಕತೆ ಬೆಳೆದು ಯುವಕರಲ್ಲಿ ಧರ್ಮ, ಸಂಪ್ರದಾಯಗಳ ಮೇಲಿನ ನಂಬಿಕೆ ಕಡಿಮೆಯಾಗುತ್ತಿದೆ ಹಾಗೂ ಮೂಢ ನಂಬಿಕೆಗಳು, ಸಂಪ್ರದಾಯ, ಕಂದಾಚಾರಗಳ ಹಿಡಿತ ಸಡಿಲುಗೊಳ್ಳುತ್ತಿದೆ.

ವೃತ್ತಿಯನ್ನು ಅರಸಿ ಪತಿ-ಪತ್ನಿಯರು ಗೋವಾಕ್ಕೆ ವಲಸೆ ಹೋಗುವುದರಿಂದ ಕುಟುಂಬದ ವೃದ್ಧರ ಮತ್ತು ಚಿಕ್ಕಮಕ್ಕಳ ಪೋಷಣೆಯ ಸಮಸ್ಯೆ ಉಂಟಾಗುತ್ತಿದೆ.

ಇಂದಿನ ಯುವಕ/ಯುವತಿಯರ ಮೇಲೆ ಟಿ.ವಿ. ಮತ್ತು ಚಲನಚಿತ್ರಗಳ ಪ್ರಭಾವದಿಂದಾಗಿ ಫ್ಯಾಶ್ಯನದ ಪ್ರಭಾವ ಉಂಟಾಗಿ ಸಂಪ್ರದಾಯ, ನೈತಿಕ ಮೌಲ್ಯಗಳ ಕುಸಿತ ಕಂಡು ಬರುತ್ತಿದೆ.

ಇಂದಿನ ಯುವಕರು ಫ್ಯಾಶ್ಯನ ಲೋಕಕ್ಕೆ ಮಾರು ಹೋಗಿದ್ದು, ದುಶ್ಚಟಗಳ ದಾಸರಾಗುತ್ತಿದ್ದಾರೆ. (ಗುಟುಕಾ ಸೇವನೆ, ಮಧ್ಯಪಾನ ಸೇವನೆ).

ಅವಿಭಕ್ತ ಕುಟುಂಬಗಳು ನಶಿಸುತ್ತಿದ್ದು, ಅಣು ಕುಟುಂಬಗಳ ಹೆಚ್ಚಳದಿಂದಾಗಿ ವೃದ್ಧರ ಸಮಸ್ಯೆ ಹೆಚ್ಚಾಗುತ್ತಿದೆ.

ಶಿಕ್ಷಣದ ಪ್ರಭಾವಕ್ಕೆ ಒಳಗಾಗಿ ಯುವಕರು ವೃತ್ತಿ ಅರಸಿ ಬೇರೆ ಪ್ರದೇಶಕ್ಕೆ ಹೋಗುವುದರಿಂದ ಮೂಲ ಕುಟುಂಬದ ಜೊತೆ ಸಂಬಂಧಗಳನ್ನು ಕಳೆದುಕೊಳ್ಳುತ್ತಿರುವುದರಿಂದ ಕೌಟುಂಬಿಕ ಸಂಬಂಧಗಳಲ್ಲಿಯ ಆತ್ಮೀಯತೆಯ ಕೊರತೆ ಕಂಡು ಬರುತ್ತಿದೆ.

ಆಧುನಿಕತೆಯ ಪ್ರಭಾವಕ್ಕೆ ಒಳಗಾದ ಯುವಕರು/ಯುವತಿಯರು ಸಾಂಪ್ರದಾಯಿಕ ಮೌಲ್ಯಗಳಿಗೆ ಬೆಲೆ ಕೊಡುವುದು ಕಡಿಮೆಯಾಗುತ್ತಿದೆ.

ಆಧುನಿಕತೆಯ ಪ್ರಭಾವಕ್ಕೊಳಗಾಗಿ ಸಾಮುದಾಯಿಕ ಜೀವನ ನಶಿಸುತ್ತಿದ್ದು, ವಸ್ತು ಪ್ರಾಧ್ಯಾನ್ಯತೆ, ವ್ಯಕ್ತಿ ಪ್ರಾಧಾನ್ಯತೆ ಬೆಳೆಯುತ್ತಿದ್ದು, ನೈತಿಕ ಮೌಲ್ಯಗಳು ಕುಸಿಯುತ್ತಿದೆ.

ಶಿಕ್ಷಣದ ಪ್ರಭಾವಕ್ಕೆ ಒಳಗಾದ ಇಂದಿನ ಯುವಕ ಯುವತಿಯರಲ್ಲಿ ಹಿರಿಯರ ಬಗ್ಗೆ ಗೌರವ ಭಾವನೆ ಕುಸಿಯುತ್ತಿವೆ.

ಟಿ.ವಿ.ಯಂತಹ ಸಮೂಹ ಮಾದ್ಯಮ ಮತ್ತು ಚಲನಚಿತ್ರಗಳ ಪ್ರಭಾವದಿಂದ ಯುವಕ/ಯುವತಿಯರು ಆಧುನಿಕ ಉಡುಗೆ-ತೊಡುಗೆಗೆ ಮಾರು ಹೋಗುತ್ತಿದ್ದಾರೆ ಸಾಂಪ್ರದಾಯಿಕ ಉಡುಗೆ ತೊಡುಗೆ ತನ್ನ ಮಹತ್ವ ಕಳೆದುಕೊಳ್ಳುತ್ತಿದೆ.

ಆಧುನಿಕತೆಯ ಪ್ರಭಾವಕ್ಕೆ ಒಳಗಾಗಿ ಹಚ್ಚೆ ಹಾಗೂ ಚಿತ್ತಾರದ ಕರಕುಶಲತೆಯ ನಿಷ್ಣಾತರಾಗಿದ್ದ ಗೌಳಿ ಮಹಿಳೆಯರು ಆಸಕ್ತಿಯನ್ನು ಕಳೆದುಕೊಂಡಿದ್ದು, ಸಾಂಪ್ರದಾಯಿಕ ಕರಕುಶಲತೆ ಕಲೆ ಈ ಗೌಳಿ ಸಮುದಾಯದಿಂದ ಮಾಯವಾಗತೊಡಗಿದೆ.

ಸಾಂಪ್ರದಾಯಿಕ ನೃತ್ಯಗಳ ಮೇಲೆ ಆಧುನಿಕತೆಯ ಪ್ರಭಾವದಿಂದಾಗಿ ಹಬ್ಬ ಹರಿದಿನಗಳಲ್ಲಿ ಕೈಗೊಳ್ಳುವ ಪುಗಡಿ ನೃತ್ಯ, ಜಿಮ್ಮಾ ಕುಣಿತ, ಹೋಳಿ ಹುಣ್ಣಿಮೆ ಕುಣಿತ, ಜಗಾ ಕುಣಿತ, ಗಜ್ಜಾ ಗಲಾಚ ನೃತ್ಯ, ದಸರಾ ಸಾಮೂಹಿಕ ನೃತ್ಯಗಳು ಅವಸಾನದ ಹಾದಿಯಲ್ಲಿವೆ.

ಶಾಲೆ ಕಾಲೇಜಿಗೆ ಹೋಗುವ ಗೌಳಿ ಹೆಣ್ಣು ಮಕ್ಕಳು ಮೊದಲಿನಂತೆ ಮನೆ-ಮನೆಗೆ ಹೋಗಿ ಹಾಲು ಹಾಗೂ ಹಾಲಿನ ಉತ್ಪನ್ನಗಳನ್ನು ಮಾರಲು ಒಪ್ಪುತ್ತಿಲ್ಲ, ಹಿಂದೆ-ಮುಂದೆ ನೋಡುತ್ತಾರೆ.

ಇಂದಿನ ಶಾಲೆ ಕಾಲೇಜಿಗೆ ಹೋಗುವ ಯುವಕ ಯುವತಿಯರಲ್ಲಿ ನಾಗರಿಕ ಸುಖ ಜೀವನವೆಂಬ ಭ್ರಮೆಯಲ್ಲಿ ಪಾರಂಪರಿಕ ವೃತ್ತಿಯ ಬಗ್ಗೆ ತಾತ್ಸಾರ ಭಾವನೆ, ಕೀಳರಿಮೆ ಮೂಡುತ್ತಿದೆ.

**ಅಡಿಟಿಪ್ಪಣಿಗಳು**

೧) ಐ.ಸಿ. ಮುಳಗುಂದ - 'ಸಾಮಾಜಿಕ ಸಮೂಹಗಳು ಮತ್ತು ಪರಿವರ್ತನೆ', ೨೦೧೧-೧೨ ಪು. ೨೦೩, ೨೦೪.
೨) ಚ.ನ.ಶಂಕರರಾವ್ - 'ಸಮಾಜಶಾಸ್ತ್ರದ ಮೂಲ ತತ್ವಗಳು', ಜೈ ಭಾರತ ಪ್ರಕಾಶನ, ಮಂಗಳೂರ, ೨೦೦೦ ಪು ೩೨೧, ೩೨೨.
೩) ಅದೇ ಪುಟ ೨೦೫, ೩೨೪, ೩೨೫.
೪) ಅದೇ ಪುಟ ೨೦೬, ೨೦೮
೫) ಅದೇ ಪುಟ ೨೨೧,೨೪೧.
೬) ಐ.ಸಿ. ಮುಳಗುಂದ - 'ಭಾರತೀಯ ಸಮಾಜದ ಅಧ್ಯಯನ', ಸೃಷ್ಟಿ ಪ್ರಕಾಶನ, ಧಾರವಾಡ, ೨೦೦೯, ಪು. ೯೧, ೯೨.
೭) ಅದೇ. ಪುಟ ೧೧೪.
೮) ಅದೇ. ಪುಟ ೧೧೪,೧೧೫.
೯) ಅದೇ. ಪುಟ ೧೧೫.
೧೦) ಅದೇ. ಪುಟ ೧೧೫, ೧೧೬
೧೧) ಅದೇ. ಪುಟ ೧೧೬.
೧೨) ಕ್ಷೇತ್ರ ಕಾರ್ಯ ಮಾಹಿತಿ.
೧೩) ಚ. ನ. ಶಂಕರರಾವ್ - 'ಸಾಮಾಜಿಕ ಸಂಸ್ಥೆಗಳು - ಸಾಮಾಜಿಕ ಸಮೂಹಗಳು ಮತ್ತು ಪರಿವರ್ತನೆ', ೨೦೧೧, ಪು. ೧೨-೧೪.
೧೪) ಅದೇ. ಪುಟ ೧೭, ೧೮.
೧೫) ಚ.ನ. ಶಂಕರರಾವ್ - 'ಸಮಾಜಶಾಸ್ತ್ರದ ಮೂಲತತ್ವಗಳು ಹಾಗೂ ಸಾಮಾಜಿಕ ಸಂಸ್ಥೆಗಳು ಮತ್ತು ಸಮೂಹಗಳ ಅಧ್ಯಯನ', ೨೦೦೬, ಪು. ೭೨-೭೪.
೧೬) ಕ್ಷೇತ್ರ ಕಾರ್ಯ ಮಾಹಿತಿ.
೧೭) ಕ್ಷೇತ್ರ ಕಾರ್ಯ ಮಾಹಿತಿ.
೧೮) ಕ್ಷೇತ್ರ ಕಾರ್ಯ ಮಾಹಿತಿ.
೧೯) ಕ್ಷೇತ್ರ ಕಾರ್ಯ ಮಾಹಿತಿ.
೨೦) ಕ್ಷೇತ್ರ ಕಾರ್ಯ ಮಾಹಿತಿ.
೨೧) ಜಾನಪದ : ಕೆಲವು ಅಧ್ಯಯನಗಳು - 'ಬುಡಕಟ್ಟು ಜನರ ಬದಲಾಗುತ್ತಿರುವ ಆರ್ಥಿಕ ಜೀವನ' ಪು. ೧೦೩.
೨೨) ಅದೇ ಪುಟ ೧೦೫, ೧೦೬.

೨೩) ಡಾ॥ ಕೆ. ಎಮ್. ಮೇತ್ರಿ, ಡಾ॥ ಚಲುವರಾಜು (ಸಂ) – ಬುಡಕಟ್ಟು ಅಧ್ಯಯನ, ಜನೇವರಿ – ಡಿಸೆಂಬರ್–೨೦೦೭ ಪ್ರಸಾರಾಂಗ, ಕ.ವಿ.ವಿ. ಹಂಪಿ ; ಎಸ್. ಪ್ರಸಾದರವರ ಲೇಖನ 'ಆಗಬೇಕಿದೆ ಶಿಕ್ಷಣದಲ್ಲಿ ಕ್ರಾಂತಿ : ಬುಡಕಟ್ಟು ಮಕ್ಕಳಿಗಾಗಿ' ಪು. ೩೨.

೨೪) ಅದೇ ಪುಟ ೩೨.

೨೫) ಅದೇ ಪುಟ ೩೩.

೨೬) ಅದೇ ಪುಟ ೩೩.

೨೭) ಅದೇ ಪುಟ ೩೩, ೩೪.

೨೮) ಅದೇ ನಂಜುಂಡಯ್ಯನವರ ಲೇಖನ – 'ಆದಿವಾಸಿ ಬುಡಕಟ್ಟುಗಳ ಶೈಕ್ಷಣಿಕ ಸ್ಥಿತಿಗತಿ' ಪು. ೩೮.

೨೯) ತಾರಿಹಳ್ಳಿ ಹನುಮಂತಪ್ಪ (ಸಂ) – 'ಕರ್ನಾಟಕದ ಬುಡಕಟ್ಟು ಸಮುದಾಯಗಳು'
ಅದೇ ನಂಜುಂಡಯ್ಯನವರ ಲೇಖನ – 'ಆದಿವಾಸಿ ಬುಡಕಟ್ಟುಗಳ ಶೈಕ್ಷಣಿಕ ಸ್ಥಿತಿಗತಿ' ಪು. ೩೯.

೩೦) ಅದೇ ಪುಟ ೩೯.

೩೧) ವಿಷ್ಣು ಎಮ್. ಶಿಂಧೆ ಬರೆದ ಲೇಖನ, 'ಬುಡಕಟ್ಟುಗಳು ಮತ್ತು ಶಿಕ್ಷಣ' ಪು. ೨೯.

೩೧) ಅದೇ ಪುಟ ೨೯.

೩೨) ಅದೇ ಪುಟ ೩೦.

೩೩) ಅದೇ ಪುಟ ೩೦.

೩೪) ಅದೇ ಪುಟ ೩೧.

೩೫) ಅದೇ ಪುಟ ೩೧–೩೩.

೩೬) ಶಾಂತಲಾ ಹೆಗಡೆ – 'ಗೌಳಿಗ ಮಹಿಳೆಯರ ಸ್ಥಿತ್ಯಂತರಗಳು' ಅಪ್ರಕಟಿತ ಪ್ರಬಂಧ, ಪು. ೧೬೩.

೩೭) ಅದೇ ಪುಟ ೧೬೪, ೧೬೫.

೩೮) ಅದೇ ಪುಟ ೧೬೭, ೧೬೮.

೩೯) ಎಸ್.ಜಿ. ಹಿರೇಮಠ – 'ಭಾರತೀಯ ಸಮಾಜದ ಅಧ್ಯಯನ', ವಿದ್ಯಾನಿಧಿ ಪ್ರಕಾಶನ, ಗದಗ, ೨೦೦೨ – ೦೩, ಪು. ೩೨೯.

೪೦) ಅದೇ ಪುಟ ೩೨೯.

೪೧) ಡಾ॥ ಎಚ್. ಎಮ್. ಮಹೇಶ್ವರಯ್ಯ – 'ಗೌಳಿಗರು' ಲೇಖನ, ಪು. ೧೨೬–೧೨೮, 'ಕರ್ನಾಟಕದ ಬುಡಕಟ್ಟುಗಳು ಸಂಪುಟ–೧', (ಸಂ) ಎಚ್.ಜೆ. ಲಕ್ಕಪ್ಪಗೌಡ.

೪೨) ಕ್ಷೇತ್ರ ಕಾರ್ಯ ಮಾಹಿತಿ.

೪೩) ಕ್ಷೇತ್ರ ಕಾರ್ಯ ಮಾಹಿತಿ.

೪೪) ಚ.ನ. ಶಂಕರರಾವ್ – 'ಸಮಾಜಶಾಸ್ತ್ರದ ಮೂಲತತ್ವಗಳು', ಜೈ ಭಾರತ ಪ್ರಕಾಶನ, ಮಂಗಳೂರ, ೨೦೦೦, ಪು. ೩೩೮–೩೩೯.

೪೫) ಚ.ನ. ಶಂಕರರಾವ್ – 'ಸಾಮಾಜಿಕ ಸಮೂಹಗಳು ಮತ್ತು ಪರಿವರ್ತನೆ' ಪು. ೨೩೩–೨೩೫.

೪೬) ಡಾ. ಎ.ಎಸ್. ಪ್ರಭಾಕರ – 'ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು' ಪ್ರಸಾರಾಂಗ, ಕ.ವಿ.ವಿ. ಹಂಪಿ.

೪೭) ಡಾ. ಕೆ.ಎಮ್. ಮೇತ್ರಿ, ಡಾ. ಚಲುವರಾಜು – ಬುಡಕಟ್ಟು ಅಧ್ಯಯನ, ಜನೇವರಿ – ಜೂನ್ ೨೦೦೬, ಡಾ. ಮಂಜುನಾಥ ಬೇವಿನಕಟ್ಟಿರವರ ಲೇಖನ, 'ಬುಡಕಟ್ಟು ಚಹರೆಯ ಪರಿವೇಷದೊಳಗಿನ ಕೆಲವು ತಾತ್ವಿಕ ಸಮಸ್ಯೆಗಳು : ಒಂದು ಚರ್ಚೆ' ಪು. ೧–೧೫.

೪೮) 'ಸಮಾಜೋ ಜಾನಪದ' ದಲ್ಲಿ 'ಬುಡಕಟ್ಟು ಪ್ರದರ್ಶನ ಕಲೆಗಳು', ಲೇಖನ ಪು. ೩೮.



## ಅಧ್ಯಾಯ ೬
## ಸಮಾರೋಪ

---

### ೬.೧. ಪೀಠಿಕೆ

ಮಾನವನ ಸಾಂಸ್ಕೃತಿಕ ಇತಿಹಾಸ ತುಂಬಾ ಕೂತುಹಲಕಾರಿಯಾದುದಾಗಿದೆ. ಅವನ ಸಾಂಸ್ಕೃತಿಕ ಇತಿಹಾಸದಲ್ಲಿ ನಾಲ್ಕು ಹಂತಗಳನ್ನು ಗುರುತಿಸಲಾಗುತ್ತಿದೆ. ಆಹಾರ ಸಂಗ್ರಹಣೆ, ಬೇಟೆ, ಪಶುಪಾಲನೆ ಮತ್ತು ಕೃಷಿ ಇವೇ ಆ ನಾಲ್ಕು ಹಂತಗಳು ಎಂದು ಹೇಳಲಾಗುತ್ತಿದೆ. ಗೌಳಿಗರು ಪಶುಪಾಲನೆಯೆಂಬ ಮೂರನೇ ಹಂತಕ್ಕೆ ಸೇರಿದವರಾಗಿದ್ದಾರೆ. ಪ್ರಾಣಿಗಳನ್ನು ಬೇಟೆಯಾಡುತ್ತಿದ್ದ ಮನುಷ್ಯ ಅವುಗಳನ್ನು ಪಳಗಿಸಿ ತನ್ನ ಉಪಯೋಗಕ್ಕೆ ಬಳಸಿಕೊಂಡ ಸಾಂಸ್ಕೃತಿಕ ಹಂತ ಇದಾಗಿದೆ. ಮಹಾಭಾರತ ಮತ್ತು ರಾಮಾಯಣ ಕಾವ್ಯಗಳಲ್ಲೂ ಕೂಡ ಪಶುಪಾಲನೆಯ ಈ ವಿವರಗಳು ದಟ್ಟವಾಗಿ ಬರುತ್ತವೆ. ಅಂದರೆ ಈ ಪಶುಪಾಲನೆಗೆ ಸಾವಿರಾರು ವರ್ಷಗಳ ಇತಿಹಾಸವಿದೆಯೆಂದೇ ಅರ್ಥ. ಈ ಸಾವಿರಾರು ವರ್ಷಗಳ ಇತಿಹಾಸದಲ್ಲಿ ಕೇವಲ ಪಶುಪಾಲನೆಯನ್ನಷ್ಟೆ ನಂಬಿ ಜೀವನ ಸಾಗಿಸಿಕೊಂಡು ಬಂದ ಹಲವು ಸಮುದಾಯಗಳನ್ನು ನಾವು ಕಾಣುತ್ತೇವೆ. ಅಂತಹ ಪಶುಪಾಲನಾನಿಷ್ಠ ಸಮುದಾಯಗಳಲ್ಲಿ ಗೌಳಿಗರು ಪ್ರಮುಖರಾಗಿದ್ದಾರೆ. ಮಹಾರಾಷ್ಟ್ರದಿಂದ ಹಿಡಿದು ಕರ್ನಾಟಕದವರೆಗಿನ ಪಶ್ಚಿಮ ಘಟ್ಟಗಳಲ್ಲಿ ಇವರ ಪ್ರಸರಣ ಕಂಡು ಬರುತ್ತದೆ. ಮೂಲತಃ ಪೂರ್ಣ ಪ್ರಮಾಣದ ಅಲೆಮಾರಿಗಳಾಗಿದ್ದ ಇವರು ಇದೀಗ ಅರೆ-ಅಲೆಮಾರಿಗಳಾಗಿಯೂ, ಕೆಲವು ಕಡೆ ನೆಲೆ ನಿಂತವರಾಗಿಯೂ ಕಂಡು ಬರುತ್ತಾರೆ. ಅಲೆಮಾರಿ ಜೀವನದಿಂದ ನೆಲೆ ನಿಲ್ಲುವ ಜೀವನದವರೆಗೆ ಇವರಲ್ಲಿ ಆದ ಪರಿವರ್ತನೆಗಳೇನು ಹಾಗೂ ಮೂಲ ವೃತ್ತಿಯನ್ನು ಬಿಟ್ಟು ಇತರ ವೃತ್ತಿಗಳನ್ನು ಅವಲಂಬಿಸಬೇಕಾಗಿ ಬಂದ ಸಂದರ್ಭದಲ್ಲಿ ಉಂಟಾದ ಸಮಸ್ಯೆಗಳೇನು ಎಂಬ ಬಹುಮುಖ್ಯ ಸಂಗತಿಗಳನ್ನು ಈ ಪ್ರಬಂಧದಲ್ಲಿ ಚರ್ಚಿಸಲು ಪ್ರಯತ್ನಿಸಲಾಗಿದೆ. ತೀವ್ರತರವಾದ ಪರಿವರ್ತನೆಗಳನ್ನು ಒಳಗೊಳ್ಳುತ್ತಿರುವ ಆಧುನಿಕ ಸಮಾಜದಲ್ಲಿ ಗೌಳಿಗರು ಎದುರಿಸುತ್ತಿರುವ ಮೂಲಭೂತ ಸಮಸ್ಯೆಗಳೇನು ಎಂಬುದನ್ನು ಅರಿಯುವ ಪ್ರಯತ್ನವಿದೆ. ಸಮೂಹನಿಷ್ಠ ಸಮಾಜ

ವ್ಯಕ್ತಿನಿಷ್ಠ ಸಮಾಜದ ಕಡೆಗೆ ಚಲಿಸುತ್ತಿರುವ ಈ ಸಂದರ್ಭದಲ್ಲಿ ಕುಟುಂಬ ವ್ಯವಸ್ಥೆಯಲ್ಲಿ ಆಗುತ್ತಿರುವ ಬದಲಾವಣೆಗಳೇನು ಹಾಗೂ ಆ ಬದಲಾವಣೆಯ ಕಾರಣಕ್ಕಾಗಿ ಆಗುತ್ತಿರುವ ಸಮಸ್ಯೆಗಳೇನು ಎಂಬ ವಿಚಾರವು ಇಲ್ಲಿ ಚರ್ಚಿತವಾಗಿದೆ. ಪರಿವರ್ತನೆಯ ಜೊತೆ ಜೊತೆಗೆ ಸಮಸ್ಯೆಗಳು ಉದ್ಭವಿಸುತ್ತವೆ. ಆ ಸಮಸ್ಯೆಗಳನ್ನು ಗೌಳಿಗರು ಹೇಗೆ ಎದುರಿಸುತ್ತಿದ್ದಾರೆ ಎಂಬುವುದು ಇಲ್ಲಿ ಮುಖ್ಯವಾಗುತ್ತದೆ. ಮೂಲಭೂತವಾದ ಪಾರಂಪರಿಕ ವೃತ್ತಿ ಬದಲಾವಣೆಯಾದಾಗ ಅವರು ಎದುರಿಸುವ ಸಮಸ್ಯೆ ಕೂಡಾ ಅಷ್ಟೇ ವಿಶಿಷ್ಟವಾಗಿರುತ್ತದೆ. ಅವು ಸಕಾರಾತ್ಮಕವಾಗಿರಲಿ ಅಥವಾ ನಕಾರಾತ್ಮಕವಾಗಿರಲಿ ಅಲ್ಲಿ ಉಂಟಾಗುತ್ತಿರುವ ಪ್ರಮುಖವಾದ ಪರಿವರ್ತನೆಗಳನ್ನು ಗುರುತಿಸಿ ಅದರ ಪರಿಣಾಮಗಳನ್ನು ಅಭ್ಯಸಿಸುವುದು ಈ ಪ್ರಬಂಧದ ಮುಖ್ಯ ಉದ್ದೇಶವಾಗಿತ್ತು. ಈ ವಿಚಾರದಲ್ಲಿ ತಕ್ಕಷ್ಟು ಸಫಲಗೊಂಡಿದ್ದೇನೆ ಎಂಬ ನಂಬಿಕೆ ನನಗಿದೆ. ಈ ಹಿನ್ನೆಲೆಯಲ್ಲಿ ಪಾರಂಪರಿಕ ವೃತ್ತಿ ಪರಿವರ್ತನೆ, ನಂಬಿಕೆಗಳ ಪಲ್ಲಟ, ಸಾಮಾಜಿಕ ಸ್ತರ ವ್ಯವಸ್ಥೆ, ಕೌಟುಂಬಿಕ ಪಲ್ಲಟಗಳು, ಸ್ತ್ರೀಯರ ಸ್ಥಾನಮಾನದಲ್ಲಿನ ವ್ಯತ್ಯಾಸ ಮುಂತಾದ ವಿಚಾರಗಳನ್ನು ಇಟ್ಟುಕೊಂಡು ಗೌಳಿಗರ ಪರಿವರ್ತನಾಶೀಲ ಸಮಾಜವನ್ನು ಅಧ್ಯಯನ ಮಾಡಲಾಗಿದೆ. ಇಷ್ಟಲ್ಲದೇ ಆಧುನಿಕ ವ್ಯವಸ್ಥೆ ಅರ್ಥಾತ್ ಸರಕಾರ ರೂಪಿಸಿದ ಮತ್ತು ಅನುಷ್ಠಾನಗೊಳಿಸಿದ ಯೋಜನೆಗಳಿಂದ ಗೌಳಿಗರ ಜೀವನದಲ್ಲಿ ಉಂಟಾದ ಪರಿವರ್ತನೆ ಏನು ಎಂಬುದನ್ನು ಆಯಾ ಸಂದರ್ಭಗಳಲ್ಲಿ ಪರಿಶೀಲಿಸಲಾಗಿದೆ. ಹಾಗೆಯೇ ಆಧುನಿಕತೆ ಗೌಳಿಗರ ಬದುಕಿನ ಮೇಲೆ ಯಾವ ಪರಿಣಾಮಗಳನ್ನು ಉಂಟು ಮಾಡಿದೆ ಹಾಗೂ ಅದರಿಂದಾಗಿ ಉದ್ಭವಿಸಿದ ಸಮಸ್ಯೆಗಳೇನು ಮತ್ತು ಆ ಸಮಸ್ಯೆಗಳಿಗೆ ಗೌಳಿಗರು ಕಂಡುಕೊಂಡ ಪರಿಹಾರಗಳೇನು ಎಂಬ ಅಂಶಗಳು ಈ ಅಧ್ಯಯನದಲ್ಲಿ ಇವೆ.

ಒಟ್ಟಾರೆಯಾಗಿ ಉತ್ತರ ಕನ್ನಡ ಜಿಲ್ಲೆಯಲ್ಲಿ ತಮ್ಮದೇ ಆದ ಗೌಳಿವಾಡಾಗಳನ್ನು ರಚಿಸಿಕೊಂಡು ಆಧುನಿಕತೆಯ ಪ್ರಭಾವದಲ್ಲಿಯೂ ತಮ್ಮದೇ ಆದ ವಿಶಿಷ್ಟ ಜೀವನ ನಡೆಸುತ್ತಿರುವ ನಾಲ್ಕು ತಾಲೂಕುಗಳಲ್ಲಿನ ಗೌಳಿಗರನ್ನು ವಿವರವಾಗಿ ಅಧ್ಯಯನ ಮಾಡಲಾಗಿದೆ. ಅಲ್ಲಿರುವ ೧೨೨ ಗೌಳಿವಾಡಾಗಳ ಪೈಕಿ ೪೫ ಗೌಳಿವಾಡಗಳಲ್ಲಿ ವ್ಯಾಪಕ ಕ್ಷೇತ್ರ ಕಾರ್ಯವನ್ನು ಮಾಡಿ ವಿಷಯಗಳನ್ನು ಸಂಗ್ರಹಿಸಲಾಗಿದೆ. ಉಳಿದ ಗೌಳಿವಾಡಾಗಳನ್ನು ಪಕ್ಷಿನೋಟದ ರೀತಿಯಲ್ಲಿ ಗಮನಿಸಲಾಗಿದೆ. ಮಾದರಿ ಪ್ರಶ್ನಾವಳಿಯನ್ನು ರೂಪಿಸಿಕೊಂಡು ವ್ಯಕ್ತಿ ಅಧ್ಯಯನ ವಿಧಾನಗಳನ್ನು ಬಳಸಿಕೊಂಡು ಸಾಕಷ್ಟು ವಿವರಗಳನ್ನು ಸಂಗ್ರಹಿಸಿ ಅವುಗಳನ್ನು ವೈಜ್ಞಾನಿಕವಾಗಿ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ. ಅವರ ಐತಿಹಾಸಿಕ ಹಿನ್ನೆಲೆ, ಪ್ರಸ್ತುತದ ಸಾಮಾಜಿಕ ಸ್ಥಿತಿಗತಿ, ಅವರು ಎದುರಿಸುತ್ತಿರುವ ವಿಶಿಷ್ಟ ಸಾಮಾಜಿಕ ಸಮಸ್ಯೆಗಳು ಮುಂತಾದವುಗಳನ್ನು ಪರಿಣಾಮ ಮತ್ತು ಪರಿವರ್ತನೆಗಳ ಹಿನ್ನೆಲೆಯಲ್ಲಿ ಗ್ರಹಿಸುವ ಪ್ರಯತ್ನ ಇಲ್ಲಿ ನಡೆದಿದೆ. ವ್ಯಾಪಕ ಕ್ಷೇತ್ರ ಕಾರ್ಯ, ಪೂರಕ ಮಾಹಿತಿಗಳ ತುಲನೆ ಹಾಗೂ ಅಂಕಿ ಅಂಶಗಳನ್ನೊಳಗೊಂಡ ವೈಜ್ಞಾನಿಕ ವಿಶ್ಲೇಷಣೆ ಮೂಲಕ ಅಧ್ಯಯನ ಕೈಗೊಳ್ಳಲಾಗಿದ್ದು, ನನ್ನ ಅನುಭವ ಮತ್ತು ಅಧ್ಯಯನದ ಹಿನ್ನೆಲೆಯಲ್ಲಿ ನಾನು ಕಂಡುಕೊಂಡ ಫಲಿತಗಳನ್ನು ಇಲ್ಲಿ ದಾಖಲಿಸಿದ್ದೇನೆ. ಹಾಗೆಯೇ ಒಬ್ಬ ಸಮಾಜಶಾಸ್ತ್ರದ ಹಿನ್ನೆಲೆಯುಳ್ಳ ಸಂಶೋಧಕಿಯಾಗಿ ಪ್ರಸ್ತುತ ವ್ಯವಸ್ಥೆಗೆ ಕೆಲವು ಸಲಹೆಗಳನ್ನು ಆಶಯಗಳ ರೂಪದಲ್ಲಿ ಮಂಡಿಸಿದ್ದೇನೆ.

## ೬.೨. ಫಲಿತಗಳು

೧. ಔದ್ಯೋಗಿಕರಣ, ಆಣೆಕಟ್ಟು ಮತ್ತು ಅಭಿವೃದ್ಧಿ ಯೋಜನೆಗಳಿಂದಾದ ಅರಣ್ಯ ನಾಶ ಹಾಗೂ ಅರಣ್ಯದಲ್ಲಿ ದನಕರುಗಳನ್ನು ಮೇಯಿಸುವುದರ ಮೇಲಿನ ನಿರ್ಬಂಧಗಳಿಂದ ಮೇವು, ನೀರಿನ ಕೊರತೆಯ ವ್ಯತಿರಿಕ್ತ ಪರಿಣಾಮದಿಂದ ದನಗಳು ಸಹಜವಾಗಿ ಸಾಕಷ್ಟು ಪ್ರಮಾಣದಲ್ಲಿ ಕಡಿಮೆಯಾಗಿದ್ದು ಕುಲಕಸುಬಾದ ಹೈನುಗಾರಿಕೆಯು ಅಳಿಯುವ ಹಂತ ತಲುಪಿದ್ದು ಇದು ವೃತ್ತಿ ಪರಿವರ್ತನೆಗೆ ಮುಖ್ಯ ಕಾರಣವಾಗಿದೆ.

೨. ಹೊಸ ಅರಣ್ಯ ಕಾನೂನು ಹಾಗೂ ಅರಣ್ಯ ನೀತಿಗಳಿಂದ ಗೌಳಿಗರ ಉಪಕಸುಬುಗಳಾದ ಬೇಟೆಗಾರಿಕೆ, ಅರಣ್ಯ ಉತ್ಪನ್ನ ಹಾಗೂ ಆಹಾರಗಳ ಸಂಗ್ರಹಣೆ ಮತ್ತು ಮಾರಾಟಗಳನ್ನು ನಿಷೇಧಿಸಿದ್ದರಿಂದ ಅವರ ಉಪಕಸುಬುಗಳಿಗೆ ಬಿದ್ದ ಹೊಡೆತವೂ ವೃತ್ತಿ ಪರಿವರ್ತನೆಗೆ ಕಾರಣವಾಯಿತು.

೩. ಹೊಸ ಅರಣ್ಯ ನೀತಿಯಿಂದಾಗಿ, ತಲೆಮಾರುಗಳಿಂದ ಕುಮ್ರಿ ಬೇಸಾಯ ಮಾಡುತ್ತಿದ್ದ ಗೌಳಿಗರು ಭೂ ಒಡೆತನವನ್ನು ಕಳೆದುಕೊಂಡಿದ್ದರಿಂದ ಜೀವನ ನಿರ್ವಹಣೆಗೆ ಅದನ್ನೆ ಅವಲಂಬಿಸಿ ಕೊಂಡಿದ್ದ ಹಲವಾರು ಗೌಳಿ ಕುಟುಂಬಗಳು (ಸುಮಾರು ೪೦) ಬೇರೆ ವೃತ್ತಿಯನ್ನು ಅರಸಿಕೊಂಡು ಗೋವಾಕ್ಕೆ ವಲಸೆ ಹೋಗಬೇಕಾಯಿತು. ಅಂದರೆ ಭೂಮಿಯ ನಷ್ಟವೂ ವೃತ್ತಿ ಪರಿವರ್ತನೆಗೆ ಕಾರಣ.

೪. ಗೌಳಿ ಸಮುದಾಯದಲ್ಲಿ ಭೂಮಿ ರಹಿತ ಕುಟುಂಬಗಳೇ ಹೆಚ್ಚು. ಭೂಮಿ ಹೊಂದಿದ ಕುಟುಂಬಗಳು ಕಡಿಮೆ. ಭೂಮಿ ಹೊಂದಿದವರಲ್ಲಿ ಖಾತಾ ಹೊಂದಿದವರು ಬಹಳ ಕಡಿಮೆ. ಅರಣ್ಯ ಅತಿಕ್ರಮಣ ಭೂಮಿ ಅದೂ ಕೇವಲ ೧/೨ ರಿಂದ ೨ ಅಥವಾ ೩ ಎಕರೆವರೆಗೆ ಭೂಮಿ ಹೊಂದಿದವರೇ ಅಧಿಕ. ಕಾರಣ ಕೇವಲ ಕೃಷಿಯಿಂದ ಬಂದ ಆದಾಯ ಕುಟುಂಬ ನಿರ್ವಹಣೆಗೆ ಸಾಲದಾಗಿ ಮತ್ತೊಂದು ವೃತ್ತಿಯಲ್ಲಿ (ಕೃಷಿಕೂಲಿ ಇಲ್ಲವೆ ಇತರೆ ಕೂಲಿ ಕೆಲಸದಲ್ಲಿ) ತೊಡಗಿಸಿಕೊಳ್ಳುವುದು ಅನಿವಾರ್ಯವಾಯಿತು.

೫. ಇಂದಿನ ಗೌಳಿ ಕುಟುಂಬಗಳಲ್ಲಿ ಒಂದೇ ವಿಶಿಷ್ಟವಾದ ವೃತ್ತಿಯನ್ನವಲಂಬಿಸಿಲ್ಲ. ಕುಟುಂಬ ಜೀವನದ ನಿರ್ವಹಣೆಗೆ ಆರ್ಥಿಕ ಮೂಲವನ್ನಾಗಿ ಹೈನುಗಾರಿಕೆ, ಕೃಷಿಕೂಲಿ ಹಾಗೂ ಇತರ ಕೂಲಿ ಕೆಲಸ ಮುಂತಾದವುಗಳಲ್ಲಿ ಒಂದಕ್ಕಿಂತ ಹೆಚ್ಚು ವೃತ್ತಿಗಳಲ್ಲಿ ತೊಡಗಿಸಿಕೊಂಡಿರುವುದು ಕಂಡು ಬರುತ್ತದೆ.

೬. ಕುಲ ಕಸುಬಾದ ಹೈನುಗಾರಿಕೆ ಮತ್ತು ಭೂ ಒಡೆತನ ಕೈ ತಪ್ಪಿ ವೃತ್ತಿ ಸಮಸ್ಯೆಯನ್ನು ಎದುರಿಸಿ ಅತಂತ್ರ ಸ್ಥಿತಿಯಲ್ಲಿದ್ದ ಗೌಳಿಗರು ಸುತ್ತಲಿನ ಗ್ರಾಮೀಣ ಪ್ರದೇಶದಲ್ಲಿ ಜಮೀನ್ದಾರರ ಜಮೀನಿನಲ್ಲಿ ಕೃಷಿಕೂಲಿ, ಋತುಮಾನವಲಂಬಿತ ಕೃಷಿಕೂಲಿ ಇಲ್ಲದ ಸಮಯದಲ್ಲಿ ಬೇರೆ ಕೂಲಿ ಕೆಲಸವನ್ನೆ ಪರ್ಯಾಯ ವೃತ್ತಿಯನ್ನಾಗಿ ಕಂಡುಕೊಂಡು ಅದರಲ್ಲಿ

ತೊಡಗಿಸಿಕೊಂಡು ಜೀವನ ನಿರ್ವಹಣೆಯನ್ನು ನಿಭಾಯಿಸುತ್ತಿದ್ದಾರೆ. ಹೀಗೆ ವೃತ್ತಿ ಸಮಸ್ಯೆಗೆ ಪರಿಹಾರವನ್ನು ವೃತ್ತಿ ಪರಿವರ್ತನೆಯಲ್ಲಿ ಕಂಡುಕೊಂಡರೆಂದು ಹೇಳಬಹುದು.

೭. ಸುತ್ತಲಿನ ಗ್ರಾಮೀಣ ಪ್ರದೇಶದಲ್ಲಿ ಕೃಷಿಕೂಲಿ ಕೆಲಸ ಮಾಡಬೇಕಾದ್ದರಿಂದ ನಾಗರಿಕ ಸಮಾಜದ ನಿರಂತರ ಸಂಪರ್ಕ ಬೆಳೆದು ನಾಗರಿಕರ ಮಕ್ಕಳು ಕಲಿತು ಒಳ್ಳೆ ನೌಕರಿ ಮಾಡಿ ದುಡ್ಡು ಗಳಿಸುವುದನ್ನು ಅರಿತು ತಾವೂ ತಮ್ಮ ಮಕ್ಕಳನ್ನು ಶಾಲೆಗೆ ಯಾಕೆ ಕಳಿಸಬಾರದು ಎಂಬ ಯೋಚನೆ ಮೂಡಿತಲ್ಲದೆ ಗೈರು ಬೇಸಾಯದ ಸಮಯದಲ್ಲಿ ಬೇರೆ ಕೆಲಸ ಹುಡುಕಿಕೊಂಡು ಹೋದಾಗ ಶಿಕ್ಷಣ ಕೊರತೆಯಿಂದ ಕಡಿಮೆ ವರಮಾನದ ಕೆಲಸ ದೊರಕುತ್ತಿದ್ದರಿಂದ ಇಡೀ ಕುಟುಂಬ ನಿರ್ವಹಣೆಯು ಕಠಿಣವಾದಾಗ ಶಿಕ್ಷಣದ ಮಹತ್ವದ ಅರಿವಾಯಿತು. ಇದರಿಂದ ಗೌಳಿಗರಲ್ಲಿ ಶಿಕ್ಷಣದ ಬಗ್ಗೆ ಇದ್ದ ತಾತ್ಸಾರ ಭಾವನೆಯ ಪರಿವರ್ತನೆಗೆ ಕಾರಣವಾಯಿತಲ್ಲದೆ ಮಕ್ಕಳನ್ನು ಶಾಲೆಗೆ ಕಳಿಸಲು ಪ್ರಾರಂಭಿಸಿದರು. ಶಿಕ್ಷಣದ ಬಗ್ಗೆ ಜಾಗೃತಿ ಮೂಡಿಸಿ ಮಕ್ಕಳನ್ನು ಶಾಲೆಗೆ ಕಳಿಸುವಂತೆ ಪ್ರೇರೇಪಿಸುವಲ್ಲಿ ಸ್ವಯಂ ಸೇವಾ ಸಂಸ್ಥೆಗಳ ಪಾತ್ರವೂ ಇದೆ.

೮. ಶಿಕ್ಷಣದ ಪ್ರವೇಶ, ನಾಗರಿಕ ಸಮಾಜದ ಪ್ರಭಾವ ಮತ್ತು ಟಿ.ವ್ಹಿ. ಮುಂತಾದ ಸಮೂಹ ಮಾಧ್ಯಮಗಳು ಗೌಳಿ ಸಮುದಾಯದ ಸಾಂಸ್ಕೃತಿಕ ಬದುಕಿನ ಮೇಲೆ ಸಾಕಷ್ಟು ಪ್ರಭಾವ ಬೀರಿವೆ. ಶಿಕ್ಷಣವು ಗೌಳಿ ಬುಡಕಟ್ಟು ಜನರ ವಿವೇಚನಾ ಶಕ್ತಿಯನ್ನು ವೃದ್ಧಿಸಿತು. ವೈಚಾರಿಕತೆ, ವೈಜ್ಞಾನಿಕತೆ ಬೆಳೆದು ಯುವಕರಲ್ಲಿ ಧರ್ಮ ಸಂಪ್ರದಾಯಗಳ ಮೇಲಿನ ನಂಬಿಕೆಗಳು ಮತ್ತು ಕಂದಾಚಾರಗಳ ಹಿಡಿತ ಸಡಿಲಗೊಳ್ಳುತ್ತಿರುವುದು ಗೌಳಿಗರಲ್ಲಿ ಸಾಂಸ್ಕೃತಿಕ ಪರಿವರ್ತನೆಗೆ ಕಾರಣವಾಗಿದೆ.

೯. ಉಚ್ಚ ಶಿಕ್ಷಣ ಪಡೆದ ಕೆಲವು ಗೌಳಿ ಯುವಕರು ಒಳ್ಳೆ ನೌಕರಿ ಪಡೆದು ಹಾಗೂ ಆಧುನೀಕರಣದ ಪರಿಣಾಮವಾಗಿ ಹೆಚ್ಚಿದ ಅವಕಾಶಗಳಿಂದ ಲಾಭ ಪಡೆದುಕೊಂಡು ಕೆಲವು ಕುಟುಂಬಗಳು ತಮ್ಮ ಆದಾಯದಲ್ಲಿ ಹೆಚ್ಚಳ ಮಾಡಿಕೊಂಡು ಆರ್ಥಿಕವಾಗಿ ಸುಧಾರಣೆ ಹೊಂದಿದ್ದಾರೆ. ಹೀಗೆ ಶಿಕ್ಷಣ ಹಾಗೂ ಆಧುನೀಕರಣದಿಂದ ಹೆಚ್ಚಿದ ಅವಕಾಶಗಳು ಆರ್ಥಿಕ ಪರಿವರ್ತನೆಗೆ ಕಾರಣೀಭೂತ ಆಗಿವೆ. ಆದರೆ ಬಹುತೇಕ ಜನರು ಅಶಿಕ್ಷಿತರಾದ ಕಾರಣ ಇಂತಹ ಅವಕಾಶಗಳ ಲಾಭ ಪಡೆಯಲು ಸಾಧ್ಯವಾಗಿಲ್ಲ.

೧೦. ಶಿಕ್ಷಣ, ಗ್ರಾಮೀಣ ನಾಗರಿಕರ ನಿರಂತರ ಸಂಪರ್ಕ ಹಾಗೂ ಅವರ ಚುನಾವಣೆ ಕಾಲದ ಚಟುವಟಿಕೆಗಳ ಪ್ರಭಾವ ಅಲ್ಲದೆ ಸ್ವಯಂ ಸೇವಾ ಸಂಸ್ಥೆಗಳ ಪಾತ್ರ, ಇವು ಗೌಳಿಗರಲ್ಲಿ ರಾಜಕೀಯ ಪ್ರಜ್ಞೆ ಮತ್ತು ರಾಜಕೀಯ ಮಹತ್ವದ ಅರಿವು ಮೂಡಿಸಲು ಕಾರಣವಾಗಿವೆ. ಹೀಗೆ ರಾಜಕೀಯ ಗಂಧವಿರದ ಗೌಳಿಗರು ರಾಜಕೀಯವಾಗಿ ಪರಿವರ್ತನೆ ಹೊಂದಿ ಸ್ಥಾನಿಕ ಸಂಸ್ಥೆಗಳಾದ ಗ್ರಾಮ ಪಂಚಾಯತಿ, ತಾಲೂಕ ಪಂಚಾಯತಿ ಹಾಗೂ ಜಿಲ್ಲಾ ಪಂಚಾಯತಿ ಚುನಾವಣೆಗಳಲ್ಲಿ ನೇರ ಸಹಭಾಗಿತ್ವ ಹೊಂದಿ ಹಲವಾರು ಗೌಳಿ ಜನರು ಚುನಾಯಿತರಾಗುವಲ್ಲಿ ಯಶಸ್ವಿಯಾಗುವ ಮಟ್ಟಿಗೆ ಪ್ರಗತಿ ಹೊಂದಿದ್ದಾರೆ.

೧೧. ಆಧುನೀಕರಣದ ಪರಿಣಾಮವಾಗಿ ಗೌಳಿ ಸಮುದಾಯದಲ್ಲಿ ಬಾಲ್ಯವಿವಾಹ ನಶಿಸುವ ಹಂತ ತಲುಪಿದೆ ಹಾಗೂ ಹೆಣ್ಣು ಮಕ್ಕಳ ವಿವಾಹದ ವಯಸ್ಸಿನಲ್ಲಿ ಹೆಚ್ಚಳ ಕಂಡು ಬರುತ್ತಿದೆ.

೧೨. ಆಧುನಿಕತೆಯ ಪರಿಣಾಮವಾಗಿ ಗೌಳಿ ಸಮುದಾಯದಲ್ಲಿ ಶಿಕ್ಷಣ ಪ್ರವೇಶಿಸಿ ಹೆಣ್ಣು ಮಕ್ಕಳೂ ಸಹ ಶಿಕ್ಷಣ ಹೊಂದುವಂತಾಗಿ, ಶಿಕ್ಷಣ ಪಡೆದ ಹೆಣ್ಣು ಮಕ್ಕಳಿಗೆ / ಮಹಿಳೆಯರಿಗೆ ಕುಟುಂಬದಲ್ಲಿ ಮಾನ್ಯತೆ ಸಿಗುವಂತಾಗಿದೆ. ಸ್ತ್ರೀ ವಿಮೋಚನೆಗೆ ದಾರಿ ಮಾಡಿದೆ.

೧೩. ಶಿಕ್ಷಣದಿಂದ ನೌಕರಿ ಮಾಡುವ ಮಹಿಳೆಯರು ಆರ್ಥಿಕ ಸ್ವಾವಲಂಬನೆ ಹೊಂದಿದ್ದಾರೆ. ಕುಟುಂಬದಲ್ಲಿ ಇವರ ಸ್ಥಾನಮಾನ ಹೆಚ್ಚಿ ಕೌಟುಂಬಿಕ ಮುಖ್ಯ ನಿರ್ಣಯಗಳನ್ನು ನಿರ್ಧರಿಸುವಲ್ಲಿ ಮಹಿಳೆಯರ ಅಭಿಪ್ರಾಯಕ್ಕೂ ಮಹತ್ವ ಬರುತ್ತಿದೆ.

೧೪. ಸಾಮಾಜಿಕ ಸ್ತರವ್ಯವಸ್ಥೆಯಲ್ಲಿ ಶಿಕ್ಷಣದಿಂದಾಗಿ ಗೌಳಿಗರ ಸ್ಥಾನಮಾನದಲ್ಲಿ ಹೆಚ್ಚಳ ಕಂಡುಬರುತ್ತಿದೆ.

೧೫. ಆಧುನಿಕತೆ ಮತ್ತು ಜಾಗತೀಕರಣದ ವ್ಯವಸ್ಥೆಯಲ್ಲಿಯೂ ಕೂಡ ಗೌಳಿ ಸಮುದಾಯ ತನ್ನ ಸಂಸ್ಕೃತಿಯ ಚಹರೆಯನ್ನುಳಿಸಿಕೊಂಡು ಆಧುನಿಕತೆ, ಜಾಗತೀಕರಣಗಳ ಪ್ರಭಾವದಿಂದಾಗುವ ಸ್ಥಿತ್ಯಂತರಗಳಿಗೆ ಮುಖಾಮುಖಿಯಾಗಿ ಅಭಿವೃದ್ಧಿ ಯೋಜನೆಗಳಿಗೆ ಒಡ್ಡಿಕೊಂಡು ಇತರ ಸಮುದಾಯಗಳೊಂದಿಗೆ ಮುಕ್ತವಾಗಿ ಬೆರೆಯಲಾರಂಭಿಸಿದ್ದಾರಲ್ಲದೇ ಮುಖ್ಯವಾಹಿನಿಗೆ ಹತ್ತಿರವಾಗುತ್ತಿದ್ದಾರೆ.

೧೬. ಗೌಳಿಗರಲ್ಲಿ ಸಾಮುದಾಯಿಕ ಜೀವನ ನಶಿಸುತ್ತಿದೆ. ವಸ್ತು ಪ್ರಾಧಾನ್ಯತೆ ಮತ್ತು ವ್ಯಕ್ತಿ ಪ್ರಾಧಾನ್ಯತೆ ಬೆಳೆಯುತ್ತಿದ್ದು ಮೌಲ್ಯಗಳು ಕುಸಿಯುತ್ತಿವೆ.

೧೭. ಆಧುನಿಕತೆ ಹಾಗೂ ಕೈಗಾರಿಕೀರಣದ ಪ್ರಭಾವದಿಂದ ಗೃಹ ಕೈಗಾರಿಕೆ ಮತ್ತು ಕರಕುಶಲತೆಗಳು ನಶಿಸುತ್ತಿವೆ.

೧೮. ಕಲಿತ ಯುವಕರಲ್ಲಿ ಹಿರಿಯರ ಬಗ್ಗೆ ಗೌರವ ಭಾವನೆ ಹಾಗೂ ಸಂಪ್ರದಾಯ ಪಾಲನೆ ಕುಸಿಯುತ್ತಿದೆ.

೧೯. ಅವಿಭಕ್ತ ಕುಟುಂಬಗಳು ಶಿಥಿಲಗೊಳ್ಳುತ್ತಿದ್ದು, ವಿಭಕ್ತ ಕುಟುಂಬಗಳು ಹೆಚ್ಚಾಗುತ್ತಿರುವುದು ಕಂಡುಬರುತ್ತಿದೆ.

೨೦. ಟಿ.ವ್ಹಿ. ಯಂತಹ ಸಮೂಹ ಮಾಧ್ಯಮಗಳು ಹಾಗೂ ನಗರೀಕರಣದ ಪ್ರಭಾವದಿಂದ ಇತ್ತೀಚಿಗೆ ಗೌಳಿ ಯುವಕ/ಯುವತಿಯರು, ಮಹಿಳೆಯರು, ಮಕ್ಕಳು ಆಧುನೀಕರಣದ ಸೆಳೆತಕ್ಕೆ ಹೆಚ್ಚು ಒಳಗಾಗುತ್ತಿದ್ದು ಅವರು ಧರಿಸುವ ಉಡುಪು, ಆಭರಣ ಹಾಗೂ ಬಳಸುವ ಸೌಂದರ್ಯ ಪ್ರಸಾಧನ ಸಾಮಗ್ರಿಗಳಲ್ಲಿ ಇದನ್ನು ಕಾಣಬಹುದು. ಕಾಲೇಜಿಗೆ ಹೋಗುವ ಗೌಳಿ ಯುವಕರು ಫ್ಯಾಶನ್‌ಗೆ ಮಾರು ಹೋಗುತ್ತಿದ್ದಾರೆ.

೨೧. ಅಳಿಯುತ್ತಿರುವ ಹೈನುಗಾರಿಕೆ, ಲಾಭದಾಯಕವಲ್ಲದ ಕೃಷಿ ಕಸುಬು, ಭೂಮಿ ಒಡೆತನದ ನಷ್ಟ, ವರ್ಷಪೂರ್ತಿಯಿರದ ಕೃಷಿಕೂಲಿ ಕೆಲಸ, ಉದ್ಯೋಗವನ್ನರಿಸಿ ಹೋಗುವ ನಗರಾಭಿಮುಖ ವಲಸೆ, ಮಹಿಳೆಯರಿಗೆ ಉದ್ಯೋಗ ಅವಕಾಶಗಳ ಕೊರತೆ ಗೌಳಿ ಸಮುದಾಯದ ಸಾಮಾಜಿಕ ಮಟ್ಟಗಳಲ್ಲಿ ಇಳಿಮುಖಕ್ಕೆ ಕಾರಣವೆನಿಸಿವೆ.

೨೨. ಧನಗರ ಗೌಳಿ ಸಮುದಾಯಕ್ಕೆ ಬುಡಕಟ್ಟಿನ ದಟ್ಟ ಲಕ್ಷಣಗಳು ಇದ್ದರೂ ಸಹ ಅಧಿಕೃತ ಅನುಸೂಚಿತ ಪಟ್ಟಿಯಲ್ಲಿ ಪರಿಶಿಷ್ಟ ಪಂಗಡಗಳ ಸ್ಥಾನ ಪಡೆಯಲಾಗದಿದ್ದಕ್ಕೆ ಸಂವಿಧಾನಾತ್ಮಕ ಸೌಲಭ್ಯಗಳಿಂದ ವಂಚಿತರಾಗಿದ್ದಾರೆ. ಅಲ್ಲದೇ ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದವರಾಗಿದ್ದು, ರಾಜಕೀಯವಾಗಿ ಅಸಂಘಟಿತರಾಗಿದ್ದಾರೆ.

೨೩. ಅರಣ್ಯನಾಶ ಹಾಗೂ ದನಗಳನ್ನು ಅರಣ್ಯದಲ್ಲಿ ಮೇಯಿಸಲು ನಿರ್ಬಂಧಗಳ ವ್ಯತಿರಿಕ್ತ ಪರಿಣಾಮದಿಂದ ಕುಸಿದ ಹೈನುಗಾರಿಕೆ ಹಾಗೂ ಅರಣ್ಯ ಕಾನೂನುಗಳಿಂದ ಅರಣ್ಯ ಉತ್ಪನ್ನ ಸಂಗ್ರಹಣೆ ಮತ್ತು ಮಾರಾಟಗಳ ಮೇಲಿನ ನಿಷೇಧ ಇವುಗಳಿಂದಾಗಿ ಜೀವನ ನಿರ್ವಹಣೆಗೆ ಸುತ್ತಲ ಗ್ರಾಮೀಣ ಪ್ರದೇಶಗಳಲ್ಲಿ ಕೃಷಿ ಕೂಲಿ ಕೆಲಸಕ್ಕಾಗಿ ಹೋಗುವುದು ಅನಿವಾರ್ಯವಾಯಿತು. ವರ್ಷವಿಡಿ ಸಿಗದ ಕೃಷಿ ಕೂಲಿಯಿಂದಾಗಿ ಪರ್ಯಾಯ ವೃತ್ತಿಯನ್ನರಸಿ ಹೋಗುವ ನಗರಾಭಿಮುಖ ವಲಸೆ ತಾತ್ಕಾಲಿಕವಾದರೂ ನಿರಂತರವಾಗಿದೆ. ಹೀಗಾಗಿ ಅವರ ಆರ್ಥಿಕ ಸ್ಥಿತಿ ಚಿಂತಾಜನಕವಾಗಿದೆ. ಸಮುದಾಯದ ಬಹುತೇಕ ಜನರು ಬಡತನದ ರೇಖೆಗಿಂತ ಕೆಳಗೆ ಜೀವಿಸುತ್ತಿದ್ದಾರೆ.

೨೪. ದಟ್ಟಡವಿಯ ದುರ್ಗಮ ಪ್ರದೇಶದಲ್ಲಿ ದನಗಳ ಪಕ್ಕದಲ್ಲಿ ಕೊಳಚೆ, ಜವುಗು ಸ್ಥಳಗಳಲ್ಲಿ ವಾಸ, ನಿತ್ಯವಿಲ್ಲದ ಸ್ನಾನ, ಸ್ವಚ್ಛತೆ ಹಾಗೂ ನೈರ್ಮಲ್ಯದ ಅಭಾವ, ಪೌಷ್ಟಿಕಾಂಶವಿಲ್ಲದ ಆಹಾರದ ಕಾರಣ ಜೀವನಸತ್ವಗಳ ಅಭಾವಗಳ ವ್ಯಾಪಕತೆಯಿಂದಾಗುವ ರೋಗ ನಿರೋಧಕ ಶಕ್ತಿಯ ಕೊರತೆ, ಆರೋಗ್ಯಕ್ಕೆ ಸಂಬಂಧಪಟ್ಟ ಅರಿವಿನ ಕೊರತೆ ಇವುಗಳೆಲ್ಲವೂ ಗೌಳಿಗರ ಗಂಭೀರ ಆರೋಗ್ಯ ಸಮಸ್ಯೆಗೆ ಕಾರಣಗಳು. ಮಲೇರಿಯಾ, ಕ್ಷಯ, ಕ್ಯಾನ್ಸರ್, ಹೊಟ್ಟೆ ನೋವು, ವಿಶೇಷವಾಗಿ ಸ್ತ್ರೀಯರು ರಕ್ತಹೀನತೆ, ಬೆನ್ನು ನಡ ನೋವು, ಇತ್ಯಾದಿಗಳಿಂದ ಬಳಲುತ್ತಿರುವುದು ಕಂಡು ಬರುತ್ತದೆ.

೨೫. ನಿಸರ್ಗ ಜೀವಿಗಳಾದ ಗೌಳಿಗರು ನೈಸರ್ಗಿಕ ಮೂಲ ಹಾಗೂ ಮಾಂತ್ರಿಕೊ-ಧಾರ್ಮಿಕ ವೈದ್ಯದ ಮೂಲಕ ಮದ್ದು ನೀಡುವ ವಿಧಾನವನ್ನು ಬಳಕೆಗೆ ತಂದಿದ್ದಾರೆ. ಆದರೆ ಇವರು ಸಾಮಾನ್ಯವಾದ ರೋಗಗಳಿಗೆ ಮಾತ್ರ ಮದ್ದು ನೀಡುವುದು ರೂಢಿ. ಬಹು ಗಂಭೀರವಾದ ಕಾಯಿಲೆಗಳಿಗೆ ಅಸ್ಪತ್ರೆಯನ್ನು ಅವಲಂಬಿಸುತ್ತಾರೆ. ಇತ್ತೀಚಿಗೆ ಶಿಕ್ಷಣ ಹಾಗೂ ಆಧುನಿಕತೆಯ ಪ್ರಭಾವದಿಂದ ಯುವಕರಿಗೆ, ಮಕ್ಕಳಿಗೆ ಪರಂಪರಾಗತ ವೈದ್ಯ ಪದ್ಧತಿಯಲ್ಲಿ ಆಸಕ್ತಿಯಿಲ್ಲ. ಗೌಳಿಗರು ಆಧುನಿಕ ವೈದ್ಯ ಪದ್ಧತಿಗೆ ವಾಲುತ್ತಿದ್ದಾರೆ. ನೆಗಡಿ, ಜ್ವರ ಬಂದರೆ ಆಸ್ಪತ್ರೆಗೆ ಹೋಗುವಷ್ಟು ಬದಲಾವಣೆ ಹೊಂದಿದ್ದಾರೆ. ಪ್ರಾಥಮಿಕ ಆರೋಗ್ಯ ಕೇಂದ್ರ, ಹಾಗೂ ಸಂಚಾರಿ ಆರೋಗ್ಯ ಸೇವೆಗಳ ಉಪಯೋಗ ಪಡೆಯುತ್ತಿದ್ದಾರೆ.

೨೬. ಹೈನುಗಾರಿಕೆ ಅಳಿಯುವ ಹಂತದಲ್ಲಿರುವುದರಿಂದ ಗೌಳಿಗರು ಇಂದು ತಮ್ಮ ಮೂಲ ಉದ್ಯೋಗವನ್ನು ಅವಲಂಬಿಸಿ ಬದುಕುವಂತಹ ಸ್ಥಿತಿ ಇಲ್ಲ. ಅರಣ್ಯ ಕಾನೂನಿನ ನಿರ್ಬಂಧದಿಂದ ಉಪಕಸುಬುಗಳಾದ ಬೇಟೆಗಾರಿಕೆ, ಅರಣ್ಯ ಉತ್ಪನ್ನ / ಆಹಾರ ಸಂಗ್ರಹಣೆ ಮತ್ತು ಮಾರಾಟ ಮಾಡುವಂತಿಲ್ಲ. ಹೀಗಾಗಿ ಉಪ ಜೀವನಕ್ಕೆ ಕೃಷಿಕೂಲಿಯನ್ನೆ ಪರ್ಯಾಯ ವೃತ್ತಿಯನ್ನಾಗಿ ಅನುಸರಿಸುತ್ತಿದ್ದಾರೆ. ಕೃಷಿಕೂಲಿ ವರ್ಷವಿಡೀ ದೊರಕದಿರುವುದರಿಂದ ಉಳಿದ ಸಮಯದಲ್ಲಿ ಬೇರೆ ಕೂಲಿ ಕೆಲಸ ಮಾಡಲೇಬೇಕಾಗಿದೆ. ಪುರುಷರು ದೂರದ ಊರಿಗೆ ಕೆಲಸ ಹುಡುಕಿ ವಲಸೆ ಹೋದರೆ ಮಹಿಳೆಯರು ಸಮೀಪದ ಊರುಗಳಿಗೆ ಹೋಗಿ ಗಾರೆ ಕೆಲಸ, ಕಟ್ಟಡ ಕಟ್ಟುವಲ್ಲಿ ಕೂಲಿ ಕೆಲಸ ಮಾಡುವರು. ಶಿಕ್ಷಣ ಹಾಗೂ ಕಾರ್ಯಕುಶಲತೆಯ ಕೊರತೆಯಿಂದ ಒಳ್ಳೆಯ ವರಮಾನದ ಕೆಲಸ ಸಿಗುವುದಿಲ್ಲ. ಅನಿವಾರ್ಯ ಕಾರಣಗಳಿಂದ ಕೆಲವರು ಪಕ್ಕದ ಗೋವಾ ರಾಜ್ಯಕ್ಕೆ ಉತ್ತಮ ವರಮಾನದ ಕೆಲಸ ಅರಸಿ ತಾತ್ಕಾಲಿಕವಾಗಿ ವಲಸೆ ಹೋಗುತ್ತಾರೆ.

೨೭. ಕುಲಕಸುಬಾದ ಹೈನುಗಾರಿಕೆ, ಕುಮ್ರಿ ಬೇಸಾಯ, ಬೇಟೆಗಾರಿಕೆ, ಅರಣ್ಯ ಉತ್ಪನ್ನ/ಆಹಾರ ಸಂಗ್ರಹಣೆ ಮತ್ತು ಮಾರಾಟ ಇತ್ಯಾದಿಗಳನ್ನು ಅವಲಂಬಿಸಿ ಮೇಲಿನ ಯಾವುದೇ ಉಪಜೀವನ ಮಾರ್ಗಗಳಿಂದ ಅರಣ್ಯದ ಅಸ್ತಿತ್ವಕ್ಕೆ ಧಕ್ಕೆ ಬಾರದಂತೆ ಬದುಕುತ್ತಿದ್ದರು. ಅರಣ್ಯದ ಜೊತೆಗೆ ಅವಿನಾಭಾವ ಸಂಬಂಧ ಹೊಂದಿ ಅರಣ್ಯವನ್ನೇ ನಂಬಿಕೊಂಡು ಸ್ವಚ್ಛಂದ ಜೀವನ ನಡೆಸುತ್ತಿದ್ದ ಗೌಳಿ ಸಮುದಾಯ ಹೊಸ ಅರಣ್ಯ ನೀತಿ, ಕಾನೂನುಗಳಿಂದಾದ ಅನೇಕ ನಿರ್ಬಂಧನೆಗಳಿಂದ ಕುಮ್ರಿ ಬೇಸಾಯದ ಭೂ ಒಡೆತನ ಕಳೆದುಕೊಂಡು ಕುಲಕಸುಬಾದ ಹೈನುಗಾರಿಕೆ ಕೈ ತಪ್ಪಿ, ಉಪ ಕಸುಬುಗಳಾದ ಬೇಟೆಗಾರಿಕೆ ಮತ್ತು ಅರಣ್ಯ ಉತ್ಪನ್ನ ಸಂಗ್ರಹಣೆ ಮತ್ತು ಮಾರಾಟ ಕೈ ತಪ್ಪಿ ಮೇಲಾಗಿ ಅರಣ್ಯ ಅಧಿಕಾರಿಗಳ ಕಿರಿಕಿರಿಗಳಿಂದ ಪಡಬಾರದ ಕಷ್ಟ ನಷ್ಟಗಳನ್ನು ಅನುಭವಿಸಿ ಬಡತನ ರೇಖೆ ಕೆಳಗೆ ಜೀವಿಸುತ್ತಿದ್ದಾರೆ.

೨೮. ಬಡತನದಲ್ಲಿಯೇ ನಿಸರ್ಗದ ಮಡಿಲಲ್ಲಿ ಬದುಕುತ್ತಿರುವ ಗೌಳಿಗರು ಅನೇಕ ನೈಸರ್ಗಿಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಅವೆಂದರೆ ಭತ್ತದ ಗದ್ದೆಗೆ ನುಗ್ಗಿದ ಕಾಡಾನೆಗಳಿಂದ ಪೈರು ನಾಶ, ಕೂಲಿ ಕೆಲಸಕ್ಕೆ ಹೋದಾಗ ವಿಷಪೂರಿತ ಹಾವುಗಳ ಕಡಿತ, ಅರಣ್ಯದಲ್ಲಿ ಕರಡಿಗಳ ಆಕ್ರಮಣ, ಹುಲಿಗಳಿಂದ ದನಕರುಗಳ ಜೀವಹಾನಿ, ಕೆಲವೊಮ್ಮೆ ಕಾಡಿಗೆ ಬಿದ್ದ ಬೆಂಕಿ ತಗುಲಿ ಹುಲ್ಲಿನಿಂದ ನಿರ್ಮಿಸಲ್ಪಟ್ಟ ಮನೆಗಳ ನಾಶ, ದಟ್ಟ ಅರಣ್ಯದಲ್ಲಿ ಬಿಸಿಲು, ಗಾಳಿ ಬೆಳಕಿನ ಕೊರತೆಯ ದುರ್ಗಮ ವಾತಾವರಣ ಇತ್ಯಾದಿ.

೨೯. ಗೌಳಿ ಸಮುದಾಯವು ಅಧಿಕೃತ ಬುಡಕಟ್ಟು ಎಂದು ಪರಿಗಣಿಸದ್ದರಿಂದ ಶಿಕ್ಷಣ ಕ್ಷೇತ್ರದಲ್ಲೂ ಸಂವಿಧಾನಾತ್ಮಕ ಸೌಲಭ್ಯಗಳು ಈ ಸಮುದಾಯಕ್ಕೆ ದೊರಕುತ್ತಿಲ್ಲ. ಅಂಕಿ-ಅಂಶಗಳನ್ನು ಗಮನಿಸಿದರೆ ಗೌಳಿ ಸಮುದಾಯದಲ್ಲಿ ಸಾಕ್ಷರತಾ ಪ್ರಮಾಣವು ನಿಧಾನಗತಿಯಲ್ಲಿ ಏರುತ್ತಿದೆ.

೧೯೬೧ ರಲ್ಲಿ ಶೇ ೨% ರಷ್ಟಿದ್ದ ಸಾಕ್ಷರತೆ ಈಗ ೪೦% ರವರೆಗೆ ಏರಿದೆ. ಆದರೆ ಇದು ಭಾರತದ ಹಾಗೂ ಕರ್ನಾಟಕ ಎಸ್.ಟಿ. ಪಂಗಡದ ಸಾಕ್ಷರತೆಗಿಂತ ಕಡಿಮೆಯಾಗಿದೆ.

೩೦. ಉತ್ತರ ಕನ್ನಡ ಜಿಲ್ಲೆಯ ದಟ್ಟ ಕಾಡಿನಲ್ಲೇ ವಾಸಿಸುತ್ತಿದ್ದ ಅತಿ ಕಡಿಮೆ ಜನಸಂಖ್ಯೆ ಹೊಂದಿರುವ ಗೌಳಿ ಸಮುದಾಯವು ಭೌಗೋಳಿಕ ಮತ್ತು ಸಾಮಾಜಿಕ ಪ್ರತ್ಯೇಕತೆಯನ್ನು ಹೊಂದಿ ನಾಗರಿಕ ಸಮುದಾಯದಿಂದ ದೂರವಿದ್ದುದರಿಂದ ಇವರಲ್ಲಿ ರಾಜಕೀಯ ಗಂಧವೇ ಇರಲಿಲ್ಲ. ಸುತ್ತಲಿನ ನಾಗರಿಕ ಸಮಾಜದ ನಿರಂತರ ಸಂಪರ್ಕದಿಂದ ರಾಜಕೀಯ ಪ್ರಜ್ಞೆ ಮೂಡಿದರೂ ಆಸಕ್ತಿಯ ಕೊರತೆಯಿಂದ ರಾಜಕೀಯವಾಗಿ ಹಿಂದುಳಿದಿದ್ದಾರೆ. ಕಾರಣ ರಾಜಕೀಯ ಲಾಭ ಪಡೆಯಲು ಸಾಧ್ಯವಾಗಿಲ್ಲ. ಇವರ ರಾಜಕೀಯ ಚಟುವಟಿಕೆಯು ಕೇವಲ ಗ್ರಾಮ ಪಂಚಾಯತ್, ತಾಲೂಕ ಪಂಚಾಯತ್, ಜಿಲ್ಲಾ ಪಂಚಾಯತ್ ಮಟ್ಟಕ್ಕೆ ಮಾತ್ರ ಸೀಮಿತವಾಗಿದೆ. ಇವರ ರಾಜಕೀಯ ಶಕ್ತಿ ಪ್ರಬಲವಾಗಲು ಆರ್ಥಿಕ ಹಾಗೂ ಸಂಘಟನೆಯ ಬಲಗಳ ಕೊರತೆ ಎದ್ದು ಕಾಣುತ್ತದೆ. ಪ್ರಬಲ ರಾಜಕೀಯ ಶಕ್ತಿಯಾಗಿ ಬೆಳೆಯಬೇಕೆಂಬ ಉದ್ದೇಶದಿಂದ 'ಉತ್ತರ ಕನ್ನಡ ಜಿಲ್ಲೆಯ ಧನಗರ ಗೌಳಿ ಸಮುದಾಯ ಸಮಿತಿ' ಎಂಬ ಸಂಘಟನೆಯನ್ನು ೨೦೦೮ ರಲ್ಲಿ ಹುಟ್ಟು ಹಾಕಿದ್ದಾರೆ. ಈ ಸಂಘಟನೆಯನ್ನು ಜಿಲ್ಲೆಯಾದ್ಯಂತ ಬಲಗೊಳಿಸಲು ಯುವಕರು ಹೆಚ್ಚಿನ ಆಸಕ್ತಿ ತೋರಿಸುತ್ತಿದ್ದಾರೆಯಾದರೂ ತೀವ್ರವಾದ ಹಣದ ಕೊರತೆ ಇದ್ದ ಕಾರಣ ಸಂಘಟನೆಯು ಬಲಗೊಳ್ಳುವುದು ಕಷ್ಟ ಸಾಧ್ಯ.

೩೧. ಕಡಿಮೆ ವರಮಾನ ತರುವ ಕೂಲಿ ಕೆಲಸದ ಅನಿವಾರ್ಯತೆಗೆ ಶಿಕ್ಷಣ ಹಾಗೂ ವೃತ್ತಿ ಕುಶಲತೆಯ ಕೊರತೆಯೇ ಕಾರಣವೆಂಬುದು ಈಗಿನ ಗೌಳಿ ಯುವಕರಿಗೆ ಅರಿವಾಗಿದ್ದು, ತಾವೂ ಸಹ ಶಿಕ್ಷಣ ಹಾಗೂ ವೃತ್ತಿ-ಕುಶಲತೆಯ ತರಬೇತಿ ಪಡೆದು ಒಳ್ಳೆ ಆದಾಯದ ಸರಕಾರಿ ಅಥವಾ ಖಾಸಗಿ ನೌಕರಿ ಮಾಡಿ ಆರ್ಥಿಕವಾಗಿ ಸ್ಥಿತಿವಂತರಾಗಿ ಇತರರಂತೆ ಸಮಾಜದಲ್ಲಿ ಒಳ್ಳೆ ಸ್ಥಾನಮಾನ ಗಳಿಸಬೇಕೆಂಬ ಮನೋಭಾವನೆ ಗೌಳಿ ಯುವಕ-ಯುವತಿಯರಲ್ಲಿ ಬೆಳೆಯುತ್ತಿದೆ. ಓದಿಲ್ಲದ ಯುವಕರಲ್ಲಿ ತಾವು ಸ್ವಂತ ಜಮೀನು, ಆಸ್ತಿ ಹೊಂದಿದರೆ ಇಲ್ಲವೆ ವ್ಯಾಪಾರದಲ್ಲಿ ತೊಡಗಿಸಿಕೊಂಡರೆ ಮಾತ್ರ ಆರ್ಥಿಕ ಜೀವನ ಮಟ್ಟ ಸುಧಾರಣೆಯಾಗಿ ಸಮಾಜದಲ್ಲಿ ಒಳ್ಳೇ ಸ್ಥಾನಮಾನ ಪಡೆಯಲು ಸಾಧ್ಯ ಎಂಬ ಮನೋಭಾವನೆ ಬೆಳೆಯುತ್ತಿದೆ.

೩೨. ಗೌಳಿ ಮಹಿಳೆಯರಿಗೆ ತಮ್ಮ ದುಡಿಮೆಯ ಅಗತ್ಯ ಕುಟುಂಬಕ್ಕೆ ಇದೆ ಎಂಬ ಅರಿವಿದ್ದು, ಕುಟುಂಬ ನಿರ್ವಹಣೆಗೆ ಮಹಿಳೆಯ ದುಡಿಮೆಯ ಕೊಡುಗೆ (೫೩%) ಪುರುಷನಿಗಿಂತಲೂ ಹೆಚ್ಚು. ಗೌಳಿ ಮಹಿಳೆಗೆ ತಮ್ಮ ಸಮುದಾಯದ ಹಾಗೂ ಕುಟುಂಬದ ಚಟುವಟಿಕೆಗಳಲ್ಲಿ ತಮಗೆ ಯಾವುದೇ ನಿರ್ಣಾಯಕ ಸ್ಥಾನಮಾನವಿಲ್ಲದಿರುವುದರ ಅರಿವೂ ಇದೆ.

೩೩. ಹಚ್ಚೆ ಹಾಗೂ ಚಿತ್ತಾರದ ಕರಕುಶಲತೆಯಲ್ಲಿ ನಿಷ್ಣಾತರಾಗಿದ್ದ ಗೌಳಿ ಮಹಿಳೆಯರ ನಿಪುಣತೆ, ಅಭಿರುಚಿ ಕ್ರಮೇಣ ಕಡಿಮೆಯಾಗುತ್ತಿದೆ.

೩೪. ಆಧುನಿಕತೆಯ ಪ್ರಭಾವದಿಂದ ಜನನ ನಿಯಂತ್ರಣ ವಿಧಾನಗಳ ಬಳಕೆಯು ಹೆಚ್ಚಾಗಿ, ಜನನ ಸಂಖ್ಯೆಯನ್ನು ಮಿತಗೊಳಿಸಿ ಕುಟುಂಬ ಗಾತ್ರವನ್ನು ಕಡಿಮೆಗೊಳಿಸುತ್ತಿದೆ.

೩೫. ಬದಲಾದ ಪರಿಸ್ಥಿತಿಯಲ್ಲಿ ಕಾಡಿನಲ್ಲಿ ಕೆಲಸವಿಲ್ಲದೆ, ಹತ್ತಿರದಲ್ಲಿ ಬೇಕಾದ ಉದ್ಯೋಗ ಮಾರ್ಗವಿಲ್ಲದೆ ಹಲವು ಕುಟುಂಬಗಳ ಪುರುಷರು ಉದ್ಯೋಗವನ್ನು ಹುಡುಕಿಕೊಂಡು ಹೋಗುವ ನಗರಾಭಿಮುಖ ವಲಸೆ ಹೆಚ್ಚುತ್ತಿದೆ. ಕೆಲವೊಮ್ಮೆ ಇಡೀ ಕುಟುಂಬವೇ ವಲಸೆ ಹೋಗುತ್ತದೆ. ನಗರಗಳಿಗೆ ಕೆಲಸಕ್ಕೆ ಹೋಗುವ ಗೌಳಿಗರು ನಗರ ಜೀವನದ ಪ್ರಭಾವಕ್ಕೊಳಗಾಗಿದ್ದಾರೆ.

೩೬. ನಿಸರ್ಗಕ್ಕೆ ಸಂಬಂಧಿಸಿದ ಆಚರಣೆಗಳು ಹಾಗೂ ವಿಶೋಬನ ಸಂಬಂಧಿತ ಆಚರಣೆಗಳು ಹೆಚ್ಚಾಗಿ ಕಂಡುಬರುತ್ತವೆ.

೩೭. ವಲಸೆ ಬಂದು ನೆಲೆನಿಂತ ಗೌಳಿ ಸಮುದಾಯದ ಮೇಲೆ ವೈದಿಕ ಆಚರಣೆಗಳ ಪ್ರಭಾವ ಆಗಿದೆ. ಶುಭ ಕಾರ್ಯಗಳಿಗೆ ಮುಹೂರ್ತ ನೋಡುವುದು, ವಿವಾಹ ಸಂದರ್ಭದಲ್ಲಿ ಹವ್ಯಕ ಬ್ರಾಹ್ಮಣ ಪುರೋಹಿತರನ್ನು ಕರೆಯಿಸುವುದು, ಮನೆಯಲ್ಲಿ ಸತ್ಯನಾರಾಯಣ ಪೂಜೆ ಮಾಡಿಸುವುದು ಆರಂಭವಾಗಿದೆ.

೩೮. ರಾಜಕೀಯ ಶಕ್ತಿಯಾಗಿ ಬೆಳೆದು ರಾಜಕೀಯ ಲಾಭ ಹಾಗೂ ಹೆಚ್ಚಿನ ಸರಕಾರಿ ಸೌಲಭ್ಯಗಳನ್ನು ಪಡೆಯಬೇಕೆಂಬ, ವಿಶೇಷವಾಗಿ ಗೌಳಿ ಸಮುದಾಯಕ್ಕೆ ಪರಿಶಿಷ್ಟ ಪಂಗಡ ಎಂಬ ಅಧಿಕೃತ ಸ್ಥಾನಮಾನ ಪಡೆಯಬೇಕೆಂಬ ಮನೋಭಾವನೆ ಗೌಳಿ ಯುವಕರಲ್ಲಿ ಬೆಳೆಯುತ್ತಿದೆ.

## ೬.೩. ಸಲಹೆಗಳು

ನನ್ನ ಕ್ಷೇತ್ರಕಾರ್ಯದ ಅನುಭವ ಹಾಗೂ ಅವರೊಡನೆ ಇದ್ದ ದೀರ್ಘ ಒಡನಾಟದ ಹಿನ್ನೆಲೆಯಲ್ಲಿ 'ಗೌಳಿ ಸಮುದಾಯದ ಸಾಮಾಜಿಕ ಸಮಸ್ಯೆಗಳು ಮತ್ತು ಸಾಮಾಜಿಕ ಪರಿವರ್ತನೆ' ಅಧ್ಯಯನದ ಕೆಲವು ಸಲಹೆಗಳನ್ನು ಈ ಕೆಳಗೆ ನೀಡಲಾಗಿದೆ. ಈ ಸಲಹೆಗಳು ಅಧ್ಯಯನಕಾರಳಾದ ನನ್ನ ಒಟ್ಟಾರೆಯ ಅಧ್ಯಯನದ ಭಾಗವಾಗಿ ಹೊರಹೊಮ್ಮಿದ ಆಶಯಗಳಾಗಿವೆ.

೧. ಗೌಳಿ ಸಮುದಾಯ ಎಲ್ಲ ದೃಷ್ಟಿಯಿಂದಲೂ ಅಧಿಕೃತ ಬುಡಕಟ್ಟಿನ ಸರ್ವ ಲಕ್ಷಣಗಳನ್ನು ಹೊಂದಿರುವುದರಿಂದ ಅವರನ್ನು ಪರಿಶಿಷ್ಟ ಪಂಗಡಕ್ಕೆ ಸೇರಿಸುವ ಕ್ರಮ ಕೈಗೊಳ್ಳಬೇಕು. ಪರಿಶಿಷ್ಟ ಪಂಗಡಕ್ಕೆ ಸಿಗಬೇಕಾದ ಸಂವಿಧಾನಾತ್ಮಕ ಎಲ್ಲ ಸೌಲಭ್ಯಗಳು ದೊರಕುವಂತಾಗಿ ಸಮುದಾಯವು ಶೈಕ್ಷಣಿಕವಾಗಿ, ಅರ್ಥಿಕವಾಗಿ ಹಾಗೂ ರಾಜಕೀಯವಾಗಿ ಶೀಘ್ರ ಅಭಿವೃದ್ಧಿ ಹೊಂದುವಂತಾಗಬೇಕು.

೨. ಗೌಳಿಗರಿಗೆ ಭೂಮಿ ಮತ್ತು ಅರಣ್ಯ ಬೇರೆ ಬೇರೆಯಲ್ಲ. ಇವೆರಡನ್ನು ಪ್ರತ್ಯೇಕಿಸದೇ ಸಮಸ್ಯೆಗಳನ್ನು ಬಗೆಹರಿಸಬೇಕು.

೩. ಬುಡಕಟ್ಟು ಸಮುದಾಯಗಳ ಶೈಕ್ಷಣಿಕ ಮಟ್ಟವನ್ನು ಸುಧಾರಿಸಲು ಹೆಚ್ಚಿನ ಸಂಖ್ಯೆಯಲ್ಲಿ ಆಶ್ರಮ ಶಾಲೆಗಳನ್ನು ಅಂದರೆ ಬುಡಕಟ್ಟು ಜನರು ನೆಲೆಸಿರುವ ಪ್ರದೇಶದಲ್ಲಿ ತಾಲೂಕಿಗೊಂದು

ಆಶ್ರಮ ಶಾಲೆಗಳನ್ನು ಸ್ಥಾಪಿಸಬೇಕು. ಶಾಲೆಗಳ ಸಿಬ್ಬಂದಿಗಳಿಂದ ದುರ್ವ್ಯವಹಾರ ಮತ್ತು ಶೋಷಣೆಯಾಗದಂತೆ ಕ್ರಮ ಕೈಗೊಳ್ಳಬೇಕು. ಸಾಧ್ಯವಿದ್ದಷ್ಟು ಅರ್ಹವಿದ್ದ ಸ್ಥಾನಿಕ ಬುಡಕಟ್ಟು ಶಿಕ್ಷಕರನ್ನು ನೇಮಿಸಿ, ಮಕ್ಕಳಿಗೆ ಕಲಿಕೆಯ ಜೊತೆಗೆ ಸಮುದಾಯದ ಜ್ಞಾನ ಪರಂಪರೆಗಳ ಬೋಧನೆ ಮಾಡುವಂತಿರಬೇಕಲ್ಲದೇ ಮಕ್ಕಳಲ್ಲಿ ಶಿಕ್ಷಣದ ಬಗ್ಗೆ ಹೆಚ್ಚು ಆಸಕ್ತಿ ಮೂಡುವಂತೆ ಮಾಡಬೇಕು.

೪. ಎಷ್ಟೋ ಬುಡಕಟ್ಟು ಸಮುದಾಯಗಳು ಒಕ್ಕಲೆದ್ದು, ಸ್ಥಳಾಂತರಗೊಂಡು ತಮ್ಮ ಪಾರಂಪರಿಕ ನೆಲೆಯಲ್ಲಿ ವಾಸ ಮಾಡುತ್ತಿಲ್ಲದ ಈ ಸಂದರ್ಭದಲ್ಲಿ ತಮ್ಮ ಪಾರಂಪರಿಕ ನೆಲೆಯಲ್ಲಿ ವಾಸ ಮಾಡುತ್ತಿರುವ ಗೌಳಿ ಬುಡಕಟ್ಟು ಜನರ ಕುಮ್ರಿ ಬೇಸಾಯ ಭೂಮಿ ಅಥವಾ ಅತಿಕ್ರಮಣದ ಒತ್ತುವರಿ ಭೂಮಿಯನ್ನು ಸಕ್ರಮಗೊಳಿಸಿ ಭೂ ಒಡೆತನವನ್ನು ದೃಢೀಕರಿಸಿ ಒಂದೆಡೆ ಸ್ಥಿರವಾಗಿ ಜೀವನ ರೂಪಿಸಿಕೊಳ್ಳುವಂತೆ ಮಾಡುವ ಅವಶ್ಯಕತೆಯಿದೆ.

೫. ಅರಣ್ಯ ನೀತಿಯಿಂದ ಹಳಿಯಾಳ ಹಾಗೂ ಜೋಯಿಡಾ ತಾಲೂಕಗಳಲ್ಲಿನ ಅರಣ್ಯ ರಕ್ಷಿತವಾಗಿ ವನ್ಯಜೀವಿ ಅಭಯಾರಣ್ಯವಾಗಿ ಪರಿವರ್ತನೆಗೊಂಡ ಮೇಲೆ, ಕೆಲ ಗೌಳಿವಾಡಾಗಳಲ್ಲಿಯ ಗೌಳಿ ಕುಟುಂಬಗಳಿಗೆ ಜಾಗ ಖಾಲಿಮಾಡಲು ಅರಣ್ಯಾಧಿಕಾರಿಗಳು ನೋಟಿಸ ಜಾರಿಗೊಳಿಸಿದ್ದಾರೆ. ಆದಿವಾಸಿಗಳ ಅರಣ್ಯ ಹಕ್ಕಿನನ್ವಯ ಒಕ್ಕಲೆಬ್ಬಿಸುವುದನ್ನು ಸ್ಥಗಿತಗೊಳಿಸಿದ್ದಾರೆ ಎಂದು ತಿಳಿದು ಬಂದಿದೆ. ಒಂದು ವೇಳೆ ಸ್ಥಳಾಂತರ ಅನಿವಾರ್ಯವಾದರೆ, ಅವರಿಗೆ ಸೂಕ್ತ ಪುನರ್‌ವಸತಿ ಕಲ್ಪಿಸಬೇಕು ಹಾಗೂ ಕುಟುಂಬವೊಂದಕ್ಕೆ ಕನಿಷ್ಠ ಎರಡು ಎಕರೆ ಜಮೀನು ನಿಗದಿಪಡಿಸಬೇಕು.

೬. ಬುಡಕಟ್ಟುಗಳಲ್ಲಿ ಸ್ವಾಭಿಮಾನವನ್ನು, ತಮ್ಮತನವನ್ನು ತುಂಬುವ ನಿಟ್ಟಿನಲ್ಲಿ ಗೌಳಿಗರು ವಾಸಿಸುವ ಮಜಿರೆ ಗ್ರಾಮ(ವಾಡಾ)ಗಳನ್ನು ಕಂದಾಯ ಗ್ರಾಮಗಳಾಗಿ ಪರಿವರ್ತಿಸಿ ಅವುಗಳಿಗೆ ಅವುಗಳದೇ ಸಾಂಸ್ಕೃತಿಕ ಹಿನ್ನೆಲೆಯ ನಾಮಕರಣ ಮಾಡಬೇಕು. ಇಲ್ಲವೇ ಗೌಳಿ ಸಮುದಾಯ ವಾಸವಾಗಿರುವ ನೆಲೆಗಳನ್ನು ಅನುಸೂಚಿತವೆಂದು ಘೋಷಿಸಬೇಕು.

೭. ಸಮುದಾಯದ ಅಳಿದುಳಿದ ಸಮಯದಲ್ಲಿ ಸಾಂಸ್ಕೃತಿಕ ಜೀವನವನ್ನು ಮೆಲಕು ಹಾಕಲು ಹಾಗೂ ಧಾರ್ಮಿಕ ಮತ್ತು ಸಾಮಾಜಿಕ ಆಚರಣೆಗಳನ್ನು ಕೈಗೊಳ್ಳಲು ವ್ಯವಸ್ಥಿತವಾದ ಸಮುದಾಯ ಭವನವನ್ನು ಗೌಳಿವಾಡಾಗಳಲ್ಲಿ ನಿರ್ಮಿಸಬೇಕು.

೮. ಮನುಷ್ಯನಗೆ ಏನೇ ಇದ್ದರೂ ಅವನ ಆರ್ಥಿಕ ಬದುಕು ಭದ್ರವಾಗಿರದೆ ಇದ್ದರೆ, ಅವನ ಅಲೆಮಾರಿ ಜೀವನವನ್ನು ಯಾರಿಂದಲೂ ತಡೆಯಲು ಸಾಧ್ಯವಿಲ್ಲ. ಗೌಳಿ ಸಮುದಾಯದಲ್ಲಿ ಭೂರಹಿತ ಕುಟುಂಬಗಳು ಅಧಿಕವಿದ್ದು, ಸಮುದಾಯದ ಪ್ರತಿ ಕುಟುಂಬಕ್ಕೆ ಅನುಗುಣವಾಗಿ ಕನಿಷ್ಟ ಒಂದು ಅಥವಾ ಎರಡು ಎಕರೆ ವ್ಯವಸಾಯ ಯೋಗ್ಯ ಭೂಮಿಯನ್ನು ಎಸ್.ಎಫ್.ಡಿ.ಎ ಯೋಜನೆಯಡಿ ಒದಗಿಸಬೇಕು ಮತ್ತು ಭೂಮಿಗೆ ಸಂಬಂಧಿಸಿದ ಬೇಲಿ, ಕೊಳವೆ ಬಾವಿ ಹಾಗೂ ಇನ್ನಿತರ ಮೂಲ ಸೌಕರ್ಯಗಳು ದೊರೆಯಬೇಕು.

೯. ವೃತ್ತಿ ಪಲ್ಲಟಣದಿಂದಾಗಿ ಗೌಳಿ ಜನರಲ್ಲಿ ವಲಸೆ ಪ್ರವೃತ್ತಿ ಹೆಚ್ಚಾಗುತ್ತಿದ್ದು, ಮೂಲ ಕುಟುಂಬಗಳು ನಶಿಸುವ ಹಾದಿಯಲ್ಲಿ ಸಾಗುತ್ತಿರುವುದನ್ನು ತಪ್ಪಿಸಲು ಅವರು ನೆಲೆಸಿರುವ ಪ್ರದೇಶದಲ್ಲೇ ಅರಣ್ಯ ಉತ್ಪನ್ನ ಸಂಪನ್ಮೂಲಗಳಿಂದ ನಡೆಯುವ ಕೈಗಾರಿಕೆ/ಕಾರ್ಖಾನೆಗಳನ್ನು ಪ್ರಾರಂಭಿಸಿ ಅವರಿಗೆ ಸ್ಥಾನಿಕವಾಗಿ ಉದ್ಯೋಗವಕಾಶಗಳನ್ನು ಒದಗಿಸುವ ಯೋಜನೆಗಳು ಜಾರಿಯಲ್ಲಿ ಬರಬೇಕು.

೧೦. ಸಮುದಾಯದಲ್ಲಿ ಅಲೆಮಾರಿ ಬದುಕನ್ನು ಕೊನೆಗಾಣಿಸಲು ಕೆಳಕಂಡ ಸಣ್ಣ ಹಾಗೂ ಗುಡಿ ಕೈಗಾರಿಕೆಗಳಿಗೆ ಪ್ರೋತ್ಸಾಹ ದೊರಕುವಂತಾಗಬೇಕು.

೧. ಪಶುಪಾಲನೆಗೆ ಪ್ರೋತ್ಸಾಹ ಮತ್ತು ಆದ್ಯತೆ

೨. ಹೈನುಗಾರಿಕೆ ಮತ್ತು ಕೋಳಿ ಸಾಕಾಣಿಕೆಗೆ ಪ್ರೋತ್ಸಾಹ ಮತ್ತು ಆದ್ಯತೆ

೩. ಮೀನುಗಾರಿಕೆಗೆ ಪ್ರೋತ್ಸಾಹ ಮತ್ತು ಆದ್ಯತೆ

೧೧. ಸಮುದಾಯದಲ್ಲಿ ಸ್ವಯಂ ಉದ್ಯೋಗ ಕೈಗೊಳ್ಳಲು ಆಸಕ್ತಿ ಇದ್ದವರಿಗೆ ಅಗತ್ಯ ಪ್ರೋತ್ಸಾಹ, ಆರ್ಥಿಕ ಸಹಾಯ ದೊರಕುವಂತಾಗಬೇಕು.

೧೨. ಗೌಳಿಗರಿಗಾಗಿಯೇ ಅವರ ವೃತ್ತಿಪರತೆಯನ್ನು ಆಧರಿಸಿ ಸರಕಾರವು ಕೆಲವು ವಿಶೇಷ ಅಭಿವೃದ್ಧಿ ಯೋಜನೆಗಳನ್ನು ರೂಪಿಸಬೇಕು. ಅವರ ಕೃಷಿ, ಅರಣ್ಯ ಉತ್ಪನ್ನಗಳು, ಕರಕುಶಲತೆ ಮುಂತಾದ ಯೋಜನೆಗಳನ್ನು ಜಾರಿಗೊಳಿಸಬೇಕು. ಸರ್ಕಾರ ಅವರಿಗಾಗಿ ರೂಪಿಸುವ ಯೋಜನೆಗಳನ್ನು ಅವರ ಮಧ್ಯೆಯೇ ಅಧ್ಯಯನ ಮಾಡಿ ರೂಪಿಸಬೇಕು. ಅವುಗಳ ಸಾಧಕ ಭಾದಕಗಳನ್ನು ಕಾಯ್ದು ನೋಡಿ, ಮರುಪರಿಶೀಲನೆಗೆ ಒಳಪಡಿಸಿ ಅಂತಿಮವಾಗಿ ಜಾರಿಗೆ ತರಬೇಕು ಹಾಗೂ ತಾಳ್ಮೆಯಿಂದ ರೂಪಿಸಿದ ಯೋಜನೆಗಳು ಅವರನ್ನು ಆರ್ಥಿಕವಾಗಿ ಮುಖ್ಯ ಪ್ರವಾಹಕ್ಕೂ ಸಾಂಸ್ಕೃತಿಕವಾಗಿ ಅವರ ಅನನ್ಯತೆಯ ರಕ್ಷಣೆಗೂ ಪೂರಕವಾಗಿರುವಂತೆ ಎಚ್ಚರವಹಿಸಬೇಕು.

೧೩. ಭೂಮಿಯಿಂದ ವಂಚಿತರಾಗಿರುವವರಿಗೆ ಕಂದಾಯ ಭೂಮಿಯನ್ನಾದರೂ ನೀಡುವ ಕಾರ್ಯ ಜರೂರಾಗಿ ಆಗಬೇಕು.

೧೪. ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸುವ ಸ್ವಾತಂತ್ರ್ಯವನ್ನು ಪುನಃ ಜಾರಿಗೆ ತರಬೇಕು. ಹಾಗೆ ಸಂಗ್ರಹಿಸಿದ ಉತ್ಪನ್ನಗಳ ನ್ಯಾಯಯುತ ಮಾರಾಟಕ್ಕಾಗಿ ಸಹಕಾರ ಸಂಘಗಳನ್ನು ಸ್ಥಾಪಿಸಬೇಕು.

೧೫. ಶಾಲೆ ಇಲ್ಲದ ಪ್ರತಿಯೊಂದು ಗ್ರಾಮಕ್ಕೆ ಒಂದು ಶಾಲೆ ಮತ್ತು ಅಂಗನವಾಡಿಗಳನ್ನು ತೆರೆಯಬೇಕು. ಕಲಿಕೆಯ ಅರಿವು ಮೂಡಿಸುವ ದೃಷ್ಟಿಯಿಂದ ಕನ್ನಡದ ಜೊತೆಗೆ ಮರಾಠಿ ಗೊತ್ತಿರುವ ಶಿಕ್ಷಕರನ್ನು ನೇಮಿಸಬೇಕು.

೧೬. ಈ ಸಮುದಾಯದ ಮಕ್ಕಳಿಗೆ ವೃತ್ತಿ ಕೌಶಲ್ಯಗಳನ್ನು ಕಲಿಸುವ ವೃತ್ತಿ ಶಿಕ್ಷಣ ಕೇಂದ್ರಗಳಾದ ಐ.ಟಿ.ಐ., ಪಾಲಿಟೆಕ್ನಿಕ್ ಕಾಲೇಜುಗಳನ್ನು ಆ ಮಕ್ಕಳಿಗಾಗಿಯೇ ಪ್ರಾರಂಭಿಸಬೇಕು. ಆ

ಕಾಲೇಜುಗಳಲ್ಲಿ ಸಂಪೂರ್ಣವಾಗಿ ಉಚಿತವಾಗಿ ಶಿಕ್ಷಣ ದೊರೆಯುವಂತಾಗಬೇಕು ಮತ್ತು ಉತ್ತಮ ಗುಣಮಟ್ಟದ ಉಚಿತ ವಸತಿ ನಿಲಯಗಳನ್ನು ವಿಶೇಷವಾಗಿ ಪ್ರಾರಂಭಿಸಬೇಕು.

೧೭. ಪ್ರೌಢಶಾಲೆ ಮತ್ತು ಕಾಲೇಜು ಹಂತದಲ್ಲಿ ಮಕ್ಕಳಿಗೆ ಪ್ರತ್ಯೇಕವಾಗಿ ಪ್ರೋತ್ಸಾಹ ಸಿಗದೆ ಇರುವುದರಿಂದ ಆ ಹಂತದಲ್ಲಿ ಶಾಲೆ ಬಿಡುವವರ ಸಂಖ್ಯೆ ಹೆಚ್ಚಾಗಿರುವುದು. ಕಾರಣ ಪ್ರೌಢಶಾಲೆ ಮತ್ತು ಕಾಲೇಜು ಹಂತದಲ್ಲಿ ಸರಕಾರದಿಂದ ಹೆಚ್ಚಿನ ಪ್ರೋತ್ಸಾಹ, ಆರ್ಥಿಕ ಬೆಂಬಲ ಸಿಗುವಂತಾಗಬೇಕು.

೧೮. ಆಧುನಿಕತೆಯ ವೈಪರೀತ್ಯಗಳಿಂದಾಗಿ ಕೀಳರಿಮೆಗೆ ಒಳಗಾದ ಅವರ ಪರಂಪರೆಯ ಆಹಾರ, ಆರೋಗ್ಯ ಪದ್ಧತಿ, ನ್ಯಾಯ ಪದ್ಧತಿ, ಸ್ಥಳೀಯ ಆಡಳಿತ ವ್ಯವಸ್ಥೆ, ನಿಸರ್ಗ ಮತ್ತು ಅರಣ್ಯದ ಬಗೆಗಿನ ಜ್ಞಾನ ಮುಂತಾದ ಅವರ ಆರೋಗ್ಯಕರ ಮೌಲ್ಯಗಳನ್ನು ಗುರುತಿಸುವಂಥ ಜ್ಞಾನ ಪರಂಪರೆಗಳ ಸಂಶೋಧನೆ ಹಾಗೂ ಅವುಗಳ ಪುನರ್‌ಸ್ಥಾಪನೆಯ ಕಾರ್ಯ ಆಗಬೇಕು.

೧೯. ಗೌಳಿ ಸಮುದಾಯದ ಸಾಂಸ್ಕೃತಿಕ ಪರಂಪರೆಯ ರಕ್ಷಣೆ ಕೈಗೊಳ್ಳಬೇಕು. ಅವರ ಭಾಷೆ, ಸಾಹಿತ್ಯ, ಹಬ್ಬಾಚರಣೆಗಳು, ಆಹಾರ ಪದ್ಧತಿ, ಪ್ರಕೃತಿ ಆರಾಧನೆ ಮುಂತಾದ ಆರೋಗ್ಯಕರ ಸಂಪ್ರದಾಯಗಳ ದಾಖಲಾತಿ ಆಗಬೇಕು.

೨೦. ಗೌಳಿ ಸಮುದಾಯದ ಜನರು ದನದ ಕೊಟ್ಟಿಗೆ, ಮನೆ ಎರಡನ್ನೂ ಜೊತೆಯಲ್ಲಿ ಕಟ್ಟಿಕೊಂಡರೇನೇ ಅವರದು ನೆಮ್ಮದಿ ಬದುಕು. ಕಾರಣ ಆಶ್ರಯ ಮನೆಗಳನ್ನು ಒದಗಿಸುವಾಗ ಅವರ ಪಾರಂಪರಿಕ ವಾಸ್ತು ರೂಪಿಕೆಯ ಮಾದರಿಯಂತೆ ಒದಗಿಸುವಂತಾಗಬೇಕು.

೨೧. ಕುಡಿಯುವ ನೀರು, ನೈರ್ಮಲ್ಯ, ಆರೋಗ್ಯ, ವಸತಿ ಮುಂತಾದ ಸಾರ್ವಜನಿಕ ಯೋಜನೆಗಳ ಪ್ರಾಮಾಣಿಕ ಅನುಷ್ಠಾನ ಆಗಬೇಕು. ಈ ನಿಟ್ಟಿನಲ್ಲಿ ಜನ ಪ್ರತಿನಿಧಿಗಳಿಗೆ ತರಬೇತಿ ನೀಡಬೇಕು.

೨೨. ರೂಪಿಸಿದ ಯೋಜನೆಗಳನ್ನು ಅನುಷ್ಠಾನಕ್ಕೆ ತರುವ ಹಂತವೇ ಬಹುಮುಖ್ಯ. ಈ ಹಿನ್ನೆಲೆಯಲ್ಲಿ ಯೋಜನೆಗಳ ಅನುಷ್ಠಾನದ ಮೌಲ್ಯಮಾಪನ ಪ್ರತಿ ವರ್ಷ ನಡೆಯಬೇಕು.

೨೩. ಬಹುಸಂಖ್ಯಾತರಿಂದ, ಭೂಮಾಲೀಕರಿಂದ ಹಾಗೂ ಅಧಿಕಾರಶಾಹಿ ಧೋರಣೆಯಿಂದ, ಅರಣ್ಯವಾಸಿಗಳನ್ನು ರಕ್ಷಿಸುವ ಸೂಕ್ತ ಕಾನೂನುಗಳ ರಚನೆಯಾಗಬೇಕು.

೨೪. ಸ್ವಯಂ ಸೇವಾ ಸಂಸ್ಥೆಗಳು ಗೌಳಿ ಸಮುದಾಯದ ಒಂದೊಂದೇ ನೆಲೆಗಳನ್ನು ದತ್ತು ತೆಗೆದುಕೊಂಡು ಗ್ರಾಮದ ಸರ್ವಾಂಗೀಣ ಅಭಿವೃದ್ಧಿಯನ್ನು ಕೈಗೊಳ್ಳಬೇಕು.

೨೫. ಗೌಳಿ ಸಮುದಾಯವು ತಮ್ಮ ಕೀಳರಿಮೆ, ಆಂತರಿಕ ಭೀತಿಯಿಂದ ಹೊರಬಂದು ಸಾಮಾಜಿಕವಾಗಿ ತಮ್ಮನ್ನು ತಾವು ಹೆಮ್ಮೆಯಿಂದ ಗುರುತಿಸಿಕೊಳ್ಳುವಂತಾಗಬೇಕು. ಈ ದಿಶೆಯಲ್ಲಿ ಸ್ವಯಂ ಸೇವಾ ಸಂಸ್ಥೆಗಳು ಸಹಾಯ ಮಾಡಬೇಕು.

# ಅನುಬಂಧ ೧
## ಪರಾಮರ್ಶನ ಗ್ರಂಥಗಳು


೧. ಅನಂತರಾಮರಾವ್ ಕೆ. – 'ಸುವರ್ಣ ಕರ್ನಾಟಕ ದರ್ಶನ', ವಿದ್ಯಾ ಪಬ್ಲಿಕೇಷಿಂಗ್ ಹೌಸ್ ಕದ್ರಿ, ಮಂಗಳೂರು. ೨೦೦೬.

೨. ಅಣ್ಣಿಗೇರಿ ಯಮನೂರಪ್ಪ – 'ಮಹಿಳೆ ಮತ್ತು ಸಮೃದ್ಧಿ ನೆಲೆಗಳು', ಪ್ರಸಾರಾಂಗ ಕ್ನನಡ ವಿಶ್ವ ವಿದ್ಯಾಲಯ, ಹಂಪಿ ೨೦೧೦.

೩. 'ಅಭಿವೃದ್ಧಿ ಅಧ್ಯಯನಗಳು' ಕನ್ನಡ ಸಂಘ ಕ್ರೈಸ್ಟ್ ಕಾಲೇಜ, ಕುವೆಂಪು ನಗರ, ಬೆಂಗಳೂರು, ೧೯೯೯.

೪. ಅಂಬಳಿಕೆ ಹಿರಿಯಣ್ಣ – 'ಕಚ್ಚೆ ಗೌಳಿಗರ ಸಂಸ್ಕೃತಿ' (ಸಂ) ಬರಗೂರ ರಾಮಚಂದ್ರ ಕರ್ನಾಟಕ ಸಾಹಿತ್ಯ ಆಕಾಡೆಮಿ, ಬೆಂಗಳೂರು.

೫. ಆನಂದ ತೇಲ್ ತುಂಬ್ಡೆ – 'ಖೈರ್ಲಾಂಜಿ' (ದಲಿತ ಭಾರತದ ಕಥನ), ಲಂಕೇಶ ಪ್ರಕಾಶನ, ನಂ.೬, ಪೂರ್ವ ಆಂಜನೇಯ ಗುಡಿ ರಸ್ತೆ, ಬಸವನಗುಡಿ, ಬೆಂಗಳೂರು ೨೦೦೯.

೬. ಆರಾಧ್ಯ ಬಿ. ಎಂ. – 'ಪರಿಶಿಷ್ಟ ಜನಾಂಗದವರಿಗೆ ಸಂವಿಧಾನ ಕೊಡುಗೆ', ಕರ್ನಾಟಕ ಸರಕಾರ, ವಿಧಾನಸೌಧ, ಬೆಂಗಳೂರು, ೧೯೮೫.

೭. ಇಂದಿರಾ ಆರ್ – 'ಭಾರತೀಯ ಸಮಾಜ' ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು–೧೯೯೫.

೮. ಕಾಳೇಗೌಡ ನಾಗವಾರ – ಹುಚ್ಚಪ್ಪ ಮಾಸ್ತರ ಎಸ್, 'ಗಿರಿಜನ ಸಂಸ್ಕೃತಿ', ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಆಕಾಡೆಮಿ, ಕನ್ನಡ ಭವನ, ಜೆ.ಎಸ್. ರಸ್ತೆ ಬೆಂಗಳೂರು, ೨೦೦೦.

೯. ಕೃಷ್ಣಾನಂದ ಕಾಮತ್ – 'ಅಕ್ಷತ', ನವಕರ್ನಾಟಕ ಪ್ರಕಾಶನ ಪ್ರೈವೇಟ್ ಲಿಮಿಟೆಡ್ ಕ್ರೆಸೆಂಟ್ ರೋಡ, ಬೆಂಗಳೂರು.

೧೦. ಕೆ. ಭೈರಪ್ಪ – 'ಸಮಗ್ರ ಸಾಮಾಜಿಕ ಸಮಸ್ಯೆಗಳು' ಸಪ್ನಾ ಬುಕ್ ಹೌಸ್ ಗಾಂಧಿ ನಗರ, ಬೆಂಗಳೂರು, ೨೦೦೯.

೧೧. ಗಂಗಾಧರ ದೈವಜ್ಞ – 'ಬುಡಕಟ್ಟು ಸಮಾಜ–ಹುಟ್ಟು ಸಾವಿನ ನಡುವೆ,' ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೧೨. ಗೋಪಾಲಕೃಷ್ಣ ಪೊ. ನಾಯಕ್ – 'ಉತ್ತರ ಕನ್ನಡ ದರ್ಶನ' ವಿಜಯ ಭಾರತಿ ಪ್ರಕಾಶನ, ಗೋಕರ್ಣ, ಉತ್ತರ ಕನ್ನಡ, ೧೯೯೭

೧೩. ಗೌಡ ವಿ.ಸಿ.ಎಸ್. ಮತ್ತು ರಮೇಶ – 'ಕರ್ನಾಟಕ ಅರಣ್ಯ ಅಧಿನಿಯಮ ೧೯೯೩', ಪ್ರಕಾಶಕರು, ಲಾಯರ್ಸ್ ಲಾ ಬುಕ್, ೨೦೦೪.

೧೪. ಗೌಡರ ಎಂ. ಬಿ. – 'ಪರಿಸರ ಮಾಲಿನ್ಯ' ವಿದ್ಯಾನಿಧಿ ಪ್ರಕಾಶನ, ಗದಗ

೧೫. ಚಂದ್ರ ಪೂಜಾರಿ ಎಂ. – 'ಸಮಾಜ ಸಂಶೋಧನೆ' ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೬. ಚಂದ್ರಶೇಖರ ಟಿ. ಆರ್. – 'ಕರ್ನಾಟಕದಲ್ಲಿ ಪ್ರಾಥಮಿಕ ಶಿಕ್ಷಣದ ಸ್ಥಿತಿಗತಿ' ೨೦೦೮ ಕನ್ನಡ ವಿಶ್ವ ವಿದ್ಯಾಲಯ, ಹಂಪಿ.

೧೭. ಚಂದ್ರಹಾಸ ಗುಪ್ತ ಅ.ರಾ. – 'ಕರ್ನಾಟಕ ಗ್ರಾಮ ಸೂಚಿ' ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು ೧೯೮೫.

೧೮. ಜಗದೀಶ ಕೆ. – 'ಕರ್ನಾಟಕ ಇತಿಹಾಸ ಮತ್ತು ಸಂಸ್ಕೃತಿ' ಚಿರಾಗ ಪ್ರಕಾಶನ, ಧಾರವಾಡ, ೨೦೧೦.

೧೯. ಜೋಗುರ ಎಸ್.ಬಿ. – 'ನಗರ ಸಮಾಜಶಾಸ್ತ್ರ' ವಿಧ್ಯಾನಿಧಿ ಪ್ರಕಾಶನ ಗದಗ

೨೦. ಜೋತ್ಸ್ನಾ ಕಾಮತ್ – 'ಮಹಿಳೆ ಅಂದು–ಇಂದು', ಶ್ರೀ ಪ್ರೇಮಸಾಯಿ ಪ್ರಕಾಶನ, ಬೆಂಗಳೂರು.

೨೧. ಹನುಮಂತಪ್ಪ ತಾರಿಹಳ್ಳಿ(ಸಂ) – 'ಕರ್ನಾಟಕದ ಬುಡಕಟ್ಟು ಸಮುದಾಯಗಳು' ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೨. ದಿವಾಕರ ಆರ್. ಆರ್. – 'ಕರ್ನಾಟಕದ ಪರಂಪರೆ' ಸಂಪುಟ–೧ ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು, ೧೯೯೨.

೨೩. ನಂಜಮ್ಮಣ್ಣಿ ಎಂ. – 'ಭಾರತೀಯ ಸಾಮಾಜಿಕ ಸಂಸ್ಥೆಗಳು' ಕುವೆಂಪು ಕ್ನನಡ ಅಧ್ಯಯನ ಸಂಸ್ಥೆ, ಮೈಸೂರ ವಿಶ್ವವಿದ್ಯಾಲಯ, ಮೈಸೂರು, ೨೦೦೩.

೨೪. ನಾಯಕ ಎಸ್. ಆರ್. – 'ಉತ್ತರ ಕನ್ನಡ ಜಿಲ್ಲೆಯ ಗ್ರಾಮ ದೇವತೆಗಳ ಹಾಡುಗಳು', ಜಾನಪದ ಪ್ರಕಾಶನ, ಹೊನ್ನಾವರ.

೨೫. ನಾಯಕ ಎಸ್.ಆರ್. – 'ಕರಾವಳಿ ಕರ್ನಾಟಕದ ಆಹಾರ ಪದ್ಧತಿ' ಜಾನಪದ ಪ್ರಕಾಶನ ಹೊನ್ನಾವರ, ಜನೇವರಿ ೨೦೦೯.

೨೬. ನಾರಾಯಣ ಎಂ. – 'ಸಾಮಾಜಿಕ ಸಂಸ್ಥೆಗಳು ಮತ್ತು ಸಾಮಾಜಿಕ ಬದಲಾವಣೆ', ಚೇತನ ಬುಕ್ ಹೌಸ್, ಮೈಸೂರ ೨೦೦೪.

೨೭. ನಾರಾಯಣ ಎಂ. – 'ಸಾಮಾಜಿಕ ಸಂಶೋಧನಾ ವಿಧಾನಗಳು', ಚೇತನ ಬುಕ್‌ಹೌಸ್, ಮೈಸೂರ.

೨೮. ನಿರುಪಮಾ – 'ಸಂಶೋಧನಾ ವಿಧಾನಗಳು' ಕನ್ನಡ ಸಾಹಿತ್ಯ ಪರಿಷತ್ತು, ಪಂಪಮಹಾಕವಿ ರಸ್ತೆ, ಚಾಮರಾಜ ಪೇಟ, ಬೆಂಗಳೂರು, ೨೦೦೨.

೨೯. ಪಾರ್ವತಮ್ಮ ಸಿ. – 'ಆದಿವಾಸಿ ಸಮುದಾಯಗಳ ಅಭಿವೃದ್ಧಿ' ಪ್ರಸಾರಾಂಗ, ಕ್ನನಡ ವಿಶ್ವವಿದ್ಯಾಲಯ, ಹಂಪಿ. ೨೦೦೭.

೩೦. ಪುಟ್ಟಯ್ಯ ಬಿ.ಎಂ. – 'ಮುಖಾಮುಖಿ ಸಮಾಜ ಸಂಸ್ಕೃತಿ ಚಳುವಳಿ', ಸಿದ್ದಾರ್ಥ ಪ್ರಕಾಶನ, ಎಂಪಿ. ಪ್ರಕಾಶನಗರ ಹೊಸಪೇಟೆ, ೨೦೦೮.

೩೧. ಪ್ರಧಾನ್ ಗುರುದತ್ತ – 'ನಮ್ಮ ಪ್ರಾಚ್ಯ ಪರಂಪರೆ', ನಾಗರಿಕತೆಯ ಕಥೆ–೧, ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ, ಕನ್ನಡ ಭವನ ಜೆ.ಸಿ. ರಸ್ತೆ ಬೆಂಗಳೂರು ೨೦೦೭.

೩೨. ಪ್ರಭಾಕರ ಎ. ಎಸ್. – 'ಬುಡಕಟ್ಟು ಅಭಿವೃದ್ಧಿ ಮೀಮಾಂಸೆ' ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೪.

೩೩. ಪ್ರಭಾಕರ ಎ. ಎಸ್. – 'ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು' ಪ್ರಸಾರಾಂಗ, ಕ್ನನಡ ವಿಶ್ವವಿದ್ಯಾಲಯ, ಹಂಪಿ.

೩೪. ಪ್ರಭಾಕರ ಎ. ಎಸ್. – 'ಆದಿವಾಸಿ ಆಖ್ಯಾನ', ಸಿದ್ಧಾರ್ಥ ಪ್ರಕಾಶನ, ಎಂ. ಪಿ. ಪ್ರಕಾಶ ನಗರ, ಹೊಸಪೇಟೆ, ೨೦೦೬.

೩೫. ಪ್ರಭಾಕರ ಶಿಶಿಲ – 'ಆಧುನಿಕ ಭಾರತದ ಆರ್ಥಿಕ ಸಮಸ್ಯೆಗಳು', ಪ್ರಕಾಶಕರು, ಪ್ರಿಯದರ್ಶಿನಿ ಪಬ್ಲಿಕೇಷನ್ಸ್ ಸ್ವಾತಂತ್ರ್ಯ ಯೋಧನಗರ, ಲಗ್ಗೆರೆ ಮುಖ್ಯರಸ್ತೆ, ಬೆಂಗಳೂರು, ೨೦೦೬.

೩೬. ಪ್ರಶಾಂತ ಹೆಚ್.ಡಿ. – 'ಜನಸಮುದಾಯ ಸಂಪುಟ', ಕರ್ನಾಟಕ ರಾಜ್ಯಕೋಶ–೪ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ. ೨೦೦೦.

೩೭. ಬಂಜಗೆರೆ ಜಯ ಪ್ರಕಾಶ – 'ಕರ್ನಾಟಕತ್ವ ಸಮಾಜೋ–ಆರ್ಥಿಕ ತಳಹದಿ', ಕನ್ನಡ ಸಾಹಿತ್ಯ ಪರಿಷತ್, ಪಂಪ ಮಹಾಕವಿ ರಸ್ತೆ, ಚಾಮರಾಜ ಪೇಟೆ, ಬೆಂಗಳೂರು, ೨೦೦೬.

೩೮. ಬೋರಲಿಂಗಯ್ಯ ಹಿ.ಚಿ. – 'ಅಭಿವೃದ್ಧಿ ಪಥ', (ಸುವರ್ಣ ಕರ್ನಾಟಕ ಸಂ–೧) ಕನ್ನಡ ವಿಶ್ವವಿದ್ಯಾಲಯ, ಹಂಪಿ ಮತ್ತು ಕರ್ನಾಟಕ ಗೆಜಿಟೀಯರ ಇಲಾಖೆ, ಬೆಂಗಳೂರು ೨೦೦೭.

೩೯. ಬೋರಲಿಂಗಯ್ಯ ಹಿ.ಚಿ., 'ಪ್ರಭಾಕರ ಎ.ಎಸ್. (ಸಂ) – 'ಬುಡಕಟ್ಟು ಅಧ್ಯಯನ' ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೪.

೪೦. ಬೋರಲಿಂಗಯ್ಯ ಹಿ.ಚಿ., ಪ್ರಭಾಕರ ಎ. ಎಸ್. (ಸಂ) – 'ಬುಡಕಟ್ಟು ಅಧ್ಯಯನ' ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೫.

೪೧. ಬೋರಲಿಂಗಯ್ಯ ಹಿ.ಚಿ. – 'ಕಾಡು, ಕಾಂಕ್ರೀಟ್ ಮತ್ತು ಜಾನಪದ' ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ.

೪೨. ಬೋರಲಿಂಗಯ್ಯ ಹಿ.ಚಿ. – 'ಗಿರಿಜನ ನಾಡಿಗೆ ಪಯಣ', ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕನ್ನಡ ಭವನ, ಜೆ. ಪಿ. ರಸ್ತೆ, ಬೆಂಗಳೂರು ೨೦೦೬.

೪೩. ಬೋರಲಿಂಗಯ್ಯ ಹಿ.ಚಿ. – 'ಬುಡಕಟ್ಟು ದೈವಾರಾಧನೆ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೫.

೪೪. ಬೋರಲಿಂಗಯ್ಯ ಹಿ.ಚಿ. – 'ಕುಣಬಿಯರು', ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೪೫. ಬೋರಲಿಂಗಯ್ಯ ಹಿ.ಚಿ. – 'ಬುಡಕಟ್ಟು ಲೋಕದೃಷ್ಟಿ' ಅಪ್ರಕಟಿತ ಪಿ .ಎಚ್.ಡಿ. ಮಹಾಪ್ರಬಂಧ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೪೬. ಭಾರತಿ ಬಿ. ಎಮ್. – 'ಭಾರತದಲ್ಲಿಯ ಸಾಮಾಜಿಕ ಸಮಸ್ಯೆಗಳು' ವಿದ್ಯಾನಿಧಿ ಪ್ರಕಾಶನ, ಗದಗ ೨೦೦೦.

೪೭. ಮರುಳ ಸಿದ್ಧಯ್ಯ ಎಚ್. ಎಂ. – 'ಸಮುದಾಯ ಸಂಘಟನೆ' ಪಿ.ಬಿ. ಎಚ್. ಪ್ರಕಾಶನ, ೬೪೫/೬, ೧೦ನೇ ಬಿ, ಮುಖ್ಯರಸ್ತೆ, ೪ನೇ ಬ್ಲಾಕ್, ಜಯನಗರ, ಬೆಂಗೂಳೂರು, ೨೦೦೪.

೪೮. ಮಹಮೂದ್ ಡಿ.ಕೆ. – 'ಉತ್ತರ ಕನ್ನಡ ದರ್ಶನ' ಕನ್ನಡ ಸಾಹಿತ್ಯ ಪರಿಷತ್, ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು, ೧೯೮೬

೪೯. ಮಹಾಬಲೇಶ್ವರ ರಾವ್ – 'ಶಿಕ್ಷಣ ಪರಿವರ್ತನೆ' ಸುಧಾ ಎಂಟರ್‌ಪ್ರೈಸಿಸ್, ಕೋರಮಂಗಲ, ಬೆಂಗಳೂರು. ೨೦೦೯.

೫೦. ಮಾಳಿ ಎಚ್. ಬಿ. – 'ಭಾರತದ ಸಾಮಾಜಿಕ ಸಮಸ್ಯೆಗಳು ಮತ್ತು ಸಾಮಾಜಿಕ ಕಲ್ಯಾಣ' ಭಾರತ ಬುಕ್ ಡಿಪೋ, ಧಾರವಾಡ ೧೯೯೭.

೫೧. ಮೈತ್ರಿ ಕೆ.ಎಂ. – 'ಬುಡಕಟ್ಟು ಕುಲಕಸಬುಗಳು' ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೫೨. ಮೈತ್ರಿ ಕೆ.ಎಂ., ಚಲುವರಾಜು(ಸಂ) – 'ಬುಡಕಟ್ಟು ಅಧ್ಯಯನ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

೫೩. ಮೈತ್ರಿ ಕೆ.ಎಂ., ಚಲುವರಾಜು(ಸಂ) – 'ಬುಡಕಟ್ಟು ಅಧ್ಯಯನ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

೫೪. ರಮೇಶ ಸ.ಚಿ. – 'ಅಲೆಮಾರಿಗಳ ಸ್ಥಿತಿಗತಿ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫

೫೫. ರಾಜಶೇಖರ ಎಸ್. – 'ಸಾಮಾಜಿಕ ಸಮಸ್ಯೆಗಳು', ಭ್ರಮರ ಪ್ರಕಾಶನ, ಶಿವಮೊಗ್ಗ, ೨೦೦೦

೫೬. ಲಕ್ಕಪ್ಪಗೌಡ ಎಚ್.ಜೆ. – 'ಕರ್ನಾಟಕ ಬುಡಕಟ್ಟು', ಸಂಪುಟ–೧, (ಲೇಖನ) 'ಗೌಳಿಗರು' ಎಚ್.ಎಂ. ಮಹೇಶ್ವರಯ್ಯ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೮

೫೭. ವಿಲಿಯಂ ಮಾಡ್ತಾ, ಸೋಮಶೇಖರ್ ಇಮ್ರಾಪುರ – 'ಜಾನಪದ ಸಾಹಿತ್ಯ ದರ್ಶನ', ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೩

೫೮. ಶಂಕರರಾವ್ ಚ.ನ. – 'ಭಾರತೀಯ ಸಮಾಜದ ಪ್ರಚಲಿತ ಸಾಮಾಜಿಕ ಸಮಸ್ಯೆಗಳು', ಜೈ ಭಾರತ ಪ್ರಕಾಶನ, ಮಂಗಳೂರು.

೫೯. ಶಾಂತಿ ನಾಯಕ – 'ಉತ್ತರ ಕನ್ನಡ ಜಿಲ್ಲೆಯ ಗ್ರಾಮೀಣ ಆಭರಣಗಳು', ಜಾನಪದ ಪ್ರಕಾಶನ ಹೊನ್ನಾವರ, ೨೦೦೯.

೬೦. ಶೇಖರ – 'ಬಂಟರು ಬದುಕು ಮತ್ತು ಬದಲಾವಣೆ', ಸೃಷ್ಟಿ ಪಬ್ಲಿಕೇಶನ್, ವಿಜಯನಗರ, ಬೆಂಗಳೂರು, ೨೦೦೯.

೬೧. ಶ್ರೀನಿವಾಸ ಎಲ್. (ಸಂ) – 'ಪರಿವರ್ತನೆಯ ಹಾದಿಯಲ್ಲಿ ಬುಡಕಟ್ಟು ಸಮಾಜಗಳು', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೧೦.

೬೨. ವಾಮನ ಬೇಂದ್ರೆ (ಅನು) ಸರೋಜನಿ ಬಾಬರ್ (ಮೂಲ) – 'ಮಹಾರಾಷ್ಟ್ರದ ಜನಪದ ಸಾಹಿತ್ಯ' ನ್ಯಾಷನಲ್ ಬುಕ್ ಟ್ರಸ್ಟ ಆಫ್ ಇಂಡಿಯಾ, ನವದೆಹಲಿ (೧೯೭೨).

೬೩. ವಿಜಯ ಲಕ್ಷ್ಮೀ ಆರ್ – 'ಹಾಲಕ್ಕಿ ಒಕ್ಕಲಿಗ ಮಹಿಳೆ' (ಸಾಮಾಜಿಕ ಆರ್ಥಿಕ ಸ್ಥಿತಿಗಳ ಅಧ್ಯಯನ) ಅಪ್ರಕಟಿತ ಪಿ.ಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೮.

೬೪. ಸೊಬರದ ಮಲ್ಲಿಕಾರ್ಜುನ – 'ಕುಣಬಿ ಸಮುದಾಯದ ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳ ಅಧ್ಯಯನ' (ಉತ್ತರ ಕನ್ನಡ ಜಿಲ್ಲೆಯನ್ನು ಪರಿಗಣಿಸಿ), ಅಪ್ರಕಟಿತ ಪಿ.ಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧.

೬೫. ಹಾಸನ ರೂಪ – 'ಮಹಿಳೆ ಮತ್ತು ಆಧುನಿಕತೆಯ ಸವಾಲುಗಳು', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

೬೬. ಹೆಗಡೆ ಶಾಂತಲಾ – 'ಗೌಳಿಗ ಮಹಿಳೆಯರ ಸ್ಥಿತ್ಯಂತರಗಳು' (ಉತ್ತರ ಕನ್ನಡ ಜಿಲ್ಲೆಯನ್ನು ಅನುಲಕ್ಷಿಸಿ) ಅಪ್ರಕಟಿತ ಪಿ.ಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮.

**ಅಂಕಿ–ಅಂಶಗಳು**

೬೭. ಉತ್ತರ ಕನ್ನಡ ಜಿಲ್ಲೆಯ ಅಂಕಿ–ಅಂಶಗಳ ನೋಟ, ೨೦೦೯–೧೦, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿ, ಉತ್ತರ ಕನ್ನಡ, ಕಾರವಾರ.

**ಪತ್ರಿಕೆ**

೬೮. ಕಂಚೀಕೈ ವಿರುಪಾಕ್ಷ ಹೆಗಡೆ–'ಪರಿಸರದ ಮೇಲೆ ಬೃಹತ್ ಯೋಜನೆಗಳ ದುಷ್ಪರಿಣಾಮ' ವಿಜಯ ಕರ್ನಾಟಕ ದಿನ ಪತ್ರಿಕೆ, ಪುಟ–೨, ೨೯ನೇ ಡಿಶಂಬರ ೨೦೦೯.

**ನಿಘಂಟು**

೬೯. ವೆಂಕಟ ಸುಬ್ಬಯ್ಯ ಜಿ. – 'ಕನ್ನಡ ನಿಘಂಟು', ಸಂಪುಟ–೨ ಪು–೯೧೭, ಕನ್ನಡ ಸಾಹಿತ್ಯ ಪರಿಷತ, ಚಾಮರಾಜ್ ಪೇಟೆ, ಬೆಂಗಳೂರು, ೧೯೭೬.

**ಗೆಜೆಟಿಯರಗಳು**

೭೦. ಸೂರ್ಯನಾಥ ಯು. ಕಾಮತ್ (ಸಂ) – 'ಕರ್ನಾಟಕ ರಾಜ್ಯ ಗೆಜೆಟಿಯರ' ಭಾಗ–೧ ಕರ್ನಾಟಕ ರಾಜ್ಯ ಸರಕಾರ, ಬೆಂಗಳೂರು ೧೯೮೪.

೭೧. ವೆಂಕಟ ರಂಗೋ ಕಟ್ಟೀ – 'ಗೆಜಿಟಿಯರ್ ಮುಂಬಯಿ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು ಅಥವಾ ದಕ್ಷಿಣ ಮಹಾರಾಷ್ಟ್ರ ಸಂಸ್ಥಾನಗಳು ಸಹಿತ (ಧಾರವಾಡ, ಬೆಳಗಾವಿ, ವಿಜಾಪೂರ, ಕಾನಡಾ, ನಾಲ್ಕು ಜಿಲ್ಲೆಗಳಿದ್ದು) ಏಶಿಯನ್ ಎಜ್ಯುಕೇಶನ್ ಸರ್ವಿಸಿಸ್, ಹೊಸ ದೆಹಲಿ, ೧೯೮೪.

**English**

೭೨. Anantha Krishna Iyer L.K. - 'The Mysore Tribes and Castes' Vol. 5. The Mysore University, Mysore 1930, Reprint, Mittal Publications, New Delhi, 1998.

೭೩. Anita Srivastava Majhi - 'Tribal Culture Continuity and Change', Mittal Publications, New Delhi, 2010.

